ARYAVAIDYAKA GRANTHAMALA NO. 6

# CHARAKA SAMHITA
# CHIKITSA STHANA

## PART 2

A Translation with Text, copious and explanatory Notes in Kannada



*By*

Ayurveda Teerth, ANANTACHARYA ADYA

Editor: "DHANVANTARI"

Author of "GRIHAVAIDYA" "WHAT IS AYURVEDA?" etc.

1950

PRICE: Rs. 6-0-0

ಆರ್ಯವೈದ್ಯಕ ಗ್ರಂಥಮಾಲೆ ಪುಷ್ಪ ೬

# ಚರಕ ಸಂಹಿತೆ

## ಚಿಕಿತ್ಸಾ ಸ್ಥಾನ

## ಭಾಗ ೨.

ಚರಕ ಚಿಕಿತ್ಸಾಬೋಧಿನಿ" ಎಂಬ ಕನ್ನಡ ಅನುವಾದವು



ಅನುವಾದಕರು :-

**ಆಯುರ್ವೇದ ತೀರ್ಥ ಆದ್ಯ ಅನಂತಾಚಾರ್ಯರು**

"ಧನ್ವಂತರಿ ಪತ್ರಿಕೆ"ಯ ಸಂಪಾದಕರು,

"ಗ್ರಹವೈದ್ಯ" "ಆಯುರ್ವೇದದಲ್ಲಿ ಏನಿದೆ?" ಮುಂತಾದ ಗ್ರಂಥಕರ್ತರು

೧೯೫೦

ಬೆಲೆ: ೬ ರೂಪಾಯಿಗಳು

# ಅನುವಾದಕರ ಮಾತು

ಜಗತ್ತಿನಲ್ಲಿಯೇ ಮೊದಲನೇ ವೈದ್ಯ ಶಾಸ್ತ್ರವೆಂದರೆ ಆಯುರ್ವೇದವು. ಅದರಲ್ಲಿಯೂ ಚರಕಸಂಹಿತೆಯು ಮೊದಲನೆಯದು. ಇದು ಮುಂದಿನ ಎಲ್ಲ ಆಯುರ್ವೇದ ಗ್ರಂಥಗಳಿಗೆ ಉಪಜೀವ್ಯವಾಗಿದೆ. ಇದು ಋಷಿಪ್ರಣೀತವಾಗಿರುವದರಿಂದ ಅತ್ಯಂತ ಪ್ರಮಾಣಭೂತವಾಗಿದೆ. ಮತ್ತು ಇದರಲ್ಲಿ ಆಯುರ್ವೈದ್ಯಕ ತತ್ವಗಳು ಸವಿಸ್ತಾರವಾಗಿ ಹೇಳಲ್ಪಟ್ಟಿರುವವಲ್ಲದೆ, ಅನುಭೂತ ಅನೇಕ ಯೋಗಗಳ ಸಂಗ್ರಹವೂ ಉಂಟು. ಸುಶ್ರುತವನ್ನು ಬಿಟ್ಟರೆ, ಇದರ ಹೊರ್ತು ಬೇರೆ ಆರ್ಷಗ್ರಂಥವೇ ಆಯುರ್ವೇದದಲ್ಲಿ ಉಪಲಬ್ಧವಿಲ್ಲ. ಆದರೆ ಸುಶ್ರುತದಲ್ಲಿ ಕಾಯ ಚಿಕಿತ್ಸೆಯು ಹೇಳಲ್ಪಟ್ಟಿದ್ದರೂ, ಮುಖ್ಯವಾಗಿ ಶಸ್ತ್ರ ಚಿಕಿತ್ಸೆಯ ಜ್ಞಾನಕ್ಕಾಗಿಯೇ ಅದು ಬರೆಯಲ್ಪಟ್ಟಿದೆ. ಆದರೆ ಚರಕ ಸಂಹಿತೆಯಲ್ಲಿ ಮುಖ್ಯತಃ ಕಾಯ ಚಿಕಿತ್ಸೆಯೇ ಹೇಳಲ್ಪಟ್ಟಿದ್ದರಿಂದ ಇದರ ಉಪಯುಕ್ತತೆಯೂ, ಪ್ರಚಾರವೂ ಹೆಚ್ಚಾಗಿದೆ. ಅದರಲ್ಲಿಯೂ ಇದರ ಚಿಕಿತ್ಸಾಸ್ಥಾನವು ವೈದ್ಯ ಲೋಕದಲ್ಲಿ ಬಹುಮಾನ್ಯವಾಗಿದೆ. ಆಯುರ್ವೇದದ ಭರಭರಾಟೆಯ ಕಾಲದಲ್ಲಿಯೇ ಅದು ಪ್ರಖ್ಯಾತವಾಗಿತ್ತೆಂದು ಚರಕ ಸಂಹಿತೆಯಲ್ಲಿಯ

ಚಿಕಿತ್ಸಿತಂ ವಹ್ನಿವೇಶ ಸ್ವಸ್ಥಾತುರಹಿತಂ ಪ್ರತಿ ।
ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ತತ್ಕ್ವಚಿತ್ ॥

ಎಂಬ ಶ್ಲೋಕದಿಂದ ವ್ಯಕ್ತವಾಗುತ್ತದೆ. ಐಹಿಕ ಸುಖಗಳಿಗೆ ಮನಸೋಲದೆ ಗಾಳಿ ಬಿಸಿಲುಗಳನ್ನು ಸಹಿಸುತ್ತಾ ಕಾಡಿನಲ್ಲಿ ವಾಸಮಾಡಿ ಕಂದ ಮೂಲಗಳನ್ನು ಸವಿದು ಪರೋಪಕಾರಕ್ಕಾಗಿಯೇ ತಮ್ಮ ಆಯುಷ್ಯವನ್ನು ಮೀಸಲಾಗಿಟ್ಟ ಋಷಿಗಳ ಗ್ರಂಥಗಳು ಎಷ್ಟು ಶ್ರದ್ಧೇಯವಿರಬಹುದೆಂಬದನ್ನು ವಿಚಾರಿಸಿದರೆ ಈ ಗ್ರಂಥದ ಮಹತ್ವವು ಹೊಳೆಯದೆ ಇರದು. ನಮ್ಮ ಪ್ರಾಚೀನ ಆಚಾರ್ಯರು ಕೂಪ ಮಂಡೂಕ ವೃತ್ತಿಯವರು ಇದ್ದಿಲ್ಲ. 'ಧನ್ಯಂ ಯಶಸ್ಯಮಾಯುಷ್ಯಂ ಅಮಿತ್ರಸ್ಯಾಪಿ ವಚಃ ಶ್ರೋತವ್ಯಂ' ಎಂದು ಹೇಳಿರುವರು. ಮತ್ತು ಅದರಂತೆ ಆಗಾಗ್ಗೆ ಆಯಾ ಶಾಸ್ತ್ರಗಳಲ್ಲಿ ಪಂಡಿತರಾದವರನ್ನು ಕೂಡಿಸಿ ಮತಭೇದಗಳನ್ನು ಚರ್ಚಿಸಿ, ಒಂದು ನಿರ್ಣಯಕ್ಕೆ ಬರುತ್ತಿದ್ದರು. ಇಂಥ ತದ್ವಿದ್ಯಾ ಸಂಭಾಷಣಾ ಪರಿಷತ್ತುಗಳನ್ನು ಕೂಡಿಸಿದ ಬಗ್ಗೆ ಚರಕಸಂಹಿತೆಯಲ್ಲಿ ಅನೇಕ ಉಲ್ಲೇಖಗಳಿವೆ.(ಸಮೇತಾನಾಂ ಮಹರ್ಷೀಣಾಂ ಪ್ರಾದುರಾಸೀದಿಯಂ ಕಥಾ, ಕಥರ್ಷೀಣಾಂ ವಿವದತಾಮುವಾಚೇದಂ ಪುನರ್ವಸುಃ ಸೂತ್ರ

ಸ್ಥಾನ ೧೩--೨೫ ಮತ್ತು ೨೬ನೇ ಅಧ್ಯಾಯ ಮತ್ತು ಶಾರೀರ ೩ನೇ ಅಧ್ಯಾಯಗಳನ್ನು ನೋಡಿರಿ) ಮುಂದೆಯೂ ಹೊಸ ಶೋಧಗಳಾದಂತೆ ಅವುಗಳನ್ನು ಹಿಂದಿನ ಗ್ರಂಥಗಳಲ್ಲಿ ಸೇರಿಸುತ್ತಿದ್ದರು. ಇದೇ ಸಂಸ್ಕಾರವು ಮೂಲದಲ್ಲಿ ಅಗ್ನಿವೇಶನಿಂದ ರಚಿತವಾದ ಈ ಗ್ರಂಥಕ್ಕೆ ಚರಕಾಚಾರ್ಯರು ಸಂಸ್ಕಾರ ಕೊಟ್ಟಿದ್ದರಿಂದ ( ಅಗ್ನಿವೇಶಕೃತೇ ತಂತ್ರೇ ಚರಕಪ್ರತಿಸಂಸ್ಕೃತೇ ) ಇದಕ್ಕೆ ಚರಕಾಚಾರ್ಯರ ಹೆಸರೇ ಪ್ರಸ್ತುತವಾಗಿದೆ. ಒಟ್ಟು ೧೨೦ ಅಧ್ಯಾಯದ ಈ ಗ್ರಂಥದಲ್ಲಿ, ಈ ೨ನೇ ಭಾಗದಲ್ಲಿ ಆರಂಭವಾದ ಚಿಂ ೧೪ನೇ ಅಧ್ಯಾಯದಿಂದ ಕೊನೆಯವರೆಗೆ (೪೧ ಅಧ್ಯಾಯ) ದೃಢಬಲಾಚಾರ್ಯರಿಂದ ಸಂಸ್ಕಾರವಾಗಿದ್ದರೂ ಈ ಭಾಗಕ್ಕೂ ಚರಕಾಚಾರ್ಯರ ಪ್ರಭಾವ ಮೂಲಕ ಅವರ ಹೆಸರೇ ಬಂದಿದೆ. ಈ ಭಾಗದಲ್ಲಿ ಚಿಕಿತ್ಸಾ ಸ್ಥಾನದ ೧೪ ರಿಂದ ೨೫ ಅಧ್ಯಾಯಗಳು ಬಂದಿವೆ. ಉಳಿದ ಚಿಕಿತ್ಸಾಸ್ಥಾನದ ೫ ಅಧ್ಯಾಯಗಳನ್ನು ವಿಸ್ತೃತ ಸೂಚಿಯೊಡನೆ ಮುಂದಿನ ಭಾಗದಲ್ಲಿ ಮುದ್ರಿಸುವೆವು. ಮುದ್ರಾಲಯದ ಅನಾನುಕೂಲತೆಯಿಂದ ಈ ಭಾಗವು ಹೊರಗೆ ಬರಲು ೫ ವರ್ಷದಷ್ಟು ದೀರ್ಘ ಕಾಲವು ಸಂದಿತು. ಆದರೂ ನಮ್ಮ ಪ್ರಿಯ ಮಿತ್ರರಾದ ಖ್ಯಾತ ಶ್ರೀ ಹೊಂಬಾಳಿ ಬಂಧುಗಳು ಶ್ರಮಬಟ್ಟು ಅದಷ್ಟು ಶೀಘ್ರ ಮುದ್ರಿಸಿಕೊಟ್ಟಿದ್ದರಿಂದ ಅವರಿಗೆ ಅತ್ಯಂತ ಋಣಿಯಾಗಿರುವೆನು.

ಹಿಂದಿನ ಭಾಗಕ್ಕೆ, ಮುಂಬಯಿಯ ಧನಾಢ್ಯ ವ್ಯಾಪಾರಿಗಳಾದ ಶ್ರೀ. ಕೃಷ್ಣರಾವ ಕಬ್ಬೂರ, ಇವರು ತಮ್ಮ ಮಾತೃಶ್ರೀಯವರ ಸ್ಮಾರಕವಾಗಿ ಉದಾರ ಸಹಾಯ ಮಾಡಿದಂತೆ, ಈಸಲ ಚಿಟಗುಪ್ಪಿಯ ಶ್ರೀಮತಿ ಅಕ್ಕೂಬಾಯಿ ದೇಶಪಾಂಡೆಯವರು ತಮ್ಮ ಅತ್ತೆಯವರಾದ ಶ್ರೀಮತಿ ರಂಗೂಬಾಯಿಯವರ ಇಚ್ಛೆಯಂತೆ ತಮ್ಮ ಪ್ರಿಯ ಯಜಮಾನರಾದ ಶ್ರೀಮಂತ ರಾಜೇಸಾಹೇಬರ ಸ್ಮಾರಕವೆಂದು ಈ ಗ್ರಂಥದ ಎಲ್ಲ ವೆಚ್ಚವನ್ನು ವಹಿಸಿದ್ದಕ್ಕಾಗಿ ಅವರಿಗೆ ಚಿರಋಣಿಯಾಗಿರುವೆವು. ಇಂಥ ಉದಾರ ಧಾರ್ಮಿಕ ಕುಟುಂಬದ ವಂಶಜರಿಗೆ ಭಗವಾನ್ ಧನ್ವಂತರಿಯು ಆಯುರಾರೋಗ್ಯ ಐಶ್ವರ್ಯಗಳನ್ನು ದಯಪಾಲಿಸಿ ಅವರಿಂದ ಹೀಗೆಯೇ ಜನತೆಯ ಕಲ್ಯಾಣವಾಗುವಂತೆ ಮಾಡಲಿ ಎಂದು ಅವನನ್ನು ಪ್ರಾರ್ಥಿಸುವೆವು.

| | |
|---|---|
| **ಬಿಜಾಪುರ,** | ಆಯುರ್ವೇದ ಸೇವಕ, |
| ಜ್ಯೈ. ಶು. ೧ ೧೮೭೨ | **ಆದ್ಯ ಅನಂತಾಚಾರ್ಯರು.** |



ಶ್ರೀಮಂತ, ರಾಜಾಸಾಹೇಬ ದೇಶಪಾಂಡೆ, ಚಿಟಗುಪ್ಪಿ

ಉದಾರಚರಿತರಾದ ಶ್ರೀ. ಕಾದಂಬರೀಬಾಯಿ ರಾಣೀಸಾಹೇಬರ ಪ್ರಾಣಪತಿಗಳು

ಇವರ ಸ್ಮಾರಕವೆಂದು ಈ ಗ್ರಂಥವು ಪ್ರಕಟಿಸಲ್ಪಟ್ಟಿದೆ.



ಶ್ರೀಮಂತ,

**ಅಕ್ಕೂಬಾಯಿ ಉರ್ಫ ಕಾದಂಬರೀಬಾಯಿ ದೇಶಪಾಂಡೆ**

**ರಾಣೀಸಾಹೇಬ ಚಿಟಗುಪ್ಪಿ, ಜಿ: ಕಲಬುರ್ಗಿ.**

ತಮ್ಮ ಅತ್ತೆಯವರಾದ ಶ್ರೀ ರಂಗೂಬಾಯಿಯವರ ಇಚ್ಛೆಯಂತೆ ತಮ್ಮ
ಪ್ರಿಯ ಪತಿಗಳ ಸ್ಮಾರಕವೆಂದು ಈ ಗ್ರಂಥವನ್ನು ಮುದ್ರಿಸಲು
ಹಣವನ್ನು ದಯಪಾಲಿಸಿದ ಉದಾರಚರಿತರು.



# ವಿಷಯಾನುಕ್ರಮಣಿಕೆ

| ವಿಷಯ | ಶ್ಲೋಕ | ಪುಟ |
|---|---|---|
| ಶಾಖ ಶ್ರಿತ ಕಾಮಲಾ ಲಕ್ಷಣ ಚಿಕಿತ್ಸೆ | ೧೨೨-೧೨೬॥ | ೧೩೬-೧೩೭ |
| ಹಲೀಮಕ ಲಕ್ಷಣ | ೧೨೯-೧೩೦॥ | ೧೩೮ |

## ೧೭ನೇ ಅಧ್ಯಾಯ (ಹಿಕ್ಕಾಶ್ವಾಸಚಿಕಿತ್ಸೆ) ೧೪೧

| | | |
|---|---|---|
| ಈ ರೋಗಗಳ ಕಾಠಿನ್ಯ | ೫-೯ | ೧೪೨ |
| ,, ಕಾರಣ | ೧೦-೧೬॥ | ೧೪೩ |
| ,, ಪೂರ್ವರೂಪ | ೧೭-೧೯ | ೧೪೪ |
| ಬಿಕ್ಕಿನ ಸಂಪ್ರಾಪ್ತಿ | ೨೦ | ೧೪೪ |
| ಮಹಾಹಕ್ಕೆಯ ಲಕ್ಷಣ | ೨೧-೨೫ | ೧೪೫ |
| ಗಂಭೀರ ಹಕ್ಕೆ | ೨೬-೨೯ | ೧೪೬ |
| ವ್ಯಾಪೇತಾ ಅಥವಾ ಯಮಲಾ | ೩೦-೩೨ | ೧೪೬-೧೪೭ |
| ಕ್ಷುದ್ರಾ | ೩೩-೩೬ | ೧೪೭ |
| ಅನ್ನಜಾ | ೩೭-೪೦ | ೧೪೮ |
| ಸಾಧ್ಯಾಸಾಧ್ಯತೆ | ೪೧-೪೩ | ೧೪೯ |
| ಶ್ವಾಸದ ಕಾರಣ | ೪೪ | ೧೪೯ |
| ಮಹಾಶ್ವಾಸದ ಲಕ್ಷಣ | ೪೫-೪೭ | ೧೫೦ |
| ಊರ್ಧ್ವಶ್ವಾಶದ ಲಕ್ಷಣ | ೪೮-೫೦ | ೧೫೦ |
| ಛಿನ್ನಶ್ವಾಸ | ೫೧-೫೩ | ೧೫೧ |
| ತಮಕಶ್ವಾಸ | ೫೪-೬೧ | ೧೫೧-೧೫೨ |
| ಪ್ರತಮಕ ಸಂತಮಕಶ್ವಾಸ | ೬೨-೬೩ | ೧೫ |
| ಕ್ಷುದ್ರಶ್ವಾಸ | ೬೪-೬೫॥ | ೧೫ |
| ಸಾಧ್ಯಾಸಾಧ್ಯತೆ | ೬೬-೬೮ | ೧೫೪ |
| ಚಿಕಿತ್ಸೆ | ೬೯-೭೫ | ೧೫೪-೧೫೫ |
| ಧೂಮವರ್ತಿ | ೭೬-೭೯ | ೧೫೬ |
| ಉಪದ್ರವಯುಕ್ತ ಈ ರೋಗಗಳಚಿಕಿತ್ಸೆ | ೮೦ | ೧೫೬ |
| ಸ್ವೇದಕ್ಕೆ ಅನರ್ಹ | ೮೧-೮೩ | ೧೫೭ |
| ಈ ರೋಗಗಳ ಭೇದವನ್ನು ಹೇಳಿ ಅವರಿಗೆ ಮಾಡತಕ್ಕ ಭಿನ್ನ ಚಿಕಿತ್ಸೆ ಹೇಳುತ್ತಾರೆ | ೮೭-೯೧ | ೧೫೮ |

## ೨೦ನೇ ಅಧ್ಯಾಯ (ಛರ್ದಿಚಿಕಿತ್ಸೆ)

೨೫ನೇ ಅಧ್ಯಾಯವು ಮುಗಿಯಿತು.



# ಚರಕ ಸಂಹಿತಾ

## ಚಿಕಿತ್ಸಾ ಸ್ಥಾನ.

## ಭಾಗ ೨.



## ಹದಿನಾಲ್ಕನೇ ಅಧ್ಯಾಯ.



### ಮೂಲವ್ಯಾಧಿಯ ಚಿಕಿತ್ಸೆಯು.

ಆತ್ರೇಯರಿಂದ ಉಪದೇಶಿಸಲ್ಪಟ್ಟ, ಅಗ್ನಿವೇಶರಿಂದ ರಚಿತವಾದ ಈ ಗ್ರಂಥಕ್ಕೆ ಇಲ್ಲಿಯವರೆಗೆ ಚರಕಾಚಾರ್ಯರಿಂದ ಸಂಸ್ಕಾರ ಕೊಡಲ್ಪಟ್ಟದೆ. ಇನ್ನು ಮುಂದಿನ ಚಿಕಿತ್ಸಾ ಸ್ಥಾನದ ಹದಿನೇಳು ಅಧ್ಯಾಯಗಳೂ ಸಿದ್ಧಿಸ್ಥಾನ ಮತ್ತು ಕಲ್ಪಸ್ಥಾನವೂ ದೃಢಬಲ ಎಂಬವರಿಂದ ಸಂಸ್ಕೃತವಾಗಿವೆ. ಹೀಗಿದ್ದರೂ ಮೊದಲು ಚರಕಾಚಾರ್ಯರಿಂದಲೇ ಈ ಗ್ರಂಥದ ಪ್ರಾರಂಭವಾಗಿದ್ದದರಿಂದ ಈ ಗ್ರಂಥ ಭಾಗಕ್ಕೂ ಚರಕಸಂಹಿತೆಯೆಂಬ ಹೆಸರೇ ಬಂದಿದೆ.

ಉದರದಂತೆ ಮೂಲವ್ಯಾಧಿಗಳು ಅಗ್ನಿಯ ದೋಷದಿಂದ ಆಗುವದರಿಂದ ಉದರ ಚಿಕಿತ್ಸೆಯ ನಂತರ ಮೂಲವ್ಯಾಧಿಯ ಚಿಕಿತ್ಸೆಯನ್ನು ಹೇಳುತ್ತಾರೆ

**ಅಥಾತೋಽರ್ಶಸಾಂ ಚಿಕಿತ್ಸಿತಂ ವ್ಯಾಖ್ಯಾಸ್ಯಾಮಃ ||**

**ಅರ್ಥ:—** ಇನ್ನು ಮೇಲೆ ಮೂಲವ್ಯಾಧಿಯ ಚಿಕಿತ್ಸೆಯನ್ನು ಹೇಳುವೆವು.

**ಇತಿ ಹ ಸ್ಮಾಹ ಭಗವಾನಾತ್ರೇಯಃ || ೧ ||**

**ಅರ್ಥ:—** ಪೂಜ್ಯರಾದ ಆತ್ರೇಯಋಷಿಗಳು ಹೀಗೆ ಹೇಳಿದರು. (೧)

**ಆಸೀನಂ ಮುನಿಮವ್ಯಗ್ರಂ ಕೃತಜಾಪ್ಯಂ ಕೃತಕ್ಷಣಮ್ ||**
**ಪೃಷ್ಟವಾನರ್ಶಸಾಂ ಮುಕ್ತಿಮಗ್ನಿವೇಶಃ ಪುನರ್ವಸುಮ್ ||೨||**
**ಪ್ರಕೋಪಹೇತುಂ ಸಂಸ್ಥಾನಂ ಸ್ಥಾನಂ ಲಿಂಗಂ ಚಿಕಿತ್ಸಿತಮ್ ||**
**ಸಾಧ್ಯಾಸಾಧ್ಯವಿಭಾಗಂಚ ತಸ್ಮೈ ತನ್ಮುನಿರಬ್ರವೀತ್ ||೩||**

**ಅರ್ಥ:—** ತನ್ನ ಜಪವನ್ನು ಮುಗಿಸಿ ನಿಶ್ಚಿಂತನಾಗಿ ಕುಳಿತ ಅವಸರವನ್ನು ಕಂಡು ಅಗ್ನಿವೇಶನು ಆತ್ರೇಯ ಪುನರ್ವಸು ಋಷಿಗಳಿಗೆ ಮೂಲವ್ಯಾಧಿಯ ನಿವಾರಣೋಪಾಯವನ್ನು ಕೇಳಿದನು. || ೨ || ಅವನಿಗೆ ಆ ಮುನಿಗಳು ಮೂಲವ್ಯಾಧಿಯ ಪ್ರಕೋಪದ ಕಾರಣ, ಆಕಾರ, ಉತ್ಪತ್ತಿ ಸ್ಥಾನ, ಲಕ್ಷಣ, ಚಿಕಿತ್ಸೆ, ಸಾಧ್ಯಾಸಾಧ್ಯತೆಗಳನ್ನು ಹೇಳಿದರು. (೩)

**ಮೂಲವ್ಯಾಧಿಯ ಮುಖ್ಯ ಎರಡು ಭೇದಗಳನ್ನು ಮೊದಲು ಹೇಳುತ್ತಾರೆ.**

**ಇಹ ಖಲ್ವಗ್ನಿವೇಶ ! ದ್ವಿವಿಧಾನ್ಯರ್ಶಾಂಸಿ । ಸಹಜಾನಿ ಕಾನಿಚಿತ್ । ಕಾನಿಚಿಜ್ಜಾತಸ್ಯೋತ್ತರಕಾಲಜಾನಿ । ತತ್ರ ಬೀಜಂ ಗುದವಲಿಬೀಜೋಪತಪ್ತಮಾಯತನಮರ್ಶಸಾಂ ಸಹಜಾನಾಮ್। ತತ್ರ ದ್ವಿವಿಧೋ ಬೀಜೋಪತಪ್ತೌ ಹೇತುಃ ಮಾತಾಪಿತ್ರೋರಪಚಾರಃ ಪೂರ್ವಕೃತಂ ಚ ಕರ್ಮ। ತಥಾನ್ಯೇಷಾಮಪಿ ಸಹಜಾನಾಂ ವಿಕಾರಾಣಾಮ್ । ತತ್ರ ಸಹಜಾನಿ ಸಹ ಜಾತಾನಿ ಶರೀರೇಣಾರ್ಶಾಂಸೀತ್ಯಧಿಮಾಂಸವಿಕಾರಾಃ || ೪ ||**

**ಅರ್ಥ:—** ಅಗ್ನಿವೇಶನೇ ! ಮೂಲವ್ಯಾಧಿಗಳು ಎರಡು ತರದವಿರುತ್ತವೆ. ಕೆಲವು ಸಹಜವಾದವು. ಕೆಲವು ಹುಟ್ಟಿದ ಮೇಲೆ ಉಂಟಾದವು. ಅದರಲ್ಲಿ ಸ್ತ್ರೀ ಪುರುಷರ ಶುಕ್ರಶೋಣಿತದಲ್ಲಿರುವ ಗುದವಲಿಗಳನ್ನು

ಹುಟ್ಟಿಸುವ ಬೀಜ ಭಾಗದ ದೋಷವು ಸಹಜಗಳ ಕಾರಣವಾಗಿದೆ. ಈ ದೋಷಕ್ಕೆ ತಂದೆ ತಾಯಿಗಳ ಅಪಥ್ಯವೂ ಮತ್ತು ಪೂರ್ವ ಕರ್ಮವೂ ಹೀಗೆ ಎರಡು ಕಾರಣಗಳಿರುತ್ತವೆ. ಇದರಂತೆ ಬೇರೆ ಸಹಜ ವಿಕಾರಗಳಿಗೂ ಇವೆರಡು ಕಾರಣವಾಗಿರುತ್ತವೆ. ಸಹಜವೆಂದರೆ ಶರೀರದೊಡನೆಯೇ ಉಂಟಾದವು. ಮೂಲವ್ಯಾಧಿಗಳು ಎಂದರೆ 'ಹೆಚ್ಚು ಬೆಳೆದ ಮಾಂಸ' ವೆಂಬ ವಿಕಾರವು. (೪)

ಮೂಲ ವ್ಯಾಧಿಗಳ ಸ್ಥಾನಗಳನ್ನು ಹೇಳುತ್ತಾರೆ.

**ಸರ್ವೇಷಾಂ ಚಾರ್ಶಸಾಂ ಕ್ಷೇತ್ರಂ ಗುದಸ್ಯಾರ್ಧಪಂಚಮಾಂಗುಲಾವಕಾಶೇತ್ರಭಾಗಾಂತರಾಸ್ತಿಸ್ರೋಗುದವಲಯಃ। ಕೇಚಿತ್ ತು ಭೂಯಾಂಸಮೇವ ದೇಶಮುಪದಿಶಂತ್ಯರ್ಶಸಾಮುಪತ್ಯಪಥ, ಶಿಶ್ನ, ಗಲ, ತಾಲು, ಮುಖ, ನಾಸಾ, ಕರ್ಣಾಕ್ಷಿವರ್ತ್ಮಾನಿ ತ್ವಕ್ ಚ। ತದಸ್ತ್ಯಧಿಮಾಂಸದೇಶತಯಾ। ಗುದವಲಿಜಾನಾಂ ತ್ವರ್ಶಾಂಸೀತಿ ಸಂಜ್ಞಾ ತಂತ್ರೇಽಸ್ಮಿನ್। ಸರ್ವೇಷಾಂ ಚಾರ್ಶಸಾಮಧಿಷ್ಠಾನಂ ಮೇದೋ ಮಾಂಸಂ ತ್ವಕ್ ಚ. ॥ ೫ ॥**

**ಅರ್ಥ:—** ಗುದಪ್ರದೇಶದಲ್ಲಿ ಒಂದೂವರೆ ಅಂಗುಲಕ್ಕೆ ಒಂದರಂತೆ ಮೇಲಿನಿಂದ ಕೆಳಗೆ ಕ್ರಮವಾಗಿ (ಪ್ರವಾಹಣೀ ವಿಸರ್ಜನೀ, ಸಂವರಣೀ ಎಂಬ) ಮೂರು ವಲಿಗಳು ನಾಲ್ಕೂವರೆ ಅಂಗುಲಗಳನ್ನು ವ್ಯಾಪಿಸಿಕೊಂಡು ಇವೆ. ಇವು ಎಲ್ಲ ಮೂಲವ್ಯಾಧಿಗೆ ಸ್ಥಾನವು. ಕೆಲವರು (ಸುಶ್ರುತ) ಯೋನಿ, ಶಿಶ್ನ, ಕಂಠ, ಅಂಗಳ, ಬಾಯಿ, ಮೂಗು, ಕಿವಿ, ಕಂಣು, ರೆಪ್ಪೆ, ತ್ವಚೆ, ಎಂದು ಮೂಲವ್ಯಾಧಿಯ ಅನೇಕ ಸ್ಥಾನಗಳನ್ನು ಹೇಳುತ್ತಾರೆ. ಇವೆಲ್ಲ ಮಾಂಸ ವೃದ್ಧಿಯ ಸ್ಥಾನಗಳೇನೋ ಹೌದು, ಆದರೆ ಗುದದ ವಲಿಗಳಲ್ಲಿ ಉಂಟಾದವುಗಳಿಗೆ ಮಾತ್ರ ಈ ಶಾಸ್ತ್ರದಲ್ಲಿ ಮೂಲವ್ಯಾಧಿ ಎಂಬ ಹೆಸರು. ಎಲ್ಲ ಮೂಲವ್ಯಾಧಿಗಳಿಗೂ ಮೇದ ಮಾಂಸ ಮತ್ತು ತ್ವಕ್ಕುಗಳು ಆಶ್ರಯವಾಗಿವೆ. (೫)

**ತತ್ರ ಸಹಜಾನ್ಯರ್ಶಾಂಸಿ ಕಾನಿಚಿದಣೂನಿ ಕಾನಿಚಿನ್ಮಹಾಂತಿ। ಕಾನಿಚಿದ್ದೀರ್ಘಾಣಿ। ಕಾನಿಚಿದ್ಧ್ರಸ್ವಾನಿ। ಕಾನಿಚಿದ್ವೃತ್ತಾನಿ। ಕಾನಿಚಿದ್ವಿಷಮವಿಸೃತಾನಿ। ಕಾನಿಚಿದಂತಃಕುಟಿಲಾನಿ। ಕಾನಿಚಿದ್ಬಹಿಃ**

ಕುಟಿಲಾನಿ । ಕಾನಿಚಿಜ್ಜಟಿಲಾನಿ । ಕಾನಿಚಿದಂತರ್ಮುಖಾಣಿ । ಯಥಾಸ್ವಂ ದೋಷಾನುಬಂಧವರ್ಣಾನಿ ॥ ೬ ॥

ಅರ್ಥ:— ಇವುಗಳಲ್ಲಿ ಸಹಜ ಮೂಲವ್ಯಾಧಿಗಳು ಕೆಲವು ಸಣ್ಣ, ಕೆಲವು ದೊಡ್ಡ, ಕೆಲವು ಉದ್ದ, ಕೆಲವು ಗಿಡ್ಡ, ಕೆಲವು ದುಂಡಗೆ, ಕೆಲವು, ಅಂಕಡೊಂಕ, ಕೆಲವು ಒಳಗೆ ವಕ್ರ, ಕೆಲವು ಹೊರಗೆ ವಕ್ರ ಕೆಲವು ಜಟಿಲ, ಕೆಲವು ಒಳಮೋರೆಯವು ಇರುವವು ಅವುಗಳ ವರ್ಣವು ಆಯಾ ದೋಷಗಳಿಗೆ ಅನುರೂಪ (ವಾತವಿದ್ದರೆ ಕರ್‍ರಗೆ, ಪಿತ ವಿದ್ದರೆ ಕೆಂಪು, ಹಳದಿ, ಕಫವಿದ್ದರೆ ಬೆಳ್ಳಗೆ) ವಾಗಿರುತ್ತದೆ. (೬)

ಸಹಜಗಳ ಲಕ್ಷಣಗಳನ್ನು ಹೇಳುತ್ತಾರೆ.

ತೈರಭಿಭೂತೋ ಜನ್ಮಪ್ರಭೃತಿ ಭವತ್ಯತಿಕೃಶೋ ವಿವರ್ಣಃ ಕ್ಷಾಮೋ ದೀನಃ ಪ್ರಚುರವಿಬದ್ಧವಾತಮೂತ್ರಪುರೀಷಃ ಶರ್ಕರಾಶ್ಮರೀಮಾನ್ । ತಥಾಽನಿಯತವಿಬದ್ಧಮುಕ್ತಪಕ್ವಾಮಶುಷ್ಕಭಿನ್ನವರ್ಚಾಃ । ಅಂತರಾಂತರಾ ಶ್ವೇತಪಾಂಡುಹರಿತಪೀತರಕ್ತಾರುಣದ್ರವಸಾಂದ್ರಪಿಚ್ಛಿಲ ಕುಣಪಗಂಧ್ಯಾಮ ಪುರೀಷೋಪವೇಶೀ ನಾಭಿಬಸ್ತಿವಂಕ್ಷಣೋದ್ದೇಶೇ ಪ್ರಚುರಪರಿಕರ್ತಿಕಾನ್ವಿತಃ ಸಗುದಶೂಲಪ್ರವಾಹಿಕಾಪರಿಹರ್ಷಪ್ರಮೋಹಪ್ರಸಕ್ತವಿಷ್ಟಂಭಾಟೋಪಾಂತ್ರಕೂಜೋದಾವರ್ತಹೃದಯೇಂದ್ರಿಯೋಪಲೇಪಃ ಪ್ರಚಾರವಿಬದ್ಧತಿಕ್ತಾಮ್ಲೋದ್ಗಾರಃ ಸುದುರ್ಬಲೋ ದುರ್ಬಲಾಗ್ನಿರಲ್ಪಶುಕ್ರಃ ಕ್ರೋಧನೋ ದುಃಖೋಪಚಾರಶೀಲಃ ಕಾಸಶ್ವಾಸ ತಮಕತೃಷ್ಣಾಹೃಲ್ಲಾಸಚ್ಛರ್ದ್ಯರೋಚಕಾವಿಪಾಕಪೀನಸಕ್ಷವಥು ಪರೀತಸ್ತೈಮಿರಿಕಃ ಶಿರಃಶೂಲೀ ಕ್ಷಾಮಭಿನ್ನಸಂಸಕ್ತಜರ್ಜರಸ್ವರಃ ಕರ್ಣರೋಗೀ ಶೂನಪಾಣಿಪಾದವದನಾಕ್ಷಿಕೂಟಃ ಸಜ್ವರಃ ಸಾಂಗಮರ್ದಃ ಸರ್ವಪರ್ವಾಸ್ಥಿಶೂಲೀ ಚಾಂತರಾಂತರಾ ಪಾರ್ಶ್ವಕುಕ್ಷಿಬಸ್ತಿಹೃದಯಪೃಷ್ಠತ್ರಿಕಗ್ರಹೋಪತಪ್ತಃ ಪ್ರಧ್ಯಾನಪರಃ ಪರಮಾಲಸಶ್ಚೇತಿ। ಜನ್ಮಪ್ರಭೃತ್ಯಸ್ಯ ಹಿ ಗುದಮಾರ್ಗೋಪರೋಧಾದ್ವಾಯುರಪಾನಃ ಪ್ರತ್ಯಾರೋಹನ್ ಸಮಾನವ್ಯಾನಪ್ರಾಣೋದಾನಾನ್ ಪಿತ್ತಶ್ಲೇಷ್ಮಾಣೌ ಚ ಪ್ರಕೋಪಯತಿ। ಏತೇ ಸರ್ವೇ ಏವ ಪ್ರಕುಪಿತಾಃ ಪಂಚ

**ಪಂಚ ವಾಯವಃ ಪಿತ್ತಶ್ಲೇಷ್ಮಾಣೌ ಚಾರ್ಶಸಮಭಿದ್ರವಂತಸ್ತಾನ್ ವಿಕಾರಾನ್ ಜನಯಂತಿ । ಇತ್ಯುಕ್ತಾನಿ ಸಹಜಾನ್ಯರ್ಶಾಂಸಿ　॥ ೭ ॥**

**ಅರ್ಥ:—** ಈ ವ್ಯಾಧಿಗಳುಂಟಾದ ರೋಗಿಯು ಜನ್ಮದಿಂದ ಅತಿ ಕೃಶ,ಬಂಣ ಕೆಟ್ಟ, ಕ್ಷೀಣ, ದೀನನಾಗಿರುವನು. ವಾತಮಲಮೂತ್ರಗಳ ಬಹಳ ಬಂಧವಿರುವದು. ಮೂತ್ರಾಶ್ಮರೀ ಮೂತ್ರಶರ್ಕರೆಗಳಾಗುವವು. ಆದರಂತೆ ಒಮ್ಮೆ ಪಕ್ವ, ಒಮ್ಮೆ ಅಪಕ್ವ, ಒಮ್ಮೆ ಒಣಗಿದ, ಒಮ್ಮೆ ತೆಳ್ಳಗಿನ ಮಲವು ಬೀಳುವದು. (ಒಮ್ಮೆ ಮಲ ಶುದ್ಧಿ ಒಮ್ಮೆ ಮಲಬಂಧ ಹೀಗೆ ಅನಿಯಮಿತವಾಗಿರುವದು.) ನಡನಡುವೆ ಬಿಳೀ, ಪಾಂಡು, ಹಸರು, ಹಳದಿ, ಕೆಂಪು, ನಸುಗೆಂಪುವರ್ಣದ ತೆಳ್ಳಗಿನ ಗಟ್ಟಿಯಾದ ಹೆಡಸುಳ್ಳ ಹೊಲಸು ನಾರುವ ಅಪಕ್ವ ಮಲವು ಬೀಳುವದು. ಹೊಕ್ಕಳು ಮೂತ್ರಾಶ್ರಯ ಗೆಜ್ಜೆಗಳಲ್ಲಿ ಕತ್ತರಿಸಿದಂತೆ ಬಹಳ ನೋವಾಗುವದು. ಗುದದಲ್ಲಿಶೂಲ ವಾಗುವದು. ತಿಣಕುವನು. ರೋಮಾಂಚಗಳೇಳುವವು. ನೋಹವುಂಟಾಗುವದು. ಮಲಬಂಧ, ಹೊಟ್ಟೆಯಲ್ಲಿ ಗುಡುಗುಡು ಶಬ್ದದೊಡನೆ ನೋವು, ಕರಳಿನಲ್ಲಿ ಧ್ವನಿ, ಉದಾವರ್ತ, ಹೃದಯ ಮತ್ತು ಇಂದ್ರಿಯಗಳಿಗೆ ಲೇಪ ಮಾಡಿದಂತೆ ಇರೋಣ, ಕಹಿ, ಹುಳಿಯಾದ ತೇಗುಗಳು ಬಹಳವಾಗಿ ತಟ್ಟಿಸಿ ತಟ್ಟಿಸಿ ಬರೋಣ, ಅಶಕ್ತತೆಗಳಿರುವವು. ಅಗ್ನಿಮಾಂದ್ಯ, ಶುಕ್ರಕ್ಷಯವಿರುವದು. ತೀವ್ರ ಸಿಟ್ಟು ಬರುವದು. ಉಪಚಾರ ಮಾಡುವದು ಕಷ್ಟವಾಗುವದು. ಕೆಮ್ಮು, ದಮ್ಮು , ತಮಕ ಶ್ವಾಸ, ನೀರಡಿಕೆ, ಮಳಮಳ ವಾಂತಿ, ಅರುಚಿ, ಅಜೀರ್ಣ, ನೆಗಡಿ, ಸೀನುಗಳು ಬರುವವು. ಕಣ್ಣಿಗೆ ಕತ್ತಲೆ ಬರುವದು. ತಲೆಶೂಲೆ ಇರುವದು. ಸ್ವರವು ಕೃಶ, ಬಡಕ, ಜರ್ಜರ,ವಾಗಿದ್ದು ತಟ್ಟಿಸುತ್ತ ಬರುವದು. ಕಿವಿ ನೋಯುವದು. ಕೈಕಾಲು ಮೋರೆ ಕಣ್ಣುಗಳು ಬಾಯುವವು. ಜ್ವರ ಮೈನೋವು ಎಲ್ಲ ಸಂಧಿ ಅಸ್ಥಿಗಳಲ್ಲಿ ಶೂಲವು ಇರುವದು. ನಡುನಡುವೆ ಮಗ್ಗಲು, ಪಕ್ಕೆ ಮೂತ್ರಾಶಯ, ಎದೆ, ಬೆನ್ನು, ತಿಗ; ಹಿಡಿಯುವದರಿಂದ ತ್ರಾಸವಾಗುವದು. ಯಾವಾಗಲೂ ಚಿಂತೆಯಲ್ಲಿದ್ದಂತೆ ಕಾಣುವನು. ಆಲಸ್ಯವಿರುವದು. ಜನ್ಮದಿಂದ ಇವನ ಗುದಮಾರ್ಗವು ಬಂದಾಗಿರುವದರಿಂದ ಅಪಾನ ವಾಯುವು ಮೇಲಕ್ಕೇರಿ ಸಮಾನ, ವ್ಯಾನ, ಪ್ರಾಣ, ಉದಾನ ಮತ್ತು ಪಿತ್ತಕಫಗಳ ಪ್ರಕೋಪವನ್ನುಂಟು ಮಾಡುವದು. ಆಮೇಲೆ ಈ ಎಲ್ಲ ೫

ವಾಯುಗಳೂ ಪಿತ್ತಕಫಗಳೂ ಕುಪಿತವಾಗಿ ರೋಗಿಯನ್ನು ಸೇರಿ ಹಿಂದೆ ಹೇಳಿದ ಆಯಾ ವಿಕಾರವನ್ನುಂಟು ಮಾಡುತ್ತವೆ. ಈ ಪ್ರಕಾರ ಸಹಜ ಮೂಲವ್ಯಾಧಿಗಳು ಹೇಳಲ್ಪಟ್ಟವು. (೭)

ಉತ್ತರ ಕಾಲಜ ಅರ್ಶಗಳನ್ನು ಹೇಳುತ್ತಾರೆ.

ಅತ ಊರ್ಧ್ವಂ ಜಾತಸ್ಯೋತ್ತರಕಾಲಜಾತಾನ್ಯರ್ಶಾಂಸಿ ವ್ಯಾಖ್ಯಾಸ್ಯಾಮಃ। ಗುರುಮಧುರಶೀತಾಭಿಷ್ಯಂದಿವಿದಾಹಿವಿರುದ್ಧಾಜೀರ್ಣಪ್ರಮಿತಾಶನಾಸಾತ್ಮ್ಯಭೋಜನಾದ್, ಗವ್ಯಮಾತ್ಸ್ಯಕೌಕ್ಕುಟವಾರಾಹಮಾಹಿಷಾಜಾವಿಕಪಿಶಿತಭಕ್ಷಣಾತ್, ಕೃಶಶುಷ್ಕಪೂತಿಮಾಂಸಪೈಷ್ಟಿಕಪರಮಾನ್ನಕ್ಷೀರದಧಿಮಂಡಕತಿಲಗುಡವಿಕೃತಿಸೇವನಾನ್ಮಾಷಯೂಷೇಕ್ಷುರಸಪಿಣ್ಯಾಕಪಿಂಡಾಲುಕಶುಷ್ಕಶಾಕಶುಕ್ತಲಶುನಕಿಲಾಟತಕ್ರಪಿಂಡಕಬಿಸಮೃಣಾಲಶಾಲೂಕಕ್ರೌಂಚಾದನಕಶೇರುಕಶೃಂಗಾಟಕತರುಟವಿರೂಢನವಶೂಕಶಮೀಧಾನ್ಯಾಮಮೂಲಕೋಪಯೋಗಾತ್, ಗುರುಫಲಶಾಕರಾಗಹರಿತಕರಮರ್ದಕವಸಾಶಿರಸ್ಪದಪರ್ಯುಷಿತಪೂತಿಶೀತಲಸಂಕೀರ್ಣಾನ್ನಾಭ್ಯವಹಾರಾನ್ಮಂದಕಾತಿಕ್ರಾಂತಮದ್ಯಪಾನಾದ್ ವ್ಯಾಪನ್ನಗುರುಸಲಿಲಪಾನಾದತಿಸ್ನೇಹಪಾನಾದಸಂಶೋಧನಾದ್ಬಸ್ತಿಕರ್ಮವಿಭ್ರಮಾದವ್ಯಾಯಾಮಾದವ್ಯವಾಯಾತ್ ದಿವಾಸ್ವಪ್ನಾತ್ಸುಖಶಯನಾಸನಸ್ಥಾನಸೇವನಾಚ್ಚೋಪಹತಾಗ್ನೇರ್ಮಲೋಪಚಯೋ ಭವತ್ಯತಿಮಾತ್ರಮ್। ತಥೋತ್ಕಟವಿಷಮಕಠಿನಾಸನಸೇವನಾದುದ್ಭ್ರಾಂತಯಾನೋಷ್ಟ್ರಯಾನಾದತಿವ್ಯವಾಯಾದ್ಬಸ್ತಿನೇತ್ರಾಸಮ್ಯಕ್ಪ್ರಣಿಧಾನಾತ್ ಗುದಕ್ಷಣನಾದಭೀಕ್ಷ್ಣಂ ಶೀತಾಂಬುಸಂಸ್ಪರ್ಶಾಚ್ಚೇಲಲೋಷ್ಟತೃಣಾದಿಘರ್ಷಣಾತ್ ಪ್ರತತಾತಿನಿರ್ವಾಹಣಾದ್ವಾತಮೂತ್ರಪುರೀಷವೇಗೋದೀರಣಾತ್ ಸಮುದೀರ್ಣವೇಗವಿನಿಗ್ರಹಾತ್ಸ್ತ್ರೀಣಾಂ ಚಾಮಗರ್ಭಭ್ರಂಶಾದ್ ಗರ್ಭೋತ್ಪೀಡನಾದ್ವಿಷಮಪ್ರಸೂತಿಭಿಶ್ಚ ಪ್ರಕುಪಿತೋ ವಾಯುರಪಾನಸ್ತಂ ಮಲಮುಪಚಿತಮಧೋಗಮಾಸಾದ್ಯ ಗುದವಲಿಷ್ವಾಧತ್ತೇ ॥ ತತಸ್ತಾಸ್ವರ್ಶಾಂಸಿ ಪ್ರಾದುರ್ಭವಂತಿ ॥ ೮ ॥

**ಅರ್ಥಃ**— ಇನ್ನು ಮೇಲೆ ಹುಟ್ಟಿದ ನಂತರ ಉಂಟಾಗುವ ಮೂಲ ವ್ಯಾಧಿಗಳನ್ನು ವಿವರಿಸುವೆವು. ಜಡ, ಸಿಹಿ, ಶೀತ, ಅಭಿಷ್ಯಂದಿ, ವಿದಾಹಿ, ವಿರುದ್ಧ, ಜೀರ್ಣವಾಗದ, ಸ್ವಲ್ಪ ಅಥವಾ ರೂಢಿಯಿಲ್ಲದ ಆಹಾರದ ಸೇವನೆಯಿಂದಲೂ ಆಕಳು, ಮೀನ, ಕೋಳಿ, ಹಂದಿ, ಕೋಣ, ಆಡು, ಕುರಿಗಳ ಮಾಂಸ ಭಕ್ಷಣದಿಂದಲೂ ಕೃಶ ಪ್ರಾಣಿಗಳ ಅಥವಾ ಒಣಗಿದ ಹೊಲಸು ಮಾಂಸ, ಹಿಟ್ಟು, ಪರಮಾನ್ನ, ಹಾಲು, ಮೊಸರು, ಮೊಸರಿನ ಕೆನೆ, ಎಳ್ಳು ಬೆಲ್ಲದ ಪದಾರ್ಥ ಇವುಗಳ ಸೇವನದಿಂದಲೂ ಉದ್ದಿನ ಕಟ್ಟು, ಕಬ್ಬಿನ ರಸ, ಎಳ್ಳುಹಿಂಡಿ, ಪಿಂಡಾಲುಕ, (ವಾರಾಹಿ ಕಂದ) ಒಣಗಿದ ಪಲ್ಲೆ, ಶುಕ್ತ (ಮದ್ಯ ವಿಶೇಷ), ಬಳ್ಳೊಳ್ಳಿ, ಕಿಲಾಟ, (ಒಡಪಹಾಲಿನೊಳಗಿನ ಗಟ್ಟಿಭಾಗ), ಮಜ್ಜಿಗೆಯ ಕೂರ್ಚಿಕೆ, (ಕೆಟ್ಟ ಹಾಲಿನಲ್ಲಿಯ ಗಟ್ಟಿ ಭಾಗ) ದೊಡ್ಡ ಸಣ್ಣ ಕಮಲದ ದೇಟು, ಕಮಲದ ಕಂದ, ಕ್ರೌಂಚಾದನ, ಕಶೇರುಕ (ಕೋತ್ರೀಗಡ್ಡೆ), ತರುಟ (ಕಲ್ಹಾರ ಕಮಲದ ಕಂದ) ಮೊಳಕೆಯೊಡೆದ, ತೆನೆಯಲ್ಲಿ ಆಗುವ ಅಥವಾ ಸೊಪ್ಪಿಯಲ್ಲಿ ಆಗುವ ಹೊಸ ಧಾನ್ಯ, ಬೇಯಿಸದ ಮೂಲಂಗಿ ಇವುಗಳ ಉಪಯೋಗದಿಂದಲೂ ಜಡವಿದ್ದ ಹಣ್ಣು, ಪಲ್ಲೆ, ರಾಗ (ಪಾನಕ), ಹಸಿ ಸುಂಠಿ ಮುಂತಾದ ಮಸಾಲೆ ಪದಾರ್ಥ, ಕವಳೆ, ನೆಣ, ತಲೆಯ ಮಾಂಸ, ತಂಗಳ ಹಳಸಿದ ತಣ್ಣಗಿನ ಮಿಶ್ರ ಅನ್ನಗಳನ್ನು ತಿನ್ನುವದರಿಂದಲೂ ಪೂರ್ಣವಾಗಿ ಸಿದ್ಧವಾಗದ ಅಥವಾ ಕೆಟ್ಟು ಹೋದ ಮದ್ಯ ಪಾನದಿಂದಲೂ ಕೆಟ್ಟ ಮತ್ತು ಜಡನೀರಿನಿಂದಲೂ ಬಹಳ ಸ್ನೇಹಪಾನದಿಂದಲೂ ಸಕಾಲದಲ್ಲಿ ಶೋಧನ ತಕ್ಕೊಳ್ಳದಿರುವದರಿಂಪಲೂ ಬಸ್ತಿ ಕ್ರಿಯೆಯಲ್ಲಿಯ ತಪ್ಪಿನಿಂದಲೂ ವ್ಯಾಯಾಮ, (ಇಚ್ಛೆಇದ್ದೂ) ಮೈಥುನಗಳನ್ನು ಸೇವಿಸದಿರುವದರಿಂದಲೂ ಹಗಲು ನಿದ್ರೆಯಿಂದಲೂ ಆರಾಮವಾಗಿ ಬಹಳ ಮಲಗೋಣ, ಕೂಡೋಣದರಿಂದಲೂ ಅಗ್ನಿಮಾಂದ್ಯವಾಗಿ ಅತಿಶಯ ಮಲಸಂಚಯವಾಗುತ್ತದೆ. ಅದರಂತೆ ತುದಿಗುಂಡೆಯಿಂದ ಕೊಡ್ರುವದರಿಂದಲೂ ಸಮವಿಲ್ಲದ ಬಿರಸು ಆಸನಗಳಲ್ಲಿ ಕೂಡ್ರುವದರಿಂದಲೂ ಬೆದರಿದ ವಾಹನ ಮತ್ತು ಒಂಟೆಗಳ ಮೇಲೆ ಹೋಗುವದರಿಂದಲೂ ಅತಿ ಮೈಥುನದಿಂದಲೂ ಬಸ್ತಿಯಂತ್ರದ ತುದಿಯನ್ನು ಗುದದಲ್ಲಿ ಸರಿಯಾಗಿ ಹಾಕದ್ದರಿಂದ ಗುದಕ್ಕೆ ತರಚುವದರಿಂದಲೂ ಆಗಾಗ್ಗೆ ತಣ್ಣೀರಿನ ಸ್ಪರ್ಶದಿಂದಲೂ ಅರಿವೆ, ಹೆಂಟೆ, ಹುಲ್ಲು ಚುಚ್ಚು

ವದರಿಂದಲೂ ಬಹುಕಾಲ ಬಹಳ ತಿಣಕುವದರಿಂದಲೂ ವಾತ ಮಲ ಮಲಮೂತ್ರಗಳ ಬಲುಮೆಯ ಪ್ರವೃತ್ತಿಯಿಂದಲೂ ಪ್ರವೃತ್ತವಾದ ವೇಗವ ಪ್ರತಿಬಂಧದಿಂದಲೂ ಹೆಂಗಸರಿಗೆ ಅಪೂರ್ಣ ಗರ್ಭದ ಪಾತ ದಿಂದಲೂ ಗರ್ಭದ ಭಾರದಿಂದಲೂ ಅನೇಕ ಸಾರೆ ಅಪಪ್ರಸೂತಿಯಿಂದಲೂ ಕುಪಿತವಾದ ಅಪಾನವಾಯುವು ಸಂಚಿತವಾದ ಕೆಳಗೆ ಇದ್ದ ಆ ಮಲ ವನ್ನು ಗುದವಲಿಗಳಲ್ಲಿ ಇಡುತ್ತದೆ. ಆ ಮೇಲೆ ಅವುಗಳಲ್ಲಿ ಮೂಲ ವ್ಯಾಧಿಗಳುಂಟಾಗುತ್ತವೆ. (೮)

**ಅವುಗಳ ಆಕಾರವನ್ನು ಹೇಳುತ್ತಾರೆ.**

**ಸರ್ಷಪ ಮಸೂರಮಾಷ ಮುದ್ಗ ಮುಕುಷ್ಟಕ ಯವ ಕಲಾಯ ಪಿಂಡಿ ಟಿಂಟಿಕೇರಕ ಕೇಬು ತಿಂದುಕ ಕಾಕಣಂತಿಕಾ ಕರ್ಕಂಧೂ ಬಿಂಬೀ, ಕದರ ಕರೀರೋ ದುಂಬರ ಖರ್ಜೂರ ಜಾಂಬವ ಗೋಸ್ತನಾಂಗುಷ್ಠಕಶೇರುಕ ಶೃಂಗಾಟಕ ದಕ್ಷ ಶಿಖಿ ಶುಕತುಂಡಜಿಹ್ವಾ ಪದ್ಮ ಮುಕುಲ ಕರ್ಣಿಕಾ ಸಂಸ್ಥಾನಾನಿ ಸಾಮಾನ್ಯಾದ್ವಾತಪಿತ್ತಕಫಪ್ರಬಲಾನಿ** ॥ ೯ ॥

**ಅರ್ಥ:—** ಇವುಗಳ ಆಕಾರವು ಸಾಸಿವೆ, ಚೆನ್ನಂಗಿ, ಉದ್ದು ಹೆಸರು, ಅಡವಿಹೆಸರು, ಜವೆ, ಕಲಾಯ [ಬಟಗಡ್ಲೆ], ಪಿಂಡಿ, ಟಿಂಟಿ ಕೇರಿಕ (ಉಸಕಿನ ಪ್ರದೇಶದಲ್ಲಿ ಆಗುವ ಒಂದು ದುಂಡು ಫಲ), ಕೇಬು, ತಿಂದುಕ (ತುಂಬುರುಫಲ), ಗುಲಗಂಜಿ, ಬೋರೆ, ತೊಂಡೆ, ಬಿಳೇತರೆ, ಕರೀರ, (ಕಳಲೆ), ಅತ್ತಿ, ಉತ್ತತ್ತಿ, ನೇರಿಲಹಣ್ಣು, ದ್ರಾಕ್ಷಿ, ಹೆಬ್ಬೊಟ್ಟು, ಕಶೇರುಕ (ಕೊತ್ತೀಗಡ್ಡೆ), ಶೇಂಗಾಡೆ, ಕೋಳಿ ನವಿಲು ಗಿಳಿಗಳ ಮೋರೆ, ನಾಲಿಗೆ ಕಮಲದ ಮೊಗ್ಗೆ, ಕರ್ಣಿಕೆ (ಪುಷ್ಪಕೋಶ) ಇವು ಗಳಂತೆ ಇರುತ್ತವೆ. ಇವುಗಳಲ್ಲಿ ಬಹಳ ಮಾಡಿ ವಾತ ಪಿತ್ತ ಕಫಗಳು ಪ್ರಬಲವಾಗಿರುತ್ತವೆ. (೯)

**ಹಿಂದೆ ಸಾಮಾನ್ಯ ಲಕ್ಷಣಗಳನ್ನು ಹೇಳಿದರು. ಈಗ ವಾತಾದಿ ಮೂಲ ವ್ಯಾಧಿಗಳ ವಿಶಿಷ್ಟ ಲಕ್ಷಣಗಳನ್ನು ಹೇಳುತ್ತಾರೆ:—**

**ತೇಷಾಮಯಂ ವಿಶೇಷಃ । ಶುಷ್ಕಮ್ಲಾನಕಠಿನಪರುಷರೂಕ್ಷಶ್ಯಾವಾನಿ ತೀಕ್ಷ್ಣಾಗ್ರಾಣಿ ವಕ್ರಾಣಿ ಸ್ಫುಟಿತಮುಖಾನಿ ವಿಷಮವಿಸ್ತೃ**

ತಾನಿ ಶೂಲಾಕ್ಷೇಪಭೇದಸ್ಫುರಣಚಿಮಿಚಿಮಸಂಹರ್ಷಪರೀತಾನಿ ಸ್ನಿಗ್ಧೋಷ್ಣೋಪಶಯಾನಿ ಪ್ರವಾಹಿಕಾಧ್ಮಾನ ಶಿಶ್ನವೃಷಣಬಸ್ತಿವಂಕ್ಷಣ ಹೃದ್ಗ್ರಹಾಂಗಮರ್ದಹೃದಯದ್ರವ ಪ್ರಬಲಾನಿ ಪ್ರತತವಿಬದ್ಧವಾತ ಮೂತ್ರವರ್ಚಾಂಸ್ಯೂರುಕಟೀಪೃಷ್ಠತ್ರಿಕಪಾರ್ಶ್ವಕುಕ್ಷಿಬಸ್ತಿಶೂಲಶಿರೋಭಿತಾಪಕ್ಷವಥೂದ್ಗಾರಪ್ರತಿಶ್ಯಾಯಕಾಸೋದಾವರ್ತಾಯಾಮಶೋಷಶೋಥಮೂರ್ಛಾರೋಚಕಮುಖವೈರಸ್ಯತೈಮಿರ್ಯಕಂಡೂ ನಾಸಾಕರ್ಣಶಂಖಶೂಲಸ್ವರೋಪಘಾತಕರಾಣಿ ಶ್ಯಾವಾರುಣಪರುಷನಖನಯನತ್ವಙ್ಮೂತ್ರಪುರೀಷಸ್ಯ ವಾತೋಲ್ಬಣಾನ್ಯರ್ಶಾಂಸೀತಿ ವಿದ್ಯಾತ್ ॥೧೦॥

**ಅರ್ಥ:—** ಅವುಗಳಿಗೆ ಈ ವಿಶಿಷ್ಟ ಲಕ್ಷಣಗಳಿರುತ್ತವೆ. ವಾತಾಧಿಕ ಮೂಲವ್ಯಾಧಿಗಳು ಶುಷ್ಕ, ಬಾಡಿದ, ಬಿರಸು, ಗಟ್ಟಿ, ರುಕ್ಷ, ಕಪ್ಪು ಆಗಿದ್ದು ಅವುಗಳ ತುದಿಗಳು ತೀಕ್ಷ್ಣವಿರುತ್ತವೆ. ಅವು ಡೊಂಕು ಇದ್ದು ಮುಖದಲ್ಲಿ ಶೀಳಿರುವವು, ಅಡ್ಡ ತಿಡ್ಡ ಪಸರಿಸಿರುತ್ತವೆ. ಅವುಗಳಲ್ಲಿ ಶೂಲ, ಜಗ್ಗುವಿಕೆ, ಚುಚ್ಚುವಿಕೆ, ಸ್ಫುರಣ, ಚುರುಚುರು, ಮತ್ತು ರೋಮಾಂಚಗಳು ಇರುವವು. ಅವು ಸ್ನಿಗ್ಧ ಮತ್ತು ಉಷ್ಣ ಪದಾರ್ಥಗಳಿಂದ ಕಡಿಮೆಯಾಗುವವು. ತಿಣಕು, ಹೊಟ್ಟೆಯುಬ್ಬು, ಶಿಶ್ನ ವೃಷಣ ಮೂತ್ರಾಶಯ ಕಿಬ್ಬೊಟ್ಟೆಗಳಲ್ಲಿ ಮತ್ತು ಎದೆಯಲ್ಲಿ ಹಿಡಿತ, ಮೈನೋವು, ಹೃದಯ ಸ್ಪಂದಗಳು ಹೆಚ್ಚಾಗಿರುವವು. ಇವುಗಳಿಂದ ಬಹಳಕಾಲದ ವರೆಗೆ ಮಲಮೂತ್ರ ವಾತಗಳ ಪ್ರತಿಬಂಧ, ತೊಡೆ ಟೊಂಕ ಬೆನ್ನು ತಿಗ ಪಕ್ಕೆ ಕುಕ್ಷಿ ಮೂತ್ರಾಶಯಗಳಲ್ಲಿ ಶೂಲವುಂಟಾಗುವದು. ತಲೆಯು ಕಾಯುವದು. ಶೀನು, ತೇಗು, ನೆಗಡಿ, ಕೆಮ್ಮು, ಉದಾವರ್ತ, ಧನುರ್ವಾತ, ಶೋಷ, ಬಾವು, ಮೂರ್ಛೆ, ಅರುಚಿ, ಬಾಯಿ ಹೊಲಸು, ಕಣ್ಣಿಗೆ ಕತ್ತಲೆ, ತಿಂಡಿ, ಮೂಗು ಕಿವಿ ಹಣೆಗಳಲ್ಲಿ ಶೂಲಿ, ಸ್ವರಭಂಗಗಳುಂಟಾಗುವವು. ರೋಗಿಯ ಉಗುರು ಕಣ್ಣು ಮೋರೆ ತ್ವಚೆ ಮಲಮೂತ್ರಗಳಿಗೆ ಕಪ್ಪು ಅಥವಾ ನಸುಗೆಂಪು ಬಣ್ಣ ಬಂದಿರುತ್ತದೆ.

ಇನ್ನು ವಾತಾಧಿಕ ಮೂಲವ್ಯಾಧಿಗಳ ಕಾರಣವನ್ನು ಹೇಳುತ್ತಾರೆ.

॥ ಭವತಶ್ಚಾತ್ರ ॥

ಕಷಾಯಕಟುತಿಕ್ತಾನಿ ರೂಕ್ಷಶೀತಲಘೂನಿ ಚ।
ಪ್ರಮಿತಾಲ್ಪಾಶನಂ ತೀಕ್ಷ್ಣಮದ್ಯಮೈಥುನಸೇವನಮ್ ॥೧೧॥

**ಲಂಘನಂ ದೇಶಕಾಲೌ ಚ ಶೀತೌ ವ್ಯಾಯಾಮಕರ್ಮ ಚ ||**
**ಶೋಕಃ ವಾತಾತಪಸ್ಪರ್ಶೋ ಹೇತುರ್ವಾತಾರ್ಶಸಾಂ ಮತಃ||೧೨||**

**ಅರ್ಥ:**— ಒಗರು, ಕಾರ, ಕಹಿರಸಗಳೂ, ರುಕ್ಷಶೀತ ಹಗುರು ಇದ್ದ ವಸ್ತುಗಳೂ, ಅಲ್ಪ ಪ್ರಮಾಣದ ಆಹಾರವೂ ತೀಕ್ಷ್ಣಮದ್ಯ ಮೈಥುನಗಳ ಸೇವನೆಯೂ ||೧೧|| ಲಂಘನ, ಶೀತ ದೇಶ ಮತ್ತು ಕಾಲ, ಬಹಳ ವ್ಯಾಯಾಮ, ದುಃಖ, ಗಾಳಿ, ಬಿಸಲುಗಳ ಸೇವನೆ ಇವು ವಾತ ಮೂಲ ವ್ಯಾಧಿಗಳಿಗೆ ಕಾರಣಗಳು. (೧೨)

**ಪಿತ್ತ ಮೂಲವ್ಯಾಧಿಗಳ ಲಕ್ಷಣವನ್ನು ಹೇಳುತ್ತಾರೆ.**

**ಮೃದುಶಿಥಿಲಸುಕುಮಾರಾಣ್ಯಸ್ಪರ್ಶಸಹಾನಿ ರಕ್ತಪೀತನೀಲಕೃಷ್ಣಾನಿ ಸ್ವೇದೋಪಕ್ಲೇದಬಹುಲಾನಿ ವಿಸ್ರಗಂಧೀನಿ ತನುಪೀತರಕ್ತಸ್ರಾವೀಣಿ ರುಧಿರವಹಾನಿ ದಾಹಕಂಡೂಶೂಲನಿಸ್ತೋದಪಾಕವಂತಿ ಶೀತೋಪಶಯಾನಿ ಸಂಭಿನ್ನಪೀತಹರಿತವರ್ಚಾಂಸಿ ಪೀತವಿಸ್ರಗಂಧಪ್ರಚುರವಿಣ್ಮೂತ್ರಾಣಿ ಪಿಪಾಸಾಜ್ವರತಮಕಸಮ್ಮೋಹಭೋಜನದ್ವೇಷಕರಾಣಿ ಪೀತನಖನಯನತ್ವಙ್ಮೂತ್ರಪುರೀಷಸ್ಯ ಪಿತ್ತೋಲ್ಬಣಾನ್ಯರ್ಶಾಂಸೀತಿ ವಿದ್ಯಾತ್ ||೧೩||**

**ಅರ್ಥ:**— ಮೆತ್ತನ್ನ, ಸಡಿಲ, ಕೋಮಲ, ಮುಟ್ಟಗೊಡದ, ಕೆಂಪು ಹಳದಿ ನೀಲ ಕಪ್ಪು ಬಣ್ಣದ, ಬೆವರು ರಸಿಕೆಗಳು ಬಹಳವಾಗಿ ಉಳ್ಳ, ಹೊಲಸು ನಾರುವ, ಹಳದೀ ಬಣ್ಣದ ತಿಳಿರಕ್ತವನ್ನು ಸ್ರವಿಸುವ, ಅಥವಾ ರಕ್ತವನ್ನೇ ಸುರಿಸುವ, ದಾಹ ತಿಂಡಿ ಶೂಲ ಚುಚ್ಚುವಿಕೆ ಪಾಕಗಳುಳ್ಳ, ಶೀತದಿಂದ ಕಡಿಮೆಯಾಗುವ, ತೆಳ್ಳಗಿನ ಹಳದೀ ಅಥವಾ ಹಸರು ಮಲವನ್ನು ಕೆಡಹುವ, ಹಳದಿ ಮತ್ತು ಹೊಲಸು ನಾರುವ, ಬಹಳ ಮಲಮೂತ್ರಗಳುಳ್ಳ, ನೀರಡಿಕೆ ಜ್ವರ ತಮಕಶ್ವಾಸ ಮೋಹ ಅನ್ನದ್ವೇಷಗಳನ್ನುಂಟುಮಾಡುವ, ರೋಗಿಯ ಉಗುರು ಕಣ್ಣು ತ್ವಚೆ ಮಲಮೂತ್ರಗಳು ಹಳದಿಯಾಗಿರುವ ಮೂಲವ್ಯಾಧಿಗಳು ಪಿತ್ತಾಧಿಕವೆಂದು ತಿಳಿಯಬೇಕು. (೧೩)

**ಪಿತ್ತಾಧಿಕ ಮೂಲವ್ಯಾಧಿಗಳ ಕಾರಣವನ್ನು ಹೇಳುತ್ತಾರೆ.**

॥ ಭವತಶ್ಶಾಸ್ತ್ರ ॥

**ಕಟ್ವಮ್ಲಲವಣಕ್ಷಾರವ್ಯಾಯಾಮಾಗ್ನ್ಯಾತಪಪ್ರಭಾಃ ॥**
**ದೇಶಕಾಲಾವಶಿಶಿರಾ ಕ್ರೋಧೋ ಮದ್ಯಮಸೂಯನಮ್ ॥೧೪॥**

**ವಿದಾಹಿ ತೀಕ್ಷ್ಣಮುಷ್ಣಂಚ ಸರ್ವಂ ಪಾನಾನ್ನಭೇಷಜಮ್ ॥**
**ಪಿತ್ತೋಲ್ಬಣಾನಾಂ ವಿಜ್ಞೇಯಃಪ್ರಕೋಪೇ ಹೇತುರರ್ಶಸಾಮ್॥೧೫॥**

**ಅರ್ಥ:**— ಕಾರ ಹುಳಿ ಉಪ್ಪು ಕ್ಷಾರ ವ್ಯಾಯಾಮ ಬೆಂಕಿ ಬಿಸಿಲು ಬೆಳಕುಗಳ ಸೇವನೆಯೂ, ಉಷ್ಣದೇಶಕಾಲಗಳೂ, ಕ್ರೋಧ ಮದ್ಯ ಅಸೂಯೆಗಳೂ, ॥೧೪॥ ವಿದಾಹಿ ತೀಕ್ಷ್ಣ ಉಷ್ಣವಾದ ಎಲ್ಲ ಅನ್ನಪಾನ ಔಷಧಗಳೂ ಪಿತ್ತಾಧಿಕ ಮೂಲವ್ಯಾಧಿಗಳ ಪ್ರಕೋಪಕ್ಕೆ ಕಾರಣವಾಗಿವೆ. ॥೧೫॥

ಕಫಾಧಿಕ ಮೂಲವ್ಯಾಧಿಗಳ ಲಕ್ಷಣಗಳನ್ನು ಹೇಳುತ್ತಾರೆ.

ತತ್ರ ಯಾನಿ ಪ್ರಮಾಣವಂತ್ಯುಪಚಿತಾನಿ ಶ್ಲಕ್ಷ್ಣಾನಿ ಸ್ಪರ್ಶಸಹಾನಿ ಸ್ನಿಗ್ಧಶ್ವೇತಪಾಂಡುಪಿಚ್ಛಿಲಾನಿ ಸ್ತಬ್ಧಾನಿ ಗುರೂಣಿ ಸ್ತಿಮಿತಾನಿ ಸುಪ್ತಸುಪ್ತಾನಿ ಸ್ಥಿರಶ್ವಯಥೂನಿ ಕಂಡೂಬಹುಳಾನಿ ಬಹುಪ್ರತತಪಿಂಜರಶ್ವೇತರಕ್ತಶುಕ್ಲಪಿಚ್ಛಾಸ್ರಾವೀಣಿ ಗುರುಪಿಚ್ಛಿಲಶ್ವೇತಮೂತ್ರಪುರೀಷಾಣಿ ರೂಕ್ಷೋಷ್ಣೋಪಶಯಾನಿ ಪ್ರವಾಹಿಕಾಽತಿಮಾತ್ರೋತ್ಥಾನವಂಕ್ಷಣಾನಾಹವಂತಿ ಪರಿಕರ್ತಿಕಾಹೃಲ್ಲಾಸನಿಷ್ಠೀವನಕಾಸಾರೋಚಕಪ್ರತಿಶ್ಯಾಯಗೌರವಚ್ಛರ್ದಿಮೂತ್ರಕೃಚ್ಛ್ರಶೋಷಶೋಥಪಾಂಡುರೋಗಶೀತಜ್ವರಾಶ್ಮರೀಶರ್ಕರಾಹೃದಯೇಂದ್ರಿಯೋಪಲೇಪಾಸ್ಯಮಾಧುರ್ಯಪ್ರಮೇಹಕರಾಣಿ ತಥಾ ಚಿರಕಾಲಾನುಬಂಧೀನ್ಯತಿಮಾತ್ರಮಗ್ನಿಮಾರ್ದವಕ್ಲೈಬ್ಯಕರಾಣ್ಯಾಮವಿಕಾರಪ್ರಬಲಾನಿ ಶುಕ್ಲನಖನಯನವದನತ್ವಙ್ಮೂತ್ರಪುರೀಷಸ್ಯ ಶ್ಲೇಷ್ಮೋಲ್ಬಣಾನ್ಯರ್ಶಾಂಸೀತಿ ವಿದ್ಯಾತ್ ॥೧೬॥

**ಅರ್ಥ**— ಬಹಳ ಪ್ರಮಾಣದಿಂದ ಬೆಳೆದ, ಮೆತ್ತಗಿನ, ಕೈ ಹಚ್ಚಿದರೆ ನೋವಾಗದ, ಸ್ನಿಗ್ಧ, ಬಿಳೀ, ನಸುಬಿಳೀ, ಹೆಡಸುಳ್ಳ, ಸ್ತಬ್ಧ, ಜಡ, ಸ್ತಿಮಿತ, ಸ್ಪರ್ಶಜ್ಞಾನವಿಲ್ಲದ, ಗಟ್ಟಿ ಬಾವುವುಳ್ಳ, ತುರಿಸುವ, ಯಾವಾಗಲೂ ನಸುಗೆಂಪು, ಬಿಳೀ ಕೆಂಪು, ನಸುಬಿಳೀಬಣ್ಣದ ದ್ರವವನ್ನು ಸ್ರವಿಸುವ, ಜಡ ಜಿಗಟು ಬಿಳೀಮಲಮೂತ್ರಗಳುಳ್ಳ, ರುಕ್ಷ ಉಷ್ಣಗಳಿಂದ ಕಡಿಮೆಯಾಗುವ, ತೀಟಕೋಣ, ಮಲವಿಸರ್ಜನೆಗೆ ಆಗಾಗ್ಗೆ ಹೋಗೋಣ, ಗೆಜ್ಜೆ ಉಬ್ಬೋಣ, ಗುದದಲ್ಲಿ ಕತ್ತರಿಸದಂತೆ ಆನಿಸೋಣ, ಮಳಮಳ ಉಗಳೋಣ ಕೆಮ್ಮು ಅರುಚಿ ನೆಗಡಿ ಜಡತ್ವ ವಾಂತಿ ಮೂತ್ರಕೃಚ್ಛ್ರ ಶೋಷ ಬಾವು ಪಾಂಡುರೋಗ ಮೂತ್ರಾಶ್ಮರೀ ಚಳಿಜ್ವರ ಮೂತ್ರಶರ್ಕರೆ ಎದೆಯಲ್ಲಿ ಕಫದ ಲೇಪ ಬಾಯಿ ಸವಿಯಾಗೋಣ ಪ್ರಮೇಹಗಳುಳ್ಳ, ಬಹಳ ದಿವಸಗಳವರೆಗೆ ಇರುವ, ಬಹಳ ಅಗ್ನಿಮಾಂದ್ಯ ಮತ್ತು ನಪುಂಸಕತ್ವಗಳನ್ನುಂಟುಮಾಡುವ, ಆಮ ವಿಕಾರಗಳು ಹೆಚ್ಚಾಗಿಉಳ್ಳ, ರೋಗಿಯ ಉಗುರು ಕಣ್ಣು ಮೋರೆ ತ್ವಚೆ ಮಲಮೂತ್ರಗಳು ಬಿಳುಪಾಗಿರುವ ಮೂಲವ್ಯಾಧಿಗಳು ಕಫಾಧಿಕವೆಂದು ತಿಳಿಯಬೇಕು. ||೧೬||

**ಕಫಾಧಿಕ ಮೂಲವ್ಯಾಧಿಗಳ ಕಾರಣಗಳನ್ನು ಹೇಳುತ್ತಾರೆ.**

**ಮಧುರಸ್ನಿಗ್ಧಶೀತಾನಿ ಲವಣಾಮ್ಲಗುರೂಣಿ ಚ||**
**ಅವ್ಯಾಯಾಮೋ ದಿವಾಸ್ವಪ್ನಃ ಶಯ್ಯಾಸನಸುಖೇ ರತಿಃ ||೧೭||**
**ಪ್ರಾಗ್ವಾತಸೇವಾ ಶೀತೌ ಚ ದೇಶಕಾಲಾವಚಿಂತನಮ್ ||**
**ಶ್ಲೈಷ್ಮಿಕಾಣಾಂ ಸಮುದ್ದಿಷ್ಟಮೇತತ್ ಕಾರಣಮರ್ಶಸಾಮ್ ||೧೮||**

**ಅರ್ಥ:**— ಮಧುರ, ಸ್ನಿಗ್ಧ, ಶೀತ, ಉಪ್ಪು, ಹುಳಿ, ಜಡಪದಾರ್ಥಗಳೂ, ವ್ಯಾಯಾಮವಿಲ್ಲದಿರೋಣ, ಹಗಲು ನಿದ್ದೆ, ಆರಾಮವಾಗಿ ಮಲಗೋಣ ಕೂಡೋಣಗಳಲ್ಲಿ ಆಸಕ್ತಿ, ||೧೭|| ಪೂರ್ವದಿಕ್ಕಿನ ಗಾಳಿ, ಶೀತ ದೇಶಕಾಲ, ನಿಶ್ಚಿಂತತೆ ಇವೂ ಕಫಾಧಿಕ ಮೂಲವ್ಯಾಧಿಗಳ ಕಾರಣವೆಂದು ಹೇಳಲ್ಪಟ್ಟವೆ. ||೧೮||

**ದ್ವಂದ್ವಜ ಮತ್ತು ಸನ್ನಿಪಾತಜ ಮೂಲವ್ಯಾಧಿಗಳ ಕಾರಣ ಲಕ್ಷಣಗಳನ್ನು ಹೇಳುತ್ತಾರೆ.**

**ಹೇತುಲಕ್ಷಣಸಂಸರ್ಗಾದ್ವಿದ್ಯಾತ್ ದ್ವಂದ್ವೋಲ್ಬಣಾನಿ ಚ॥**
**ಸರ್ವೋ ಹೇತುಸ್ತ್ರಿದೋಷಾಣಾಂ ಸಹಜೈರ್ಲಕ್ಷಣೈಃ ಸಮಮ್॥೧೯॥**

**ಅರ್ಥ:—** ಬೇರೆ ಬೇರೆ ದೋಷಜ ಮೂಲವ್ಯಾಧಿಗಳ ಲಕ್ಷಣ ಕಾರಣಗಳು ಇನ್ನೊಂದರ ಲಕ್ಷಣ ಕಾರಣಗಳೊಡನೆ ಕೂಡಿದ್ದರೆ ಅದು ದ್ವಂದ್ವಜ ಮೂಲವ್ಯಾಧಿಯೆಂದೂ, ಸಹಜ ಮತ್ತು ಉತ್ತರಕಾಲಜ ಮೂಲವ್ಯಾಧಿಗಳ ಕಾರಣ ಲಕ್ಷಣಗಳು ಎಲ್ಲ ಕೂಡಿದ್ದರೆ ಅದು ತ್ರಿದೋಷಜ ಮೂಲವ್ಯಾಧಿಯೆಂದೂ ತಿಳಿಯಬೇಕು. ॥೧೯॥

**ಮೂಲವ್ಯಾಧಿಗಳ ಪೂರ್ವರೂಪವನ್ನು ಹೇಳುತ್ತಾರೆ.**

**ವಿಷ್ಟಂಭೋಽನ್ನಸ್ಯ ದೌರ್ಬಲ್ಯಂ ಕುಕ್ಷೇರಾಟೋಪ ಏವ ಚ ॥**
**ಕಾರ್ಶ್ಯಮುದ್ಗಾರಬಾಹುಲ್ಯಂ ಸಕ್ಥಿಸಾದೋಽಲ್ಪವಿಟ್ಕತಾ ॥೨೦॥**
**ಗ್ರಹಣೀದೋಷಪಾಂಡ್ವರ್ತೇರಾಶಂಕಾ ಚೋದರಸ್ಯ ಚ ॥**
**ಪೂರ್ವರೂಪಾಣಿ ನಿರ್ದಿಷ್ಟಾನ್ಯರ್ಶಸಾಮಭಿವೃದ್ಧಯೇ ॥೨೧॥**

**ಅರ್ಥ:—** ಅನ್ನವು ಎದೆಯಲ್ಲಿ ಕೂಡೋಣ, ಬಲನಾಶ, ಹೊಟ್ಟೆಯಲ್ಲಿ ಗುಡುಗುಡು ಶಬ್ದ ಮತ್ತು ನೋವು, ಕೃಶತ್ವ ಬಹಳ ತೇಗು ಬರೋಣ, ತೊಡೆ ನೋಯೋಣ, ಮಲ ಸ್ವಲ್ಪ ಬೀಳೋಣ, ॥೨೦॥ ಸಂಗ್ರಹಣಿ ಪಾಂಡುರೋಗ ಉದರಗಳು ಆದಂತೆ ಅನಿಸೋಣ ಈ ಲಕ್ಷಣಗಳು ಮೂಲವ್ಯಾಧಿಗಳ ಪೂರ್ವರೂಪಗಳಾಗಿವೆ. (೨೧)

**ಅಶಾಂಸಿ ಖಲು ಜಾಯಂತೇ ನಾಸನ್ನಿಪತಿತೈಸ್ತ್ರಿಭಿಃ ॥**
**ದೋಷೈರ್ದೋಷವಿಶೇಷೈಸ್ತು ವಿಶೇಷಃ ಕಲ್ಪ್ಯತೇಽರ್ಶಸಾಮ್॥೨೨॥**

**ಅರ್ಥ:—** ಮೂರೂ ದೋಷಗಳು ಕೂಡದೆ ಮೂಲವ್ಯಾಧಿಗಳು ಉಂಟಾಗವು. ಆದರೆ ಯಾತರಲ್ಲಿ ಯಾವ ದೋಷವು ಹೆಚ್ಚಿರುವದೋ ಅದು ಆದೋಷಜವೆಂದು ಕರೆಯಲ್ಪಡುತ್ತದೆ. (೨೨)

**ಪಂಚಾತ್ಮಾ ಮಾರುತಃ ಪಿತ್ತಂ ಕಫೋ ಗುದವಲಿತ್ರಯಮ್ ॥**
**ಸರ್ವ ಏವ ಪ್ರಕುಪ್ಯಂತಿ ಗುದಜಾನಾಂ ಸಮುದ್ಭವೇ ॥೨೩॥**

**ತಸ್ಮಾದರ್ಶಾಂಸಿ ದುಃಖಾನಿ ಬಹುವ್ಯಾಧಿಕರಾಣಿ ಚ ||**
**ಸರ್ವದೇಹೋಪತಾಪೀನಿ ಪ್ರಾಯಃ ಕೃಚ್ಛ್ರತಮಾನಿ ಚ ||೨೪||**

**ಅರ್ಥ:—** ಮೂಲವ್ಯಾಧಿಯಲ್ಲಿ ೫ ವಾತಗಳೂ, ಪಿತ್ತ, ಕಫಗಳೂ, ಮೂರೂ ಗುದವಲಿಗಳು ಹೀಗೆ ಎಲ್ಲವೂ ಕುಪಿತವಾಗಿರುತ್ತವೆ (೨೨) ಆದ್ದರಿಂದ ಮೂಲವ್ಯಾಧಿಗಳು ದುಃಖಕರ ಮತ್ತು ಬಹಳ ಬೇನೆಗಳನ್ನು ಉಂಟುಮಾಡುವವೂ ಎಲ್ಲ ಶರೀರವನ್ನು ಪೀಡಿಸುವವೂ ಬಹಳ ಮಾಡಿ ಕಷ್ಟಸಾಧ್ಯಗಳೂ ಆಗಿರುವವು, (೨೪)

**ಅಸಾಧ್ಯ ಮತ್ತು ಯಾಪ್ಯ ಲಕ್ಷಣಗಳನ್ನು ಹೇಳುತ್ತಾರೆ,**

**ಹಸ್ತೇ ಪಾದೇ ಮುಖೇ ನಾಭ್ಯಾಂ ಗುದೇ ವೃಷಣಯೋಸ್ತಥಾ ||**
**ಶೋಥೋ ಹೃತ್ಪಾರ್ಶ್ವಶೂಲಂ ಚ**
**ಯಸ್ಯಾಸಾಧ್ಯೋಽರ್ಶಸೋ ಹಿ ಸಃ ||೨೫||**

**ಹೃತ್ಪಾರ್ಶ್ವಶೂಲಂ ಸಮ್ಮೋಹಶ್ಛರ್ದಿರಂಗಸ್ಯ ರುಗ್ ಜ್ವರಃ ||**
**ತೃಷ್ಣಾ ಗುದಸ್ಯ ಪಾಕಶ್ಚ ನಿಹನ್ಯುರ್ಗುದಜಾತುರಮ್ ||೨೬||**

**ಸಹಜಾನಿ ತ್ರಿದೋಷಾಣಿ ಯಾನಿ ಚಾಭ್ಯಂತರಾಂ ವಲಿಮ್ ||**
**ಜಾಯಂತೇಽರ್ಶಾಂಸಿ ಸಂಶ್ರಿತ್ಯ ತಾನ್ಯಸಾಧ್ಯಾನಿ ನಿರ್ದಿಶೇತ್ ||೨೭||**
**ಶೇಷತ್ವಾದಾಯುಷಸ್ತಾನಿ ಚತುಷ್ಪಾದಸಮನ್ವಿತೇ ||**
**ಯಾಪ್ಯಂತೇ ದೀಪ್ತಕಾಯಾಗ್ನೇಃ**
**ಪ್ರತ್ಯಾಖ್ಯಾಯಾನ್ಯತೋಽನ್ಯಥಾ ||೨೮||**

**ಅರ್ಥ :—** ಯಾವನ ಕೈಕಾಲು ಮೋರೆ ಹೊಕ್ಕಳು ಗುದ ವೃಷಣ ಗಳಲ್ಲಿ ಬಾವು ಇದ್ದು, ಎದೆ ಪಕ್ಕೆಗಳಲ್ಲಿ ಶೂಲವಿರುವದೋ ಆ ರೋಗಿಯು ಅಸಾಧ್ಯನು. (೨೫)

ಎದೆ ಪಕ್ಕೆಗಳಲ್ಲಿ ಶೂಲೆ, ಮೋಹ, ವಾಂತಿ, ಮೈನೋವು, ಜ್ವರ, ನೀರಡಿಕೆ, ಗುದಪಾಕ ಇವು ಮೂಲವ್ಯಾಧಿ ರೋಗಿಯನ್ನು ಕೊಲ್ಲುವವು. (೨೬)

ಸಹಜ ಮತ್ತು ತ್ರಿದೋಷಜ ಮತ್ತು ಒಳಗಿನ ಗುದವಲಿಯಲ್ಲಿ ಉಂಟಾದ ಮೂಲವ್ಯಾಧಿಗಳು ಅಸಾಧ್ಯವೆಂದು ತಿಳಿಯಬೇಕು. (೨೭)

ಆಯುಷ್ಯವಿದ್ದರೆ ಅಥವಾ ವೈದ್ಯ ರೋಗಿ ಪರಿಚಾರಕ ಔಷಧಗಳು ಉತ್ತಮವಾಗಿದ್ದರೆ ಅಥವಾ ಅಗ್ನಿಯು ಪ್ರದೀಪ್ತವಾಗಿದ್ದರೆ ಅವು ಯಾಪ್ಯವಾಗುವವು. ಇಲ್ಲವಾದರೆ ಅಸಾಧ್ಯವಾಗುವವು. (೨೮)

ಸುಖಸಾಧ್ಯ ಕಷ್ಟಸಾಧ್ಯಗಳನ್ನು ಹೇಳುತ್ತಾರೆ.

**ದ್ವಂದ್ವಜಾನಿ ದ್ವಿತೀಯಾಯಾಂ ವಲೌ ಯಾನ್ಯಾಶ್ರಿತಾನಿ ಚ ||**
**ಕೃಚ್ಛ್ರಸಾಧ್ಯಾನಿ ತಾನ್ಯಾಹುಃ ಪರಿಸಂವತ್ಸರಾಣಿ ಚ ||೨೯||**
**ಬಾಹ್ಯಾಯಾಂ ತು ವಲೌ ಜಾತಾನ್ಯೇಕದೋಷೋಲ್ಬಣಾನಿ ಚ||**
**ಅರ್ಶಾಂಸಿ ಸುಖಸಾಧ್ಯಾನಿ ನ ಚಿರೋತ್ಪತಿತಾನಿ ಚ ||೩೦||**

**ಅರ್ಥ:—**ದ್ವಂದ್ವಜ ಮತ್ತು ಎರಡನೇ ಗುದವಲಿಯಲ್ಲಿ ಉಂಟಾದ, ವರ್ಷವನ್ನು ಮೀರಿದ ಮೂಲವ್ಯಾಧಿಗಳು ಕಷ್ಟಸಾಧ್ಯವೆಂದು ಹೇಳುವರು. (೨೯)

ಹೊರಗಿನ ಗುದವಲಿಯಲ್ಲಿ ಉಂಟಾದ ಮತ್ತು ಏಕದೋಷಜ ಮತ್ತು ಹೊಸದಾಗಿ ಉಂಟಾದ ಮೂಲವ್ಯಾಧಿಗಳು ಸುಖಸಾಧ್ಯಗಳು. (೩೦)

**ತೇಷಾಂ ಪ್ರಶಮನೇ ಯತ್ನಮಾಶು ಕುರ್ಯಾದ್ವಿಚಕ್ಷಣಃ ||**
**ತಾನ್ಯಾಶು ಹಿ ಗುದಂ ಬದ್ಧ್ವಾ ಕುರ್ಯುರ್ಬದ್ಧಗುದೋದರಮ್ ||೩೧||**
**ತತ್ರಾಹುರೇಕೇ ಶಸ್ತ್ರೇಣ ಕರ್ತನಂ ಹಿತಮರ್ಶಸಾಮ್ ||**
**ದಾಹಂ ಕ್ಷಾರೇಣ ಚಾಪ್ಯೇಕೇ ದಾಹಮೇಕೇ ತಥಾಗ್ನಿನಾ ||೩೨||**
**ಅಸ್ತ್ಯೇತದ್ ಭೂರಿತಂತ್ರೇಣ ಧೀಮತಾ ದೃಷ್ಟಕರ್ಮಣಾ ||**
**ಕ್ರಿಯತೇ ವಿವಿಧಂ ಕರ್ಮ ಭ್ರಂಶಸ್ತತ್ರ ಸುದಾರುಣಃ ||೩೩||**

**ಅರ್ಥ:—** ಪಂಡಿತನು ಇವುಗಳನ್ನು ತೀವ್ರ ನಾಶಮಾಡಲು ಯತ್ನಿಸಬೇಕು. ಯಾಕಂದರೆ ಇವು ಗುದಬಂಧ ಮಾಡಿ ಬದ್ಧಗುದವೆಂಬ ಉದರವನ್ನು ಉಂಟು ಮಾಡುವವು. (೩೧)

ಅದರಲ್ಲಿ ಕೆಲವರು ಮೂಲವ್ಯಾಧಿಗಳನ್ನು ಶಸ್ತ್ರಗಳಿಂದ ಕೊಯ್ಯಬೇಕೆಂದೂ, ಹಲವರು ಕ್ಷಾರದಿಂದ ಸುಡಬೇಕೆಂದೂ, ಬೇರೆ ಕೆಲವರು ಅಗ್ನಿಯಿಂದ ಸುಡಬೇಕೆಂದೂ ಹೇಳುವರು. (೩೨)

ಇದು ನಿಜವಿದೆ. ಆದರೆ ಈ ಮೂರೂ ಕರ್ಮಗಳನ್ನು ಅನೇಕ ಶಾಸ್ತ್ರಗಳನ್ನು ಬಲ್ಲ, ಅನೇಕ ಸಾರೆ ಅವನ್ನು ನೋಡಿದ ಪಂಡಿತನು ಮಾಡತಕ್ಕದ್ದು. ಯಾಕಂದರೆ ಅವುಗಳಲ್ಲಿ ತಪ್ಪು ಆದರೆ ಬಹಳ (ಮುಂದೆ ಹೇಳಿದ) ಅಪಾಯಗಳುಂಟಾಗುವವು. (೩೩)

**ಆ ಅಪಾಯುಗಳನ್ನು ಹೇಳುತ್ತಾರೆ.**

**ಪುಂಸ್ತ್ವೋಪಘಾತಃ ಶ್ವಯಥುರ್ಗುದೇ ವೇಗವಿನಿಗ್ರಹಃ ||**
**ಆಧ್ಮಾನಂ ದಾರುಣಂ ಶೂಲಂ ವ್ಯಥಾ ರಕ್ತಾತಿವರ್ತನಮ್ ||೩೪||**

**ಪುನರ್ವಿರೋಹೋ ರೂಢಾನಾಂ ಕ್ಲೇದೋ ಭ್ರಂಶೋ ಗುದಸ್ಯ ವಾ||**
**ಮರಣಂ ವಾ ಭವೇಚ್ಛೀಘ್ರಂ ಶಸ್ತ್ರಕ್ಷಾರಾಗ್ನಿವಿಭ್ರಮಾತ್ ||೩೫||**

**ಅರ್ಥ:—** ಶಸ್ತ್ರಕರ್ಮ ಕ್ಷಾರಕರ್ಮ ಅಗ್ನಿಕರ್ಮಗಳಲ್ಲಿ ತಪ್ಪು ಉಂಟಾದರೆ ಪುರುಷತ್ವನಾಶ, ಗುದದಲ್ಲಿ ಬಾವು, ಮಲಪ್ರವೃತ್ತಿಯಾಗದಿರೋಣ, ಹೊಟ್ಟೆಯುಬ್ಬು, ಭಯಂಕರವಾದ ಶೂಲೆ, ನೋವು, ಬಹಳ ರಕ್ತಸ್ರಾವ, ಪುನಃ ಬೆಳೆಯೋಣ, ಅವಕ್ಕೆ ರಸಿಕೆಯಾಡೋಣ, ಗುದ ಭ್ರಂಶ ಅಥವಾ ಕೂಡಲೇ ಮರಣವುಂಟಾಗುವದು. (೩೫)

**ಯತ್ತು ಕರ್ಮ ಸುಖೋಪಾಯಮಲ್ಪಭ್ರಂಶಮದಾರುಣಮ್ ||**
**ತದರ್ಶಸಾಂ ಪ್ರವಕ್ಷ್ಯಾಮಿ ಸಮೂಲಾನಾಂ ನಿವೃತ್ತಯೇ ||೩೬||**

**ಅರ್ಥ:—** ಮೂಲಸಹಿತ ಮೂಲವ್ಯಾಧಿಗಳನ್ನು ಕಳೆಯುವ, ತಪ್ಪು ತಡೆ ಆಗದಂತಹ, ಆದರೂ ವಿಶೇಷ ಅಪಾಯವಾಗದ ಸುಲಭೋಪಾಯವನ್ನು ಹೇಳುವೆವು. (೩೬)

ಆ ಉಪಾಯವನ್ನು ಹೇಳುವ ಮೊದಲು ಶುಷ್ಕ ಮತ್ತು ಆರ್ದ್ರವೆಂದು ಸಂಕ್ಷೇಪವಾಗಿ ಎರಡು ಭಾಗಗಳನ್ನು ಮಾಡುತ್ತಾರೆ.

**ವಾತಶ್ಲೇಷ್ಮೋಲ್ಬಣಾನ್ಯಾಹುಃ ಶುಷ್ಕಾಣ್ಯರ್ಶಾಂಸಿ ತದ್ವಿದಃ ||**
**ಪ್ರಸ್ರಾವೀಣಿ ತಥಾದ್ರಾಣಿ ರಕ್ತಪಿತ್ತೋಲ್ಬಣಾನಿ ಚ ||೩೭||**

**ಅರ್ಥ:—** ವಾತಕಫಾಧಿಕ ಮೂಲವ್ಯಾಧಿಗಳು ಶುಷ್ಕವೆಂದೂ ರಕ್ತಪಿತ್ತಾಧಿಕಗಳು ಸ್ರಾವಿ ಅಥವಾ ಆರ್ದ್ರವೆಂದೂ ವೈದ್ಯರು ಹೇಳುತ್ತಾರೆ. (೩೭)

ಮೊದಲು ಶುಷ್ಕ ಮೂಲವ್ಯಾಧಿಗಳ ಚಿಕಿತ್ಸೆಯನ್ನು ಹೇಳುತ್ತಾರೆ.

**ತತ್ರ ಶುಷ್ಕಾರ್ಶಸಾಂ ಪೂರ್ವಂ ಪ್ರವಕ್ಷ್ಯಾಮಿ ಚಿಕಿತ್ಸಿತಮ್ ||**
**ಸ್ತಬ್ಧಾನಿ ಸ್ವೇದಯೇತ್ ಪೂರ್ವಂ ಶೋಥಶೂಲಾನ್ವಿತಾನಿ ಚ ||೩೮||**

**ಚಿತ್ರಕಕ್ಷಾರಬಿಲ್ವಾನಾಂ ತೈಲೇನಾಭ್ಯಜ್ಯ ಬುದ್ಧಿಮಾನ್ ||**
**ಯವಮಾಷಕುಲತ್ಥಾನಾಂ ಪುಲಾಕಾನಾಂ ಚ ಪೋಟ್ಟಲೈಃ ||೩೯||**

**ಗೋಖರಾಶ್ವಶಕೃತ್ಪಿಂಡೈಸ್ತಿಲಕಲ್ಕೈಸ್ತುಷೈಸ್ತಥಾ ||**
**ವಚಾಶತಾಹ್ವಾಪಿಂಡೈರ್ವಾ ಸುಖೋಷ್ಣೈಃ ಸ್ನೇಹಸಂಯುತೈಃ ||೪೦||**

**ಅರ್ಥ:—** ಇವುಗಳಲ್ಲಿ ಮೊದಲು ಶುಷ್ಕಮೂಲವ್ಯಾಧಿಗಳ ಚಿಕಿತ್ಸೆಯನ್ನು ಹೇಳುವೆವು. ಬುದ್ಧಿವಂತನಾದ ವೈದ್ಯನು ಸ್ತಬ್ಧ ಮತ್ತು ಬಾವು ಶೂಲಗಳುಳ್ಳ ಮೂಲವ್ಯಾಧಿಗಳಿಗೆ ||೩೮|| ಮೊದಲು ಚಿತ್ರಕ, ಜವಖಾರ, ಬಿಲ್ವಗಳ ಕಲ್ಕದಿಂದ ಸಿದ್ಧಮಾಡಿದ ತೈಲದ ಅಭ್ಯಂಗಮಾಡಿ ಆಮೇಲೆ ಸ್ನೇಹ ಹಾಕಿದ ಬಿಸಿಯಾದ ಜವೆ, ಉದ್ದು, ಹುರುಳಿಗಳ ಅಥವಾ ಅನ್ನದ ಪೊಟ್ಟಣಗಳಿಂದಲೂ (೩೯) ಎತ್ತು ಕತ್ತೆ ಕುದುರೆಗಳ ಮಲದ ಮುದ್ದೆಗಳಿಂದಲೂ ತಿಲಕಲ್ಕಗಳಿಂದಲೂ ಧಾನ್ಯದ ಹೊಟ್ಟುಗಳಿಂದಲೂ ಅದರಂತೆ ಬಜೆ, ಬಡೇಸೋಪುಗಳ ಮುದ್ದೆಗಳಿಂದಲೂ ಕಾಸಬೇಕು. (೪೦)

**ಸಕ್ತೂನಾಂ ಪಿಂಡಿಕಾಭಿರ್ವಾ ಸ್ನಿಗ್ಧಾನಾಂ ತೈಲಸರ್ಪಿಷಾ ||**
**ಶುಷ್ಕಮೂಲಕಪಿಂಡೈರ್ವಾ ಪಿಂಡೈರ್ವಾ ಕಾರ್ಷ್ಣಗಂಧಿಕೈಃ ||೪೧||**

**ರಾಸ್ನಾಪಿಂಡೈಃ ಸುಖೋಷ್ಣೈರ್ವಾ ಸಸ್ನೇಹೈರ್ಹಾಪುಷೈರಪಿ ||**
**ಇಷ್ಟಕಸ್ಯ ಖರಾಹ್ವಾಯಾಃ ಶಾಕೈರ್ಗೃಂಜನಕಸ್ಯ ವಾ ||೪೨||**

**ಅಭ್ಯಜ್ಯ ಕುಷ್ಠತೈಲೇನ ಸ್ವೇದಯೇತ್ ಪೋಟ್ಟಲೀಕೃತೈಃ ||**
**ವೃಷಾರ್ಕೈರಂಡಬಿಲ್ವಾನಾಂ ಪತ್ರೋತ್ಕ್ವಾಥೈಶ್ಚ ಸೇಚಯೇತ್ ||೪೩||**

**ಅರ್ಥ:—** ಎಣ್ಣೆ ತುಪ್ಪಗಳಿಂದ ಸ್ನಿಗ್ಧಮಾಡಿದ ಸಕ್ತುಗಳ ಮುದ್ದೆಗಳಿಂದ ಅಥವಾ ಸ್ನಿಗ್ಧ ಮತ್ತು ಬಿಸಿಯಾದ ಒಣ ಮೂಲಂಗಿಗಳ ಮುದ್ದೆಗಳಿಂದ ಅಥವಾ ನುಗ್ಗೀತೋಟಿಯ ಚೂರ್ಣದ ಮುದ್ದೆಗಳಿಂದ||೪೧||ಅಥವಾ ಸ್ನಿಗ್ಧ ಬಿಸಿಯಾದ ರಾಸ್ನಾಚೂರ್ಣದ ಮುದ್ದೆಗಳಿಂದ ಮತ್ತು ಹವುಷಾ (ಹೆಬ್ಬಿ) ಚೂರ್ಣದ ಮುದ್ದೆಗಳಿಂದ ಅಥವಾ ಮೊದಲು ಕುಷ್ಠತೈಲದಿಂದ ಅಭ್ಯಂಗಮಾಡಿ ಔಡಲ ಅಥವಾ ಅಜವಾನ ಅಥವಾ ಗಜ್ಜರಿ ಪಲ್ಲೆಗಳ ||೪೨|| ಪೊಟ್ಟಣಗಳಿಂದ ಕಾಸಬೇಕು. ಅಡಸಲ, ಎಕ್ಕಿ, ಔಡಲ, ಬಿಲ್ವಗಳ ಎಲೆಗಳ ಕಷಾಯದಿಂದ ಸೇಚನ ಸೆಮಾಡಬೇಕು. ||೪೩||

**ತ್ರಿಫಲಾಯಾ ಮೂಲಕಸ್ಯ ವೇಣೂನಾಂ ವರುಣಸ್ಯ ಚ ||**
**ಅಗ್ನಿಮಂಥಸ್ಯ ಶಿಗ್ರೂಣಾಂ ಪತ್ರಾಣ್ಯಶ್ಮಂತಕಸ್ಯ ಚ ||೪೪||**

**ಜಲೇನೋತ್ಕ್ವಾಥ್ಯ ಶೂಲಾರ್ತಂ ಸ್ವಭ್ಯಕ್ತಮವಗಾಹಯೇತ್ ||**
**ಕೋಲೋತ್ಕ್ವಾಥೇಽಥವಾ ಕೋಷ್ಣೇ ಸೌವೀರಕತುಷೋದಕೇ||೪೫||**

**ಬಿಲ್ವಕ್ವಾಥೇಽಥವಾ ತಕ್ರೇ ಧಧಿಮಂಡಾಮ್ಲಕಾಂಜಿಕೇ ||**
**ಗೋಮೂತ್ರೇ ವಾ ಸುಖೋಷ್ಣೇ ತಂ**
**ಸ್ವಭ್ಯಕ್ತಮವಗಾಹಯೇತ್ ||೪೬||**

**ಅರ್ಥ:—** ಶೂಲಯುಕ್ತರೋಗಿಗೆ ಮೊದಲು ಚನ್ನಾಗಿ ಅಭ್ಯಂಗ ಮಾಡಿ ಆಮೇಲೆ ತ್ರಿಫಳೆ, ಮೂಲಂಗಿ, ಬಿದರು, ವಾಯುವರ್ಣ, ಹೂಸಲಕ್ಕಿ, ನುಗ್ಗಿ, ಅಶ್ಮಂತಕ (ಆರೆ) ಗಳ ||೪೪|| ಎಲೆಗಳನ್ನು ನೀರಲ್ಲಿ ಕುದಿಸಿ ಅವನನ್ನು ಕೂಡಿಸಬೇಕು. ಅಥವಾ ಅವನಿಗೆ ಚನ್ನಾಗಿ ಅಭ್ಯಂಗ ಮಾಡಿ ಬಿಸಿಯಾದ ಬೋರೆ ಕಷಾಯ ಅಥವಾ ಸೌವೀರಕ [ಹೊಟ್ಟು ತೆಗೆದ ಜವದಿಂದ ಮಾಡಿದ ಅಂಬಲಿ ] ತುಷೋದಕ [ಹೊಟ್ಟು ತೆಗೆಯದ ಜವದಿಂದ ಮಾಡಿದ ಅಂಬಲಿ] ಗಳಲ್ಲಿ ||೪೫|| ಅಥವಾ ಬಿಲ್ವಕಷಾಯದಲ್ಲಿ ಅಥವಾ ಮಜ್ಜಿಗೆಯಲ್ಲಿ ಅಥವಾ ಮೊಸರಿನ ಮೇಲಿನ ನೀರಿನಲ್ಲಿ ಅಥವಾ ಹುಳಿಗಂಜಿಯಲ್ಲಿ ಅಥವಾ ಗೋಮೂತ್ರದಲ್ಲಿ ಕೂಡಿಸಬೇಕು. (೪೬)

**ಕೃಷ್ಣಸರ್ಪವರಾಹೋಷ್ಟ್ರಜಲೌಕಾವೃಷದಂಶಜಾಮ್ ||**
**ವಸಾಮಭ್ಯಂಜನೇ ದದ್ಯಾದ್ಧೂಪನಂ ಚಾರ್ಶಸಾಂ ಹಿತಮ್ ||೪೭||**

**ಅರ್ಥ:—** ಕರೇ ಹಾವು, ಹಂದಿ, ಒಂಟೆ, ಜಿಗಳೆ, ಬೆಕ್ಕುಗಳ ನೆಣದ ಅಭ್ಯಂಗವನ್ನು ಮಾಡಬೇಕು. ಅವುಗಳ ಧೂಪಗಳೂ ಮೂಲ ವ್ಯಾಧಿಗಳಿಗೆ ಹಿತಕರವಾಗಿವೆ. ||೪೭||

ಆ ಧೂಪಗಳನ್ನು ಹೇಳುತ್ತಾರೆ.

**ನೃಕೇಶಾಃ ಸರ್ಪನಿರ್ಮೋಕೋ ವೃಷದಂಶಸ್ಯ ಚರ್ಮ ಚ ||**
**ಅರ್ಕಮೂಲಂ ಶಮೀಪತ್ರಮರ್ಶೋಭ್ಯೋ ಧೂಪನಂ ಹಿತಮ್||೪೮||**

**ತುಂಬುರೂಣಿ ವಿಡಂಗಾನಿ ದೇವದಾರ್ವಕ್ಷತಂ ಘೃತಮ್ ||**
**ಬೃಹತೀ ಚಾಶ್ವಗಂಧಾ ಚ ಪಿಪ್ಪಲ್ಯಃ ಸುರಸಾ ಘೃತಮ್ ||೪೯||**

**ವರಾಹವೃಷವಿಟ್ ಚೈವ ಧೂಪನಂ ಸಕ್ತವೋ ಘೃತಮ್ ||**
**ಕುಂಜರಸ್ಯ ಪುರೀಷಂ ಚ ಘೃತಂ ಸರ್ಜರಸಸ್ತಥಾ ||೫೦||**

**ಅರ್ಥಃ—** [೧] ಮನುಷ್ಯರ ಕೂದಲು, ಹಾವಿನ ಪರೆ, ಬೆಕ್ಕಿನ ತೊಗಲು, ಎಕ್ಕೆಬೇರು, ಶಮೀಪತ್ರ ಮತ್ತು ತುಪ್ಪ ಇವುಗಳ ಧೂಪವು ಮೂಲವ್ಯಾಧಿಗಳಿಗೆ ಹಿತಕರವು. ||೪೮|| [೨] ತುಂಬುರು (ಹವೇಜ ಜಾತಿ) ವಾವಡಿಂಗ, ದೇವದಾರು, ಅಕ್ಕಿ ಮತ್ತು ಘೃತಗಳ [೩] ನೆಲಗುಳ್ಳ, ಅಶ್ವಗಂಧ (ಅಂಗರಬೇರು), ಹಿಪ್ಪಲಿ, ತುಳಸಿ ಮತ್ತು ಘೃತ ಇವುಗಳ ||೪೯|| [೪] ಹಂದಿ, ಎತ್ತುಗಳ ಶೆಗಣಿ ಮತ್ತು ಸಕ್ತು ಮತ್ತು ತುಪ್ಪ ಇವುಗಳ, [೫] ಆನೆಯ ಮಲ, ಸರ್ಜರಸ [ರಾಳ], ಮತ್ತು ತುಪ್ಪ ಇವುಗಳ ಧೂಪಗಳೂ ಹಿತಕರವಾಗಿವೆ. (೫೦)

ಲೇಪಗಳನ್ನು ಹೇಳುತ್ತಾರೆ.

**ಹರಿದ್ರಾಚೂರ್ಣಸಂಯುಕ್ತಂ ಸುಧಾಕ್ಷೀರಂ ಪ್ರಲೇಪನಮ್ ||**
**ಗೋಪಿತ್ತಪಿಷ್ಟಾಃ ಪಿಪ್ಪಲ್ಯಃ ಸಹರಿದ್ರಾಃ ಪ್ರಲೇಪನಮ್ ||೫೧||**

**ಶಿರೀಷಬೀಜಂ ಕುಷ್ಠಂಚ ಪಿಪ್ಪಲ್ಯಃ ಸೈಂಧವಂ ಗುಡಃ ||**
**ಅರ್ಕಕ್ಷೀರಂ ಸುಧಾಕ್ಷೀರಂ ತ್ರಿಫಲಾ ಚ ಪ್ರಲೇಪನಮ್ ||೫೨||**

**ಪಿಪ್ಪಲ್ಯಕ್ಷಿತ್ರಕಃ ಶ್ಯಾಮಾ ಕಿಣ್ವಂ ಮದನತಂಡುಲಾಃ ||**
**ಪ್ರಲೇಪಃ ಕುಕ್ಕುಟಶಕೃದ್ಧರಿದ್ರಾಗುಡಸಂಯುತಃ ||೫೩||**

ದಂತೀಶ್ಯಾಮಾಮೃತಾಸಂಗಃ ಪಾಂರಾವತಶಕೃದ್ಗುಡಃ ||
ಪ್ರಲೇಪಃ ಸ್ಯಾದ್ಗಜಾಸ್ಥೀನಿ ನಿಂಬೋ ಭಲ್ಲಾತಕಾನಿ ಚ ||೫೪||
ಪ್ರಲೇಪಃ ಸ್ಯಾದಲಂ ಕೋಷ್ಣಂ ವಾಸಂತಕವಸಾಯುತಮ್ ||
ಶೂಲಶ್ವಯಥುಹೃದ್ವ್ಯಕ್ತೈಶ್ಚ ಉಕೀವಸಯಾ ಸಹ ||೫೫||
ಅರ್ಕಪತ್ರಂ ಸುಧಾಕಾಂಡಂ ಕಟುಕಾಲಾಬುಪಲ್ಲವಾಃ ||
ಕರಂಜೋ ಬಸ್ತಮೂತ್ರಂ ಚ ಲೇಪನಂ ಶ್ರೇಷ್ಠಮರ್ಶಸಾಮ್ ||೫೬||

ಅರ್ಥಃ— [೧] ಅರಿಷಿಣ ಪುಡಿಯಲ್ಲಿ ಕಳ್ಳೀಹಾಲು ಕಲಿಸಿ ಲೇಪ ಮಾಡಬೇಕು. [೨] ಹಿಪ್ಪಲಿ ಅರಿಷಿಣಗಳನ್ನು ಗೋರೋಚನದೊಡನೆ ಕಲಿಸಿ ಲೇಪಮಾಡಬೇಕು. ||೫೧|| [೩] ಶಿರೀಷಬೀಜ ಕೋಷ್ಠ ಹಿಪ್ಪಲಿ ಸೈಂಧವ ಬೆಲ್ಲ ತ್ರಿಫಳೆಗಳನ್ನು ಸಮಭಾಗ ತಕ್ಕೊಂಡು ಎಕ್ಕೀಹಾಲು ಕಳ್ಳೀಹಾಲುಗಳೊಡನೆ ಕಲಿಸಿ ಲೇಪ ಮಾಡಬೇಕು. ||೫೨|| [೪] ಹಿಪ್ಪಲಿ ಚಿತ್ರಕ, ಕರೇತಿಗಡಿ, ಸುರಾಬೀಜ, ಮದನಫಲಬೀಜ, ಕೋಳಿಯಮಲ, ಅರಿಷಿಣ, ಬೆಲ್ಲಗಳನ್ನು ಒತ್ತಟ್ಟಿಗೆ ಅರೆದು ಲೇಪ ಮಾಡಬೇಕು. ||೫೩|| [೫] ದಂತೀ, ಕರೇತಿಗಡಿ, ಖರ್ಪರ ತುತ್ತೆ, ಪಾರಿವಾಳದಮಲ, ಬೆಲ್ಲ, ಆನೆಯ ಎಲಬು, ಬೇವು, ಕೇರುಗಳನ್ನು ಅರೆದು ಲೇಪಮಾಡಬೇಕು. ||೫೪|| [೬] ಹರಿತಾಲವನ್ನು ಒಂಟೆಯ ನೆಣದೊಡನೆ ಅರೆದು ಸ್ವಲ್ಪ ಬಿಸಿ ಮಾಡಿ ಲೇಪ ಮಾಡಬೇಕು. [೭] ಈ ಲೇಪವನ್ನು ಶಿಶುಮಾರ (ಒಂದು ತರದ ಮೊಸಳೆ) ದ ನೆಣದಲ್ಲಿ ಕಲಿಸಿ ಬಿಸಿಮಾಡಿ ಲೇಪಮಾಡಿದರೆ ಶೂಲಬಾವುಗಳನ್ನು ಕಳೆಯುವದು. ||೫೫|| [೮] ಎಕ್ಕೆಎಲೆ, ಕಳ್ಳಿಯದೇಟು, ಕಟುಕರೋಣಿ, ಕಹಿಕುಂಬಳದ ಎಲೆ ಹುಲಗಲಿ ಇವುಗಳನ್ನು ಹೋತಿನ ಮೂತ್ರದಲ್ಲಿ ಅರೆದು ಮಾಡಿದ ಲೇಪವು ಮೂಲವ್ಯಾಧಿಗಳಿಗೆ ಹಿತಕರವಾಗಿದೆ. (೫೬)

ಅಭ್ಯಂಗಾದ್ಯಾಃ ಪ್ರದೇಹಾಂತಾ ಯ ಏತೇ ಪರಿಕೀರ್ತಿತಾಃ ||
ಸ್ತಂಭಶ್ವಯಥುಕಂಡ್ವರ್ತಿಶಮನಾಸ್ತೇಽರ್ಶಸಾಂ ಹಿತಾಃ ||೫೭||
ಪ್ರದೇಹಾಂತೈರುಪಕ್ರಾಂತಾ ಗುದಜಾಃ ಪ್ರಸ್ರವಂತಿ ಹಿ ||
ಸಂಚಿತಂ ದುಷ್ಟರುಧಿರಂ ತತಃ ಸಂಪದ್ಯತೇ ಸುಖೀ ||೫೮||
ಶೀತೋಷ್ಣಸ್ನಿಗ್ಧರೂಕ್ಷೈರ್ಹಿ ನ ವ್ಯಾಧಿರುಪಶಾಮ್ಯತಿ ||
ರಕ್ತೇ ದುಷ್ಟೇ ಭಿಷಕ್ತಸ್ಮಾದ್ರಕ್ತಮೇವಾವಸೇಚಯೇತ್ ||೫೯||

**ಜಲೌಕೋಭಿಸ್ತಥಾ ಶಸ್ತ್ರೈಃ ಸೂಚೀಭಿರ್ವಾ ಪುನಃ ಪುನಃ ||**
**ಅವರ್ತಮಾನಂ ರುಧಿರಂ ರಕ್ತಾರ್ಶೋಭ್ಯಃ ಪ್ರವಾಹಯೇತ್ ||೬೦||**

**ಅರ್ಥಃ—** ಅಭ್ಯಂಗದಿಂದ ಲೇಪದವರೆಗೆ ಹೇಳಿದ ಈ ಯೋಗಗಳು ಮೂಲವ್ಯಾಧಿಯ ಸ್ತಬ್ಧತೆ, ಬಾವು, ತಿಂಡಿ, ನೋವುಗಳನ್ನು ಕಳೆಯುವ ದರಿಂದ ಹಿತಕರವಾಗಿವೆ. ||೫೭||

ಏಕೆಂದರೆ ಲೇಪದವರೆಗೆ ಹೇಳಿದ ಈ ಯೋಗಗಳ ಪ್ರಯೋಗದಿಂದ ಮೂಲವ್ಯಾಧಿಗಳಲ್ಲಿ ಸಂಚಿತವಾದ ದುಷ್ಟರಕ್ತವು ಸ್ರವಿಸುವದು. ಆದ್ದರಿಂದ ಅವನು ಸುಖಿಯಾಗುವನು. ||೫೮||

ರಕ್ತವು ದುಷ್ಟವಾಗಿರಲು (ದೋಷವಿರುದ್ಧ) ಶೀತ, ಉಷ್ಣ, ಸ್ನಿಗ್ಧ ರುಕ್ಷ ಉಪಾಯಗಳನ್ನು ಮಾಡಿದರೂ ಬೇನೆಯು ಶಾಂತವಾಗದು. ಕಾರಣ ವೈದ್ಯನು ಅಲ್ಲಿ ರಕ್ತ ಸ್ರಾವವನ್ನೇ ಮಾಡಿಸಬೇಕು. (೫೯)

ದುಷ್ಟ ರಕ್ತವುಳ್ಳ ಮೂಲವ್ಯಾಧಿಗಳಿಂದ ಸ್ರವಿಸದ ರಕ್ತವನ್ನು ಜಿಗಳಿಗಳಿಂದಲೂ ಶಸ್ತ್ರ ಮತ್ತು ಸೂಜಿಗಳಿಂದಲೂ ಸ್ರವಿಸಬೇಕು. (೬೦)

**ಗುದಶ್ವಯಥುಶೂಲಾರ್ತಂ ಮಂದಾಗ್ನಿಂ ಪಾಯಯೇತ್ತು ತಮ್ ||**
**ತ್ರ್ಯೂಷಣಂ ಪಿಪ್ಪಲೀಮೂಲಂ ಪಾಠಾಂ ಹಿಂಗು ಸಚಿತ್ರಕಮ್||೬೧||**
**ಸೌವರ್ಚಲಂ ಪುಷ್ಕರಾಖ್ಯಮಜಾಜೀಂ ಬಿಲ್ವಪೇಷಿಕಾಮ್ ||**
**ಬಿಡಂ ಯಮಾನೀಂ ಹಪುಷಾಂ ವಿಡಂಗಂ ಸೈಂಧವಂ**
**ವಚಾಮ್ ||೬೨||**
**ತಿಂತಿಡೀಕಂ ಚ ಮಂಡೇನ ಮದ್ಯೇನೋಷ್ಣೋದಕೇನ ವಾ ||**
**ತಥಾರ್ಶೋಗ್ರಹಣೀದೋಷಶೂಲಾನಾಹಾದ್ವಿಮುಚ್ಯತೇ ||೬೩||**

**ಅರ್ಥಃ—** ಗುದದಲ್ಲಿ ಬಾವು, ಶೂಲ, ಮತ್ತು ಅಗ್ನಿಮಾಂದ್ಯವುಳ್ಳ ರೋಗಿಗೆ ತ್ರಿಕಟು, ಮೋಡಿ, ಅಗಳಶುಂಠಿ, ಇಂಗು, ಚಿತ್ರಕ (೬೧) ಕಾಚಲವಣ, ಪುಷ್ಕರಮೂಲ, ಕರೇಜೀರಗಿ, ಬಿಲ್ವದ ತಿಳಲು, ಬಿಡಲವಣ, ಅಜವಾನ, ಹಪುಷಾ [ಹಬ್ಬೆ], ವಾವಡಿಂಗ, ಸೈಂಧವ, ಬಜೆ, (೬೨) ಹುಣಸೆಹಣ್ಣು ಈ ೧೮ ದ್ರವ್ಯಗಳ ಚೂರ್ಣವನ್ನು ಮೊಸರಿನ ನೀರಿನಿಂದಾಗಲಿ ಮದ್ಯದಿಂದಾಗಲಿ ಬಿಸಿನೀರಿನಿಂದಾಗಲಿ ಕುಡಿಸಬೇಕು. ಅದರಿಂದ

ಮೂಲವ್ಯಾಧಿ, ಸಂಗ್ರಹಣಿ, ಶೂಲ, ಹೊಟ್ಟೆಯುಬ್ಬುಗಳಿಂದ ರೋಗಿಯು ಮುಕ್ತನಾಗುತ್ತಾನೆ. ||೬೩||

**ಪಾಚನಂ ಪಾಯಯೇದ್ವಾ ತದ್ಯದ್ವಕ್ತ್ಮ್ಯವ್ಯತಿಸಾರಿಣೇ ||**
**ಸಗುಡಾಮಭಯಾಂ ವಾಪಿ ಪ್ರಾಶಯೇತ್ ಪೌರ್ವಭಕ್ತಿಕೀಮ್||೬೪||**

**ಪಾಯಯೇದ್ವಾ ತ್ರಿವೃಚ್ಚೂರ್ಣಂ ತ್ರಿಫಲಾರಸಸಂಯುತಮ್ ||**
**ಹೃತೇ ಗುದಾಶ್ರಯೇ ದೋಷೇ ಗುದಜಾ ಯಾಂತಿ ಸಂಕ್ಷಯಮ್೬೫||**

**ಅರ್ಥ:—** ಮುಂದೆ ಅತಿಸಾರ ರೋಗಿಗೆ ಹೇಳಿದ ಪಾಚನವನ್ನು ಕುಡಿಸಬೇಕು. ಅಥವಾ ಊಟಕ್ಕಿಂತ ಮೊದಲು ಅಳಲೇಕಾಯಿಯನ್ನು ಬೆಲ್ಲದೊಡನೆ ತಿನ್ನಿಸಬೇಕು. ||೬೪|| ಅಥವಾ ತ್ರಿಫಳಾಕಷಾಯದಲ್ಲಿ ನಿಶೋತ್ತರ ಚೂರ್ಣವನ್ನು ಹಾಕಿ ಕುಡಿಸಬೇಕು. ಇದರಿಂದ ಗುದದಲ್ಲಿಯ ದೋಷಗಳು ಹೋಗಲು, ಮೂಲವ್ಯಾಧಿಗಳು ಹೋಗುವವು. (೬೫)

**ಗೋಮೂತ್ರಾಧ್ಯುಷಿತಾಂ ದದ್ಯಾತ್ ಸಗುಡಾಂ ವಾ ಹರೀತಕೀಮ್||**
**ಹರೀತಕೀಂ ತಕ್ರಯುತಾಂ ತ್ರಿಫಲಾಂ ವಾ ಪ್ರಯೋಜಯೇತ್||೬೬||**

**ಸನಾಗರಂ ಚಿತ್ರಕಂ ವಾ ಸೀಧುಯುಕ್ತಂ ಪ್ರದಾಪಯೇತ್ ||**
**ದಾಪಯೇಚ್ಚವ್ಯಯುಕ್ತಂ ವಾ ಸೀಧುಂ ಸಾಜಾಜಿಚಿತ್ರಕಮ್ ||೬೭||**

**ಸುರಾಂ ಸಪಾಠಾಂ ಹಪುಷಾಂ ದದ್ಯಾತ್ ಸೌವರ್ಚಲಾನ್ವಿತಾಮ್||**
**ದಧಿತ್ಥಂ ಬಿಲ್ವಸಂಯುಕ್ತಂ ಯುಕ್ತಂ ವಾ ಚವ್ಯಚಿತ್ರಕಮ್ ||೬೮||**

**ಭಲ್ಲಾತಕಯುತಂ ವಾಪಿ ಪ್ರದದ್ಯಾತ್ ತಕ್ರತರ್ಪಣಮ್ ||**
**ಬಿಲ್ವನಾಗರಯುಕ್ತಂ ವಾ ಯಮಾನ್ಯಾ ಚಿತ್ರಕೇಣ ಚ ||೬೯||**

**ಚಿತ್ರಕಂ ಹಪುಷಾಂ ಹಿಂಗುಂ ದದ್ಯಾದ್ವಾ ತಕ್ರಸಂಯುತಮ್ ||**
**ಪಂಚಕೋಲಯುತಂ ವಾಪಿ ತಕ್ರಮಸ್ಮೈ ಪ್ರದಾಪಯೇತ್ ||೭೦||**

**ಅರ್ಥ:—** ಗೋಮೂತ್ರದಲ್ಲಿ ನೆನೆಯಿಟ್ಟ ಅಥವಾ ಬೆಲ್ಲದೊಡನೆ ಕೂಡಿಸಿದ ಅಳಲೇಕಾಯಿಯನ್ನು ಕೊಡಬೇಕು. ಅಥವಾ ಅಳಲೇಕಾಯಿಯ ಅಥವಾ ತ್ರಿಫಳೆಯ ಚೂರ್ಣವನ್ನು ಮಜ್ಜಿಗೆಯಲ್ಲಿ ಕೊಡಬೇಕು. (೬೬) ಸುಂಠಿ ಮತ್ತು ಚಿತ್ರಕಗಳ ಚೂರ್ಣವನ್ನು ಸೀಧು [ಕಬ್ಬಿನಸುರೆ]ಯೊಡನೆ

ಕೊಡಬೇಕು. ಅಥವಾ ಚವಕ, ಕರೀಜೀರಗಿ ಚಿತ್ರಕಗಳನ್ನು ಸೀಧು [ಕಬ್ಬಿನಮದ್ಯ] ದೊಡನೆ ಕೊಡಬೇಕು. ||೬೭|| ಅಗಳಸುಂಠಿ, ಹಪುಷಾ, [ಹೆಬ್ಬೆ] ಕಾಚಲವಣಗಳ ಚೂರ್ಣವನ್ನು ಸುರೆಯೊಡನೆ ಕೊಡಬೇಕು. ಬಿಲ್ವ ಮತ್ತು ಬೆಳವಲಕಾಯಿಗಳನ್ನು ಅಥವಾ ಚವ್ಯ ಚಿತ್ರಕಗಳನ್ನು ಕೊಡಬೇಕು. ||೬೮|| ಕೇರಿನ ಚೂರ್ಣ ಹಾಕಿದ ಸತುವಿನ ಮಂಥವನ್ನು ಮಜ್ಜಿಗೆಯೊಡನೆ ಕೊಡಬೇಕು. ಇದರಂತೆ ಬಿಲ್ವ ಮತ್ತು ಸುಂಠಿಯ ಚೂರ್ಣ ಹಾಕಿದ ಅಥವಾ ಅಜವಾನ ಚಿತ್ರಕ ಹಾಕಿದ ಸತುವಿನ ಮಂಥವನ್ನು ಮಜ್ಜಿಗೆಯೊಡನೆ ಕೊಡಬೇಕು. ||೬೯|| ಚಿತ್ರಕ, ಹಪುಷಾ [ಹೆಬ್ಬೆ], ಇಂಗುಗಳ ಚೂರ್ಣವನ್ನು ಮಜ್ಜಿಗೆಯಲ್ಲಿ ಕೊಡಬೇಕು. ಅಥವಾ ಹಿಪ್ಪಲಿ, ಮೋಡಿ, ಚವಕ, ಚಿತ್ರಕ, ಸುಂಠಿಗಳ ಚೂರ್ಣವನ್ನು ಹಾಕಿ ಮಜ್ಜಿಗೆಯನ್ನು ಇವನಿಗೆ ಕೊಡಬೇಕು. ||೭೦||

ತಕ್ರಾರಿಷ್ಟವನ್ನು ಹೇಳುತ್ತಾರೆ.

**ಹಪುಷೋತ್ಕುಂಚಿಕಾ ಧಾನ್ಯಮಜಾಜೀ ಕಾರವೀ ಶಠೀ ||**
**ಪಿಪ್ಪಲೀ ಪಿಪ್ಪಲೀಮೂಲಂ ಚಿತ್ರಕೋ ಹಸ್ತಿಪಿಪ್ಪಲೀ ||೭೧||**
**ಯಮಾನೀ ಚಾಜಮೋದಾ ಚ ತಚ್ಚೂರ್ಣಂ ತಕ್ರಸಂಯುತಮ್ ||**
**ಮಂದಾಮ್ಲಕಟುಕಂ ವಿದ್ವಾನ್ ಸ್ಥಾಪಯೇದ್ ಘೃತಭಾಜನೇ||೭೨||**
**ವ್ಯಕ್ತಾಮ್ಲಕಟುಕಂ ಜಾತಂ ತಕ್ರಾರಿಷ್ಟಂ ಮುಖಪ್ರಿಯಮ್ ||**
**ಪ್ರಪಿಬೇನ್ಮಾತ್ರಯಾ ಕಾಲೇಷ್ವನ್ನಸ್ಯ ತೃಷಿತಸ್ತ್ರಿಷು ||೭೩||**
**ದೀಪನಂ ರೋಚನಂ ವರ್ಣ್ಯಂ ಕಫವಾತಾನುಲೋಮನಮ್ ||**
**ಗುದಶ್ವಯಥುಕಂಡ್ವಾರ್ತಿನಾಶನಂ ಬಲವರ್ಧನಮ್ ||೭೪||**

**ಅರ್ಥ:**— ವಿದ್ವಾಂಸನಾದ ವೈದ್ಯನು ಹಪುಷಾ [ಹೆಬ್ಬೆ], ಕರೀಜೀರಿಗಿ, ಜೀರಗಿ, ಹವೀಜ, ಸಣ್ಣಜೀರಗಿ, ಕಚೋರ, ಹಿಪ್ಪಲಿ, ಮೋಡಿ, ಚಿತ್ರಕ, ದೊಡ್ಡಹಿಪ್ಪಲಿ, ||೭೧|| ಅಜವಾನ, ಆಜಮೋದ ಇವುಗಳ ೪ಲ ತೊಲಿ ಚೂರ್ಣವನ್ನು ೫೧೨ ತೊಲಿ ಮಜ್ಜಿಗೆಯಲ್ಲಿ ಹಾಕಿ ಸ್ವಲ್ಪ ಹುಳಿ, ಕಾರ ಮಾಡಿ ತುಪ್ಪದ ಕೊಡದಲ್ಲಿ ಹಾಕಿಡಬೇಕು. ||೭೨|| [ಕೆಲವು ದಿವಸಗಳ ಮೇಲೆ] ಬಹಳ ಹುಳಿ ಕಾರ ಆಗಲು ಬಾಯಿಗೆ ರುಚಿಕೊಡುವ ಆ ತಕ್ರಾರಿಷ್ಟವನ್ನು ಊಟದ ಮೂರೂ ಕಾಲದಲ್ಲಿ ನೀರಡಿಕೆಯಾದಾಗ್ಗೆ

ಕುಡಿಯಬೇಕು. ||೭೩|| ಇದು ಅಗ್ನಿದೀಪಕ, ರುಚಿಕರ, ವರ್ಣಕರ, ಕಫವಾತಗಳ ಅನುಲೋಮಕ ಮತ್ತು ಗುದದಲ್ಲಿಯ ಬಾವು ತಿಂತಿ ನೋವು ಗಳ ನಾಶಕ ಮತ್ತು ಬಲವರ್ಧಕ ಆಗಿದೆ. ||೭೪||

ತಕ್ರದ ಯೋಗಗಳನ್ನು ಹೇಳುತ್ತಾರೆ.

ತ್ವಚಂ ಚಿತ್ರಕಮೂಲಸ್ಯ ಪಿಷ್ಟ್ವಾ ಕುಂಭಂ ಪ್ರಲೇಪಯೇತ್ ||
ತಕ್ರಂ ವಾ ದಧಿ ವಾ ತತ್ರ ಜಾತಮರ್ಶೋಹರಂ ಪಿಬೇತ್ ||೭೫||

ವಾತಶ್ಲೇಷ್ಮಾರ್ಶಸಾಂ ತಕ್ರಾತ್ ಪರಂ ನಾಸ್ತೀಹ ಭೇಷಜಮ್ ||
ತತ್ಪ್ರಯೋಜ್ಯಂ ಯಥಾದೋಷಂ ಸಸ್ನೇಹಂ ರೂಕ್ಷಮೇವ ವಾ ||೭೬||

ಸಪ್ತಾಹಂ ವಾ ದಶಾಹಂ ವಾ ಪಕ್ಷಂ ಮಾಸಮಥಾಪಿ ವಾ ||
ಬಲಕಾಲವಿಶೇಷಜ್ಞೋ ಭಿಷಕ್ ತಕ್ರಂ ಪ್ರಯೋಜಯೇತ್ ||೭೭||

ಅತ್ಯರ್ಥಮೃದುಕಾಯಾಗ್ನೇಸ್ತಕ್ರಮೇವಾವಚಾರಯೇತ್ ||
ಸಾಯಂ ವಾ ಲಾಜಸಕ್ತೂನಾಂ ದದ್ಯಾತ್
ತಕ್ರಾವಲೇಹಿಕಾಮ್ ||೭೮||

ಜೀರ್ಣೇ ತಕ್ರೇ ಪ್ರದದ್ಯಾದ್ವಾ ತಕ್ರಪೇಯಾಂ ಸಸೈಂಧವಾಮ್ ||
ತಕ್ರಾನುಪಾನಂ ಸಸ್ನೇಹಂ ತಕ್ರೌದನಮತಃ ಪರಮ್ ||೭೯||

ಯೂಷೈರ್ಮಾಂಸರಸೈರ್ವಾಪಿ ಭೋಜಯೇತ್ ತಕ್ರಸಂಯುತೈಃ ||
ಯೂಷೈ ರಸೇನ ವಾಪ್ಯೂರ್ಧ್ವಂ ತಕ್ರಸಿದ್ಧೇನ ಭೋಜಯೇತ್ ||೮೦||

ಕಾಲಕ್ರಮಜ್ಞಃ ಸಹಸಾ ನ ಚ ತಕ್ರಂ ನಿವರ್ತಯೇತ್ ||
ತಕ್ರಪ್ರಯೋಗೋ ಮಾಸಾಂತಃ ಕ್ರಮೇಣೋಪರಮೋ ಹಿತಃ ||೮೧||

ಅಪಕರ್ಷೋ ಯಥೋತ್ಕರ್ಷೋ ನ ತ್ವನ್ನಾದಪಕೃಷ್ಯತೇ ||
ಶಕ್ತ್ಯಾಗಮನರಕ್ಷಾರ್ಥಂ ದಾರ್ಢ್ಯಾರ್ಥಮನಲಸ್ಯ ಚ ||೮೨||

ಬಲೋಪಚಯವರ್ಣಾರ್ಥಮೇಷ ನಿರ್ದಿಶ್ಯತೇ ಕ್ರಮಃ
ರೂಕ್ಷಮರ್ಧೋದ್ಧೃತಸ್ನೇಹಂ ಯತಶ್ಚಾನುದ್ಧೃತಂ ಘೃತಮ್ ||೮೩||

ತಕ್ರಂ ದೋಷಾಗ್ನಿಬಲವಿತ್ ತ್ರಿವಿಧಂ ತತ್ಪ್ರಯೋಜಯೇತ್ ||
ಹೃತಾನಿ ನ ವಿರೋಹಂತಿ ತಕ್ರೇಣ ಗುದಜಾನಿ ಚ ||೮೪||

ಭೂಮಾವಪಿ ನಿಷಿಕ್ತಂ ತದ್ದಹೇತ್ತಕ್ರಂ ತೃಣೋಲುಪಮ್ ॥
ಕಿಂ ಪುನರ್ದೀಪ್ತಕಾಯಾಗ್ನೇಃ ಶುಷ್ಕಾಣ್ಯರ್ಶಾಂಸಿ ದೇಹಿನಃ ॥೭೫॥

ಸ್ರೋತಃಸು ತಕ್ರಶುದ್ಧೇಷು ರಸಃ ಸಮ್ಯಗುಪೈತಿ ಯಃ ॥
ತೇನ ಪುಷ್ಟಿರ್ಬಲಂ ವರ್ಣಃ ಪ್ರಹರ್ಷಶ್ಚೋಪಜಾಯತೇ ॥೭೬॥

ವಾತಶ್ಲೇಷ್ಮವಿಕಾರಾಣಾಂ ಶತಂ ಚಾಪಿ ನಿವರ್ತತೇ ॥
ನಾಸ್ತಿ ತಕ್ರಾತ್ಪರಂ ಕಿಂಚಿದೌಷಧಂ ಕಫವಾತಜೇ ॥೭೭॥

**ಅರ್ಥ:—** ಚಿತ್ರಕಮೂಲದ ತೊಗಟೆಯ ಕಲ್ಕವನ್ನು ಕೊಡದೊಳಗೆ ತೊಡೆಯಬೇಕು. ಅದರಲ್ಲಿ ಸಿದ್ಧಮಾಡಿದ ಮಜ್ಜಿಗೆ ಅಥವಾ ಮೊಸರು ಕುಡಿದರೆ ಮೂಲವ್ಯಾಧಿಯು ಹೋಗುವದು. ॥೭೫॥ ವಾತಕಫಗಳಿಂದುಂಟಾದ ಮೂಲವ್ಯಾಧಿಗಳಿಗೆ ಮಜ್ಜಿಗೆಯಂಥ ಉತ್ತಮ ಔಷಧವಿಲ್ಲ. ಆದ್ದರಿಂದ ದೋಷಾನುಸಾರವಾಗಿ (ವಾತದಲ್ಲಿ) ಸ್ನಿಗ್ಧ ಅಥವಾ (ಕಫದಲ್ಲಿ) ರುಕ್ಷವಾದ ಅದನ್ನು ಉಪಯೋಗಿಸಬೇಕು. (೭೬) ರೋಗಿಯ ಬಲ, ರೋಗದ ಅವಸ್ಥೆ ಮತ್ತು ಕಾಲಗಳ ವಿಶೇಷವನ್ನು ಬಲ್ಲ ವೈದ್ಯನು ಏಳು ಹನ್ನೆರಡು, ಹದಿನೈದು ಅಥವಾ ಮೂವತ್ತು ದಿವಸಗಳವರೆಗೆ ತಕ್ರವನ್ನು ಕೊಡಬೇಕು. (೭೭) ಅಗ್ನಿಯು ಬಹಳೇ ಮಂದವಿದ್ದರೆ ಮಜ್ಜಿಗೆಯನ್ನೇ ಕುಡಿಸಬೇಕು. ಅಥವಾ ಮಜ್ಜಿಗೆ ಹಾಕಿ ಭತ್ತರಳು, ಸಕ್ತುಗಳ ಅವಲೇಹವನ್ನು ಮಾಡಿ ಸಂಜೆಗೆ ಕೊಡಬೇಕು (೭೮) ತಕ್ರವು ಜೀರ್ಣವಾಗಲು ಮೊದಲು ತಕ್ರದಿಂದ ಮಾಡಿದ ಪೇಯವನ್ನು ಸೈಂಧವ ಹಾಕಿ ಕೊಡಬೇಕು. ಆಮೇಲೆ ಸ್ವಲ್ಪ ಸ್ನೇಹ ಹಾಕಿದ ತಕ್ರದಿಂದ ಮಾಡಿದ ಅನ್ನವನ್ನು ॥೭೯॥ ತಕ್ರಹಾಕಿದ ಕಟ್ಟು ಅಥವಾ ಮಾಂಸರಸಗಳೊಡನೆ ತಿನ್ನಿಸಿ ಮೇಲೆ ಮಜ್ಜಿಗೆ ಕುಡಿಸಬೇಕು. ಆಮೇಲೆ ತಕ್ರದಲ್ಲಿಯೇ ಸಿದ್ಧವಾದ ಕಟ್ಟುಗಳಿಂದ ಅಥವಾ ಮಾಂಸರಸದಿಂದ ತಕ್ರೌದನವನ್ನು ತಿನ್ನಿಸಬೇಕು. ॥೮೦॥ ತಕ್ರಪ್ರಯೋಗವನ್ನು ೧ ತಿಂಗಳವರೆಗೆ ಮಾಡಬೇಕು. ಆದರೆ ಕಾಲಕ್ರಮಗಳನ್ನು ಬಲ್ಲ ವೈದ್ಯನು ಒಮ್ಮೆಲೆ ಮಜ್ಜಿಗೆಯನ್ನು ಬಿಡಿಸಬಾರದು. ಕ್ರಮದಿಂದ ಬಿಡುವದು ಹಿತಕರವು. ॥೮೧॥ ಹೇಗೆ ಮಜ್ಜಿಗೆಯನ್ನು ಹೆಚ್ಚಿಸುತ್ತ ಹೋಗಿರುತ್ತದೆಯೋ ಅದರಂತೆಯೇ ಅದನ್ನು ಕಡಿಮೆ ಮಾಡುತ್ತ ಹೋಗಬೇಕು. ಆದರೆ ಅನ್ನವನ್ನು ಮಾತ್ರ

ಕಡಿಮೆ ಮಾಡಬಾರದು. ಶಕ್ತಿಯ ರಕ್ಷಣಕ್ಕಾಗಿಯೂ ಮತ್ತು ಅಗ್ನಿಯ ಬಲಕ್ಕಾಗಿಯೂ ||೮೨|| ಶಕ್ತಿ ಪುಷ್ಟಿ ವರ್ಣಗಳ ವೃದ್ಧಿಗಾಗಿಯೂ ಈ ಕ್ರಮವು ಹೇಳಲ್ಪಟ್ಟಿದೆ. ದೋಷ, ಅಗ್ನಿ, ರೋಗದ ಬಲವನ್ನು ನೋಡಿಕೊಂಡು ರುಕ್ಷ ಅಥವಾ ಅರ್ಧಸ್ನೇಹತೆಗೆದ ಅಥವಾ ಏನೂ ಸ್ನೇಹತೆಗೆಯದೆ ಇದ್ದ ||೮೩|| ಹೀಗೆ ಮೂರು ಪ್ರಕಾರದ ಮಜ್ಜಿಗೆಯನ್ನು ಉಪಯೋಗಿಸಬೇಕು. ತಕ್ರದಿಂದ ನಾಶವಾದ ಮೂಲವ್ಯಾಧಿಗಳು ಪುನಃ ಏಳುವದಿಲ್ಲ. ||೮೪|| ಮಜ್ಜಿಗೆಯನ್ನು ಹಾಕಲು ಭೂಮಿಯಲ್ಲಿದ್ದ ತೃಣೋಲುಪವು (ಹುಲ್ಲಿನಸಮೂಹ) ಕೂಡ ಸುಡುವುದು. ಅಂದಮೇಲೆ ಪ್ರದೀಪ್ತ ಅಗ್ನಿಯುಳ್ಳ ಮನುಷ್ಯನ ಶುಷ್ಕವಾದ ಮೂಲವ್ಯಾಧಿಯನ್ನು ಸುಡುವುದರಲ್ಲಿ ಸಂಶಯವೇನು ? ||೮೫|| ಸ್ರೋತಸ್ಸುಗಳು ತಕ್ರದಿಂದ ಶುದ್ಧವಾಗಲು ಅನ್ನರಸವು ಧಾತುಗಳನ್ನು ಕೂಡಿಕೊಳ್ಳುವದು. ಆದರಿಂದ ಪುಷ್ಟಿ, ಬಲ, ಬಣ್ಣ, ಆನಂದಗಳುಂಟಾಗುತ್ತವೆ. ||೮೬|| ವಾತದ ಎಂಭತ್ತು, ಕಫದ ಇಪ್ಪತ್ತು ಹೀಗೆ ಒಂದು ನೂರು ವಿಕಾರಗಳು ಇದರಿಂದ ಹೋಗುತ್ತವೆ. ಕಫ ವಾತಜ ವಿಕಾರಗಳಲ್ಲಿ ತಕ್ರಕ್ಕಿಂತ ಶ್ರೇಷ್ಠವಾದ ಬೇರೆ ಯಾವ ಔಷಧವೂ ಇರುವದಿಲ್ಲ (೮೭)

**ಪಿಪ್ಪಲೀಂ ಪಿಪ್ಪಲೀಮೂಲಂ ಚಿತ್ರಕಂ ಹಸ್ತಿಪಿಪ್ಪಲೀಮ್ ||**
**ಶೃಂಗವೇರಮಜಾಜೀಂ ಚ ಕಾರವೀ ಧಾನ್ಯತುಂಬುರು ||೮೮||**
**ಬಿಲ್ವಂ ಕರ್ಕಟಕಂ ಪಾಠಾಂ ಪಿಷ್ಟ್ವಾ ಪೇಯಾಂ ವಿಪಾಚಯೇತ್ ||**
**ಫಲಾಮ್ಲಾಂ ಯಮಕಸ್ನೇಹಾಂ ತಾಂ ದದ್ಯಾದ್ಗುದಜಾಪಹಾಮ್ ||೮೯||**

**ಏತೈರೇವ ಖಡಾನ್ ಕುರ್ಯಾದೇತೈಶ್ಚ ವಿಪಚೇಜ್ಜಲಮ್ ||**
**ಏತೈಶ್ಚೈವ ಘೃತಂ ಸಾಧ್ಯಮರ್ಶಸಾಂ ವಿನಿವೃತ್ತಯೇ ||೯೦||**

**ಅರ್ಥ:—** ಹಿಪ್ಪಲಿ, ಮೋಡಿ, ಚಿತ್ರಕ, ಗಜಹಿಪ್ಪಲಿ, ಶುಂಠಿ, ಜೀರಿಗೆ, ಸಣ್ಣಜೀರಿಗೆ, ಹವೀಜ, ತುಂಬುರು (ನೇಪಾಳೀ ಹವೇಜ), ||೮೮|| ಬಿಲ್ವದ ಮಜ್ಜ, ಕರ್ಕಟಕ (ಕಾಕಡಶಿಂಗಿ), ಅಗಳಸುಂಠಿ ಇವುಗಳ ಕಲ್ಕವನ್ನು ಮಾಡಿ ಅದರಿಂದ ಪೇಯವನ್ನು ಸಿದ್ಧಮಾಡಬೇಕು. ಅದರಲ್ಲಿ ದಾಳಿಂಬ, ನೆಲ್ಲಿಗಳನ್ನು ಹಾಕಿ ಹುಳಿ ಮಾಡಿ ತುಪ್ಪ ಎಳ್ಳೆಣ್ಣೆಗಳನ್ನು ಕೂಡಿಸಿ ಕೊಡಬೇಕು. ಇದು ಮೂಲವ್ಯಾಧಿಯನ್ನು ನಾಶ

ಮಾಡುವದು. ||೮೯|| ಇವುಗಳಿಂದಲೇ ಕಟ್ಟುಗಳನ್ನು ಮಾಡಬೇಕು. ಇವುಗಳಿಂದಲೇ ನೀರನ್ನೂ ಮತ್ತು ಇವುಗಳಿಂದಲೇ ಘೃತವನ್ನೂ ಸಿದ್ಧಪಡಿಸಬೇಕು. ಇವು ಮೂಲವ್ಯಾಧಿಗಳನ್ನು ಕಳೆಯುವವು. (೯೦)

**ಶಟೀಪಲಾಶಸಿದ್ಧಾಂ ವಾ ಪಿಪ್ಪಲ್ಯಾ ನಾಗರೇಣ ವಾ ||**
**ದದ್ಯಾದ್ ಯವಾಗೂಂ ತಕ್ರಾಮ್ಲಾಂ**
**ಮರಿಚೈರವಚೂರ್ಣಿತಾಮ್ ||೯೧||**
**ಶುಷ್ಕಮೂಲಕಯೂಷಂ ವಾ ಯೂಷಂ ಕೌಲತ್ಥಮೇವ ವಾ ||**
**ದಧಿತ್ಥಬಿಲ್ವಯೂಷಂ ವಾ ಸಕುಲತ್ಥಮುಕುಷ್ಟಕಮ್ ||೯೨||**

**ಅರ್ಥ:**— ಕಚೋರಿ ಮತ್ತು ಲಗಳಿಂದ ಸಿದ್ಧವಾದ ಅಥವಾ ಹಿಪ್ಪಲಿ ಶುಂಠಿಗಳಿಂದ ಸಿದ್ಧವಾದ ಪೇಯದಲ್ಲಿ ಹುಳಿಮಜ್ಜಿಗೆಯನ್ನೂ ಮೆಣಸಿನ ಚೂರ್ಣವನ್ನೂ ಹಾಕಿ ಕೊಡಬೇಕು. ||೯೧|| ಒಣಮೂಲಂಗಿಯ ಕಟ್ಟನ್ನು ಅಥವಾ ಹುರಳಿಯ ಕಟ್ಟನ್ನು, ಅಥವಾ ಬೆಳವಲ ಬಿಲ್ವಗಳ ಕಟ್ಟನ್ನು ಅಥವಾ ಹುರಳಿ, ಅಡಸಿ ಹೆಸರುಗಳ ಕಟ್ಟನ್ನು ಕೊಡಬೇಕು. (೯೨)

**ಛಾಗಲಂ ವಾ ರಸಂ ದದ್ಯಾದ್ ಯೂಷೈರೇಭಿರ್ವಿಮಿಶ್ರಿತಮ್ ||**
**ಲಾವಾದೀನಾಂ ಫಲಾಮ್ಲಂ ವಾ ಸತಕ್ರಂ ಗ್ರಾಹಿಭಿರ್ಯುತಮ್ ||೯೩||**

**ಅರ್ಥ:**— ಅಥವಾ ಆಡಿನ ಮಾಂಸರಸದಲ್ಲಿ ಇವೇ ಕಟ್ಟುಗಳನ್ನು ಹಾಕಿ ಕೊಡಬೇಕು. ಅಥವಾ ಮಲಬಂಧಕ (ಬಿಲ್ವಮುಂತಾದ) ಚೂರ್ಣಗಳನ್ನು ಹಾಕಿದ ಹುಳಿಮಜ್ಜಿಗೆ ಹುಳಿ ಫಲಗಳಿಂದ ಹುಳಿಯಾದ ಲಾವಪಕ್ಷಿ ಮುಂತಾದವುಗಳ ಮಾಂಸರಸವನ್ನು ಕೊಡಬೇಕು. (೯೩)

ಅನ್ನದ ವಿಧಿಯನ್ನು ಹೇಳುತ್ತಾರೆ.

**ರಕ್ತಶಾಲಿರ್ಮಹಾಶಾಲಿಃ ಕಲಮೋ ಜಾಗಂಲಃ ಸಿತಃ ||**
**ಶಾರದಃ ಷಷ್ಟಿಕಶ್ಚೈವ ಸ್ಯಾದನ್ನವಿಧಿರರ್ಶಸಾಮ್ ||೯೪||**

**ಅರ್ಥ:**—ಕೆಂಪುಭತ್ತ, ದೊಡ್ಡಭತ್ತ, ಕಲಮು, ಜಾಂಗಲ (ಜಾಂಗಲ ದೇಶದಲ್ಲಿ ಆಗುವ) ಬಿಳೀಭತ್ತ, ಶಾರದ, ಷಷ್ಟಿಕ ಎಂಬ ಭತ್ತಗಳಿಂದ ಅನ್ನ ಮಾಡಿ ಮೂಲವ್ಯಾಧಿಗೆ ಕೊಡಬೇಕು. (೯೪)

ಇನ್ನು ಮೇಲೆ ಮಲಬಂಧವುಳ್ಳ ಮೂಲವ್ಯಾಧಿಗಳ ಔಷಧವನ್ನು ಹೇಳುತ್ತಾರೆ.

ಇತ್ಯುಕ್ತೋ ಭಿನ್ನಶಕೃತಾಮರ್ಶಸಾನಾಂ ಕ್ರಿಯಾಕ್ರಮಃ ||
ಯೇಽತ್ಯರ್ಥಂ ಗಾಢಶಕೃತಸ್ತೇಷಾಂ ವಕ್ಷ್ಯಾಮಿ ಭೇಷಜಮ್ ೯೫||
ಸಗುಡಾಂ ಪಿಪ್ಪಲೀಯುಕ್ತಾಮಭಯಾಂ ಘೃತಭರ್ಜಿತಾಮ್ ||
ತ್ರಿವೃದ್ದಂತೀಯುತಾಂ ವಾಪಿ ಭಕ್ಷಯೇದಾನುಲೋಮಿಕೀಮ್ ||೯೬||
ಸಸ್ನೇಹೈಃ ಸಕ್ತುಭಿರ್ಯುಕ್ತಾಂ ಪ್ರಸನ್ನಾಂ ಲವಣೀಕೃತಾಮ್ ||
ದದ್ಯಾನ್ಮತ್ತ್ಯಂಡಿಕಾಂ ಪೂರ್ವಂ ಭಕ್ಷಯಿತ್ವಾ ಸನಾಗರಾಮ್ ೯೭||
ಗುಡಂ ಸನಾಗರಂ ಪಾಠಾಂ ಫಲಾಮ್ಲಂ ಪಾಯಯೇಚ್ಚ ತಮ್ ||
ಗುಡಂ ಘೃತಯವಕ್ಷಾರಯುಕ್ತಂ ವಾಪಿ ಪ್ರಯೋಜಯೇತ್ ||೯೮||
ಯಮಾನೀಂ ನಾಗರಂ ಪಾಠಾಂ ದಾಡಿಮಸ್ಯ ರಸಂ ಗುಡಮ್ ||
ಪತಕ್ರಲವಣಂ ದದ್ಯಾದ್ವಾತವರ್ಚೋಽನುಲೋಮನಮ್ ||೯೯||
ದುಃಸ್ಪರ್ಶಕೇನ ಬಿಲ್ವೇನ ಯಮಾನ್ಯಾ ನಾಗರೇಣ ವಾ ||
ಏಕೈಕೇನಾಪಿ ಸಂಯುಕ್ತಾ ಪಾಠಾ ಹಂತ್ಯರ್ಶಸಾಂ ರುಜಮ್||೧೦೦||
ಪ್ರಾಗ್ಭಕ್ತಂ ಯಮಕೇ ಭೃಷ್ಟಾನ್ ಸಕ್ತುಭಿಶ್ಚಾವಚೂರ್ಣಿತಾನ್ ||
ಕರಂಜಪಲ್ಲವಾನ್ ದದ್ಯಾದ್
ವಾತವರ್ಚೋಽನುಲೊಮನಾನ್ ೧೦೧||
ಮದಿರಾಂ ವಾ ಸಲವಣಾಂ ಸೀಧುಂ ಸೌವೀರಕಂ ತಥಾ ||
ಸಗುಡಾಮಭಯಾಂ ವಾಥ ಪ್ರಾಶಯೇತ್
ಪೌರ್ವಭಕ್ತಿಕೀಮ್ ||೧೦೨||
ಪಿಪ್ಪಲೀನಾಗರಕ್ಷಾರಕಾರವೀಧಾನ್ಯಜೀರಕೈಃ ||
ಫಾಣಿತೇನ ಚ ಸಂಯೋಜ್ಯ ಫಲಾಮ್ಲಂ ದಾಪಯೇದ್
ಘೃತಮ್ ||೧೦೩||
ಪಿಪ್ಪಲೀ ಪಿಪ್ಪಲೀಮೂಲಂ ಚಿತ್ರಕೋ ಹಸ್ತಿಪಿಪ್ಪಲೀ ||
ಶೃಂಗವೇರಯವಕ್ಷಾರೌ ತೈಃ ಸಿದ್ಧಂ ಪಾಯಯೇದ್
ಘೃತಮ್ ||೧೦೪||
ಚವ್ಯಚಿತ್ರಕಸಿದ್ಧಂ ವಾ ಗುಡಕ್ಷಾರಸಮನ್ವಿತಮ್ ||
ಪಿಪ್ಪಲೀ ಮೂಲಸಿದ್ಧಂ ವಾ ಗುಡಕ್ಷಾರಸಮನ್ವಿತಮ್ ||೧೦೫||
ಪಿಪ್ಪಲೀ ಪಿಪ್ಪಲೀಮೂಲದಧಿನಾಗರಧಾನ್ಯಕೈಃ
ಸಿದ್ಧಂ ಸರ್ಪಿರ್ವಿಧಾತವ್ಯಂ ವಾತವರ್ಚೋವಿಬಂಧನುತ್ ||೧೦೬||

**ಅರ್ಥ:—** ಇಲ್ಲಿಯವರೆಗೆ ಅತಿಸಾರವುಳ್ಳ ವ್ಯಾಧಿಗಳ ಚಿಕಿತ್ಸೆಯು ಹೇಳಲ್ಪಟ್ಟಿತು. ಇನ್ನು ಮೇಲೆ ಬಹಳ ಮಲಬಂಧವುಳ್ಳ ಮೂಲವ್ಯಾಧಿಗಳ ಔಷಧವನ್ನು ಹೇಳುವೆವು. (೯೫) ತುಪ್ಪದಲ್ಲಿ ಕರೆದು ಬೆಲ್ಲ ಕೂಡಿಸಿದ ಅಳ್ಳೀಕಾಯಿಯಲ್ಲಿ ಹಿಪ್ಪಲೀ ಚೂರ್ಣವನ್ನು ಅಥವಾ ನಿಶೋತ್ತರ ದಂತೀಮೂಲಗಳ ಚೂರ್ಣವನ್ನು ಹಾಕಿ ತಿನ್ನಬೇಕು. ಇದು ಮಲವನ್ನು ಅನುಲೋಮನ ಮಾಡುವದು. ||೯೬|| ಮೊದಲು ಸುಂಠಿ ಸಕ್ಕರೆಯನ್ನು ತಿನ್ನಿಸಿ ಸ್ನೇಹ ಸಕ್ತು ಮತ್ತು ಉಪ್ಪು ಹಾಕಿದ ಸ್ವಚ್ಛವಾದ ಮದ್ಯವನ್ನು ಕೊಡಬೇಕು. ||೯೭|| ಸುಂಠಿ, ಅಗಳಸುಂಠಿಗಳ ಚೂರ್ಣ, ಬೆಲ್ಲಗಳನ್ನು ಹಾಕಿ ಫಲಗಳಿಂದ ಹುಳಿಮಾಡಿದ ನೀರನ್ನು ಕುಡಿಸಬೇಕು. ಅಥವಾ ತುಪ್ಪ ಜವಖಾರ ಹಾಕಿದ ಬೆಲ್ಲವನ್ನು ತಿನ್ನಿಸಬೇಕು. ||೯೮|| ಅಜವಾನ, ಸುಂಠಿ ಅಗಳಸುಂಠಿಗಳ ಚೂರ್ಣದಲ್ಲಿ ದಾಳಿಂಬದ ರಸ, ಬೆಲ್ಲ, ಮಜ್ಜಿಗೆ, ಉಪ್ಪುಗಳನ್ನು ಕೂಡಿಸಿ ಕೊಡಬೇಕು. ||೯೯|| ಅದು ಮಲವಾತಗಳ ಅನುಲೋಮನ ಮಾಡುವದು. ನೆಲಇಂಗಳ, ಬಿಲ್ವ, ಅಜವಾನ, ಸುಂಠಿಗಳಲ್ಲಿ ಯಾವದಾದರೂ ಒಂದರೊಡನೆ ಅಥವಾ ಎಲ್ಲದರೊಡನೆ ಕೂಡಿಸಿ ಕೊಟ್ಟ ಅಗಳ ಸುಂಠಿಯು ಮೂಲವ್ಯಾಧಿಯ ನೋವನ್ನು ಕಳೆಯುವದು. ||೧೦೦|| ಊಟಕ್ಕಿಂತ ಮೊದಲು ತುಪ್ಪ ಎಣ್ಣೆಗಳಲ್ಲಿ ಕರಿದ ಹುಲಗಲೀ ಎಲೆಗಳನ್ನು ಸತ್ತುವಿನ ಚೂರ್ಣದೊಡನೆ ಕೊಡಬೇಕು. ಅದು ಮಲವಾತಗಳನ್ನು ಅನುಲೋಮನ ಮಾಡುವದು. ||೧೦೧|| ಅಥವಾ ಮದ್ಯ, ಸೀಧು (ಕಬ್ಬಿನ ಮದ್ಯ) ಅಥವಾ ಸೌವೀರಕ (ಒಂದು ತರದ ಅಂಬಲಿ) ಗಳಲ್ಲಿ ಉಪ್ಪುಹಾಕಿ ಅಥವಾ ಅಳ್ಳೀಕಾಯಿ ಬೆಲ್ಲಗಳನ್ನು ಊಟಕ್ಕಿಂತ ಮೊದಲು ತಿನ್ನಿಸಬೇಕು. ||೧೦೨|| ಅಥವಾ ಹಸೀ ತುಪ್ಪದಲ್ಲಿ ಹಿಪ್ಪಲಿ, ಸುಂಠಿ, ಜವಕಾರ. ಸಣ್ಣ ಜೀರಿಗೆ, ಹವೀಜ, ಜೀರಿಗೆಗಳ ಚೂರ್ಣವನ್ನು ಕಾಕಂಬಿ, ಹುಳಿ ಫಲಗಳ ರಸವನ್ನು ಹಾಕಿ ಕೊಡಬೇಕು. ||೧೦೩|| ಹಿಪ್ಪಲಿ, ಮೋಡಿ, ಚಿತ್ರಕ, ಗಜಹಿಪ್ಪಲಿ, ಸುಂಠಿ ಜವಖಾರಗಳಿಂದ ೪ ಪಾಲು ನೀರಿನಲ್ಲಿ ಸಿದ್ಧವಾದ ಘೃತವನ್ನು ಕುಡಿಸಬೇಕು. ||೧೦೪|| ಅಥವಾ ಘೃತದ ೪ ಪಾಲು ನೀರಿನಲ್ಲಿ ಚವಕಚಿತ್ರಕಗಳ ಕಲ್ಕವನ್ನು ¼ ಹಾಕಿ ಸಿದ್ಧಮಾಡಿದ ಘೃತದಲ್ಲಿ ಬೆಲ್ಲ ಜವಖಾರಗಳನ್ನು ಹಾಕಿ, ಇದರಂತೆಯೇ ಮೋಡೀ ಚೂರ್ಣದಿಂದ ಸಿದ್ಧವಾದ ಘೃತದಲ್ಲಿ ಬೆಲ್ಲ ಜವಖಾರಗಳನ್ನು ಕೂಡಿಸಿ ಕೊಡಬೇಕು. ||೧೦೫|| ಹಿಪ್ಪಲಿ, ಮೋಡಿ, ಸುಂಠಿ, ಹವೀಜಗಳ ಕಲ್ಕವನ್ನು ಹಾಕಿ ನೊಸರಿನಲ್ಲಿ

ಘೃತವನ್ನು ಸಿದ್ಧಮಾಡಬೇಕು. ಇದು ಮಲಮೂತ್ರಗಳ ಬಂಧವನು ಕಳೆಯುವದು. (೧೦೬)

ಚವ್ಯಾದಿ ಘೃತವನ್ನು ಹೇಳುತ್ತಾರೆ.

**ಚವ್ಯಂ ತ್ರಿಕಟುಕಂ ಪಾಠಾಂ ಕ್ಷಾರಂ ಕುಸ್ತುಂಬುರೂಣಿ ಚ ||**
**ಯಮಾನೀಂ ಪಿಪ್ಪಲೀಮೂಲಮುಭೇ ಚ ಬಿಡಸೈಂಧವೇ ||೧೦೭||**
**ಚಿತ್ರಕಂ ಬಿಲ್ವಮಭಯಾಂ ಪಿಷ್ಟ್ವಾ ಸರ್ಪಿರ್ವಿಪಾಚಯೇತ್ ||**
**ಶಕೃದ್ವಾತಾನುಲೋಮ್ಯಾರ್ಥಂ ಜಾತೇ ದಧ್ನಿ ಚತುರ್ಗುಣೇ ||೧೦೮||**
**ಪ್ರವಾಹಿಕಾಂ ಗುದಭ್ರಂಶಂ ಮೂತ್ರಕೃಚ್ಛ್ರಂ ಪರಿಸ್ರವಮ್ ||**
**ಗುದವಂಕ್ಷಣಶೂಲಂ ಚ ಘೃತಮೇತದ್ವ್ಯಪೋಹತಿ || ||೧೦೯||**

**ಅರ್ಥ:—** ಚವಕ, ಶುಂಠಿ, ಮೆಣಸು, ಹಿಪ್ಪಲಿ, ಆಗಳಸುಂಠಿ, ಜವಖಾರ, ಕೊತ್ತುಂಬರಿ, ಅಜವಾನ, ಮೋಡಿ, ಬಿಡಲವಣ, ಸೈಂಧವ, ||೧೦೭|| ಚಿತ್ರಕ, ಬಿಲ್ವ, ಅಣಲೆ ಈ ೧೪ ದ್ರವ್ಯಗಳ ಕಲ್ಕವನ್ನು ಘೃತವ ನ್ನು ತಕ್ಕೊಂಡು ಘೃತದ ೪ ಪಾಲು ಮೊಸರಿನಲ್ಲಿ ಘೃತವನ್ನು ಸಿದ್ಧ ಮಾಡಬೇಕು. ಇದುಮಲವಾತಗಳನ್ನು ಅನುಲೋಮ ಮಾಡುವದು ||೧೦೮|| ಈ ಘೃತವು ಪ್ರವಾಹಿಕೆ, ಗುದಭ್ರಂಶ, ಮೂತ್ರಕೃಚ್ಛ್ರ, ಆವು ಮತ್ತು ಗುದಗೆಜ್ಜೆಗಳಲ್ಲಿರುವ ಶೂಲಗಳನ್ನು ಕಳೆಯುವದು. (೧೦೯)

ನಾಗರಾದಿ ಘೃತವನ್ನು ಹೊಳುತ್ತಾರೆ.

**ನಾಗರಂ ಪಿಪ್ಪಲೀಮೂಲಂ ಚಿತ್ರಕೋ ಹಸ್ತಿಪಿಪ್ಪಲೀ ||**
**ಶ್ವದಂಷ್ಟ್ರಾ ಪಿಪ್ಪಲೀ ಧಾನ್ಯಂ ಬಿಲ್ವಂ ಪಾಠಾ ಯಮಾನಿಕಾ ||೧೧೦||**
**ಚಾಂಗೇರೀಸ್ವರಸೇ ಸರ್ಪಿಃ ಕಲ್ಕೈರೇತೈರ್ವಿಪಾಚಯೇತ್ ||**
**ಚತುರ್ಗುಣೇನ ದಧ್ನಾ ಚ ತದ್ ಘೃತಂ ಕಫವಾತನುತ್ ||೧೧೧||**
**ಅರ್ಶಾಂಸಿ ಗ್ರಹಣೀದೋಷಂ ಮೂತ್ರಕೃಚ್ಛ್ರಂ ಪ್ರವಾಹಿಕಾಮ್ ||**
**ಗುದಭ್ರಂಶಾರ್ತಿಮಾನಾಹಂ ಘೃತಮೇತದ್ ವ್ಯಪೋಹತಿ ||೧೧೨||**

**ಅರ್ಥಃ—** ಸುಂಠಿ, ಮೋಡಿ, ಚಿತ್ರಕ, ಗಜಹಿಪ್ಪಲಿ, ನೆಗ್ಗಿಲು, ಹಿಪ್ಪಲಿ, ಹವೀಜ, ಬಿಲ್ವಮಜ್ಜೆ, ಆಗಳಸುಂಠಿ, ಅಜವಾನ, ||೧೧೦||

ಈ ಹತ್ತು ದ್ರವ್ಯಗಳ ಕಲ್ಕವನ್ನು ತುಪ್ಪದ ೪ ಪಾಲು, ಚಾಂಗೇರೀ (ಪುಳ್ಳಂಪರಚಿ) ರಸ ಮತ್ತು ಮೊಸರು ತುಪ್ಪದ ೪-೪ ಪಾಲು ಹಾಕಿ ಘೃತವನ್ನು ಸಿದ್ಧಮಾಡಬೇಕು ಈ ಘೃತವು ಕಫವಾತಗಳನ್ನು ಕಳೆಯುವದು. ||೧೧೧|| ಅದರಂತೆ ಈ ಘೃತವು ಮೂಲವ್ಯಾಧಿ, ಸಂಗ್ರಹಣಿ, ಮೂತ್ರಕೃಚ್ಛ್ರ, ಪ್ರವಾಹಿಕೆ, ಗುದಭ್ರಂಶ, ಶೂಲ, ಹೊಟ್ಟೆಯುಬ್ಬುಗಳನ್ನು ಕಳೆಯುವದು. ||೧೧೨|| (ಪ್ರಮಾಣ ಅರ್ಧ ತೊಲೆ.)

**ಪಿಪ್ಪಲ್ಯಾದಿ ಘೃತವನ್ನು ಹೇಳುತ್ತಾರೆ.**

**ಪಿಪ್ಪಲೀಂ ನಾಗರಂ ಪಾಠಾಂ ಶ್ವದಂಷ್ಟ್ರಾಂ ಚ ಪೃಥಕ್ ಪೃಥಕ್ ||**
**ಭಾಗಾಂಸ್ತ್ರಿಪಲಿಕಾನ್ ಕೃತ್ವಾ ಕಷಾಯಮುಪಕಲ್ಪಯೇತ್ ||೧೧೩||**
**ಗಂಡೀರಂ ಪಿಪ್ಪಲೀಮೂಲಂ ವ್ಯೋಷಂ ಚವ್ಯಂ ಚ ಚಿತ್ರಕಮ್ ||**
**ಪಿಷ್ಟ್ವಾ ಕಷಾಯೇ ವಿನಯೇತ್ ಪೂತೇ ದ್ವಿಪಲಿಕಂ ಪೃಥಕ್ ||೧೧೪||**
**ಪಲಾನಿ ಸರ್ಪಿಷಸ್ತಸ್ಮಿಂಶ್ಚತ್ವಾರಿಂಶತ್ ಪ್ರಯೋಜಯೇತ್ ||**
**ಚಾಂಗೇರೀಸ್ವರಸಂ ತುಲ್ಯಂ ಸರ್ಪಿಷಾ ದಧಿ ಷಡ್ಗುಣಮ್ ||೧೧೫||**
**ಮೃದ್ವಗ್ನಿನಾ ಸಾಧಯೇತ್ತತ್ ಸಿದ್ಧಂ ಸರ್ಪಿರ್ನಿಧಾಪಯೇತ್ ||**
**ತದಾಹಾರೇ ಪ್ರಯೋಕ್ತವ್ಯಂ ಪಾನೇ ಪ್ರಾಯೋಗಿಕೇ ವಿಧೌ ||೧೧೬||**
**ಗ್ರಹಣ್ಯರ್ಶೋವಿಕಾರಘ್ನಂ ಗುಲ್ಮಹೃದ್ರೋಗನಾಶನಮ್ ||**
**ಶೋಥಪ್ಲೀಹೋದರಾನಾಹ ಮೂತ್ರಕೃಚ್ಛ್ರಜ್ವರಾಪಹಮ್ ||೧೧೭||**
**ಕಾಸಹಿಕ್ಕಾರುಚಿಶ್ವಾಸಸೂದನಂ ಪಾರ್ಶ್ವಶೂಲನುತ್ ||**
**ಬಲಪುಷ್ಟಿಕರಂ ವರ್ಣ್ಯ ಮಗ್ನಿಸಂದೀಪನಂ ಪರಮ್ ||೧೧೮||**

**ಅರ್ಥ—** ಹಿಪ್ಪಲಿ, ಸುಂಠಿ, ಆಗಳಸುಂಠಿ, ನೆಗ್ಗಿಲು ಇವುಗಳನ್ನು ೧೨-೧೨ ತೊಲಿ ತಕ್ಕೊಂಡು ೬೪೦ ತೊಲಿ ನೀರು ಹಾಕಿ ಅವುಗಳ ಕಷಾಯ ಮಾಡಬೇಕು. ||೧೧೩|| ೪ ಉಳಿಯಲು ಅದನ್ನು ಸೋಸಿ ಅದರಲ್ಲಿ ಗಂಡೀರ (ಕಮಠ ಶಾಕ, ಅಥವಾ ಹಿಮಾಲಯದಲ್ಲಿ ದೊರೆಯುವ ಒಂದು ಗಡ್ಡಿ), ಮೋಡಿ, ಶುಂಠಿ, ಮೆಣಸು, ಹಿಪ್ಪಲಿ, ಚವಕ, ಚಿತ್ರಕ, ಇವುಗಳ ಕಲ್ಕವನ್ನು ೮-೮ ತೊಲಿ ಹಾಕಬೇಕು. ||೧೧೪|| ಮತ್ತು ಅದರಲ್ಲಿ ೧೬೦ ತೊಲಿ ತುಪ್ಪವನ್ನೂ ಅಷ್ಟೇ ಚಾಂಗೇರಿ [ಪುಳ್ಳಂಪರಚಿ] ರಸವನ್ನೂ ಆರು ಪಾಲು ಮೊಸರನ್ನು ಹಾಕಬೇಕು. ||೧೧೫||

ಸಣ್ಣಾಗಿ ಉರಿ ಹಚ್ಚಿ ಆ ಘೃತವನ್ನು ತಯಾರಿಸಿ ಇಡಬೇಕು. ಅದನ್ನು ದಿನಾಲು ಅನ್ನಪಾನಗಳಲ್ಲಿ ಉಪಯೋಗಿಸಬೇಕು. ||೧೧೬|| ಇದು ಸಂಗ್ರಹಣಿ, ಮೂಲವ್ಯಾಧಿ, ಗುಲ್ಮ, ಹೃದ್ರೋಗ, ಬಾವು, ಪ್ಲೀಹ, ಉದರ, ಹೊಟ್ಟೆಯುಬ್ಬು, ಮೂತ್ರಕೃಚ್ಛ್ರ, ಜ್ವರ ||೧೧೭|| ಕೆಮ್ಮು, ಬಿಕ್ಕು, ಅರುಚಿ, ಶ್ವಾಸ, ಪಾರ್ಶ್ವಶೂಲಗಳನ್ನು ಕಳೆಯುವದು. ಬಲ, ಪುಷ್ಟಿ, ವರ್ಣಗಳನ್ನೂ ಹೆಚ್ಚಿಸುವದು. ಅಗ್ನಿಯನ್ನು ಪ್ರದೀಪ್ತ ಮಾಡುವದು. (ಪ್ರಮಾಣ ಅರ್ಧ ತೊಲೆ,) (೧೧೮)

**ವಿಡ್ವಾತಕಫಪಿತ್ತಾನಾಮಾನ-ಲೋಮ್ಯೇಽಥ ನಿರ್ವೃತೇ ||**
**ಗುದೇಽರ್ಶಾಂಸಿ ಪ್ರಶಾಮ್ಯಂತಿ ಪಾವಕಶ್ಚಾಭಿವರ್ಧತೇ ||೧೧೯||**

**ಬರ್ಹಿತಿತ್ತಿರಿಲಾವಾನಾಂ ರಸಾನಮ್ಲಾನ್ ಸುಸಂಸ್ಕೃತಾನ್ ||**
**ದಕ್ಷಾಣಾಂ ವರ್ತಕಾನಾಂ ಚ ದದ್ಯಾದ್ವಿಡ್ವಾತಸಂಗ್ರಹೇ ||೧೨೦||**

**ಅರ್ಥ:**—ಮಲ, ವಾತ, ಕಫ, ಪಿತ್ತಗಳು ಅನುಲೋಮನವಾಗಿ ಗುದವು ನಿರ್ದುಷ್ಟವಾಗಲು ಮೂಲವ್ಯಾಧಿಗಳು ಶಾಂತವಾಗಿ ಅಗ್ನಿಯು ಪ್ರದೀಪ್ತವಾಗುವದು. ||೧೧೯|| ಮಲವಾತಗಳ ಬಂಧವಿದ್ದರೆ ನವಿಲು, ತಿತ್ತಿರಿ, ಲಾವ, ಕೋಳಿ, ವರ್ತಕ [ಕೆಂಡಲೆಹಕ್ಕಿ] ಗಳ ಮಾಂಸರಸವನ್ನು ಸಂಸ್ಕಾರಮಾಡಿ ಹುಳಿಹಾಕಿ ಕೊಡಬೇಕು. (೧೨೦)

**ಪಲ್ಲೆಗಳನ್ನು ಹೇಳುತ್ತಾರೆ.**

**ತ್ರಿವೃದ್ದಂತೀಪಲಾಶಾನಾಂ ಚಾಂಗೇರ್ಯಾಶ್ಚಿತ್ರಕಸ್ಯ ಚ ||**
**ಯಮಕೇ ಭರ್ಜಿತಂ ದದ್ಯಾಚ್ಛಾಕಂ ದಧಿಸಮನ್ವಿತಮ್ ||೧೨೧||**
**ಉಪೋದಿಕಾಂ ತಂಡುಲೀಯಂ ವೀರಾಂ ವಾಸ್ತೂಕಪಲ್ಲವಾನ್ ||**
**ಸುವರ್ಚಲಾಂ ಸಲೋಣೀಕಾಂ ಯವಶಾಕಮವಲ್ಗುಜಮ್ ||೧೨೨||**
**ಕಾಕಮಾಚೀಂ ರುಹಾಪತ್ರಾಂ ಮಹಾಪತ್ರೀಂ ತಥಾಮ್ಲಿಕಾಮ್ ||**
**ಜೀವಂತೀಂ ಶಟಿಶಾಕಂ ಚ ಶಾಕಂ ಗೃಂಜನಕಸ್ಯ ಚ ||೧೨೩||**
**ದಧಿದಾಡಿಮಸಿದ್ಧಾನಿ ಯಮಕೈರ್ಭರ್ಜಿತಾನಿ ಚ ||**
**ಧಾನ್ಯನಾಗರಯುಕ್ತಾನಿ ಶಾಕಾನ್ಯೇತಾನಿ ದಾಪಯೇತ್ ||೧೨೪||**

**ಅರ್ಥ**:— ನಿಶೋತ್ತರ, ದಂತೀ, ಮುತ್ತಲು. ಚಾಂಗೇರಿ, ಚಿತ್ರಕ, ಇವುಗಳ ಎಲೆಗಳನ್ನು ತುಪ್ಪ ಎಳ್ಳೆಣ್ಣೆಗಳಲ್ಲಿ ಕರಿದು ಪಲ್ಯೆ ಮಾಡಿ ಮೊಸರು ಹಾಕಿ ಕೊಡಬೇಕು. ||೧೨೧|| ಉಪೋದಿಕಾ [ ಬಸಳೆ], ಕಿರಕಸಾಲಿ, ಮೂರೆಲೆಹೊನ್ನೆ, ಚಕ್ಕೋತ, ಸುವರ್ಚಲಾ [ಸೂರ್ಯಮುಖಿ ], ಲೋಣಿಕೆ [ಗೋಳೀಸೊಪ್ಪು] ಯವಶಾಕ [ಬಿಳೇಚಕ್ಕೋತ], ಬಾವಂಚಿ, ||೧೨೨|| ಕಾಕಮಾಚಿ [ಕಾಕೇಗಿಡ] ಅಮೃತಬಳ್ಳಿ, ದೊಡ್ಡನೇರಲ, ಹುಣಸಿ, ಶೀಹಾಲಿ, ಕಚೋರಿ, ಗೃಂಜನಕ [ಗಜ್ಜರಿ] ||೧೨೩|| ಇವುಗಳ ಎಲೆಗಳನ್ನು ಮೊಸರು ಮತ್ತು ದಾಳಿಂಬದ ರಸಗಳಲ್ಲಿ ಕುದಿಸಿ ತುಪ್ಪ ಎಳ್ಳೆಣ್ಣೆಗಳ ಒಗ್ಗರಣೆ ಹಾಕಿ ಪಲ್ಯೆಮಾಡಿ ಹವೀಜ, ಸುಂಠಿಗಳನ್ನು ಕೂಡಿಸಿ ಕೊಡಬೇಕು. (೧೨೪)

**ಗೋಧಾಲೋಪಾಕಮಾರ್ಜಾರಶ್ವಾವಿದುಷ್ಟ್ರಗವಾಮಪಿ ||**
**ಕೂರ್ಮಶಲ್ಲಕಯೋಶ್ಚೈವ ಸಾಧಯೇಚ್ಛಾಕವದ್ರಸಾನ್ ||೧೨೫||**
**ರಕ್ತಶಾಲ್ಯೋದನಂ ದದ್ಯಾದ್ರಸೈಸ್ತೈರ್ವಾತಶಾಂತಯೇ ||**
**ಜ್ಞಾತ್ವಾ ವಾತೋಲ್ಬಣಂ ರೂಕ್ಷಂ ಮಂದಾಗ್ನಿಂ**
**ಗುದಜಾತುರಂ ||೧೨೬||**

**ಮದಿರಾಂ ಶರ್ಕರಾಜಾತಾಂ ಸೀಧುಂ ತಕ್ರಂ ತುಷೋದಕಮ್ ||**
**ಅರಿಷ್ಟಂ ದಧಿಮಂಡಂ ವಾ ಶೃತಂ ವಾ ಶಿಶಿರಂ ಜಲಮ್ ||೧೨೭||**
**ಕಂಟಕಾರ್ಯಾ ಶೃತಂ ವಾಪಿ ಶೃತಂ ನಾಗರಧಾನ್ಯಕೈಃ ||**
**ಅನುಪಾನಂ ಭಿಷಗ್ದದ್ಯಾದ್**
**ವಾತವರ್ಚೋಽನುಲೋಮನಮ್ ||೧೨೮||**

**ಉದಾವರ್ತಪರೀತಾ ಯೇ ಯೇ ಚಾತ್ಯರ್ಥಂ ವಿರೂಕ್ಷಿತಾಃ ||**
**ವಿಲೋಮವಾತಾಃ ಶೂಲಾರ್ತಾಸ್ತೇಷ್ವಿಷ್ಟಮನುವಾಸನಮ್ ||೧೨೯||**

**ಅರ್ಥ**:— ಉಡ, ಲೋಪಾಕ [ಒಂದುತರದ ನರಿ], ಬೆಕ್ಕು, ಮುಳ್ಳುಹಂದಿ, ಒಂಟೆ, ಆಕಳು, ಆಮೆ, ಸಣ್ಣಮುಳ್ಳುಹಂದಿ ಇವುಗಳ ಮಾಂಸರಸವನ್ನು ಮೇಲೆ ಹೇಳಿದ ಪಲ್ಯೆಗಳಂತೆ [ಮೊಸರು ದಾಳಿಂಬಗಳಲ್ಲಿ ಕುದಿಸಿ ತುಪ್ಪ ತೈಲಗಳ ಒಗ್ಗರಣೆ ಕೊಟ್ಟು ಹವೀಜ ಸುಂಠಿಗಳನ್ನು ಹಾಕಿ ] ಸಿದ್ಧಮಾಡಿ ಕೊಡಬೇಕು. ||೧೨೫|| ಮೂಲವ್ಯಾಧಿ ರೋಗಿಯ

ಅಗ್ನಿಯು ಮಂದವಿದ್ದು ರುಕ್ಷತೆ ಮತ್ತು ವಾತವು ಹೆಚ್ಚಿದ್ದರೆ ವಾತಶಮನಕ್ಕಾಗಿ ಆ ಮಾಂಸರಸಗಳಿಂದ ಕೂಡಿದ ರಕ್ತ ಶಾಲಿಯ ಅನ್ನವನ್ನು ಕೊಡಬೇಕು. ||೧೨೭|| ಸಕ್ಕರೆಮದ್ಯ, [ಸೀಧು] ಕಬ್ಬಿನಮದ್ಯ, ಮಜ್ಜಿಗೆ, ಹೊಟ್ಟು ತೆಗೆಯದ ಜವೆಯಿಂದ ಮಾಡಿದ ಗಂಜಿ, ಮೊಸರಿನ ಮೇಲಿನ ನೀರು ಅಥವಾ ಕುದಿಸಿ ಆರಿಸಿದ ನೀರು, ನೆಲಗುಳ್ಳ, ಬೇರುಹಾಕಿ ಕುದಿಸಿದ ನೀರು ಅಥವಾ ಸುಂಠಿ ಹವೀಜ ಹಾಕಿ ಕುದಿಸಿದ ನೀರನ್ನು ವೈದ್ಯನು ಅನುಪಾನಕ್ಕಾಗಿ ಕೊಡಬೇಕು. ಅದು ಮಲವಾತಗಳ ಅನುಲೋಮನ ಮಾಡುವದು. ||೧೨೮|| ಉದಾವರ್ತವುಳ್ಳವರಿಗೂ ಬಹಳ ರುಕ್ಷರಿಗೂ ವಾತದ ಬಂಧವುಳ್ಳವರಿಗೂ ಶೂಲದಿಂದ ಪೀಡಿತರಾದವರಿಗೂ ಅನುವಾಸನಬಸ್ತಿಯು ಹಿತಕರವು. ||೧೨೯||

**ಅನುವಾಸನ ದ್ರವ್ಯಗಳನ್ನು ಹೇಳುತ್ತಾರೆ.**

**ಪಿಪ್ಪಲೀಂ ಮದನಂ ಬಿಲ್ವಂ ಶತಾಹ್ವಾಂ ಮಧುಕಂ ವಚಾಮ್ ||**
**ಕುಷ್ಠಂ ಶಟೀಂ ಪುಷ್ಕರಾಖ್ಯಂ ಚಿತ್ರಕಂ ದೇವದಾರು ಚ ||೧೩೦||**

**ಪಿಷ್ಟ್ವಾ ತೈಲಂ ವಿಪಕ್ತವ್ಯಂ ಪಯಸಾ ದ್ವಿಗುಣೇನ ಚ ||**
**ಅರ್ಶಸಾಂ ಮೂಢವಾತಾನಾಂ ತಚ್ಛ್ರೇಷ್ಠಮನುವಾಸನಮ್ ||೧೩೧||**

**ಗುದನಿಃಸರಣಂ ಶೂಲಂ ಮೂತ್ರಕೃಚ್ಛ್ರಂ ಪ್ರವಾಹಿಕಾಮ್ ||**
**ಕಟ್ಯೂರುಪೃಷ್ಠದೌರ್ಬಲ್ಯಮಾನಾಹಂ ವಂಕ್ಷಣಾಶ್ರಯಮ್ ||೧೩೨||**

**ಪಿಚ್ಛಾಸ್ರಾವಂ ಗುದೇ ಶೋಫಂ ವಾತವರ್ಚೋವಿನಿಗ್ರಹಮ್ ||**
**ಉತ್ಥಾನಂ ಬಹುಶೋ ಯಚ್ಚ**
**ಜಯೇತ್ತಚ್ಚಾನುವಾಸನಾತ್ ||೧೩೩||**

**ಅರ್ಥ:—** ಹಿಪ್ಪಲಿ, ಮಂಗಾರೇ ಕಾಯಿ, ಬಿಲ್ವ, ಬಡೇಸೋಪು, ಜ್ಯೇಷ್ಠಮಧು ಬಜೆ, ಕೋಷ್ಠ, ಕಚೋರ, ಪುಷ್ಕರಮೂಲ, ಚಿತ್ರಕ, ದೇವದಾರು ||೧೩೦|| ಇವುಗಳ ಕಲ್ಕವನ್ನು ತೈಲದ ೪ ಭಾಗ, ಹಾಲು ತೈಲದ ೨ ಭಾಗ ಹಾಕಿ ತೈಲವನ್ನು ಸಿದ್ಧಮಾಡಬೇಕು. ಅದು ವಾತದ ಬಂಧವುಳ್ಳ ಮೂಲವ್ಯಾಧಿಗಳಿಗೆ ಒಳ್ಳೇ ಅನುವಾಸನವಾಗಿದೆ. ||೧೩೧|| ಈ ಅನುವಾಸನ ಬಸ್ತಿಯಿಂದ ಗುದಭ್ರಂಶ, ಶೂಲ, ಮೂತ್ರಕೃಚ್ಛ್ರ,

ಪ್ರವಾಹಿಕೆ, ಟೊಂಕ ತೊಡೆ ಬೆನ್ನುಗಳ ಅಶಕ್ತಿ, ಗೆಜ್ಜೆಯುಬ್ಬೋಣ, ||೧೩೨|| ಆಮ, ಗುದದಲ್ಲಿಯ ಬಾವು, ಮಲವಾತಗಳ ಬಂಧ, ಆಗಾಗ್ಗೆ ಶೌಚಕ್ಕೆ ಹೋಗೋಣ ಇವೆಲ್ಲ ಹೋಗುವವು. (೧೩೩)

ಲೇಪವನ್ನು ಹೇಳುತ್ತಾನೆ.

**ಅನುವಾಸನಿಕೈಃ ಪಿಷ್ಟೈಃ ಸುಖೋಷ್ಣೈಃ ಸ್ನೇಹಸಂಯುತೈಃ ||**
**ದವ್ಯಾರ್ತೈರೌಷಧೈರ್ದೇಹ್ಯಾಃ ಸ್ತಬ್ಧಾಃ ಶೂನಾ**
**ಗುದೇರುಹಾಃ ||೧೩೪||**

**ದಿಗ್ಧಾಸ್ತೈಃ ಪ್ರಸ್ರವನ್ತ್ಯಾಶು ಶ್ಲೇಷ್ಮಪಿಚ್ಛಾಂ ಸಶೋಣಿತಾಮ್ ||**
**ಕಂಡೂಃ ಸ್ತಂಭಃ ಸರುಕ್ ಶೋಫಃ ಸ್ರುತಾನಾಂ**
**ವಿನಿವರ್ತತೇ ||೧೩೫||**

**ಅರ್ಥ:**— ಅನುವಾಸನ ಬಸ್ತಿಗಾಗಿ ಹೇಳಿದ ಆ ದ್ರವ್ಯಗಳನ್ನು ನೀರಿನಲ್ಲಿ ಅರೆದು ಸ್ನೇಹ ಕೂಡಿಸಿ ಬೆಚ್ಚಗೆ ಮಾಡಿ ಸ್ತಬ್ಧ ಮತ್ತು ಬಾವು ಬಂದ ಮೂಲವ್ಯಾಧಿಗಳಿಗೆ ಸವುಟಿನಿಂದ ಲೇಪ ಮಾಡಬೇಕು. ||೧೩೪|| ಅವುಗಳ ಲೇಪದಿಂದ ತೀವ್ರವಾಗಿ ರಕ್ತ ಮತ್ತು ಜಿಗಟು ಕಫಗಳು ಸೋರುವವು. ಅವು ಸೋರಿ ಹೋಗಲು ತುರಿಕೆ, ಶಟೆ, ಶೂಲ, ಬಾವುಗಳು ಹೋಗುವವು. (೧೩೫)

ನಿರೂಹಬಸ್ತಿಯನ್ನು ಹೇಳುತ್ತಾರೆ.

**ನಿರೂಹಂ ವಾ ಪ್ರಯುಂಜೀತ ಸಕ್ಷೀರಂ ದಾಶಮೂಲಿಕಮ್ ||**
**ಸಮೂತ್ರಸ್ನೇಹಲವಣಂ ಕಲ್ಕೈರ್ಯುಕ್ತಂ ಫಲಾದಿಭಿಃ ||೧೩೬||**

**ಅರ್ಥ:**— ದಶಮೂಲ ಕಷಾಯದಲ್ಲಿ ಹಾಲು, ಗೋಮೂತ್ರ, ಸ್ನೇಹ, ಲವಣ, ಮಂಗಾರೆಕಾಯಿ ಮುಂತಾದವುಗಳ ಕಲ್ಕವನ್ನು ಹಾಕಿ ನಿರೂಹ ಬಸ್ತಿಯನ್ನು ಕೊಡಬೇಕು. (೧೩೬)

ಅಭಯಾರಿಷ್ಟವನ್ನು ಹೇಳುತ್ತಾರೆ.

**ಹರೀತಕೀನಾಂ ಪ್ರಸ್ಥಾರ್ಧಂ ಪ್ರಸ್ಥಮಾಮಲಕಸ್ಯ ಚ ||**
**ಸ್ಯಾತ್ ಕಪಿತ್ಥಾದ್ದಶಪಲಂ ತತೋಽರ್ಧೇನೇಂದ್ರವಾರುಣೀ ||೧೩೭||**

ವಿಡಂಗಂ ಪಿಪ್ಪಲೀ ಲೋಧ್ರಂ ಮರಿಚಂ ಸೈಲವಾಲುಕಮ್ ||
ದ್ವಿಪಲಾಂಶಂ ಜಲಸ್ಯೈತಚ್ಚತುರ್ದ್ರೋಣೇ ವಿಪಾಚಯೇತ್ ||೧೩೮||

ದ್ರೋಣಶೇಷೇ ರಸೇ ತಸ್ಮಿನ್ ಪೂತೇ ಶೀತೇ ಸಮಾವಪೇತ್ ||
ಗುಡಸ್ಯ ದ್ವಿಶತಂ ತಿಷ್ಠೇತ್ ತತ್ಪಕ್ಷಂ ಘೃತಭಾಜನೇ ||೧೩೯||

ಪಕ್ಷಾದೂರ್ಧ್ವಂ ಭವೇತ್ ಪೇಯಾ ತತೋ ಮಾತ್ರಾ
ಯಥಾಬಲಮ್

ಅಸ್ಯಾಭ್ಯಾಸಾದರಿಷ್ಟಸ್ಯ ಗುದಜಾ ಯಾಂತಿ ಸಂಕ್ಷಯಮ್ ||೧೪೦||

ಗ್ರಹಣೀಪಾಂಡುಹೃದ್ರೋಗಪ್ಲೀಹಗುಲ್ಮೋದರಾಪಹಃ ||
ಕುಷ್ಠಶೋಥಾರುಚಿಹರೋ ಬಲವರ್ಣಾಗ್ನಿವರ್ಧನಃ ||೧೪೧||

ಸಿದ್ಧೋಽಯಮಭಯಾರಿಷ್ಟಃ ಕಾಮಲಾಶ್ವಿತ್ರನಾಶನಃ ||
ಕ್ರಿಮಿಗ್ರಂಥ್ಯರ್ಬುದವ್ಯಙ್ಗರಾಜಯಕ್ಷ್ಮಜ್ವರಾಂತಕೃತ್ ||೧೪೨||

**ಅರ್ಥಃ**— ಬೀಜ ತೆಗೆದ ಅಣಲೇಕಾಯಿ ೩೨ ತೊಲಿ, ನೆಲ್ಲೀಕಾಯಿ ೬೪ ತೊಲಿ, ಬೆಳವಲ ತಿಳಲು ೪೦ ತೊಲಿ, ಕಾಡಕಸಡಿ ೨೦ ತೊಲಿ, ||೧೩೭|| ವಾವಡಿಂಗ, ಹಿಪ್ಪಲಿ, ಲೋಧ, ಮೆಣಸು, ಏಲವಾಲಕ (ಸುರ ಸುರಿಕೆಸವತೀ ಜಾತಿ) ಇವುಗಳನ್ನು ೮-೮ ತೊಲಿ ತಕ್ಕೊಂಡು ೮೧೯೨ ತೊಲಿ ನೀರಿನಲ್ಲಿ ಕುದಿಸಬೇಕು. ||೧೩೮|| ¼ ಉಳಿಯಲು ಅದನ್ನು ಸೋಸಿ ಆರಲು ಅದರಲ್ಲಿ ಬೆಲ್ಲ ೮೦೦ ತೊಲಿ ಹಾಕಿ ತುಪ್ಪದ ಕೊಡದಲ್ಲಿ ೧೫ ದಿವಸ ಇಡಬೇಕು. ||೧೩೯|| ೧೫ ದಿವಸಗಳ ನಂತರ ತಮ್ಮ ಶಕ್ತಿಗೆ ಯೋಗ್ಯವಾದ ಪ್ರಮಾಣದಿಂದ ಕುಡಿಯಬೇಕು. ಈ ಅಭಯಾರಿಷ್ಟವನ್ನು ನಿತ್ಯ ತಕ್ಕೊಳ್ಳುವದರಿಂದ ಮೂಲವ್ಯಾಧಿಗಳು ನಾಶವಾಗುವವು. ||೧೪೦|| ಸಂಗ್ರಹಣಿ, ಪಾಂಡುರೋಗ, ಹೃದ್ರೋಗ, ಪ್ಲೀಹ, ಗುಲ್ಮ, ಉದರ, ಕುಷ್ಠ, ಬಾವು, ಅರುಚಿಗಳನ್ನು ಕಳೆಯುವದು. ಶಕ್ತಿ, ಬಣ್ಣ ಅಗ್ನಿಗಳನ್ನು ಹೆಚ್ಚಿಸುವದು. ||೧೪೧|| ಈ ಅಭಯಾರಿಷ್ಟವು ಕಾಮಲೆ, ಶ್ವಿತ್ರ, ಕೃಮಿ ಗ್ರಂಥಿ, ಅರ್ಬುದ, ವ್ಯಂಗ, ಕ್ಷಯ, ಜ್ವರಗಳನ್ನು ನಿಶ್ಚಿತವಾಗಿ ನಾಶ ಮಾಡುವದು. (೧೪೨)

ದಂತ್ಯರಿಷ್ಟವನ್ನು ಹೇಳುತ್ತಾರೆ.

**ದಂತೀಚಿತ್ರಕಮೂಲಾನಾಮುಭಯೋಃ ಪಂಚಮೂಲಯೋಃ ||**
**ಭಾಗಾನ್ ಪಲಾಂಶಾನಾಪೋಥ್ಯ ಜಲದ್ರೋಣೇ**
**ವಿಪಾಚಯೇತ್ ||೧೪೩||**

**ತ್ರಿಪಲಂ ತ್ರಿಫಲಾಯಾಶ್ಚ ದಲಾನಾಂ ತತ್ರ ದಾಪಯೇತ್ ||**
**ರಸೇ ಚತುರ್ಥಶೇಷೇ ತು ಪೂತೇ ಶೀತೇ ಸಮಾವಪೇತ್ ||೧೪೪||**
**ತುಲಾಂ ಗುಡಸ್ಯ ತತ್ ತಿಷ್ಠೇನ್ಮಾಸಾರ್ಧಂ ಘೃತಭಾಜನೇ ||**
**ತನ್ಮಾತ್ರಯಾ ಪಿಬನ್ನಿತ್ಯಮರ್ಶೋಭ್ಯೋ ವಿಪ್ರಮುಚ್ಯತೇ ||೧೪೫||**
**ಗ್ರಹಣೀಪಾಂಡುರೋಗಘ್ನಂ ವಾತವರ್ಚೋನುಲೋಮನಮ್ ||**
**ದೀಪನಂ ಚಾರುಚಿಘ್ನಂ ಚ ದಂತ್ಯರಿಷ್ಟಮಿಮಂ ವಿದುಃ ||೧೪೬||**

**ಅರ್ಥಃ**— ದಂತೀಮೂಲ, ಚಿತ್ರಕಮೂಲ, ದಶಮೂಲ, ಮತ್ತು ಬೀಜ ತೆಗೆದ ತ್ರಿಫಳೆ, ಇವುಗಳನ್ನು ಬೇರೆ ಬೇರೆಯಾಗಿ ೪-೪ ತೊಲಿ ತಕ್ಕೊಂಡು ಒಜ್ಜೆ ೨೦೪೮ ತೊಲಿ ನೀರಿನಲ್ಲಿ ಕುದಿಸಬೇಕು. ||೧೪೩|| ¼ ಉಳಿಯಲು ಸೋಸಿ ಆರಿಸಿ. ||೧೪೪|| ಅದರಲ್ಲಿ ೪೦೦ ತೊಲಿ ಬೆಲ್ಲವನ್ನು ಹಾಕಿ ತುಪ್ಪದ ಕೊಡದಲ್ಲಿ ೧೫ ದಿವಸ ಇಡಬೇಕು. ಅದನ್ನು ದಿನಾಲು ಯೋಗ್ಯ ಪ್ರಮಾಣದಿಂದ ಕುಡಿಯುವವನು ಮೂಲವ್ಯಾಧಿಯಿಂದ ಮುಕ್ತನಾಗುತ್ತಾನೆ. ||೧೪೫|| ಈ ದಂತ್ಯರಿಷ್ಟವು ಸಂಗ್ರಹಣಿ, ಪಾಂಡು ರೋಗ, ಅರುಚಿನಾಶಕವೂ ಮಲವಾತಗಳ ಅನುಲೋಮಕರವೂ ದೀಪಕವೂ ಆಗಿವೆಯೆಂದು ವೈದ್ಯರು ತಿಳಿದಿದ್ದಾರೆ. (೧೪೬)

ಹರೀತಕೀ ಫಲಾರಿಷ್ಟವನ್ನು ಹೇಳುತ್ತಾರೆ.

**ಹರೀತಕೀಫಲಪ್ರಸ್ಥಂ ಪ್ರಸ್ಥಮಾಮಲಕಸ್ಯ ಚ ||**
**ವಿಶಾಲಾಯಾ ದಧಿತ್ಥಸ್ಯ ಪಾಠಾಚಿತ್ರಕಮೂಲಯೋಃ ||೧೪೭||**
**ದ್ವೇ ದ್ವೇ ಪಲೇ ಸಮಾಪೋಥ್ಯ ದ್ವಿದ್ರೋಣೇ ಸಾಧಯೇದಪಾಮ್||**
**ಪಾದಾವಶೇಷೇ ಪೂತೇ ಚ ರಸೇ ತಸ್ಮಿನ್ ಪ್ರದಾಪಯೇತ್ ||೧೪೮||**
**ಗುಡಸ್ಯೈಕಾಂ ತುಲಾಂ ವೈದ್ಯಃ ಸ್ಥಾಪ್ಯಂ ತದ್ ಘೃತಭಾಜನೇ ||**
**ಪಕ್ಷಸ್ಥಿತಂ ಪಿಬೇದೇನಂ ಗ್ರಹಣ್ಯರ್ಶೋವಿಕಾರವಾನ್ ||೧೪೯||**
**ಹೃತ್ಪಾಂಡುರೋಗಂ ಪ್ಲೀಹಾನಂ ಕಾಮಲಾಂ ವಿಷಮಜ್ವರಮ್ ||**
**ವರ್ಚೋಮೂತ್ರಾನಿಲಕೃತಾನ್ ವಿಬಂಧಾನಗ್ನಿಮಾರ್ದವಮ್||೧೫೦||**

**ಕಾಸಂ ಗುಲ್ಮಮುದಾವರ್ತಂ ಫಲಾರಿಷ್ಟೋ ವ್ಯಪೋಹತಿ ||**
**ಅಗ್ನಿಸಂದೀಪನೋ ಹ್ಯೇಷ ಕೃಷ್ಣಾತ್ರೇಯೇಣ ಭಾಷಿತಃ ||೧೫೧||**

**ಅರ್ಥ:—** ಬೀಜ ತೆಗೆದ ಅಣಲೇಕಾಯಿ ೬ಳ ತೊಲಿ, ನೆಲ್ಲೀಕಾಯಿ ೬ಳ ತೊಲಿ, ಕಾಡಕವಡಿ ಬೆಳವಲ ಅಗಳಸುಂಠಿ ಚಿತ್ರಕಮೂಲ ||೧೪೭|| ಇವುಗಳನ್ನು ೮-೮ ತೊಲಿ ತಕ್ಕೊಂಡು ಜಜ್ಜಿ ೪೦೯೬ ತೊಲಿ ನೀರಿನಲ್ಲಿ ಕುದಿಸಬೇಕು. ¼ ಉಳಿಯಲು ಸೋಸಿ ಆ ರಸದಲ್ಲಿ ||೧೪೮|| ೪೦೦ ತೊಲಿ ಬೆಲ್ಲವನ್ನು ಹಾಕಿ ವೈದ್ಯನು ಅದನ್ನು ತುಪ್ಪದ ಕೊಡದಲ್ಲಿ ಇಡಬೇಕು. ೧೫ ದಿವಸಗಳ ನಂತರ ಇದನ್ನು ಸಂಗ್ರಹಣಿ ಮೂಲವ್ಯಾಧಿ ವಿಕಾರವುಳ್ಳವರು ಕುಡಿಯಬೇಕು. ||೧೪೯|| ಈ ಫಲಾರಿಷ್ಟವು ಹೃದ್ರೋಗ ಪಾಂಡುರೋಗ, ಪ್ಲೀಹ, ಕಾಮಲೆ, ವಿಷಮಜ್ವರ, ಮಲಮೂತ್ರವಾತಗಳ ಪ್ರತಿಬಂಧ, ಅಗ್ನಿಮಾಂದ್ಯ, ||೧೫೦|| ಕೆಮ್ಮು, ಗುಲ್ಮ ಉದಾವರ್ತಗಳ ನಾಶಕವೂ ಅಗ್ನಿದೀಪಕವೂ ಆಗಿದೆಯೆಂದು ಕೃಷ್ಣಾತ್ರೇಯರು ಹೇಳಿದ್ದಾರೆ. (೧೫೧)

ತರ್ಕರಾರಿಷ್ಟವನ್ನು ಹೇಳುತ್ತಾರೆ.

**ದುಂರಾಲಭಾಯಾಃ ಪ್ರಸ್ಥಂ ತು ಚಿತ್ರಕಸ್ಯ ವೃಷಸ್ಯ ಚ ||**
**ಪಥ್ಯಾಮಲಕಯೋಶ್ಚೈವ ಪಾಠಾಯಾ ನಾಗರಸ್ಯ ಚ ||೧೫೨||**

**ದನ್ತ್ಯಾಶ್ಚ ದ್ವಿಪಲಾನ್ ಭಾಗಾನ್ ಜಲದ್ರೋಣೇ ವಿಪಾಚಯೇತ್ ||**
**ಪಾದಾವಶೇಷೇ ಪೂತೇ ಚ ಸುಶೀತೇ ಶರ್ಕರಾಶತಮ್ ||೧೫೩||**

**ದತ್ವಾ ಕುಂಭೇ ದೃಢೇ ಸ್ಥಾಪ್ಯಂ ಮಾಸಾರ್ಧಂ ಘೃತಭಾವಿತೇ ||**
**ಪ್ರಲಿಪ್ತೇ ಪಿಪ್ಪಲೀ ಚವ್ಯಪ್ರಿಯಂಗುಕ್ಷೌದ್ರಸರ್ಪಿಷಾ ||೧೫೪||**

**ತಸ್ಯ ಮಾತ್ರಾಂ ಪಿಬೇತ್ ಕಾಲೇ ಶಾರ್ಕರಸ್ಯ ಯಥಾಬಲಮ್ ||**
**ಅರ್ಶಾಂಸಿ ಗ್ರಹಣೀದೋಷಮುದಾವರ್ತಮರೋಚಕಮ್ ||೧೫೫||**

**ಶಕೃನ್ಮೂತ್ರಾನಿಲೋದ್ಗಾರವಿಬಂಧಾನಗ್ನಿಮಾರ್ದವಮ್ ||**
**ಹೃದ್ರೋಗಂ ಪಾಂಡುರೋಗಂ ಚ ಸರ್ವಮೇತೇನ**
**ಸಾಧಯೇತ್ ||೧೫೬||**

ಅರ್ಥ:— ನೆಲಇಂಗಳ ೬೪ ತೊಲಿ, ಚಿತ್ರಕ, ಅಡಸಲ, ಅಣಲೆ, ನೆಲ್ಲಿ, ಅಗಳಸುಂಠಿ, ಸುಂಠಿ, ||೧೫೨|| ದಂತೀಮೂಲ ಇವುಗಳ ಕಲ್ಕವನ್ನು ೮-೮ ತೊಲಿ ತಕ್ಕೊಂಡು ೨೦೪೮ ತೊಲಿ ನೀರಿನಲ್ಲಿ ಕುದಿಸಬೇಕು. ¼ ಉಳಿಯಲು ಆರಿಸಿ ೪೦೦ ತೊಲಿ ಸಕ್ಕರೆ ಹಾಕಿ. ||೧೫೩|| ಅವನ್ನು ತುಪ್ಪದ ಭಾವನೆ ಕೊಟ್ಟು, ಒಳಗೆ ಹಿಪ್ಪಲಿ, ಚವಕ, ಪ್ರಿಯಂಗು ಚೂರ್ಣಗಳಲ್ಲಿ ಕಲಿಸಿದ ತುಪ್ಪ ಜೇನತುಪ್ಪಗಳ ಲೇಪಮಾಡಿದ, ಗಟ್ಟಿಯಾದ ಕೊಡದಲ್ಲಿ ಹಾಕಿ ೧೫ ದಿವಸ ಇಡಬೇಕು. ||೧೫೪|| ಈ ಶರ್ಕರಾರಿಷ್ಟವನ್ನು ಯೋಗ್ಯಕಾಲದಲ್ಲಿ ತಮ್ಮ ಶಕ್ತಿಗೆ ತಕ್ಕ ಪ್ರಮಾಣದಿಂದ ಕುಡಿಯಬೇಕು. ಇದು ಮೂಲವ್ಯಾಧಿ, ಸಂಗ್ರಹಣಿ, ಉದಾವರ್ತ ಅರುಚಿ, ||೧೫೫|| ಮಲಮೂತ್ರ ವಾತ ತೇಗುಗಳ ಪ್ರತಿಬಂಧ, ಅಗ್ನಿಮಾಂದ್ಯ, ಹೃದ್ರೋಗ, ಪಾಂಡುರೋಗ ಇವುಗಳನ್ನೆಲ್ಲ ಕಳೆಯುವದು. (೧೫೬)

ಕನಕಾರಿಷ್ಟವನ್ನು ಹೇಳುತ್ತಾರೆ.

ನವಸ್ಯಾಮಲಸ್ಯೈಕಾಂ ಕುರ್ಯಾಜ್ಜರ್ಜರಿತಾಂ ತುಲಾಮ್ ||
ಕುಡವಾಂಶಾಶ್ಚ ಪಿಪ್ಪಲ್ಯಾ ವಿಡಂಗಂ ಮರಿಚಂ ತಥಾ ||೧೫೭||

ಪಾಠಾಂ ಚ ಪಿಪ್ಪಲೀ ಮೂಲಂ ಕ್ರಮುಕಂ ಚವ್ಯಚಿತ್ರಕೌ ||
ಮಂಜಿಷ್ಠೈಲಾಲುಕೇ ಲೋಧ್ರಂ ಪಲಿಕಾನ್ಯುಪಕಲ್ಪಯೇತ್ ||೧೫೮||

ಕುಷ್ಠಂ ದಾರುಹರಿದ್ರಾ ಚ ಸುರಾಹ್ವಂ ಸಾರಿವಾದ್ವಯಮ್ ||
ಇಂದ್ರಾಹ್ವಂ ಭದ್ರಮುಸ್ತಂ ಚ
ಕುರ್ಯಾದರ್ಧಪಲೋನ್ಮಿತಾನ್ ||೧೫೯||

ಚತ್ವಾರಿ ನಾಗಪುಷ್ಪಸ್ಯ ಪಲಾನ್ಯಭಿನವಸ್ಯ ಚ ||
ದ್ರೋಣಾಭ್ಯಾಮಂಭಸೋ ದ್ವಾಭ್ಯಾಂ ಸಾಧಯಿತ್ವಾ
ಽವತಾರಯೇತ್ ||೧೬೦||

ದ್ರೋಣಾವಶೇಷೇ ಪೂತೇ ಚ ಶೀತೇ ತಸ್ಮಿನ್ ಸಮಾವಪೇತ್ ||
ಮೃದ್ವೀಕಾದ್ವ್ಯಾಢಕರಸಂ ಶೀತಂ
ನಿರ್ಯೂಹಸಂಮಿತಮ್ ||೧೬೧||
ಶರ್ಕರಾಯಾಶ್ಚ ಭಿನ್ನಾಯಾ ದದ್ಯಾದ್ ದ್ವಿಗುಣಿತಾಂ ತುಲಾಮ್ ||
ಕುಸುಮಸ್ಯ ರಸಸ್ಯೈಕಮರ್ಧಪ್ರಸ್ಥಂ ನವಸ್ಯ ಚ ||೧೬೨||

ತ್ವಗೇಲಾಪ್ಲವಪತ್ರಾಂಬುಸೇವ್ಯಾಕ್ರಮುಕಕೇಸರಾನ್ ॥
ಚೂರ್ಣಯಿತ್ವಾ ಚ ಮತಿಮಾನ್ ಕಾರ್ಷಿಕಾನತ್ರ ಚಾವಪೇತ್ ॥೧೬೩॥

ತತ್ ಸರ್ವಂ ಸ್ಥಾಪಯೇತ್ ಪಕ್ಷಂ ಸುಚೌಕ್ಷೇ ಘೃತಭಾಜನೇ ॥
ಪ್ರಲಿಪ್ತೇ ಸರ್ಪಿಷಾ ಕಿಂಚಿಚ್ಛರ್ಕರಾಗುಡಧೂಪಿತೇ ॥೧೬೪॥

ಪಕ್ಷಾದೂರ್ಧ್ವಮರಿಷ್ಟೋಽಯಂ ಕನಕೋ ನಾಮ ವಿಶ್ರುತಃ ॥
ಪೇಯಃ ಸ್ವಾದುರಸೋ ಹೃದ್ಯಃ ಪ್ರಯೋಗಾದ್ಭಕ್ತರೋಚನಃ॥೧೬೫॥

ಅರ್ಶಾಂಸಿ ಗ್ರಹಣೀದೋಷಮಾನಾಹಮುದರಂ ಜ್ವರಮ್ ॥
ಹೃದ್ರೋಗಂ ಪಾಂಡುತಾಂ ಶೋಥಂ ಗುಲ್ಮಂ
ವರ್ಚೋಽವಿನಿಗ್ರಹಮ್ ॥೧೬೬॥

ಕಾಸಂ ಶ್ಲೇಷ್ಮಾಮಯಾಂಶ್ಚೋಗ್ರಾನ್ ಸರ್ವಾನೇವಾಪಕರ್ಷತಿ ॥
ವಲೀಪಲಿತಖಾಲಿತ್ಯಂ ದೋಷಜಸ್ತ್ವಪ್ರಹತಿ ॥೧೬೭॥

**ಅರ್ಥಃ**— ಜಜ್ಜಿದ ಹೊಸನೆಲ್ಲೀಕಾಯಿ ೪೦೦ ತೊಲಿ, ಹಿಪ್ಪಲಿ, ॥೧೫೭॥ ಹೊಸನಾಗಕೇಸರ ೧೬ ತೊಲಿ, ವಾಯಿಡಿಂಗ, ವೇಣಾಸು, ಅಗಳಸುಂಠಿ, ಮೋಡಿ, ಅಡಿಕೆ, ಚವಕ, ಚಿತ್ರಕ, ಮಂಜಿಷ್ಠಾ, ಏಲಾಲುಕ (ಸುರಸುರಿಕೆ), ಲೋಧ್ರ ಇವುಗಳನ್ನು ೪-೪ ತೊಲಿ, ॥೧೫೮॥ ಕೋಷ್ಠ, ಮರ ಅರಿಷಿಣ, ದೇವದಾರು, ಅನಂತಮೂಲ ಕರೀಅನಂತ ಮೂಲ, ಕಾಡಕವಡಿ, ಭದ್ರಮುಸ್ತೆ ಇವುಗಳನ್ನು ೨-೨ ತೊಲಿ, ॥೧೫೯॥ ತಕ್ಕೊಂಡು ಕುಟ್ಟಿ ೪೦೯೬ ತೊಲಿ ನೀರಿನಲ್ಲಿ ಕುದಿಸಿ ಅರ್ಧ ಉಳಿ ಸಬೇಕು. ॥೧೬೦॥ ಸೋಸಿ ಆರಿಸಿ ಅವರಲ್ಲಿ ೫೧೨ ತೊಲಿ ದ್ರಾಕ್ಷದ (೪ ಪಾಲು ನೀರು ಹಾಕಿ ಅರ್ಧ ಉಳಿಸಿದ) ೧೦೨೪ ತೊಲಿ ಕಷಾಯ ತಣ್ಣಗೆ ಮಾಡಿ ಹಾಕಬೇಕು. ॥೧೬೧॥ ಅದರಂತೆ ಸಣ್ಣಾಗಿ ಅರೆದ ಸಕ್ಕರೆ ಯನ್ನು ೮೦೦ ತೊಲಿ, ಹೊಸಜೇನು ೬೪ ತೊಲಿ. ॥೧೬೨॥ ದಾಲಚಿನ್ನಿ, ಯಾಲಕ್ಕಿ, ಭದ್ರಮುಸ್ತ, ತಮಾಲಪತ್ರ, ಬಾಳದಬೇರು, ಕರೀಬಾಳದ ಬೇರು, ಅಡಿಕೆ, ನಾಗಕೇಶರಗಳ ಚೂರ್ಣವನ್ನು ೧-೧ ತೊಲಿಯಂತೆ ವೈದ್ಯನು ಅದರಲ್ಲಿ ಹಾಕಬೇಕು. ॥೧೬೩॥ ಇದಕ್ಕೆಲ್ಲ ಘೃತದ ಭಾವನೆ ಕೊಟ್ಟು, ಸಕ್ಕರೆ ಬೆಲ್ಲಗಳ ಧೂಪಕೊಟ್ಟು ಒಳಗೆ ತುಪ್ಪದ ಲೇಪ ಮಾಡಿದ ಸ್ವಚ್ಛವಾದ ಕೊಡದಲ್ಲಿ ೧೫ ದಿವಸ ಇಡಬೇಕು. ॥೧೬೪॥

೧೫ ದಿವಸಗಳ ನಂತರ ಕನಕಾರಿಷ್ಟವೆಂದು ಪ್ರಸಿದ್ಧವಾದ ಮಧುರವೂ ಹೃದ್ಯವೂ ಆದ ಈ ಔಷಧವನ್ನು ಕುಡಿಯಬೇಕು. ಇದರಿಂದ ಅನ್ನಕ್ಕೆ ರುಚಿ ಬರುವದು. ||೧೬೫|| ಮೂಲವ್ಯಾಧಿ, ಸಂಗ್ರಹಣಿ, ಹೊಟ್ಟೆಯುಬ್ಬು, ಉದರ, ಜ್ವರ, ಹೃದ್ರೋಗ, ಪಾಂಡುರೋಗ, ಬಾವು, ಗುಲ್ಮ, ಮಲಬಂಧ, ||೧೬೬|| ಕೆಮ್ಮು, ಉಗ್ರವಾದ ಎಲ್ಲ ಕಫರೋಗಗಳನ್ನು ಕಳೆಯುವದು. ಮತ್ತು ವ್ಯಾಧಿಗಳು ಮುಡಿಕೆಬೀಳೋಣ ತಲೆಯಲ್ಲಿ ಕೂದಲು ಹೋಗೋಣ, ತಲೆ ಬೆಳ್ಳಗಾಗೋಣ ಮುಂತಾದ ದೋಷಜ ರೋಗಗಳನ್ನು ಕಳೆಯುವದು. (೧೬೭)

**ಪತ್ರಭಂಗೋದಕೈಃ ಶೌಚಂ ಕುರ್ಯಾದುಷ್ಣೇನ ಚಾಂಭಸಾ ||**
**ಇತಿ ಶುಷ್ಕಾರ್ಶಸಾಂ ಸಿದ್ಧಮುಕ್ತಮೇತಚ್ಚಿಕಿತ್ಸಿತಮ್ || ||೧೬೮||**

**ಅರ್ಥ:—** ಮೂಲವ್ಯಾಧಿನಾಶಕವಾದ ಎಲೆಗಳ ಉಷ್ಣಕಷಾಯದಿಂದ ಸ್ನಾನ ಮುಂತಾದವುಗಳನ್ನು ಮಾಡಬೇಕು. ಹೀಗೆ ನಿಶ್ಚಿತಫಲ ಕೊಡುವ ಶುಷ್ಕಮೂಲವ್ಯಾಧಿಗಳ ಚಿಕಿತ್ಸೆಯು ಹೇಳಲ್ಪಟ್ಟಿತು. (೧೬೮)

ಇನ್ನು ಮೇಲೆ ಆರ್ದ್ರಮೂಲವ್ಯಾಧಿಗಳ ಚಿಕಿತ್ಸೆಯನ್ನು ಹೇಳುತ್ತಾರೆ. ಅದಕ್ಕೂ ಮೊದಲು ಅವುಗಳ ಲಕ್ಷಣ ಕಾರಣಗಳನ್ನು ಹೇಳುತ್ತಾರೆ.

**ಚಿಕಿತ್ಸಿತಮತಃ ಸಿದ್ಧಂ ಸ್ರಾವಿಣಾಂ ಸಂಪ್ರಚಕ್ಷ್ಮಹೇ ||**
**ತತ್ರಾನುಬಂಧೋ ದ್ವಿವಿಧಃ ಶ್ಲೇಷ್ಮಣೋ ಮಾರುತಸ್ಯ ಚ ||೧೬೯||**

**ವಿಟ್ ಶ್ಯಾವಂ ಕಠಿನಂ ರೂಕ್ಷಂ ಚಾಧೋವಾಯುರ್ನ ವರ್ತತೇ ||**
**ತನು ಚಾರುಣವರ್ಣಂ ಚ ಫೇನಿಲಂ ಚಾಸೃಗರ್ಶಸಾಮ್ ||೧೭೦||**

**ಕಟ್ಯೂರುಗುದಶೂಲಂ ಚ ದೌರ್ಬಲ್ಯಂ ಯದಿ ಚಾಧಿಕಮ್ ||**
**ತತ್ರಾನುಬಂಧೋ ವಾತಸ್ಯ ಹೇತುರ್ಯದಿ ಚ ರೂಕ್ಷಣಮ್ ||೧೭೧||**

**ಶಿಥಿಲಂ ಶ್ವೇತಪೀತಂ ಚ ವಿಟ್ ಸ್ನಿಗ್ಧಂ ಗುರು ಶೀತಲಮ್ ||**
**ಯದ್ಯರ್ಶಸಾಂ ಘನಂ ಚಾಸೃಕ್ ತಂತುಮತ್ ಪಾಂಡು**
**ಪಿಚ್ಛಿಲಮ್ ||೧೭೨||**

**ಗುದಂ ಸಪಿಚ್ಛಂ ಸ್ತಿಮಿತಂ ಗುರು ಸ್ನಿಗ್ಧಂ ಚ ಕಾರಣಮ್ ||**
**ಶ್ಲೇಷ್ಮಾನುಬಂಧೋ ವಿಜ್ಞೇಯಸ್ತತ್ರ ರಕ್ತಾರ್ಶಸಾಂ ಬುಧೈಃ ||೧೭೩||**

**ಸ್ನಿಗ್ಧಶೀತಂ ಹಿತಂ ವಾತೇ ರೂಕ್ಷಶೀತಂ ಕಫಾನುಗೇ ॥**
**ಚಿಕಿತ್ಸಿತಮಿದಂ ತಸ್ಮಾತ್ ಸಂಪ್ರಧಾರ್ಯ ಪ್ರಯೋಜಯೇತ್ ॥೧೭೪॥**

**ಅರ್ಥ:—** ಇನ್ನು ಮೇಲೆ ಸ್ರವಿಸುವ ಮೂಲವ್ಯಾಧಿಗಳ ನಿಶ್ಚಿತ ಚಿಕಿತ್ಸೆಯನ್ನು ಹೇಳುವೆವು. ಅವಕ್ಕೆ ಕಫದ ಮತ್ತು ವಾತದ ಹೀಗೆ ೨ ತರದ ಅನುಬಂಧವಿರುತ್ತದೆ. ॥೧೬೯॥

**ಟಿಪ್ಪಣಿ:—** ಎಲ್ಲ ಮೂಲವ್ಯಾಧಿಗಳು ತ್ರಿದೋಷಜನ್ಯವಾಗಿದ್ದರಿಂದ ಆರಂಭದಲ್ಲಿಯೇ ವಾತಪಿತ್ತಗಳು ಇದ್ದರೂ ಈಗ ಅವುಗಳ ಅನುಬಂಧ ಹೇಳುವದು ಅವುಗಳ ಉಲ್ಬಣತ್ವವು ಹೆಚ್ಚಾಗಿರುತ್ತದೆಂಬದನ್ನು ತಿಳಿಸುವದಕ್ಕಾಗಿ ॥೧೬೯॥

ಮಲವು ಕರ್‍ರಗೆ, ಬಿರಸು ಮತ್ತು ರುಕ್ಷ, ಅಪಾನವಾಯುವು ಪ್ರವೃತ್ತವಾಗದಿರೋಣ, ಮೂಲವ್ಯಾಧಿಯ ರಕ್ತವು ತೆಳ್ಳಗೆ, ನಸುಗೆಂಪು ಮತ್ತು ಬುರುಗು ಇರುವದು, ॥೧೭೦॥ ಟೊಂಕ, ತೊಡೆ, ಗುದಗಳಲ್ಲಿ ಶೂಲೆ, ಬಹಳ ಅಶಕ್ತಿ ಇವು ಇದ್ದರೆ ವಾತದ ಅನುಬಂಧವಿದೆಯೆಂದು ತಿಳಿಯಬೇಕು. ರುಕ್ಷ ಅನ್ನಪಾನವು ಅದರ ಕಾರಣವಾಗಿರುತ್ತದೆ. ॥೧೭೧॥ ಮಲವು ಶಿಥಿಲ ಸ್ವಲ್ಪ ಬಿಳೀ ಮತ್ತು ಹಳದಿ, ಸ್ನಿಗ್ಧ ಜಡ ಮತ್ತು ತಣ್ಣಗೆ, ಮತ್ತು ಮೂಲವ್ಯಾಧಿಯ ರಕ್ತವು ಗಟ್ಟಿ, ತಂತುಯುಕ್ತ, ಬಿಳಿದು ಮತ್ತು ಜಿಗಟು, ॥೧೭೨॥ ಗುದವು ಲೋಳೆಯುಳ್ಳದ್ದೂ ಸ್ತಿಮಿತವೂ ಆಗಿದ್ದರೆ ಆ ರಕ್ತಮೂಲವ್ಯಾಧಿಗೆ ಕಫದ ಅನುಬಂಧವಿದೆಯೆಂದು ವೈದ್ಯರು ತಿಳಿಯಬೇಕು. ಅದಕ್ಕೆ ಸ್ನಿಗ್ಧ ಮತ್ತು ಜಡ ಆಹಾರ ವಿಹಾರವು ಕಾರಣವಾಗಿರುತ್ತದೆ. ॥೧೭೩॥ ವಾತಾನುಬಂಧವಿದ್ದರೆ ಸ್ನಿಗ್ಧಶೀತವೂ, ಕಫಾನುಬಂಧವಿದ್ದರೆ ರುಕ್ಷಶೀತವೂ ಹಿತಕರವು. ಆದ್ದರಿಂದ ಅನುಬಂಧವನ್ನು ನಿಶ್ಚಯಿಸಿ ಈ ಚಿಕಿತ್ಸೆಯನ್ನು ಮಾಡಬೇಕು. (೧೭೪)

**ಪಿತ್ತಶ್ಲೇಷ್ಮಾಧಿಕಂ ಮತ್ವಾ ಶೋಧನೇನೋಪಪಾದಯೇತ್ ॥**
**ಸ್ರವಣಂ ಚಾಪ್ಯುಪೇಕ್ಷೇತ ಲಂಘನೈರ್ವಾ ಸಮಾಚರೇತ್ ॥೧೭೫॥**

**ಅರ್ಥ:—** ಮೂಲವ್ಯಾಧಿಯಲ್ಲಿ ಪಿತ್ತಕಫಗಳು ಹೆಚ್ಚಿದ್ದರೆ ಶೋಧನವನ್ನು ಕೊಡಬೇಕು. ಅಥವಾ ಲಂಘನವನ್ನು ಮಾಡಿಸಬೇಕು. ರಕ್ತಸ್ರಾವವಾಗುತ್ತಿದ್ದರೆ ಅದನ್ನು ತಡೆಯಬಾರದು. (೧೭೫)

ರಕ್ತಸ್ರಾವವನ್ನು ತಡೆಯುವಿದಲು ಕಾರಣವನ್ನು ಹೇಳುತ್ತಾರೆ.

**ಪ್ರವೃತ್ತಮಾದಾವರ್ಶೋಭ್ಯೋ ಯೋ ನಿಗೃಹ್ಣಾತ್ಯಬುದ್ಧಿಮಾನ್॥**
**ಶೋಣಿತಂ ದೋಷಮಲಿನಂ ತದ್ರೋಗಾಞ್ಜನಯೇದ್ಬಹೂನ್॥೧೭೬॥**

**ರಕ್ತಪಿತ್ತಂ ಜ್ವರಂ ತೃಷ್ಣಾಮಗ್ನಿಸಾದಮರೋಚಕಮ್ ॥**
**ಕಾಮಲಾಂ ಶ್ವಯಥುಂ ಶೂಲಂ ಗುದವಂಕ್ಷಣಸಂಶ್ರಯಮ್॥೧೭೭॥**

**ಕಂಡ್ವರುಃಕೋಠಪಿಡಕಾಃ ಕುಷ್ಠಂ ಪಾಂಡ್ವಾಹ್ವಯಂ ಗದಮ್ ॥**
**ವಾತಮೂತ್ರಪುರೀಷಾಣಾಂ ವಿಬಂಧಂ ಶಿರಸೋ ರುಜಮ್ ॥೧೭೮॥**

**ಸ್ತೈಮಿತ್ಯಂ ಗುರುಗಾತ್ರತ್ವಂ ತಥಾಽನ್ಯಾನ್ ರಕ್ತಜಾನ್ ಗದಾನ್ ॥**
**ತಸ್ಮಾತ್ ಸ್ರುತೇ ದುಷ್ಟರಕ್ತೇ ರಕ್ತಸಂಗ್ರಹಣಂ ಹಿತಮ್ ॥೧೭೯॥**

**ಅರ್ಥ:—** ಯಾವನಾದರೂ ಮೂರ್ಖನು ಮೂಲವ್ಯಾಧಿಯಿಂದ ಮೊದಲು ಸೋರುವ ರಕ್ತವನ್ನು ತಡೆದರೆ ಆ ದುಷ್ಟರಕ್ತವು ॥೧೭೬॥ ರಕ್ತಪಿತ್ತ, ಜ್ವರ, ನೀರಡಿಕೆ, ಅಗ್ನಿಮಾಂದ್ಯ, ಅರುಚಿ, ಕಾಮಲೆ, ಬಾವು, ಗುದ, ಗೆಜ್ಜೆಗಳಲ್ಲಿ ಶೂಲ, ॥೧೭೭॥ ತುರಿಕೆ, ಬಕ್ಕೆ, ಹೈದಿಕೆ, ಗುಳ್ಳೆ, ಕುಷ್ಠ, ಪಾಂಡುರೋಗ, ಮಲಮೂತ್ರವಾತಗಳ ಬಂಧ, ತಲೆಶೂಲೆ ॥೧೭೮॥ ಸ್ತಿಮಿತತೆ, ಶರೀರಕ್ಕೆ ಜಡತ್ವ ಮತ್ತು ಬೇರೆ ಅನೇಕ ರಕ್ತಜ ರೋಗಗಳನ್ನು ಉಂಟು ಮಾಡುತ್ತದೆ. ಆದ್ದರಿಂದ ದುಷ್ಟ ರಕ್ತದ ಸ್ರಾವವಾದ ಮೇಲೆಯೇ ಅವನ್ನು ತಡೆಯಬೇಕು. (೧೭೯)

**ಹೇತುಲಕ್ಷಣಕಾಲಜ್ಞೋ ಬಲಶೋಣಿತವರ್ಣವಿತ್ ॥**
**ಕಾಲಂ ತಾವದುಪೇಕ್ಷೇತ ಯಾವನ್ನಾತ್ಯಯಮಾಪ್ನುಯಾತ್॥೧೮೦॥**

**ಅಗ್ನಿಸಂದೀಪನಾರ್ಥಂ ಚ ರಕ್ತಸಂಗ್ರಹಣಾಯ ಚ॥**
**ದೋಷಾಣಾಂ ಪಾಚನಾರ್ಥಂ ಚ ಪರಂ**
**ತಿಕ್ತೈರುಪಾಚರೇತ್ ॥೧೮೧॥**

**ಅರ್ಥಃ—ಹೇತು, ಲಕ್ಷಣ, ಕಾಲ,** ಬಲ, ರಕ್ತದ ಬಣ್ಣಗಳನ್ನುಬಲ್ಲ ವೈದ್ಯನು ಅಪಾಯವಾಗದಷ್ಟು ಕಾಲ ಮಾತ್ರ ಅದನ್ನುತಡೆಯಬೇಕು॥೧೮೦॥ ಆಮೇಲೆ ಅಗ್ನಿಪ್ರದೀಪ್ತವಾಗುವದಕ್ಕಾಗಿ ಮತ್ತು ರಕ್ತವು ನಿಲ್ಲುವದಕ್ಕಾಗಿ

ದೋಷಗಳ ಪಚನಕ್ಕಾಗಿ ಕಹಿ ಔಷಧಗಳಿಂದ ಚನ್ನಾಗಿ ಉಪಚರಿಸ ಬೇಕು. (೧೮೧)

**ಯತ್ತುಪ್ರಕ್ಷೀಣದೋಷಸ್ಯ ರಕ್ತಂ ವಾತೋಲ್ಬಣಸ್ಯ ಚ ||**
**ವರ್ತತೇ ಸ್ನೇಹಸಾಧ್ಯಂ ತತ್ ಪಾನಾಭ್ಯಂಗಾನುವಾಸನೈಃ ||೧೮೨||**
**ಯತ್ತು ಪಿತ್ತೋಲ್ಬಣಂ ರಕ್ತಂ ಘರ್ಮಕಾಲೇ ಪ್ರವರ್ತತೇ ||**
**ಸ್ತಂಭನೀಯಂ ತದೇಕಾಂತಾನ್ನ ಚೇದ್ ವಾತಕಫಾನುಗಮ್||೧೮೩||**

**ಅರ್ಥ:**— ದೋಷಗಳು ಹೋದವನ ಅಥವಾ ವಾತವು ಹೆಚ್ಚಿದ್ದವನ ರಕ್ತವು ಬೀಳುತ್ತಿದ್ದರೆ ಅದು ಸ್ನೇಹದಿಂದ ನೆಟ್ಟಗಾಗುವದು. ಆದ್ದರಿಂದ ಅವನಿಗೆ ಸ್ನೇಹಪಾನ, ಅಭ್ಯಂಗ, ಅನುವಾಸನ ಬಸ್ತಿಗಳನ್ನು ಮಾಡಿಸಬೇಕು. ||೧೮೨|| ಪಿತ್ತ ಬಹಳವುಳ್ಳವನಿಗೆ ಬೇಸಿಗೆಯಲ್ಲಿ ಬೀಳುವ ರಕ್ತವನ್ನು - ಅದಕ್ಕೆ ವಾತಕಫಗಳ ಅನುಬಂಧವಿಲ್ಲದಿದ್ದರೆ— ಅವಶ್ಯವಾಗಿ ನಿಲ್ಲಿಸಬೇಕು. (೧೮೩)

ಸ್ತಂಭನ ಔಷಧಗಳನ್ನು ಹೇಳುತ್ತಾರೆ.

**ಕುಟಜತ್ವಜ್‌ನಿರ್ಯೂಹಃ ಸನಾಗರಃ ಸ್ನಿಗ್ಧೋ ರಕ್ತಸಂಗ್ರಹಣಃ ||**
**ತ್ವಗ್ ದಾಡಿಮಸ್ಯ ತದ್ವತ್ ಸನಾಗರಶ್ಚಂದನರಸಶ್ಚ || ||೧೮೪||**
**ಚಂದನಕಿರಾತತಿಕ್ತಧನ್ವಯವಾಸಾಃ ಸನಾಗರಾಃ ಕ್ವಥಿತಾಃ ||**
**ರಕ್ತಾರ್ಶಸಾಂ ಪ್ರಶಮನಾ ದಾರ್ವೀತ್ವಗುಶೀರನಿಂಬಾಶ್ಚ ||೧೮೫||**
**ಸಾತಿವಿಷಾ ಕುಟಜತ್ವಕ್ ಫಲಂ ಚ ರಸಾಂಜನಂ ಮಧುಯುತಾನಿ||**
**ರಕ್ತಾಪಹಾನಿ ದದ್ಯಾತ್ ಪಿಪಾಸವೇ ತಂಡುಲಜಲೇನ ||೧೮೬||**

**ಅರ್ಥ:**— ಹಲಗತ್ತಿ ತೊಗಟೆಯ ಕಷಾಯದಲ್ಲಿ ಸ್ನೇಹ ಮತ್ತು ಸುಂಠಿಪುಡಿಯನ್ನು ಹಾಕಿಕೊಟ್ಟರೆ ಅದು ರಕ್ತವನ್ನು ತಡೆಯುವದು. ಆದರಂತೆ ದಾಳಿಂಬದ ತೊಗಟೆಯ ಕಷಾಯದಲ್ಲಿ ಸುಂಠಿಪುಡಿ ಹಾಕಿ ಕೊಟ್ಟರೆ ಅಥವಾ ರಕ್ತ ಚಂದನ ಕಷಾಯದಲ್ಲಿ ಸುಂಠಿಪುಡಿಯನ್ನು ಹಾಕಿ ಕೊಟ್ಟರೆ ರಕ್ತವು ನಿಲ್ಲುವದು. ||೧೮೪|| ಇದರಂತೆ ರಕ್ತಚಂದನ, ಚಿರಾಯತ, ಕಟುಕರೋಣಿ, ನೆಲಇಂಗಳಗಳ ಕಷಾಯದಲ್ಲಿ ಅಥವಾ ಮರ ಅರಿಷಿಣದ ತೊಗಟೆ, ಬಾಳದಬೇರು, ಬೇವಿನ ತೊಗಟೆಗಳ ಕಷಾಯದಲ್ಲಿ

ಸುಂಠಿಪುಡಿ ಹಾಕಿ ಕೊಟ್ಟರೂ, ರಕ್ತವು ನಿಲ್ಲುವದು. ||೧೮೫|| ಅತಿವಿಷ, ಹಲಗತ್ತಿಯ ತೋಟಿ, ಇಂದ್ರಜವಿ, ರಸಾಂಜನ ಇವುಗಳ ಲೇಹದಲ್ಲಿ ಜೇನುತುಪ್ಪ ಹಾಕಿ ಕೊಟ್ಟರೆ ಅದು ರಕ್ತವನ್ನು ಕಳೆಯುವದು. ನೀರಡಿಕೆ ಬಹಳವಿದ್ದರೆ ಇದನ್ನು ಅಕ್ಕಿ ತೊಳೆದ ನೀರಿನೊಡನೆ ಕೊಡಬೇಕು. (೧೮೬)

ಕುಟಜಾದಿರಸಕ್ರಿಯೆಯನ್ನು ಹೇಳುತ್ತಾರೆ.

ಕುಟಜತ್ವಚೋ ವಿಪಾಚ್ಯಂ ಪಲಶತಮಾರ್ದ್ರಂ
ಮಹೇಂದ್ರಸಲಿಲೇನ ||
ಯಾವತ್ ಸ್ಯಾದರ್ಧರಸಂ ತದ್ದ್ರವ್ಯಂ ಪೂತೋ ರಸಸ್ತತೋ
ಗ್ರಾಹ್ಯಃ ||೧೮೭||
ಮೋಚರಸಃ ಸಸಮಂಗಃ ಫಲಿನೀ ಚ ಪಲಾಂಶಿಕೈಸ್ತ್ರಿಭಿ ಸ್ತೈಶ್ಚ ||
ವತ್ಸಕಬೀಜಂ ತುಲ್ಯಂ ಚೂರ್ಣೀಕೃತಮತ್ರ ದಾತವ್ಯಮ್ ||೧೮೮||
ಪೂತೋತ್ಕ್ವಥಿತಃ ಸಾಂದ್ರಃ ಸರಸೋ ದರ್ವೀಪ್ರಲೇಪನೋ
ಗ್ರಾಹ್ಯಃ ||
ಮಾತ್ರಾಕಾಲೋಪಹಿತಾ ರಸಕ್ರಿಯೈಷಾ
ಜಯತ್ಯಸೃಕ್ ಸ್ರಾವಮ್ ||೧೮೯||
ಛಗಲೀಪಯಸಾ ಯುಕ್ತಾ ಪೇಯಾ ಮಂಡೇನ ವಾ
ಯಥಾಗ್ನಿಬಲಮ್ ||
ಜೀರ್ಣೌಷಧಶ್ಚ ಶಾಲೀನ್ ಪಯಸಾ ಛಾಗೇನ ಭುಂಜೀತ ||೧೯೦||
ರಕ್ತಾರ್ಶಾಂಸ್ಯತಿಸಾರಂ ರಕ್ತಂ ಸಾಸೃಗ್ರುಜೋ ನಿಹಂತ್ಯಾಶು ||
ಬಲವಚ್ಚ ರಕ್ತಪಿತ್ತಂ ರಸಕ್ರಿಯೈಷಾ
ಜಯತ್ಯುಭಯಭಾಗಮ್ ||೧೯೧||

ಅರ್ಥಃ — ೪೦೦ ತೊಲಿ ಹಸೀ ಹಲಗತ್ತೆಯ ತೋಟಿಯನ್ನು ೪೦೦ ತೊಲಿ ಮಳೆ ನೀರಿನಲ್ಲಿ ಕುದಿಸಿ ಅರ್ಧ ಉಳಿಯಲು ಅದನ್ನು ಸೋಸಿ ತಕ್ಕೊಳ್ಳಬೇಕು. ||೧೮೭|| ಅದರಲ್ಲಿ ಬೂರಲಅಂಟು, ಮಂಜಿಷ್ಠಾ, ಫಲಿನೀ [ರೇಣುಕಬೀಜ], ಇವುಗಳ ಚೂರ್ಣವನ್ನು ೪-೪ ತೊಲಿ, ಇಂದ್ರ ಜವಿ ಚೂರ್ಣವನ್ನು ೧೨ ತೊಲಿ ಹಾಕಬೇಕು. ||೧೮೮|| ಅದನ್ನು ಕುದಿಸಿ

ಚೆನ್ನಾಗಿ ರಸವು ಬಿಟ್ಟು ಸವಟಿಗೆ ಹತ್ತುವಂತೆ ಗಟ್ಟಿಯಾಗಲು ಇಳಿಸಿ ತಕ್ಕೊಳ್ಳಬೇಕು. ಈ ರಸಕ್ರಿಯೆಯನ್ನು ಯೋಗ್ಯ ಪ್ರಮಾಣದಿಂದ||೧೮೯|| ಆಡಿನ ಹಾಲಿನೊಡನೆ ಅಥವಾ ಅನ್ನದ ಗಂಜಿಯೊಡನೆ ಅಗ್ನಿಯ ಬಲ ವನ್ನು ನೋಡಿ ಕುಡಿಯಬೇಕು. ಔಷಧವು ಪಚನವಾಗಲು ಆಡಿನ ಹಾಲಿ ನೊಡನೆ ಅನ್ನವನ್ನು ಉಣ್ಣಬೇಕು. ||೧೯೦|| ಈ ರಸಕ್ರಿಯೆಯು ರಕ್ತ ಸ್ರಾವವನ್ನು ತಡೆಯುವದು. ರಕ್ತ ಮೂಲವ್ಯಾಧಿ, ರಕ್ತಾತಿಸಾರ, ಅವು ಗಳ ವೇದನೆ, ಮೇಲಿನ ಮತ್ತು ಕೆಳಗಿನ ಪ್ರಬಲ ರಕ್ತಪಿತ್ತಗಳನ್ನು ಕಳೆ ಯುವದು. (೧೯೧)

**ನೀಲೋತ್ಪಲಂ ಸಮಂಗಾ ಮೋಚರಸ್ಚಂದನಂ ತಿಲಾ ಲೋಧ್ರಮ್||**
**ಪೀತ್ವಾ ಛಗಲೀಪಯಸಾ ಭೋಜ್ಯಂ ಪಯಸೈವ ಶಾಲ್ಯನ್ನಮ್ ||೧೯೨||**

**ಛಗಲೀಪಯಃ ಪ್ರಯುಕ್ತಂ ನಿಹಂತಿ ರಕ್ತಂ ಸಮಾಸ್ತುಕರಸಂ ಚ ||**
**ಧನ್ವವಿಹಂಗಮೃಗಾಣಾಂ ರಸೋ ನಿರಮ್ಲಃ ಕದಮ್ಲೋ ವಾ ||೧೯೩||**

**ಪಾಠಾಂ ವತ್ಸಕಬೀಜಂ ರಸಾಂಜನಂ ನಾಗರಂ ಯಮಾನ್ಯಶ್ಚ ||**
**ಬಿಲ್ವಮಿತಿ ಚಾರ್ಶಸೈಶ್ಚೂರ್ಣಿತಾನಿ ಪೇಯಾನಿ ಸಶೂಲೇಷು ||೧೯೪||**

**ದಾರ್ವೀ ಕಿರಾತತಿಕ್ತಂ ಮುಸ್ತಂ ದುಸ್ಪರ್ಶಕಶ್ಚ ರುಧಿರಘ್ನಾಮ್ ||೧೯೪ಅ||**

**ಅರ್ಥ:**— ನೀಲಕಮಲ, ಮಂಜಿಷ್ಠೆ, ಮೋಚರಸ, ಚಂದನ, ಎಳ್ಳು, ಲೋದ ಇವುಗಳ ಚೂರ್ಣವನ್ನು ಆಡಿನ ಹಾಲಿನಲ್ಲಿ ಕುಡಿಯಬೇಕು. ಮೇಲೆ ಆಡಿನ ಹಾಲಿನೊಡನೆಯೇ ಅನ್ನವನ್ನು ತಿನ್ನಬೇಕು. ||೧೯೨|| ಇದರಂತೆ ಚಕೋತದ ರಸದಲ್ಲಿ ಆಡಿನ ಹಾಲು ಹಾಕಿ ಕುಡಿಯಬೇಕು. ಅಥವಾ ಜಾಂಗಲಪಕ್ಷಿ ಮೃಗಗಳ ಮಾಂಸರಸವನ್ನು ಸ್ವಲ್ಪ ಹುಳಿ ಮಾಡಿ ಅಥವಾ ಮಾಡದೆ ಕುಡಿಯಬೇಕು. ಇವು ರಕ್ತವನ್ನು ತಡೆಯುವವು. ||೧೯೩|| ಆರ್ದ್ರಮೂಲವ್ಯಾಧಿಯಲ್ಲಿ ಶೂಲವಿದ್ದರೆ ಅಗಳಸುಂಠಿ, ಇಂದ್ರ ಜವೆ, ರಸಾಂಜನ, ಸುಂಠಿ, ಅಜವಾನ, ಬಿಲ್ವಗಳ ಚೂರ್ಣವನ್ನು ರೋಗಿ ಗಳು ಕುಡಿಯಬೇಕು, ||೧೯೪|| ಮರಅರಿಷಿಣ, ಚಿರಾಯತ, ಜೇಕು

ನೆಲಇಂಗಳಗಳ ಚೂರ್ಣವನ್ನು ಆಡಿನ ಹಾಲಿನೊಡನೆ ಕುಡಿಯಬೇಕು. ಇದು ರಕ್ತವನ್ನು ಕಳೆಯುವದು. (೧೯೪)

ಶೂಲನಾಶಕ ಘೃತಗಳನ್ನು ಹೇಳುತ್ತಾರೆ.

**ರಕ್ತೇಽತಿವರ್ತಮಾನೇ ಶೂಲೇ ಘೃತಂ ವಿಧಾತವ್ಯಮ್ ॥೧೯೫॥**
**ಕುಟಜಫಲವಲ್ಕಕೈಃ ಕೇಶರನೀಲೋತ್ಪಲಲೋಧ್ರಧಾತಕೀಕಲ್ಕೈಃ ॥**
**ಸಿದ್ಧಂ ಘೃತಂ ವಿಧೇಯಂ ಶೂಲೇ ರಕ್ತಾರ್ಶಸಾಂ ಭಿಷಜಾ ॥೧೯೬॥**
**ಸರ್ಪಿಃ ಸದಾಡಿಮರಸಂ ಸಯಾವಶೂಕಂ ಶೃತಂ ಜಯತ್ಯಾಶು ॥**
**ರಕ್ತಂ ಸಶೂಲಮಥವಾ ನಿದಿಗ್ಧಿಕಾದುಗ್ಧಿಕಾಸಿದ್ಧಮ್ ॥೧೯೭॥**

**ಅರ್ಥ:—** ರಕ್ತಸ್ರಾವ ಶೂಲಗಳು ಹೆಚ್ಚಿದ್ದರೆ ಘೃತವನ್ನು ಮಾಡಬೇಕು. ॥೧೯೫॥ ವೈದ್ಯನು ರಕ್ತ ಮೂಲವ್ಯಾಧಿಗಳಲ್ಲಿ ಶೂಲವಿದ್ದರೆ, ಇಂದ್ರಜವದ ಕಲ್ಕಗಳಿಂದ ಅಥವಾ ನಾಗಕೇಶರ, ನೀಲಕಮಲ, ಲೋಧ್ರ ಧಾತಕೀ ಪುಷ್ಪಗಳ ಕಲ್ಕದಿಂದ ಘೃತವನ್ನು ಸಿದ್ಧಮಾಡಬೇಕು. ॥೧೯೬॥ ದಾಳಿಂಬದ ತೋಟೆಯ ಕಷಾಯದಲ್ಲಿ ಜವಕಾರ ಹಾಕಿ ಸಿದ್ಧಮಾಡಿದ ಘೃತವು ಅದರಂತೆ ನೆಲಗುಳ್ಳದ ಬೇರು ಮತ್ತು ದುಗ್ಧಿಕಾ ಇವುಗಳ ಕಷಾಯದಲ್ಲಿ ಜವಕಾರ ಹಾಕಿ ಸಿದ್ಧಮಾಡಿದ ಘೃತವು ಮೂಲವ್ಯಾಧಿಯ ರಕ್ತ ಮತ್ತು ಶೂಲವನ್ನು ಕಳೆಯುವದು. (೧೯೭)

ಪೇಯಗಳನ್ನು ಹೇಳುತ್ತಾರೆ.

**ಲಾಜಾಪೇಯಾ ಪೀತಾ ಚುಕ್ರೀಕಾಕೇಶರೋತ್ಪಲೈಃ ಸಿದ್ಧಾ ॥**
**ಹಂತ್ಯಾಶ್ವಸ್ರಸ್ರಾವಂ ತಥಾ ಬಲಾಪೃಶ್ನಿಪರ್ಣೀಭ್ಯಾಮ್ ॥೧೯೮॥**
**ಹ್ರೀಬೇರಬಿಲ್ವನಾಗರನಿರ್ಯೂಹಸಾಧಿತಾಂ ಸನವನೀತಾಮ್ ॥**
**ವೃಕ್ಷಾಮ್ಲದಾಡಿಮಾಮ್ಲಾಮಮ್ಲೀಕಾಮ್ಲಾಂ ಸಕೋಲಾಮ್ಲಾಮ್ ॥೧೯೯॥**
**ಗೃಂಜನಕಸುರಾಸಿದ್ಧಾಂ ದದ್ಯಾದ್ ಯಮಕೇನ ಭರ್ಜಿತಾಂ ಪೇಯಾಮ್ ॥**
**ರಕ್ತಾತಿಸಾರಶೂಲಪ್ರವಾಹಿಕಾಶೋಫನಿಗ್ರಹಣೀಮ್ ॥೨೦೦॥**

**ಅರ್ಥ:—** ಚುಕ್ರಿಕಾ (ಹುಣಚಿಕ್ಕ) ನಾಗಕೇಶರ, ನೀಲಕಮಲಗಳಿಂದ ಸಿದ್ಧವಾದ ಅದರಂತೆ ಬಲಾ, ಮೂರೆಲೆ ಹೊನ್ನೆಗಳಿಂದ ಸಿದ್ಧ

ಮಾಡಿದ ಭತ್ತರಳದ ಕಷಾಯುವನ್ನು ಕುಡಿದರೆ ಅದು ತೀವ್ರವಾಗಿ ರಕ್ತ ಸ್ರಾವವನ್ನು ಕಳೆಯುವದು. ||೧೯೮|| ಬಾಳದ ಬೇರು, ಬಿಲ್ವ, ಸುಂಠಿ, ಇವುಗಳ ಕಷಾಯದಿಂದ ಮಾಡಿದ ಪೇಯುವನ್ನು ವೃಕ್ಷಾವ್ಲ(ಅವುಸೋಲ) ದಾಳಿಂಬ, ಹುಣಸೀಹಣ್ಣು, ಬೋರೇಕಾಯಿಗಳಿಂದ ಹುಳಿ ಮಾಡಿ, ಬೆಣ್ಣೆ ಹಾಕಿ ಕುಡಿಯಬೇಕು. ||೧೯೯|| ಅಥವಾ ಗೃಂಜನಕ (ಗಜ್ಜರಿ), ಸುರೆ ಇವುಗಳಿಂದ ಸಿದ್ಧಮಾಡಿದ ಪೇಯದಲ್ಲಿ ತುಪ್ಪ ಎಳ್ಳೆಣ್ಣೆಗಳ ಒಗ್ಗರಣೆ ಹಾಕಿ ಕುಡಿಯಬೇಕು. ಇವು ರಕ್ತಾತಿಸಾರ, ಶೂಲ, ಪ್ರವಾಹಿಕೆ, ಬಾವುಗಳನ್ನು ಕಳೆಯುವವು. (೨೦೦)

ಕಟ್ಟುಗಳನ್ನು ಹೇಳುತ್ತಾರೆ.

**ಕಾಶ್ಮರ್ಯಾಮಲಕಾನಾಂ ಸಕರ್ಬುದಾರಫಲಾಮ್ಲಾನಾಮ್ ||**
**ಗೃಂಜನಕಶಾಲ್ಮಲೀನಾಂ ದುಗ್ಧಿಕಾನಾಂ ಚುಕ್ರಿಕಾಣಾಂ ಚ ||೨೦೧||**
**ನ್ಯಗ್ರೋಧಶುಙ್ಗಕಾನಾಂ ಖಡಾಂಸ್ತಥಾ ಕೋವಿದಾರಪುಷ್ಪಾಣಾಮ್**
**ದಧ್ನಃ ಸರೇಣ ಸಿದ್ಧಾನ್ ದದ್ಯಾದ್ ರಕ್ತೇ ಪ್ರವೃತ್ತೇಽತಿ ||೨೦೨||**

**ಅರ್ಥ:**— ರಕ್ತವು ಬಹಳ ಬೀಳಹತ್ತಿದರೆ (೧) ಶಿವನ್ನೀಫಲ, ನೆಲ್ಲೀ ಕಾಯಿ. ರಕ್ತಕಾಂಚನ ಹುಣಸೀ ಹಣ್ಣುಗಳ ಕಲ್ಕವನ್ನು ಹಾಕಿ, ಗಜ್ಜರಿ, ಬೂರಲ ತೋಟಿಗಳ ಕಲ್ಕವನ್ನು ಹಾಕಿ ಮಾಡಿದ, (೨) ದುಗ್ಧಿಕಾ ಕಲ್ಕ ಹಾಕಿ ಮಾಡಿದ, (೪) ಚುಕ್ರಿಕಾಕಲ್ಕ (ಹುಣಚಿಕ್ಕ) ಹಾಕಿ ಮಾಡಿದ, ||೧೦೧|| ಆಲದ ಜಡೆ ಕಲ್ಕ ಹಾಕಿ ಮಾಡಿದ (೬) ರಕ್ತಕಾಂಚನ ಹೂವು ಗಳ ಕಲ್ಕವನ್ನೂ ಮೊಸರಿನ ಮೇಲಿನ ನೀರನ್ನೂ ಹಾಕಿ ಮಾಡಿದ ಹೆಸರು ಬೇಳೆ ಮುಂತಾದವುಗಳ ಕಟ್ಟನ್ನು ಕೊಡಬೇಕು. (೨೦೨)

**ಸಿದ್ಧಂ ಪಲಾಂಡುಶಾಕಂ ತಕ್ರೇಣೋಪಾದಿಕಾಂ ಸಬದರಾಮ್ಲಾಮ್||**
**ರಂಧಿರಸ್ರುತೌ ಪ್ರದದ್ಯಾನ್ಮಸೂರಯೂಷಂ ಚ ತಕ್ರಾಮ್ಲಮ್||೨೦೪||**
**ಪಯಸಾ ಶೃತೇನ ಯೂಷೈಃ**
**ಮಸೂರಮುದ್ಗಾಢಕೀಮಕುಷ್ಠಾನಾಮ್ ||**
**ಭೋಜನಮದ್ಯಾದಮ್ಲೈಃ ಶಾಲಿ ಶ್ಯಾಮಾಕಕೋದ್ರವಜಮ್||೨೦೫||**
**ಶಶಹರಿಣಲಾವಮಾಂಸೈಃ ಕಪಿಂಜಲೈಣೇಯಕೈಃ ಸುಸಿದ್ಧೈಶ್ಚ ||**
**ಭೋಜನಮದ್ಯಾನ್ಮಧುರೈರಮ್ಲೈರೀಷತ್ ಸಮರಿಚೈರ್ವಾ ||೨೦೬||**

ದಕ್ಷಶಿಖಿತಿತ್ತಿರಿರಸೈರ್ದ್ವಿರ್ಕಕುದಲೋಪಾಕಜೈಶ್ಚ ಮಧುರಾಮ್ಲೈಃ ॥
ಅದ್ಯಾದ್ರಸೈರತಿವಹೇಷ್ವರ್ಶಃಸ್ವನಿಲೋಲ್ಬಣಶರೀರಃ　　॥೨೦೬॥

ಅರ್ಥಃ —ರಕ್ತಸ್ರಾವವಿದ್ದರೆ ಮಜ್ಜಿಗೆಯಲ್ಲಿ ಸಿದ್ಧವಾದ ಉಳ್ಳೀಗಡ್ಡಿಯನ್ನು, ಬೋರೆಕಾಯಿಗಳಿಂದ ಸಿದ್ಧವಾದ ಉಪೋದಿಕೆ (ಬಸಳೆ) ಯನ್ನು ಅಥವಾ ಮಜ್ಜಿಗೆಯಿಂದ ಹುಳಿ ಮಾಡಿದ ಚನ್ನಂಗಿಬೇಳೆಯ ಕಟ್ಟನು ಕೊಡಬೇಕು. ॥೨೦೩॥ ಅರ್ಧಕುದಿಸಿದ ಹಾಲಿನೊಡನೆ ಚನ್ನಂಗಿ, ಹೆಸರು, ತೊಗರಿ, ಕಾಡಹೆಸರುಗಳ ಹುಳಿಯಾದ ಕಟ್ಟುಗಳೊಡನೆ ಅಕ್ಕಿ, ಸಾಂವಿ, ಕೋದ್ರವ (ಹಾರಕ) ಗಳ ಅನ್ನವನ್ನು ತಿನ್ನಬೇಕು. ॥೨೦೪॥ ಶರೀರದಲ್ಲಿ ವಾತವು ಹೆಚ್ಚಿದ್ದರೆ ಬಹಳ ರಕ್ತಸ್ರಾವವಾಗುವ ಮೂಲವ್ಯಾಧಿಗಳಲ್ಲಿ, ಕುದಿಸಿದ ಮತ್ತು ಮೆಣಸು ಹಾಕಿದ ॥೨೦೫॥ ಸ್ವಲ್ಪ ಹುಳಿ ಅಥವಾ ಮಧುರವಾದ ಮೊಲ, ಚಿಗರೆ, ಲಾವಪಕ್ಷಿಗಳ ಮಾಂಸದೊಡನೆ ಅಥವಾ ಕಪಿಂಜಲ ಬಿಳೀತಿತ್ತಿರಿ ಏಣೀಯಕ (ಚಿಗರಿಜಾತಿ) ಮಾಂಸದೊಡನೆ ಅಥವಾ ಕೋಳಿ, ನವಿಲು, ತಿತ್ತಿರಿ, ಒಂಟೆ, ಸಣ್ಣ ನರಿಗಳ ಮಾಂಸದೊಡನೆ ಅನ್ನವನ್ನು ಉಣ್ಣಬೇಕು.　　(೨೦೬)

ರಸಖಡಶಾಕಯುವಾಗೂಸಂಯುಕ್ತಃ ಕೇವಲೋಽಥವಾ ಜಯತಿ ॥
ರಕ್ತಮತಿವರ್ತಮಾನಂ ವಾತಂ ಚ ಪಲಾಂಡುರುಪಯುಕ್ತಃ॥೨೦೭॥
ಛಾಗಾಂತರಾಧಿ ತರುಣಂ ಸರುಧಿರಮುಪಸಾಧಿತಂ ಬಹುಪಲಾಂಡು॥
ವ್ಯತ್ಯಾಸಾನ್ಮಧುರಾಮ್ಲಂ ವಿಟ್ ಶೋಣಿತಸಂಕ್ಷಯೇ
ದೇಯಮ್　　॥೨೦೮॥

ಅರ್ಥಃ— ಮೇಲೆ ಹೇಳಿದ ಮಾಂಸರಸ, ಕಟ್ಟು, ಪಲ್ಯೆ, ಪೇಯಗಳೊಡನೆ ಅಥವಾ ಹಾಗೆಯೇ ಉಳ್ಳೀಗಡ್ಡಿಯನ್ನು ಕೊಟ್ಟರೆ ರಕ್ತದ ಅತಿಸ್ರಾವವನ್ನೂ ವಾತವನ್ನೂ ಕಳೆಯುವದು. ॥೨೦೭॥ ಮಲಕ್ಷಯವಿದ್ದರೆ ತರುಣ ಆಡಿನ ರಕ್ತಸಹಿತ ಧಡವನ್ನು ಪುಷ್ಕಳ ಉಳ್ಳಾಗಡ್ಡಿಗಳನ್ನು ಹಾಕಿ ಮಧುರ ಮಾಡಿ, ರಕ್ತಕ್ಷಯವಿದ್ದರೆ ಅದನ್ನೇ ಹುಳಿ ಮಾಡಿ ಕೊಡಬೇಕು.　　(೨೦೮)

ನವನೀತತಿಲಾಭ್ಯಾಸಾತ್ ಕೇಸರನವನೀತಶರ್ಕರಾಭ್ಯಾಸಾತ್ ॥
ದಧಿಸರಮಥಿತಾಭ್ಯಾಸಾದ್ ಗುದಜಾಃ ಶಾಮ್ಯಂತಿ
ರಕ್ತವಹಾಃ　　॥೨೦೯॥

**ನವನೀತಘೃತಂ ಮಾಂಸಂ ಛಾಗಂ ಚ ಸಷಷ್ಟಿಕಃ ಶಾಲಿಃ ||**
**ತರುಣಶ್ಚ ಸುರಾಮಂಡಸ್ತರುಣೀ ಚ ಸುರಾ ನಿಹಂತ್ಯಸೃಙ್ಮ್ ||೨೧೦||**

**ಅರ್ಥಃ—** ಬಹುದಿವಸಗಳವರೆಗೆ ಬೆಣ್ಣೆಯೊಡನೆ ಎಳ್ಳಿನ ಕಲ್ಕವನ್ನೂ ಅಥವಾ ನಾಗಕೇಶರ ಸಕ್ಕರೆಗಳ ಚೂರ್ಣವನ್ನೂ ಮೊಸರಿನ ನೀರು ಮತ್ತು ನೀರು ಹಾಕದ ಮಜ್ಜಿಗೆಯನ್ನೂ ತಿನ್ನುತ್ತಿದ್ದರೆ ರಕ್ತ ಸುರಿಸುವ ಮೂಲವ್ಯಾಧಿಗಳು ಶಮನವಾಗುವವು. ||೨೦೯|| ಬೆಣ್ಣೆಯು (ಅದೇ ಕಾಸಿದ) ತುಪ್ಪ, ಆಡಿನ ಮಾಂಸ, ಷಷ್ಟಿಕ ಅಕ್ಕಿಯ ಅನ್ನ, ಹೊಸ ಸುರಾಮಂಡ ಮತ್ತು ಹೊಸ ಸುರೆ ಇವು ರಕ್ತವನ್ನು ಕಳೆಯುವವು. (೨೧೦)

**ಪ್ರಾಯೇಣ ವಾತಬಹುಲಾನ್ಯರ್ಶಾಂಸಿ ಭವಂತ್ಯತಿಸ್ರುತೇ ರಕ್ತೇ ||**
**ದೃಷ್ಟೇಽಪಿ ಹಿ ಕಫಪಿತ್ತೇ ತಸ್ಮಾದನಿಲೋಽಧಿಕೋ ಜ್ಞೇಯಃ ||೨೧೧||**

**ದೃಷ್ಟ್ವಾ ತು ರಕ್ತಪಿತ್ತಂ ಪ್ರಬಲಂ ಕಫವಾತರೂಪಮಲ್ಪಂ ಚ ||**
**ಶೀತಾ ಕ್ರಿಯಾ ಪ್ರಯೋಜ್ಯಾ ಯಥೇರಿತಾ ವಕ್ಷ್ಯತೇ**
**ಯಾಽನ್ಯಾ ||೨೧೨||**

**ಅರ್ಥಃ—** ರಕ್ತವು ಬಹಳ ಹೋಗಲು ಮೂಲವ್ಯಾಧಿಗಳಲ್ಲಿ ಬಹಳ ವಾತವುಂಟಾಗುತ್ತದೆ. ಆದ್ದರಿಂದ ಅವುಗಳಲ್ಲಿ ಕಫ, ಪಿತ್ತವು ಕಂಡರೂ ವಾತವು ಹೆಚ್ಚಾಗಿದೆಯೆಂದು ತಿಳಿಯಬೇಕು. ||೨೧೧|| ರಕ್ತಪಿತ್ತಗಳು ಹೆಚ್ಚು, ಕಫವಾತಗಳು ಕಡಿಮೆ ಇದ್ದರೆ ಹಿಂದೆ ಹೇಳಿದ ಮತ್ತು ಮುಂದೆ ಹೇಳುವ ಶೀತ ಚಿಕಿತ್ಸೆಯನ್ನು ಮಾಡಬೇಕು. (೨೧೨)

ಶೀತ ಕ್ರಿಯೆಗಳನ್ನು ಹೇಳುತ್ತಾರೆ.

**ಮಧುಕಂ ಸಪಂಚವಲ್ಕಂ**
**ಬದರೀತ್ವಗುದುಂಬರಧವಪಟೋಲಮ್ ||**
**ಪರಿಷೇಚನೇ ಪ್ರಯೋಜ್ಯಂ ವೃಷಕಕುಭಯವಾಸನಿಂಬಾಶ್ಚ ||೨೧೩||**

**ರಕ್ತೇಽತಿವರ್ತಮಾನೇ ಕ್ಲೇದೇ ದಾಹೇ ಚ ಸಮ್ಯಗವಗಾಹಾಃ ||**
**ಮಧುಕಾಮ್ಮೃಣಾಲಚಂದನಪದ್ಮಕಕುಶಕಾಶಮೂಲನಿಕ್ವಾಥಾಃ||೨೧೪||**

ಇಕ್ಷುರಸಮಧುಕವೇತಸನಿರ್ಯೂಹೇ ಶೀತಲೇ ಪಯಸಿ ವಾ ತಮ್ ॥
ಅವಗಾಹಯೇತ್ ಪ್ರದಿಗ್ಧಂ ಪೂರ್ವಂ ತೈಲೇನ ಶಿಶಿರೇಣ ॥೨೧೫॥

ದತ್ವಾ ಘೃತಂ ಸಶರ್ಕರಮುಪಸ್ಥದೇಶೇ ತ್ರಿಕದೇಶೇ ಚ ॥
ಶಿಶಿರಜಲಸ್ಪರ್ಶಸುಖಧಾರಾ ಸಂಸ್ತಂಭನೀ ಯೋಜ್ಯಾ ॥೨೧೬॥

ಕದಲೀದಲೈರಭಿನವೈಃ ಪುಷ್ಕರಪತ್ರೈಶ್ಚ ಶೀತಜಲಸಿಕ್ತೈಃ ॥
ಪ್ರಚ್ಛಾದನಂ ಮುಹುರ್ಮುಹುರಿಷ್ಟಂ ಪದ್ಮೋತ್ಪಲದಲೈಶ್ಚ ॥೨೧೭॥

ದೂರ್ವಾಘೃತಂ ಪ್ರದೇಹಂ ಶತಧೌತಂ ಸಹಸ್ರಧೌತಮಪಿ ಸರ್ಪಿಃ ॥
ವ್ಯಜನಪವನಃ ಸುಶೀತೋ ರಕ್ತಾಸ್ರಾವಂ ಜಯತ್ಯಾಶು ॥೨೧೮॥

ಸಮಂಗಾಮಧುಕಾಭ್ಯಾಂ ತಿಲಮಧುಕಾಭ್ಯಾಂ
ರಸಾಂಜನಘೃತಾಭ್ಯಾಮ್ ॥
ಸರ್ಜರಸಘೃತಾಭ್ಯಾಂ ನಿಂಬಘೃತಾಭ್ಯಾಂ
ಮಧುಘೃತಾಭ್ಯಾಂ ಚ ॥೨೧೯॥

ದಾರ್ವೀತ್ವಕ್ಸರ್ಪಿರ್ಭ್ಯಾಂ
ಸಚಂದನಾಭ್ಯಾಮಥೋತ್ಪಲಘೃತಾಭ್ಯಾಮ್ ॥
ದಾಹೇ ಕ್ಲೇದೇ ಚ ಗುದಭ್ರಂಶೇ ಗುದಜಾಃ
ಪ್ರತಿಸಾರಣೀಯಾಃ ಸ್ಯುಃ ॥೨೨೦॥

ಆಭಿಃ ಕ್ರಿಯಾಭಿರಥವಾ ಶೀತಾಭಿರ್ಯಸ್ಯ ನ ತಿಷ್ಠತಿ ರಕ್ತಮ್ ॥
ತಂ ಕಾಲೇ
ಸ್ನಿಗ್ಧೋಷ್ಣೈರ್ಮಾಂಸರಸೈಸ್ತರ್ಪಯೇನ್ಮತಿಮಾನ್ ॥೨೨೧॥
ಅವಪೀಡಕಸರ್ಪಿರ್ಭಿಃ ಕೋಷ್ಣೈರ್ಘೃತತೈಲಿಕೈಸ್ತಥಾಭ್ಯಂಗೈಃ ॥
ಕ್ಷೀರಘೃತತೈಲಸೇಕೈಃ ಕೋಷ್ಣೈಃ ಸಮುಪಾಚರೇಚ್ಛಾಶು ॥೨೨೨॥

ಅರ್ಥಃ— ಜೇಷ್ಠಮಧು, ಪಂಚವಲ್ಕಲ (ಆಲ, ಅರಳೆ, ಬಸರಿ. ಹೆಬ್ಬೆ, ಶಿರೀಷವೃಕ್ಷಗಳ ತೊಗಟೆ), ಬೋರೆ, ಅತ್ತಿ, ದಿಂಡಲುಗಳ ತೊಗಟೆ, ಕಹಿಪಡವಲ ಎಲೆಗಳ ಅಥವಾ ಅಡಸಲ, ಮತ್ತಿ, ನೆಲಇಂಗಳ, ಬೇವಿನ ಎಲೆಗಳ ಕಷಾಯವನ್ನು ಪರಿಷೇಕಕ್ಕಾಗಿ ಉಪಯೋಗಿಸಬೇಕು. ॥೨೧೩॥ ರಕ್ತವು ಬಹಳ ಹೋಗುತ್ತಿದ್ದರೆ ಕ್ಲೇದದಾಹಗಳಿದ್ದರೆ ಜ್ಯೇಷ್ಠಮಧು, ಬಾಳದಬೇರು, ಚಂದನ, ಪದ್ಮಕಾಷ್ಠ, ದರ್ಭ, ಕಸಯಿ ಹುಲ್ಲುಗಳ ಬೇರುಗಳ ಕಷಾಯದಲ್ಲಿ ಚನ್ನಾಗಿ ಅವಗಾಹನ ಮಾಡಿಸಬೇಕು.

||೨೧೪|| ಮೊದಲು ಶೀತತೈಲದಿಂದ ಲೇಪವನ್ನು ಮಾಡಿ ಕಬ್ಬಿನ ರಸ, ಜೇಷ್ಠಮಧು, ಹೆಬ್ಬೆಗಳ ತಣ್ಣನ್ನ ಕಷಾಯದಲ್ಲಿ ಅಥವಾ ತಣ್ಣಗಿನ ನೀರಲ್ಲಿ ಕೂಡಿಸಬೇಕು. ||೨೧೫|| ಗುಹ್ಯಸ್ಥಳದಲ್ಲಿ ಸಕ್ಕರೆ ತುಪ್ಪವನ್ನು ಇಟ್ಟು ಅದರಂತೆ ತಿಗದಲ್ಲಿಯೂ ಇಟ್ಟು ಸುಖಕೊಡುವಂತೆ ತಣ್ಣಗಿನ ನೀರಿನ ಧಾರೆಯನ್ನು ಅವುಗಳ ಮೇಲೆ ಬಿಡಬೇಕು. ಅದು ರಕ್ತಸ್ತಂಭನವನ್ನು ಮಾಡುವದು. ||೨೧೬|| ಆಗಾಗ್ಗೆ ತಣ್ಣೀರು ಸಿಂಪಡಿದ ಎಳೇ ಬಾಳೆ ಎಲೆಗಳಿಂದ, ಕೆಂಪು ಕರೇ, ಬಿಳೇ ಕಮಲದ ಎಲೆಗಳಿಂದಲೂ ಅವನನ್ನು ಹೊಚ್ಚಬೇಕು. ||೨೧೭|| ಕರಿಕೆಯ ರಸದಿಂದ ಮಾಡಿದ ಘೃತ, ಶತಧೌತಘೃತ ಸಹಸ್ರಧೌತಘೃತಗಳ ಲೇಪಗಳು, ಬೀಸಣಿಕೆಯ ತಣ್ಣಗಿನ ಗಾಳಿಗಳೂ ತೀವ್ರವಾಗಿ ರಕ್ತಸ್ರಾವವನ್ನು ನಿಲ್ಲಿಸುವವು. ||೨೧೮|| ಗುದ ಭ್ರಂಶ, ದಾಹ, ಕ್ಲೇದಗಳಲ್ಲಿ ಮೂಲವ್ಯಾಧಿಗಳಿಗೆ ೧ ಮಂಜಿಷ್ಠೆ, ಜ್ಯೆಷ್ಠಮಧು ಚಂದನಗಳಿಂದ ೨ ಎಳ್ಳು, ಜ್ಯೇಷ್ಠಮಧು ಚಂದನಗಳಿಂದ, ೩ ರಸಾಂಜನ, ತುಪ್ಪ ಚಂದನಗಳಿಂದ, ೪ ರಾಳ, ತುಪ್ಪ ಚಂದನಗಳಿಂದ ೫ ಬೇವಿನೆಲೆ, ತುಪ್ಪ ಚಂದನಗಳಿಂದ, ೬ ತುಪ್ಪ, ಜೇನು ಚಂದನಗಳಿಂದ, ||೨೧೯|| ೭ ಮರಆರಿಷಿಣತೋಟಿ ತುಪ್ಪ ಚಂದನಗಳಿಂದ ಅಥವಾ ನೀಲಕಮಲ, ತುಪ್ಪಚಂದನಗಳಿಂದ ಲೇಪ ಮಾಡಬೇಕು. ||೨೨೦|| ಈ ಶೀತಕ್ರಿಯೆಗಳಿಂದ ಯಾವನ ರಕ್ತವು ನಿಲ್ಲುವದಿಲ್ಲವೋ ಅವನಿಗೆ ಬುದ್ಧಿವಂತನಾದ ವೈದ್ಯನು ಊಟದ ವೇಳೆಗೆ ಸ್ನಿಗ್ಧ ಮತ್ತು ಉಷ್ಣವಾದ ಮಾಂಸ ರಸದಿಂದ ತೃಪ್ತಿಪಡಿಸಬೇಕು. ||೨೨೧|| ಅಲಮುಂತಾದ ಅವಪೀಡಕ ದ್ರವ್ಯಗಳ ತೋಟೆಗಳ ಕಲ್ಕಗಳಿಂದ ಸಿದ್ಧವಾದ ಬೆಚ್ಚಗಿನ ಘೃತಗಳಿಂದಲೂ ತುಪ್ಪ ತೈಲಗಳ ಅಭ್ಯಂಗದಿಂದಲೂ ಬೆಚ್ಚಗಿನ ಹಾಲು ತುಪ್ಪ ತೈಲಗಳ ಪರಿಷೇಕಗಳಿಂದಲೂ ತೀವ್ರವಾಗಿ ಅವನನ್ನು ಉಪಚರಿಸಬೇಕು. (೨೨೨)

**ಪಿಚ್ಛಾಬಸ್ತಿಯನ್ನು ಹೇಳುತ್ತಾರೆ.**

**ಕೋಷ್ಣೇನವಾತಪ್ರಬಲೇ ಘೃತಮಂಡೇನಾನುವಾಸಯೇಚ್ಛೀಘ್ರಮ್||**
**ಪಿಚ್ಛಾಬಸ್ತಿಂ ದದ್ಯಾತ್ ಕಾಲೇ ತಸ್ಯಾಥವಾ ಸಿದ್ಧಮ್ ||೨೨೩||**

**ಯವಾಸಕುಶಕಾಶಾನಾಂ ಮೂಲಂ ಪುಷ್ಪಂ ಚ ಶಾಲ್ಮಲಮ್||**
**ನ್ಯಗ್ರೋಧೋದುಂಬರಾಶ್ವತ್ಥಶುಂಗಾಶ್ಚ ದ್ವಿಃಪಲೋನ್ಮಿತಾಃ||೨೨೪||**

ದ್ವಿಪ್ರಸ್ಥಂ ಸಲಿಲಸ್ಯೈತತ್ ಕ್ಷೀರಪ್ರಸ್ಥಂ ವಿಪಾಚಯೇತ್ ॥
ಕ್ಷೀರಶೇಷಂ ಕಷಾಯಂ ತು ತತಃ ಕಲ್ಕೈರ್ವಿಮಿಶ್ರಯೇತ್ ॥೨೨೫॥
ಕಲ್ಕಾಃ ಶಾಲ್ಮಲಿನಿರ್ಯಾಸಾಃ ಸಮಂಗಾ ಚಂದನೋತ್ಪಲಮ್ ॥
ವತ್ಸಕಸ್ಯ ಚ ಬೀಜಾನಿ ಪ್ರಿಯಂಗುಃ ಪದ್ಮಕೇಶರಮ್ ॥೨೨೬
ಪಿಚ್ಛಾಬಸ್ತಿರಯಂ ಸಿದ್ಧಃ ಸಕ್ಷೌದ್ರಘೃತಶರ್ಕರಃ ॥
ಪ್ರವಾಹಿಕಾಗುದಭ್ರಂಶರಕ್ತಸ್ರಾವಜ್ವರಾಪಹಃ ॥೨೨೭॥

**ಅರ್ಥ:—**ವಾತವು ಪ್ರಬಲವಿದ್ದರೆ ಬೆಚ್ಚಗಿನ ತುಪ್ಪದ ಮಂಡದಿಂದ ಅನುವಾಸನ ಬಸ್ತಿಯನ್ನು ತೀವ್ರವಾಗಿ ಕೊಡಬೇಕು. ಅಥವಾ ಯೋಗ್ಯ ಕಾಲದಲ್ಲಿ ಪಿಚ್ಛಾಬಸ್ತಿಯನ್ನು ಸಿದ್ಧಪಡಿಸಿ ಕೊಡಬೇಕು. ॥೨೨೩॥ ಯವಾಸ (ನೆಲಇಂಗಳ), ದರ್ಭ, ಕಸಯಿ ಹುಲ್ಲುಗಳ ಬೇರು ಮತ್ತು ಬೂರಲದ ಹೂವು, ಆಲ, ಅತ್ತಿ ಅರಳೆಗಳ ಮುಗುಳುಗಳನ್ನು ೮-೮ ತೊಲೆ ತಕ್ಕೊಂಡು ॥೨೨೪॥ ಕುಟ್ಟಿ ೨೫೬ ತೊಲೆ ನೀರು, ೧೨೮ ತೊಲೆ ಹಾಲು ಹಾಕಿ ಕುದಿಸಿ ಹಾಲು ಮಾತ್ರ ಉಳಿಯಲು ಅದರಲ್ಲಿ ॥೨೨೫॥ ಬೂರಲ ಅಂಟು, ಮಂಜಿಷ್ಠ, ಚಂದನ, ನೀಲಕಮಲ, ಇಂದ್ರಜವೆ, ಪ್ರಿಯಂಗು (ಹಾಲುಮಡ್ಡಿ), ಕಮಲದ ಕೇಶರಗಳ ಕಲ್ಕವನ್ನೂ ॥೨೨೬॥ ತುಪ್ಪ-ಜೇನು-ಸಕ್ಕರೆಗಳನ್ನೂ, ಹಾಕಿ ಪಿಚ್ಛಾಬಸ್ತಿಯನ್ನು ಸಿದ್ಧಪಡಿಸ ಬೇಕು. ಇದು ಪ್ರವಾಹಿಕೆ, ಗುದ ಭ್ರಂಶ, ರಕ್ತಸ್ರಾವ ಜ್ವರಗಳನ್ನು ಕಳೆಯುವದು. ॥೨೨೭॥

ಪ್ರಪೌಂಡರೀಕಂ ಮಧುಕಂ ಪೇಷ್ಯಾನ್ ಬಸ್ತೌ ಯಥೇರಿತಾನ್॥
ಪಿಷ್ಟ್ವಾನುವಾಸನಂ ಸ್ನೇಹಂ ಕ್ಷೀರದ್ವಿಗುಣಿತಂ ಪಚೇತ್ ॥೨೨೮॥

**ಅರ್ಥ:—** ಈ ಪಿಚ್ಛಾಬಸ್ತಿಯಲ್ಲಿ ಹೇಳಿದ ಕಲ್ಕಗಳನ್ನು ಪುಂಡರೀಕ ಕಮಲ, ಜೇಷ್ಠಮಧುದಿನ ಕಲ್ಕವನ್ನೂ ಹಾಲನ್ನೂ ಹಾಲಿನ ಇಮ್ಮಡಿ ಸ್ನೇಹವನ್ನೂ ಹಾಕಿ ಪಿಚ್ಛಾಬಸ್ತಿಯನ್ನು ಸಿದ್ಧಮಾಡಿ ಅನುವಾಸನವನ್ನು ಕೊಡಬೇಕು ॥೨೨೮॥

ಹ್ರೀಬೇರಾದಿಘೃತವನ್ನು ಹೇಳುತ್ತಾರೆ.

ಹ್ರೀಬೇರಮುತ್ಪಲಂ ಲೋಧ್ರಂ ಸಮಂಗಾಚವ್ಯಚಂದನಮ್॥

ಪಾಠಾ ಸಾತಿವಿಷಾ ಬಿಲ್ವಂ ಧಾತಕೀ ದೇವದಾರು ಚ ||೨೯||
ದಾರ್ವಿತ್ವಕ್ ನಾಗರಂ ಮಾಂಸೀ ಮುಸ್ತಂ ಕ್ಷಾರೋ
ಯವಾಗ್ರಜಃ||
ಚಿತ್ರಕಶ್ಚೇತಿ ಪೇಷ್ಯಾಣಿ ಚಾಂಗೇರೀಸ್ವರಸೇ ಘೃತಮ್ ||೩೦||
ಏಕಧ್ಯಂ ಸಾಧಯೇತ್ ಸರ್ವಂ ತತ್‌ಸರ್ಪಿಃ ಪರಮೌಷಧಮ್||
ಅರ್ಶೋಽತಿಸಾರಗ್ರಹಣೀ ಪಾಂಡುರೋಗೇ ಜ್ವರೇಽರುಚೌ ||೩೧||
ಮೂತ್ರಕೃಚ್ಛ್ರೇ ಗುದಭ್ರಂಶೇ ಬಸ್ತ್ಯಾಧ್ಮಾನೇ ಪ್ರವಾಹಣೇ||
ಪಿಚ್ಛಾಸ್ರಾವೇಽರ್ಶಸಾಂ ಶೂಲೇ ಯೋಜ್ಯಮೇತತ್
ತ್ರಿದೋಷನುತ್ ||೩೨||

**ಅರ್ಥಃ**—ಚಾಂಗೇರೀ (ಪುಳ್ಳಿಂಪುರಚಿ) ಸ್ವರಸ ಘೃತದ ನಾಲ್ಕು ಪಾಲು, ಬಾಳದಬೇರು, ನೀಲಕಮಲ, ಲೋಧ್ರ, ಮಂಜಿಷ್ಠ, ಚವಕ, ಚಂದನ ಅಗಳಸುಂಠಿ, ಅತಿವಿಷ, ಬಿಲ್ವ, ಧಾತಕಿಪುಷ್ಪ, ದೇವದಾರು ||೨೯|| ಮರಅರಿಷಿಣತೊಗಟೆ, ಸುಂಠಿ, ಜಟಾಮಾಂಸಿ, ಜೇಕು, ಜವಖಾರ, ಚಿತ್ರಕ ಇವುಗಳ ಚೂರ್ಣವನ್ನು ಘೃತದಲ್ಲಿ ಹಾಕಿ ಕೂಡಿಸಿ ಘೃತವನ್ನು ಸಿದ್ಧಪಡಿಸಬೇಕು. ||೩೦|| ಇದು ಉತ್ತಮ ಔಷಧವಾಗಿದೆ, ಇದನ್ನು ಮೂಲವ್ಯಾಧಿ, ಅತಿಸಾರ, ಸಂಗ್ರಹಣಿ, ಪಾಂಡುರೋಗ, ಜ್ವರ, ಅರುಚಿ ||೩೧|| ಮೂತ್ರ ಕೃಚ್ಛ್ರ, ಗುದಭ್ರಂಶ, ಮೂತ್ರಾಶಯ ಉಬ್ಬೋಣ, ಪ್ರವಾಹಿಕೆ, ಪಿಚ್ಛಾಸ್ರಾವ, ಮೂಲವ್ಯಾಧಿಗಳ ಶೂಲಗಳಲ್ಲಿ ಕೊಡಬೇಕು. ಇದು ತ್ರಿದೋಷನಾಶಕವಾಗಿದೆ. (೩೨)

ಸುನಿಷಣ್ಣಕಚಾಂಗೇರೀ ಘೃತವನ್ನು ಹೇಳುತ್ತಾರೆ.

ಅವಾಕ್‌ಪುಷ್ಪೀ ಬಲಾ ದಾರ್ವೀ ಪೃಶ್ನಿಪರ್ಣೀ ತ್ರಿಕಂಟಕಃ ||
ನ್ಯಗ್ರೋಧೋದುಂಬರಾಶ್ವತ್ಥಶುಂಗಾಶ್ಚ ದ್ವಿಪಲೋನ್ಮಿತಾಃ ||೩೨||
ಕಷಾಯ ಏಷಾಂ ಪೇಷ್ಯಾಸ್ತು ಜೀವಂತೀ ಕಟುರೋಹಿಣೀ ||
ಪಿಪ್ಪಲೀ ಪಿಪ್ಪಲೀಮೂಲಂ ಮರಿಚಂ ದೇವದಾರು ಚ ||೩೪||
ಕಲಿಂಗಾಃ ಶಾಲ್ಮಲಂ ಪುಷ್ಪಂ ವೀರಾ ಚಂದನಮುತ್ಪಲಮ್ ||
ಕಟ್‌ಫಲಂ ಚಿತ್ರಕೋ ಮುಸ್ತಂ ಪ್ರಿಯಂಗ್ವತಿವಿಷೇ ಸ್ಥಿರಾ ||೩೫||

ಪದ್ಮೋತ್ಪಲಾನಾಂ ಕಿಂಜಲ್ಕಃ ಸಮಂಗಾ ಸನಿದಿಗ್ಧಿಕಾಃ ॥
ಬಿಲ್ವಂ ಮೋಚರಸಃ ಪಾಠಾ ಭಾಗಾಃ ಕರ್ಷಸಮಾಃ ಪೃಥಕ್ ॥೨೩೬॥

ಚತುಃಪ್ರಸ್ಥಶೃತಪ್ರಸ್ಥಂ ಕಷಾಯಮುಪತಾರಯೇತ್ ॥
ತ್ರಿಂಶತ್ ಪಲಾನಿ ತು ಪ್ರಸ್ಥೋ ವಿಜ್ಞೇಯೋ ದ್ವಿಪಲಾಧಿಕಃ ॥೨೩೭॥

ಸುನಿಷಣ್ಣಕಚಾಂಗೇರ್ಯೋಃ ಪ್ರಸ್ಥೌ ದ್ವೌ ಸ್ವರಸಸ್ಯ ಚ ॥
ಸರ್ವೈರೇತೈರ್ಯಥೋದ್ದಿಷ್ಟೈರ್ಘೃತಪ್ರಸ್ಥಂ ವಿಪಾಚಯೇತ್॥೨೩೮॥

ಏತದರ್ಶಸ್ವತೀಸಾರೇ ತ್ರಿದೋಷೇ ರುಧಿರಸ್ರುತೌ ॥
ಪ್ರವಾಹಣೇ ಗುದಭ್ರಂಶೇ ಪಿಚ್ಛಾಸು ವಿವಿಧಾಸು ಚ ॥೨೩೯॥

ಉತ್ಥಾನೇ ಚಾತಿಬಹುಶಃ ಶೋಥಶೂಲೇ ಗುದಾಶ್ರಯೇ ॥
ಮೂತ್ರಗ್ರಹೇ ಮೂಢವಾತೇ ಮಂದೇಽಗ್ನಾವರುಚಾವಪಿ ॥೨೪೦॥

ಪ್ರಯೋಜ್ಯಂ ವಿಧಿವತ್ ಸರ್ಪಿರ್ಬಲವರ್ಣಾಗ್ನಿವರ್ಧನಮ್ ॥
ವಿವಿಧೇಷ್ವನ್ನಪಾನೇಷು ಕೇವಲಂ ವಾ ನಿರತ್ಯಯಮ್ ॥೨೪೧॥

**ಅರ್ಥಃ**— ಬಡೇಸೋಪು, ಕಪ್ಪಂಗಡ್ಲೆ, ಮರಅರಿಷಣ, ಮೂರೆಲೆ ಹೊನ್ನೆ, ನೆಗ್ಗಿಲು, ಆಲದ ಮುಗುಳು, ಅತ್ತಿಯ ಮುಗುಳು, ಅರಳಿಯ ಮುಗುಳುಗಳನ್ನು ೮-೮ ತೊಲಿ ತಕ್ಕೊಂಡು ॥೨೩೩॥ ೫೧೨ ತೊಲಿನೀರು ಹಾಕಿ ಕೂಡಿಸಿ ೧೨೮ ತೊಲಿ ಉಳಿಸಬೇಕು. ಅದರಲ್ಲಿ ಶಿಹಾಲೆ, ಕಟು ಕರೋಣಿ, ಹಿಪ್ಪಲಿ, ಮೋಡಿ, ಮೆಣಸು, ದೇವದಾರು,॥೨೩೪॥ಇಂದ್ರಜವೆ, ಬೂರಲಹೂವು, ಕ್ಷೀರಕಾಕೋಲಿ, ಚಂದನ, ನೀಲಕಮಲ, ಕಟ್ಫಲ (ಕಿರಿಶಿ ವನ್ನಿ), ಚಿತ್ರಕ, ಜೇಕು, ಪ್ರಿಯಂಗು (ಹಾಲುಮಡ್ಡಿ) ಅತಿವಿಷ ಒಂದೆಲೆ ಹೊನ್ನೆ, ॥೨೩೫॥ ಬಿಳೀ ಮತ್ತು ನೀಲಕಮಲಗಳ ಕೇಶರ, ಮಂಜಿಷ್ಠ, ನೆಲಗುಳ್ಳದ ಬೇರು, ಬಿಲ್ವ, ಬೂರಲ ಅಂಟು ಅಗಳಸುಂಠಿ ಇವುಗಳನ್ನು ೧-೧ ತೊಲಿ,॥೨೩೬—೨೩೭॥ಗೊರಜಿಯ ಮತ್ತು ಹುಣಚಿಕ್ಕದ ರಸ ಇವು ೧೨೮-೧೨೮ ತೊಲಿ ಹಾಕಿ ಇವೆಲ್ಲವುಗಳಿಂದ ೧೨೮ ತೊಲಿ ತುಪ್ಪವನ್ನು ಸಿದ್ಧಮಾಡಬೇಕು. ॥೨೩೮॥ ಈ ಘೃತವನ್ನು ವಿವಿಧ ಅನ್ನ ಪಾನಗಳೊಡನೆ ಅಥವಾ ಹಾಗೆಯೇ ಮೂಲವ್ಯಾಧಿ, ತ್ರಿದೋಷಾತಿಸಾರ, ರಕ್ತಸ್ರಾವ, ಪ್ರವಾಹಿಕೆ, ಗುದಭ್ರಂಶ, ತರತರದ ಪಿಚ್ಛಾಸ್ರಾವ,॥೨೩೯॥ ಮೇಲೆ ಮೇಲೆ ಶೌಚಕ್ಕೆ ಹೋಗೋಣ, ಗುದದಲ್ಲಿರುವ ಬಾವು ಶೂಲ ಮೂತ್ರಗ್ರಹ,

ಮೂಢವಾತ ಅಗ್ನಿಮಾಂದ್ಯ ಅರುಚಿಗಳಲ್ಲಿ ವಿಧಿಯಂತೆ ಕೊಡಬೇಕು. ಇದು ಬಲ, ವರ್ಣ, ಅಗ್ನಿಗಳನ್ನು ಹೆಚ್ಚಿಸುವದು. ಮತ್ತು ನಿರಪಾಯವೂ ಆಗಿದೆ. ಈ ಯೋಗದಲ್ಲಿ ಪ್ರಸ್ಥವೆಂದರೆ ೩೨ ಪಲವೆಂದು ತಿಳಿಯಬೇಕು, ||೨೪೧||

**ವ್ಯತ್ಯಾಸೋ ಮಧುರಾಮ್ಲಾನಾಂ ಶೀತೋಷ್ಣಾನಾಂ ಚ ಯೋಜಿತಃ||**
**ನಿತ್ಯಮಗ್ನಿಬಲಾಪೇಕ್ಷೀ ಜಯೆತ್ಯರ್ಶಃಕೃತಾನ್ ಗದಾನ್ ||೨೪೨||**

**ತ್ರಯೋ ವಿಕಾರಾಃ ಪ್ರಾಯೇಣ ಯೇ ಪರಸ್ಪರಹೇತವಃ ||**
**ಅರ್ಶಾಂಸಿ ಚಾತಿಸಾರಶ್ಚ ಗ್ರಹಣೀದೋಷ ಏವಚ ||೨೪೩||**

**ಏಷಾಮಗ್ನಿಬಲೇ ಹೀನೇ ವೃದ್ಧಿರ್ವೃದ್ಧೇ ಪರಿಕ್ಷಯಃ ||**
**ತಸ್ಮಾದಗ್ನಿಬಲಂ ರಕ್ಷ್ಯಮೇಷು ತ್ರಿಷು ವಿಶೇಷತಃ ||೨೪೪||**

**ಭೃಷ್ಟೈಃ ಶಾಕೈರ್ಯವಾಗೂಭಿರ್ಯೂಷೈರ್ಮಾಂಸರಸೈಃ ಶುಭೈಃ||**
**ದುಗ್ಧತಕ್ರಪ್ರಯೋಗೈಶ್ಚ ವಿವಿಧೈರ್ಗುದಜಾನ್ ಜಯೇತ್ ||೨೪೫||**

**ಯದ್ವಾಯೋರಾನುಲೋಮ್ಯಾಯ ಯದಗ್ನಿಬಲವೃದ್ಧಯೇ ||**
**ಅನ್ನಪಾನೌಷಧದ್ರವ್ಯಂ ತತ್ ಸೇವ್ಯಂ ನಿತ್ಯಮರ್ಶಸೈಃ ||೨೪೬||**

**ಯದತೋ ವಿಪರೀತಂ ಸ್ಯಾನ್ನಿದಾನೇ ಯಚ್ಚ ದರ್ಶಿತಮ್ ||**
**ಗುದಜಾಭಿಪರೀತೇನ ತತ್ ಸೇವ್ಯಂ ನ ಕದಾಚನ ||೨೪೭||**

**ಅರ್ಥಃ—** ಮಧುರದ್ರವ್ಯ ಹುಳಿದ್ರವ್ಯಗಳನ್ನು ಸರತಿಯಿಂದ ಉಪಯೋಗಿಸಬೇಕು. ಅದರಂತೆ ಶೀತ ಮತ್ತು ಉಷ್ಣದ್ರವ್ಯಗಳನ್ನು ಒಂದರ ನಂತರ ಇನ್ನೊಂದನ್ನು ಉಪಯೋಗಿಸಬೇಕು. ಹೀಗೆ ತನ್ನ ಅಗ್ನಿಯ ಬಲದಂತೆ ಉಪಯೋಗಿಸಿದರೆ ಮೂಲವ್ಯಾಧಿಯ ಉಪದ್ರವಗಳು ಹೋಗುವವು. ||೨೪೨|| ಮೂಲವ್ಯಾಧಿ, ಅತಿಸಾರ, ಸಂಗ್ರಹಣಿಗಳಿಗೆ ಬಹಳ ಮಾಡಿ ಒಂದಕ್ಕೊಂದು ಕಾರಣವಾಗುತ್ತವೆ. ||೨೪೩|| ಅಗ್ನಿಯ ಬಲವು ಕಡಿಮೆಯಾಗಲು ವಿಕಾರಗಳು ಹೆಚ್ಚಾಗುವವು ಅಗ್ನಿಯ ಬಲವು ಹೆಚ್ಚಲು ಈ ವಿಕಾರಗಳು ನಾಶವಾಗುತ್ತವೆ. ಆದ್ದರಿಂದ ಈ ಮೂರರಲ್ಲಿ ಅಗ್ನಿಯನ್ನು ವಿಶೇಷವಾಗಿ ರಕ್ಷಿಸಬೇಕು. ||೨೪೪|| ಕುದಿಸಿ ರಸವನ್ನು ಹಿಂಡಿತೆಗೆದ, ಸ್ನೇಹದಲ್ಲಿ ಕರಿದ ಪಲ್ಯೆ, ಪೇಯು, ಕಟ್ಟು ಒಳ್ಳೇ ಮಾಂಸರಸಗಳಿಂದಲೂ,

ತರತರದ ಹಾಲು ಮಜ್ಜಿಗೆಗಳ ಪ್ರಯೋಗಗಳಿಂದಲೂ ಮೂಲವ್ಯಾಧಿಗಳನ್ನು ಕಳೆಯಬೇಕು. ||೨೪೫|| ಯಾವದು ವಾತವನ್ನು ಅನುಲೋಮನ ಮಾಡುವದೊ, ಅಗ್ನಿಯ ಬಲವನ್ನು ಹೆಚ್ಚಿಸುವದೊ ಅಂಥ ಅನ್ನಪಾನ ಔಷಧಗಳನ್ನು ಮೂಲವ್ಯಾಧಿಯುಳ್ಳವರು ನಿತ್ಯವಾಗಿ ಸೇವಿಸಬೇಕು ||೨೪೬|| ಇದಕ್ಕೆ ವಿಪರೀತವಾಗಿರುವ ( ವಾತಪ್ರತಿಲೋಮಕ, ಅಗ್ನಿಬಲನಾಶಕ ) ಮತ್ತು ಅವಕ್ಕೆ ಕಾರಣವೆಂದು ಹೇಳಿರುವ ದ್ರವ್ಯಗಳನ್ನು ಮೂಲವ್ಯಾಧಿಯುಳ್ಳವನು ಎಂದೂ ಸೇವಿಸಬಾರದು. (೨೪೭)

## ಸಂಗ್ರಹಶ್ಲೋಕಾಃ

ಅರ್ಶಸಾಂ ದ್ವಿವಿಧಂ ಜನ್ಮ ಪೃಥಗಾಯತನಾನಿ ಚ ||
ಸ್ಥಾನಸಂಸ್ಥಾನಲಿಂಗಾನಿ ಸಾಧ್ಯಾಸಾಧ್ಯತ್ವನಿಶ್ಚಯಃ ||೨೪೮||

ಅಭ್ಯಂಗಾಃ ಸ್ವೇದನಂ ಧೂಮಾಃ ಸಾವಗಾಹಾಃ ಪ್ರಲೇಪನಮ್ ||
ಶೋಣಿತಸ್ಯಾವಸೇಕಶ್ಚ ಯೋಗಾ ದೀಪನಪಾಚನಾಃ ||೨೪೯||

ಪಾನಾನ್ನವಿಧಿರಗ್ರ್ಯಶ್ಚ ವಾತವರ್ಚೋಽನುಲೋಮನಃ ||
ಯೋಗಾಃ ಸಂಶಮನೀಯಾಶ್ಚ ಸರ್ಪಿಷಿಂ ವಿವಿಧಾನಿ ಚ ||೨೫೦||

ಬಸ್ತಯಸ್ತಕ್ರಯೋಗಾಶ್ಚ ವರಾರಿಷ್ಟಾಃ ಸಶರ್ಕರಾಃ ||
ಶುಷ್ಕಾರ್ಶಸಾಂ ಪ್ರಶಮನಾಃ ಸ್ರಾವಿಣಾಂ ಲಕ್ಷಣಾನಿ ಚ ||೨೫೧||

ದ್ವಿವಿಧಂ ಸಾನುಬಂಧಾನಾಂ ತಾಭ್ಯಾಂ ಚೇಷ್ಟಂ ಯದೌಷಧಮ್||
ರಕ್ತಸಂಗ್ರಹಣಾಃ ಕ್ವಾಥಾಃ ಪೇಯಾಶ್ಚ ವಿವಿಧಾತ್ಮಕಾಃ ||೨೫೨||

ಸ್ನೇಹಾಹಾರವಿಧಿಶ್ಚಾಗ್ರ್ಯೋ ಯೋಗಾಶ್ಚ ಪ್ರತಿಸಾರಣಾಃ ||
ಪ್ರಕ್ಷಾಲನಾವಗಾಹಾಶ್ಚ ಪ್ರದೇಹಾಃ ಸೇಚನಾನಿ ಚ ||೨೫೩||

ಅತಿವೃತ್ತಸ್ಯ ರಕ್ತಸ್ಯ ವಿಧಾತವ್ಯಂ ಯದೌಷಧಮ್ ||
ತತ್ ಸರ್ವಮಿಹ ನಿರ್ದಿಷ್ಟಂ ಗುದಜಾನಾಂ ಚಿಕಿತ್ಸಿತಮ್ ||೨೫೪||

**ಅರ್ಥ:—** ಮೂಲವ್ಯಾಧಿಗಳ ಎರಡುತರದ ಉತ್ಪತ್ತಿ ಅವುಗಳ ಬೇರೆ ಬೇರೆ ಕಾರಣಗಳು ಸ್ಥಾನ, ಆಕೃತಿ, ಚಿನ್ಹಗಳು, ಸಾಧ್ಯಾಸಾಧ್ಯತೆ, ||೨೪೮|| ಅಭ್ಯಂಗ, ಸ್ವೇದ, ಧೂಮ, ಅವಗಾಹನ, ಲೇಪನ,

ರಕ್ತಮೋಕ್ಷ, ದೀಪನ ಪಾಚನಯೋಗ ||೨೪೯|| ಮಲವಾತಗಳು ಅನುಲೋಮನ ಮಾಡುವ ಉತ್ತಮವಾದ ಅನ್ನಪಾನವಿಧಿ, ಶಮನಔಷಧ, ವಿವಿಧ ||೨೫೦|| ಘೃತಗಳು, ಬಸ್ತಿಗಳು, ತಕ್ರಯೋಗಗಳು, ಸಕ್ಕರೆ ಹಾಕಿದ ಚಲೋ ಅರಿಷ್ಟಗಳು, ಶುಷ್ಕಮೂಲವ್ಯಾಧಿನಾಶಕ ಔಷಧಗಳು, ಆರ್ದ್ರಮೂಲವ್ಯಾಧಿಗಳ ಲಕ್ಷಣಗಳು ||೨೫೧|| ಅವಕ್ಕೆ ಆಗುವ ಕಫಪಿತ್ತಗಳ ಎರಡು ಅನುಬಂಧಗಳು, ಅವಕ್ಕೆ ಯೋಗ್ಯ ಔಷಧಗಳು, ರಕ್ತಸಂಗ್ರಾಹಕ ಕಷಾಯಗಳು, ತರತರದ ಚೂರ್ಣಗಳು ||೨೫೨|| ಉತ್ತಮವಾದ ಸ್ನೇಹವಿಧಿ, ಆಹಾರವಿಧಿ, ಪ್ರತಿಸಾರಣ-ಪ್ರಕ್ಷಾಲನ-ಅವಗಾಹನ ಲೇಪನ-ಸೇಚನಗಳ ಔಷಧಗಳು ||೨೫೩|| ಬಹಳ ರಕ್ತಸ್ರಾವವಾಗಲು ಮಾಡಬೇಕಾದ ವಿಧಿಗಳು ಈ ಎಲ್ಲ ಮೂಲವ್ಯಾಧಿ ಚಿಕಿತ್ಸೆಯು ಇಲ್ಲಿ ಹೇಳಲ್ಪಟ್ಟಿತು. (೨೫೪)

**ಇತ್ಯಗ್ನಿವೇಶಕೃತೇ ತಂತ್ರೇ ದೃಢಬಲಪ್ರತಿಸಂಸ್ಕೃತೇ**
**ಚಿಕಿತ್ಸಿತಸ್ಥಾನೇ 'ಗ್ರಹಣೀಚಿಕಿತ್ಸಿತಂ'ನಾಮ ಪಂಚದಶೋಽಧ್ಯಾಯಃ**

**ಅರ್ಥಃ**— ಈ ಪ್ರಕಾರ ಅಗ್ನಿವೇಶರಿಂದ ರಚಿಸಲ್ಪಟ್ಟು ದೃಢಬಲರಿಂದ ಸಂಸ್ಕಾರ ಹೊಂದಿದ ಚರಕ ಸಂಹಿತೆಯ **ಚಿಕಿತ್ಸಾಸ್ಥಾನದಲ್ಲಿ** **'ಗ್ರಹಣೀದೋಷ ಚಿಕಿತ್ಸೆ'** ಎಂಬ ಹದಿನೈದನೆಯ ಅಧ್ಯಾಯವು ಮುಗಿದುದು.

**ಶ್ರೀಮದಾದ್ಯಬಾಬಾಚಾರ್ಯಪೂಜ್ಯಪಾದಶಿಷ್ಯ ಆದ್ಯಅನಂತಾಚಾರ್ಯರಿಂದ ರಚಿತವಾದ 'ಚರಕ ಚಿಕಿತ್ಸಾ ಬೋಧಿನೀ' ಎಂಬ ಚರಕಸಂಹಿತೆಯ ಟಿಪ್ಪಣಿಯಲ್ಲಿ ಚಿಕಿತ್ಸಾ ಸ್ಥಾನದಲ್ಲಿ 'ಅರ್ಶಚಿಕಿತ್ಸೆ' ಎಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.**



# ೧೫ ನೇ ಅಧ್ಯಾಯ

## (ಸಂಗ್ರಹಣೀಯ ಚಿಕಿತ್ಸೆಯು)

ಮೂಲವ್ಯಾಧಿಯಿಂದ ಸಂಗ್ರಹಣಿಯಾಗುವದರಿಂದ ಮೂಲವ್ಯಾಧಿಯ ನಂತರ ಸಂಗ್ರಹಣಿಯನ್ನು ಹೇಳುತ್ತಾರೆ.

**ಅಥಾತೋಗ್ರಹಣೀದೋಷಚಿಕಿತ್ಸಿತಂ ವ್ಯಾಖ್ಯಾಸ್ಯಾಮಃ ॥**

ಅರ್ಥ:— ಇನ್ನುಮೇಲೆ ಸಂಗ್ರಹಣಿಯ ಚಿಕಿತ್ಸೆಯನ್ನು ಹೇಳುವೆವು.

**ಇತಿ ಹ ಸ್ಮಾಹ ಭಗವಾನಾತ್ರೇಯಃ ॥೧॥**

ಅರ್ಥ:— ಪೂಜ್ಯರಾದ ಆತ್ರೇಯ ಋಷಿಗಳು ಹೀಗೆ ಹೇಳುತ್ತಾರೆ. (೧)

**ಆಯುರ್ವರ್ಣೋ ಬಲಂ ಸ್ವಾಸ್ಥ್ಯಮುತ್ಸಾಹೋಪಚಯೌ ಪ್ರಭಾ ॥**
**ಓಜಸ್ತೇಜೋಽಗ್ನಯಃ ಪ್ರಾಣಾಶ್ಚೋಕ್ತಾ ದೇಹಾಗ್ನಿಹೇತುಕಾಃ॥೨॥**
**ಶಾಂತೇಽಗ್ನೌ ಮ್ರಿಯತೇ ಯುಕ್ತೇ ಚಿರಂ ಜೀವತ್ಯನಾಮಯಃ ॥**
**ರೋಗೀ ಸ್ಯಾದ್ ವಿಕೃತೇ ಮೂಲಮಗ್ನಿಸ್ತಸ್ಮಾನ್ನಿರುಚ್ಯತೇ ॥೩॥**
**ಯದನ್ನಂ ದೇಹಧಾತ್ವೋಜೋಬಲವರ್ಣಾದಿಪೋಷಕಮ್ ॥**
**ತತ್ರಾಗ್ನಿರ್ಹೇತುರಾಹಾರಾನ್ನ ಹ್ಯಪಕ್ವಾದ್ ರಸಾದಯಃ ॥೪॥**

ಅರ್ಥಃ— ಆಯುಷ್ಯ, ಬಣ್ಣ, ಶಕ್ತಿ, ಸ್ವಸ್ಥತೆ, ಉತ್ಸಾಹ, ಪುಷ್ಟಿ, ಕಾಂತಿ, ಓಜಸ್ಸು, ಶುಕ್ರ, ಅಗ್ನಿ, ಪ್ರಾಣಗಳಿಗೆ ದೇಹದ ಅಗ್ನಿಯೇ ಕಾರಣವಾಗಿದೆ. ॥೨॥ ಈ ಅಗ್ನಿಯು ಶಾಂತವಾಗಲು ಮನುಷ್ಯನು ಸಾಯುವನು. ಸರಿಯಾಗಿರಲು ನಿರೋಗಿಯಾಗಿ ಬಹಳ ದಿವಸ ಬದುಕುವನು. ಅದು ವಿಕೃತವಾಗಲು ರೋಗಿಯಾಗುವನು. ಆದ್ದರಿಂದ ದೇಹಾಗ್ನಿಯು ಎಲ್ಲಕ್ಕೂ ಮೂಲವೆಂದು ಹೇಳಲ್ಪಡುತ್ತದೆ. ॥೩॥ ಅನ್ನವು, ದೇಹದ ಧಾತು ಓಜ ಬಲ ವರ್ಣ ಮುಂತಾದವುಗಳನ್ನು ಪೋಷಿಸುವದಕ್ಕೆ ಅಗ್ನಿಯೇ ಕಾರಣವು ಯಾಕಂದರೆ ಪಚನವಾಗದ ಆಹಾರದಿಂದ ರಸ ಮುಂತಾದವು ಉಂಟಾಗವು. (೪)

ಅಗ್ನಿಯು ಅನ್ನವನ್ನು ಪಚನಮಾಡುವ ರೀತಿಯನ್ನು ಹೇಳುತ್ತಾರೆ.

ಅನ್ನಮಾದಾನಕರ್ಮಾ ತು ಪ್ರಾಣಃ ಕೋಷ್ಠಂ ಪ್ರಕರ್ಷತಿ ॥
ತದ್ದ್ರವೈರ್ಭಿನ್ನಸಂಘಾತಂ ಸ್ನೇಹೇನ ಮೃದುತಾಂ ಗತಮ್ ॥೫॥

ಸಮಾನೇನಾವಧೂತೋಽಗ್ನಿರುದೀರ್ಣಃ ಪವನೇನ ತು ॥
ಕಾಲೇ ಭುಕ್ತಂ ಸಮಂ ಸಮ್ಯಕ್ ಪಚತ್ಯಾಯುರ್ವಿವೃದ್ಧಯೇ ॥೬॥

ಏವಂ ರಸಮಲಾಯಾನ್ನಮಾಶಯಸ್ಥಸ್ಸ್ಥಿತಃ ॥
ಪಚತ್ಯಗ್ನಿರ್ಯಥಾ ಸ್ಥಾಲ್ಯಾಮೋದನಾಯಾಂಬುತಂಡುಲಮ್ ॥೭॥

**ಅರ್ಥ:—** ತೆಗೆದುಕೊಳ್ಳುವ ಕೆಲಸಮಾಡುವ ಪ್ರಾಣವಾಯುವು ಅನ್ನವನ್ನು ಕೋಷ್ಠಕ್ಕೆ ಎಳೆದುಕೊಳ್ಳುವದು. ಅಲ್ಲಿ ಕ್ಲೇದಕ ಕಫಗಳಿಂದ ಅದರಲ್ಲಿಯ ಗಂಟುಗಳು ಒಡೆದು, ಕಫದಲ್ಲಿಯ ಸ್ನೇಹದಿಂದ ಅದು ಮೃದುವಾಗುವದು. ।।೫।। ಸಮಾನವಾಯುವಿನಿಂದ ಬೀಸಲ್ಪಡುವದರಿಂದ ಪ್ರದೀಪ್ತವಾದ ಅಗ್ನಿಯು ಯೋಗ್ಯಕಾಲದಲ್ಲಿ ಯೋಗ್ಯಪ್ರಮಾಣದಿಂದ ತಿಂದ ಅನ್ನವನ್ನು ಚೆನ್ನಾಗಿ ಪಚನಮಾಡುವದು. ಆದರಿಂದ ಆಯುಷ್ಯ ವೃದ್ಧಿಯಾಗುವದು. ।।೬।। ಬೆಂಕಿಯು ಹೇಗೆ ಪಾತ್ರೆಯೊಳಗಿದ್ದ ಅಕ್ಕಿನೀರುಗಳನ್ನು ಬೇಯಿಸಿ ಅನ್ನವನ್ನುಂಟು ಮಾಡುವದೋ ಹಾಗೆ ಕೆಳಗೆ ಪಕ್ವಾಶಯದಲ್ಲಿ ಅಗ್ನಿಯು ಆಮಾಶಯದಲ್ಲಿದ್ದ ಅನ್ನವನ್ನು ಬೇಯಿಸಿ ರಸಧಾತು ಮತ್ತು ಮಲಗಳನ್ನುಂಟುಮಾಡುದದು. (೭)

ಅನ್ನಸ್ಯ ಭುಕ್ತಮಾತ್ರಸ್ಯ ಷಡ್ರಸಸ್ಯ ಪ್ರಪಾಕತಃ ॥
ಮಧುರಾಖ್ಯಾತ್ ಕಫೋ ಭಾವಾತ್ ಫೇನಭಾವ ಉದೀರ್ಯತೇ ॥೮॥

ಪರಂ ತು ಪಚ್ಯಮಾನಸ್ಯ ವಿದಗ್ಧಸ್ಯಾಮ್ಲಭಾವತಃ ॥
ಆಶಯಾಚ್ಚ್ಯವಮಾನಸ್ಯ ಪಿತ್ತಮಚ್ಛಮುದೀರ್ಯತೇ ॥೯॥

ಪಕ್ವಾಶಯಂ ತು ಪ್ರಾಪ್ತಸ್ಯ ಶೋಷ್ಯಮಾಣಸ್ಯ ವಹ್ನಿನಾ ॥
ಪರಿಪಿಂಡಿತಪಕ್ವಸ್ಯ ವಾಯುಃ ಸ್ಯಾತ್ ಕಟುಭಾವತಃ ॥೧೦॥

ಅನ್ನಮಿಷ್ಟಂ ಹ್ಯುಪಕೃತಮಿಷ್ಟೈರ್ಗಂಧಾದಿಭಿಃ ಪೃಥಕ್ ॥
ದೇಹೇ ಪ್ರೀಣಾತಿ ಗಂಧಾದೀನ್ ಘ್ರಾಣಾದೀನೀಂದ್ರಿಯಾಣಿ ಚ ॥೧೧॥

**ಅರ್ಥ:**—ಆರೂ ರಸವುಳ್ಳ ಅನ್ನಪಾನ್ನ ಉಂಡಕೂಡಲೇ ಅದರಲ್ಲಿದ್ದ ಮಧುರದ್ರವ್ಯದ ಪಾಕವಾಗಿ ಒಂದುಗಿನ ರೂಪವ ಕಫವೆಂಬ ಮಲವು ಉಂಟಾಗುತ್ತದೆ. ||೮|| ಆಮೇಲೆ ಅರ್ಧಪಚನವಾಗಲು ಆಮಾಶಯ ದಿಂದ ಕೆಳಗೆ ಇಳಿಯುವ ಹುಳಿಯಾದ ಅನ್ನದಿಂದ ಸ್ವಚ್ಛವಾದ ಪಿತ್ತವೆಂಬ ಮಲವು ಉಂಟಾಗುತ್ತದೆ. ||೯|| ಪಕ್ವಾಶಯಕ್ಕೆ ಬಂದನಂತರ ಅಗ್ನಿ ಯಿಂದ ಒಣಗಿ ಪಕ್ವ ಮತ್ತು ಮುದ್ದೆಯಾದ ಅನ್ನದ ಕಾರಗುಣದಿಂದ ವಾತವುಂಟಾಗುತ್ತದೆ. ||೧೦|| ಇಷ್ಟವಾದಂಥ ಅನ್ನವು ಇಷ್ಟವಾದಂಥ ಗಂಧ ಮುಂತಾದ ಗುಣಗಳಿಂದ ಯುಕ್ತವಾಗಿದ್ದರೆ ದೇಹದಲ್ಲಿದ್ದ ಗಂಧಾದಿ ಗುಣಗಳನ್ನೂ ಪ್ರಾಣಾದಿವಾಯುಗಳನ್ನೂ ನೇತ್ರಾದಿ ಇಂದ್ರಿಯಗಳನ್ನೂ ಪೋಷಿಸುತ್ತದೆ. (೧೧)

ಅದು ಹೇಗೆ ಗಂಧಾದಿಗಳನ್ನು ಪೋಷಿಸುವದೆಂಬದನ್ನು ಹೇಳುತ್ತಾರೆ.

ಭೌಮಾಪ್ಯಾಗ್ನೇಯವಾಯವ್ಯಾಃ ಪಂಚೋಷ್ಮಾಣಃ ಸನಾಭಸಾಃ ||
ಪಂಚಾಹಾರಗುಣಾನ್ ಸ್ವಾನ್ ಸ್ವಾನ್ ಪಾರ್ಥಿವಾದೀನ್ ಪಚಂತಿ ಹಿ

ಯಥಾಸ್ವೈರೇವ ಪುಷ್ಯಂತೇ ದೇಹೇ ದ್ರವ್ಯಗುಣಾಃ ಪೃಥಕ್ ||
ಪಾರ್ಥಿವಾಃ ಪಾರ್ಥಿವಾನೇವ ಶೇಷಾಃ ಶೇಷಾಂಶ್ಚ ಕೃತ್ಸ್ನಶಃ ||೧೩||

ಸಪ್ತಭಿರ್ದೇಹಧಾತಾರೋ ಧಾತವೋ ದ್ವಿವಿಧಂ ಪುನಃ ||
ಯಥಾಸ್ವಮಗ್ನಿಭಿಃ ಪಾಕಂ ಯಾಂತಿ ಕಿಟ್ಟಪ್ರಸಾದತಃ ||೧೪||

ರಸಾದ್ ರಕ್ತಂ ತತೋ ಮಾಂಸಂ ಮಾಂಸಾನ್ಮೇದಸ್ತತೋಽಸ್ಥಿ ಚ ||
ಅಸ್ಥ್ನೋ ಮಜ್ಜಾ ತತಃ ಶುಕ್ರಂ ಶುಕ್ರಾದ್ ಗರ್ಭಃ ಪ್ರಸಾದಜಃ||೧೫||

**ಅರ್ಥ:**— ಭೌಮ, ಆಪ್ಯ, ಆಗ್ನೇಯ, ವಾಯವ್ಯ, ನಾಭಸ ಎಂಬ ಐದು ಅಗ್ನಿಗಳು ಇರುತ್ತವೆ. ಅವು ಆಹಾರದಲ್ಲಿದ್ದ ತಮ್ಮ ತಮ್ಮ ಗುಣ ಗಳನ್ನು ಪಚನಮಾಡುವವು. ||೧೨|| ಆದ್ದರಿಂದ ಆಯಾ ಅಗ್ನಿಗಳಿಂದಲೇ ದೇಹದಲ್ಲಿದ್ದ ಆಯಾಗುಣಗಳು ಬೇರೆ ಬೇರೆಯಾಗಿ ಪೋಷಿಸಲ್ಪಡುತ್ತವೆ ಹೇಗೆಂದರೆ ಆಹಾರದಲ್ಲಿದ್ದ ಪಾರ್ಥಿವ ಗುಣಗಳಾದ ಗುರು, ಖರ, ಕಠಿಣ, ಮಂದ, ಸ್ಥಿರ, ವಿಶದ, ಸಾಂದ್ರ, ಸ್ಥೂಲ, ಗಂಧಗಳು ದೇಹದಲ್ಲಿದ್ದ ಅವೇ ಗುರ್ವಾದಿ ಗುಣಗಳನ್ನೂ, ಆಹಾರದಲ್ಲಿದ್ದ ಆಪ್ಯಗುಣಗಳಾದ ದ್ರವ

ಸ್ನಿಗ್ಧ, ಶೀತ, ಮಂದ, ಸರ, ಸಾಂದ್ರ, ಮೃದು, ಪಿಚ್ಛಿಲ, ರಸಗಳು ಅವೇ ದ್ರವಾದಿ ಗುಣಗಳನ್ನೂ ಅನ್ನದಲ್ಲಿದ್ದ ಆಗ್ನೇಯ ಗುಣಗಳಾದ ಉಷ್ಣ, ತೀಕ್ಷ್ಣ, ಸೂಕ್ಷ್ಮ, ಲಘು, ರೂಕ್ಷ ವಿಶದಗಳು ಅವೇ ಉಷ್ಣಾದಿಗುಣಗಳನ್ನೂ ಆಹಾರದಲ್ಲಿದ್ದ ವಾಯವ್ಯಗುಣಗಳಾದ ಲಘು, ಶೀತ, ರೂಕ್ಷ, ಖರ, ವಿಶದ, ಸೂಕ್ಷ್ಮ ಸ್ಪರ್ಶಗಳು ದೇಹದಲ್ಲಿಗುವ ಅವೇ ಲಘ್ವಾದಿ ಗುಣಗಳನ್ನೂ, ಅನ್ನದಲ್ಲಿದ್ದ ನಾಭಸಗುಣಗಳಾದ ಮೃದು, ಲಘು, ಸೂಕ್ಷ್ಮ ಶ್ಲಕ್ಷ್ಣ ಶಬ್ದಗಳು ದೇಹದಲ್ಲಿರುವ ಅವೇ ಮೃದ್ವಾದಿಗುಣಗಳನ್ನೂ ಪೋಷಿಸುತ್ತವೆ. ||೧೩|| ದೇಹವನ್ನು ಧಾರಣಮಾಡುವ ಸಪ್ತಧಾತುಗಳು ತಮ್ಮಲ್ಲಿರುವ ಏಳು ಅಗ್ನಿಗಳಿಂದ ಕಿಟ್ಟ ಮತ್ತು ಪ್ರಸಾದವೆಂಬ ಎರಡುತರದ ಪಾಕವನ್ನು ಹೊಂದುತ್ತವೆ. ||೧೪|| ಅದು ಹೇಗೆಂದರೆ ಜಠರಾಗ್ನಿಯಿಂದ ಪಕ್ವವಾದ ಅನ್ನದಿಂದ ಉಂಟಾದ ಪ್ರಸಾದರೂಪ ರಸಧಾತುವು ತನ್ನಲ್ಲಿಯ, ಅಗ್ನಿಯಿಂದ ಪಕ್ವವಾಗಿ ಪ್ರಸಾದರೂಪವಾದ ರಕ್ತವನ್ನುಂಟುಮಾಡುತ್ತದೆ. ಅದರಂತೆ ರಕ್ತಧಾತುವು ತನ್ನಲ್ಲಿದ್ದ ಅಗ್ನಿಯಿಂದ ಪಕ್ವವಾಗಿ ಪ್ರಸಾದ ರೂಪವಾದ ಮಾಂಸವನ್ನುಂಟು ಮಾಡುತ್ತದೆ. ಇದರಂತೆ ಮಾಂಸದಿಂದ ಪ್ರಸಾದಭೂತ ಮೇದ, ಅದರಿಂದ ಪ್ರಸಾದಭೂತ ಅಸ್ಥಿ, ಅದರಿಂದ ಪ್ರಸಾದ ಭೂತ ಮಜ್ಜೆ, ಅದರಿಂದ ಪ್ರಸಾದಭೂತ ಶುಕ್ರ, ಅದರ ಪ್ರಸಾದದಿಂದ ಗರ್ಭವು ಉಂಟಾಗುತ್ತದೆ. (೧೫)

**ರಸಾತ್ ಸ್ತನ್ಯಂ ಸ್ತ್ರಿಯಾ ರಕ್ತಮಸೃಜಃ ಕಂಡರಾಃ ಸಿರಾಃ ||**
**ಮಾಂಸಾದ್ವಸಾ ತ್ವಚಃ ಷಟ್ ಚ ಮೇದಸಃ ಸ್ನಾಯುಸಂಭವಃ೧೬||**

**ಅರ್ಥಃ**— ಸ್ತ್ರೀಯರ ರಸಧಾತುವಿನಿಂದ ಸ್ತನ್ಯವೂ ಮತ್ತು ರಕ್ತವೂ ಉತ್ಪನ್ನವಾಗುತ್ತದೆ. (ಆಕೆಯು ಗರ್ಭಿಣಿಯಿದ್ದರೆ ಮಾತ್ರ - ಇಲ್ಲವಾದರೆ ರಸದಿಂದ ರಕ್ತವೇ ಉಂಟಾಗುವದು.) ರಕ್ತದಿಂದ ಹಿಂದೆ ಹೇಳಿದಂತೆ ಮಾಂಸವೂ ಉತ್ಪನ್ನವಾಗುವದಲ್ಲದೆ ಕಂಡರೆಗಳೂ ಶಿರೆಗಳೂ ಉತ್ಪನ್ನವಾಗುತ್ತವೆ. ಅದರಂತೆ ಮಾಂಸದಿಂದ ಮೇದವಲ್ಲದೆ ನೆಣ ಮತ್ತು ಆರು ತ್ವಚೆಗಳೂ ಮೇದದಿಂದ ಅಸ್ಥಿಯಲ್ಲದೆ, ಸ್ನಾಯುಗಳೂ ಉಂಟಾಗುತ್ತವೆ. (೧೬)

**ಕಿಟ್ಟಮನ್ನಸ್ಯ ವಿಣ್ಮೂತ್ರಂ ರಸಸ್ಯ ತು ಕಫೋಽಸೃಜಃ ||**

ಪಿತ್ತಂ ಮಾಂಸಸ್ಯ ಖಮಲಾ ಮಲಃ ಸ್ವೇದಸ್ತು ಮೇದಸಃ ॥೧೭॥
ಸ್ಯಾತ್ ಕಿಟ್ಟಂ ಕೇಶಲೋಮಾಸ್ಥ್ನೋ ಮಜ್ಜ್ಞಃ ಸ್ನೇಹೋಽಕ್ಷಿವಿಟ್ತ್ವಚಾಮ್ ॥
ಪ್ರಸಾದಕಿಟ್ಟೌ ಧಾತೂನಾಂ ಪಾಕಾದೇವಂ ದ್ವಿಧರ್ಛತಃ ॥೧೮॥

ಅರ್ಥ:--- ಅನ್ನದ ಕಿಟ್ಟವು ಮಲಮೂತ್ರಗಳು. ರಸಧಾತುವಿನ ಕಿಟ್ಟವು ಕಫವು. ರಕ್ತದ ಕಿಟ್ಟವು ಪಿತ್ತವು. ಮಾಂಸದ ಕಿಟ್ಟವು ಶರೀರದಲ್ಲಿರುವ ಎಲ್ಲ ಛಿದ್ರಗಳ ಮಲಗಳು. ಮೇದದ ಕಿಟ್ಟವು ಸ್ವೇದವು. ॥೧೭॥ ಅಸ್ಥಿಯ ಕಿಟ್ಟವು ಕೂದಲು ರೋಮಗಳು. ಮಜ್ಜದ ಕಿಟ್ಟವು ಸ್ನೇಹವು. (ಈ ರಸಾದಿ ಧಾತುಗಳ ಪ್ರಸಾದಭಾಗವು ಕ್ರಮವಾಗಿ ರಕ್ತ, ಮಾಂಸ, ಮೇದ ಅಸ್ಥಿ ಮಜ್ಜ ಶುಕ್ರಗಳು ಎಂದು ಈ ಪೂರ್ವದಲ್ಲಿಯೇ ಹೇಳಲಾಗಿದೆ.) ತ್ವಚೆಯ ಕಿಟ್ಟವು ಕಣ್ಣಲ್ಲಿ ಬರುವ ಪಿಚ್ಚವು. ಈ ಪ್ರಸಾದ ಕಿಟ್ಟಗಳು ಧಾತುಗಳ ಪಾಕದಿಂದಲೇ ಉಂಟಾಗುತ್ತವೆ. (೧೮)

ಪರಸ್ಪರೋಪಸಂಸ್ತಮ್ಭಾದ್ಧಾತುಸ್ನೇಹಪರಂಪರಾ ॥
ವೃಷ್ಯಾದೀನಾಂ ಪ್ರಭಾವಸ್ತು ಪುಷ್ಣಾತಿ ಬಲಮಾಶು ಹಿ ॥೧೯॥
ಷಡ್‌ಭಿಃ ಕೇಚಿದಹೋರಾತ್ರೈರಿಚ್ಛಂತಿ ಪರಿವರ್ತನಮ್ ॥
ಸಂತತ್ಯಾ ಭೋಜ್ಯಧಾತೂನಾಂ ಪರಿವೃತ್ತಿಸ್ತು ಚಕ್ರವತ್ ॥೨೦॥

ಅರ್ಥ:— ಧಾತುಪೋಷಣೆಯ ಪರಂಪರೆಯು ಪರಸ್ಪರವಾಗಿ ನಡೆಯುತ್ತದೆ. ವೃಷ್ಯಮುಂತಾದ ದ್ರವ್ಯಗಳಿಂದ ಶುಕ್ರದ ಉತ್ಪತ್ತಿಯು ಕೂಡಲೇ ಆಗುವದು ಅದು ಅದರ ಪ್ರಭಾವ ಬಲದಿಂದ. ॥೧೯॥ ಅನ್ನದಿಂದ ಶುಕ್ರದವರೆಗೆ ಆಗುವ ಪರಿವರ್ತನಕ್ಕೆ ಆರುದಿವಸಗಳು ಹತ್ತುವವೆಂದು ಕೆಲವರು ಹೇಳುತ್ತಾರೆ. ಅನ್ನದಿಂದ ರಸ ಧಾತು ಅದರಿಂದ ರಕ್ತ ಹೀಗೆ ಚಕ್ರದಂತೆ ಪರಿವರ್ತನವು ನಡೆದಿರುತ್ತದೆ. (ಆದ್ದರಿಂದ ರಸಾಧಿಧಾತುಗಳು ತೀರಿ ಹೋಗಿ ಮನುಷ್ಯನು ಸಾಯುವ ಪ್ರಸಂಗ ಬರುವದಿಲ್ಲ.) (೨೦)

ಅಗ್ನಿವೇಶರು ಗುರುಗಳಿಗೆ ಪ್ರಶ್ನೆಮಾಡುತ್ತಾರೆ.

ಇತ್ಯುಕ್ತವಂತಮಾಚಾರ್ಯಂ ಶಿಷ್ಯಸ್ತ್ವಿದಮಚೋದಯತ್॥

ರಸಾದ್‌ರಕ್ತಂ ವಿಸದೃಶಾತ್ ಕಥಂ ದೇಹೇಽಭಿಜಾಯತೇ ॥೨೧॥

ರಸಸ್ಯ ಚ ನ ರಾಗೋಽಸ್ತಿ ಸ ಕಥಂ ಯಾತಿ ರಕ್ತತಾಮ್ ॥
ದ್ರವಾದ್‌ರಕ್ತಾತ್ ಸ್ಥಿರಂ ಮಾಂಸಂ ಕಥಂ ತಜ್ಜಾಯತೇ ನೃಣಾಮ್ ॥೨೨॥

ದ್ರವಧಾತೋಃ ಸ್ಥಿರಾನ್ಮಾಂಸಾನ್ಮೇದಸಃ ಸಂಭವಃ ಕಥಮ್ ॥
ಶ್ಲಕ್ಷ್ಣಾಭ್ಯಾಂ ಮಾಂಸಮೇದೋಭ್ಯಾಂ ಖರತ್ವಂ ಕಥಮಸ್ಥಿಷು॥೨೩॥

ಖರೇಷ್ವಸ್ಥಿಷು ಮಜ್ಜಾ ಚ ಕೇನ ಸ್ನಿಗ್ಧೋ ಮೃದುಸ್ತಥಾ ॥
ಮಜ್ಜ್ಞಸ್ತು ಪರಿಣಾಮೇನ ಯದಿ ಶುಕ್ರಂ ಪ್ರವರ್ತತೇ ॥೨೪॥

ಸರ್ವದೇಹಗತಂ ಶುಕ್ರಂ ಪ್ರವದಂತಿ ಮನೀಷಿಣಃ ॥
ತಥಾಸ್ಥಿಮಧ್ಯಮಜ್ಜ್ಞಶ್ಚ ಶುಕ್ರಂ ಭವತಿ ದೇಹಿನಾಮ್ ॥೨೫॥

ಛಿದ್ರಂ ನ ದೃಶ್ಯತೇಽಸ್ಥ್ನಾಂ ತಸ್ಮಿನ್ನಿಃಸರತಿ ವಾ ಕಥಮ್ ॥೨೫½॥

**ಅರ್ಥಃ**— ಹೀಗೆ ಹೇಳಿದ ಗುರುಗಳಿಗೆ ಶಿಷ್ಯರಾದ ಅಗ್ನಿವೇಶರು ಕೇಳಿದರು. ೧ ರಕ್ತವನ್ನು ಪ್ರವೇಶಿಸುವ ರಸಧಾತುವಿನಿಂದ ರಕ್ತವು ಹೇಗೆ ಉಂಟಾಗುತ್ತದೆ ॥೨೧॥ ಏಕೆಂದರೆ ರಸದಲ್ಲಿ ಕೆಂಪು ಬಂಣವಿರುವದಿಲ್ಲ ಆದ್ದರಿಂದ ಅದು ಕೆಂಪು ಹೇಗೆ ಆಗುವದು. ೨ ದ್ರವವಾದಂಥ ರಕ್ತದಿಂದ ಮನುಷ್ಯರ ಗಟ್ಟಿಯಾದ ಮಾಂಸವು ಹೇಗೆ ಉಂಟಾಗುತ್ತದೆ. ॥೨೨॥ ೩ ದ್ರವಧಾತುವಾದ ಮೇದವು ಗಟ್ಟಿಯಾದ ಮಾಂಸದಿಂದ ಹೇಗೆ ಉಂಟಾಗುವದು. ೪ ಮೆತ್ತನ್ನ ಮಾಂಸ ಮೇದಗಳಿಂದ ಬಿರುಸಾದ ಎಲುವುಗಳು ಹೇಗೆ ಆಗುತ್ತವೆ. ॥೨೩॥ ೫ ಬಿರುಸಾದ ಎಲುವುಗಳಲ್ಲಿ ಸ್ನಿಗ್ಧ ಮತ್ತು ಮೃದುವಾದ ಮಜ್ಜವು ಹೇಗೆ ಉಂಟಾಗುತ್ತದೆ. ೬ ಮಜ್ಜದ ಪರಿಣಾಮದಿಂದ ಶುಕ್ರವುಂಟಾಗುತ್ತದೆಂದು ಹೇಳಿದಿರಿ. ॥೨೪॥ ಆದರೆ ಪಂಡಿತರು ಶುಕ್ರವು ಶರೀರದ ಎಲ್ಲಕಡೆಗೆ ಇರುತ್ತದೆಂದು ಹೇಳುತ್ತಾರೆ. ಅಸ್ಥಿಯ ಮಧ್ಯದಲ್ಲಿರುವ ಮಜ್ಜದಿಂದ ಮನುಷ್ಯರ ಶುಕ್ರವು ಉತ್ಪನ್ನವಾಗುತ್ತದೆ. ॥೨೫॥ ಅಸ್ಥಿಗಳಿಗಂತೂ ಛಿದ್ರಗಳು ಕಾಣಿಸುವದಿಲ್ಲ. ಆದ್ದರಿಂದ ಅದು ಅಲ್ಲಿಂದ ಹೊರಗೆ ಬರುವದು ಹೇಗೆ? (೨೫½)

ಗುರುಗಳು ಉತ್ತರವನ್ನು ಹೇಳುತ್ತಾರೆ.

ಏವಮುಕ್ತಸ್ತು ಶಿಷ್ಯೇಣ ಗುರುಃ ಪ್ರಾಹೇದಮುತ್ತರಮ್ ॥೨೬॥

ತೇಜೋ ರಸಾನಾಂ ಸರ್ವೇಷಾಂ ಮನುಜಾನಾಂ ಯದುಚ್ಯತೇ ॥
ಪಿತ್ತೋಷ್ಮಣಃ ಸರಾಗೇಣ ರಸೋ ರಕ್ತತ್ವಮೃಚ್ಛತಿ ॥೨೭॥

ವಾಯ್ವಂಬುತೇಜಸಾ ರಕ್ತಮುಷ್ಮಣಾ ಚಾಭಿಸಂಯುತಮ್ ॥
ಸ್ಥಿರತಾಂ ಪ್ರಾಪ್ಯ ಮಾಂಸಂ ಸ್ಯಾತ್ ಸ್ವೋಷ್ಮಣಾ ಪಕ್ವಮೇವ ತತ್ ॥೨೮॥

ಸ್ವತೇಜೋಽಂಬುಗುಣಸ್ನಿಗ್ಧೋದ್ರಿಕ್ತಂ ಮೇದೋಽಭಿಜಾಯತೇ॥
ಪೃಥಿವ್ಯಗ್ನ್ಯನಿಲಾದೀನಾಂ ಸಂಘಾತಃ ಸ್ವೋಷ್ಮಣಾ ಕೃತಃ ॥೨೯॥

ಖರತ್ವಂ ಪ್ರಕರೋತ್ಯಸ್ಯ ಜಾಯತೇಽಸ್ಥಿ ತತೋ ನೃಣಾಮ್ ॥
ಕರೋತಿ ತತ್ರ ಸೌಷಿರ್ಯಮಸ್ಥ್ನಾಂ ಮಧ್ಯೇ ಸಮೀರಣಃ ॥೩೦॥

ಮೇಧಸಾಸ್ಥೀನಿ ಪೂರ್ಯಂತೇ ಸ್ನೇಹೋ ಮಜ್ಜಾ ತತಃ ಸ್ಮೃತಃ ॥
ತಸ್ಮಾನ್ಮಜ್ಜ್ಞಸ್ತು ಯಃ ಸ್ನೇಹಃ ಶುಕ್ರಂ ಸಂಜಾಯತೇ ತತಃ ॥೩೧॥

ವಾಯ್ವಾಕಾಶಾದಿಭಿರ್ಭಾವೈಃ ಸೌಷಿರ್ಯಂ ಜಾಯತೇಽಸ್ಥಿಷು ॥
ತೇನ ಸ್ರವತಿ ತಚ್ಛುಕ್ರಂ ನವಾತ್ ಕುಂಭಾದಿವೋದಕಮ್ ॥೩೨॥

ಸ್ರೋತೋಭಿಃ ಸ್ಯಂದತೇ ದೇಹಾತ್ ಸಮಂತಂ ಶುಕ್ರವಾಹಿಭಿಃ ॥
ಹರ್ಷೇಣೋದೀರಿತಂ ವೇಗಾತ್ ಸಙ್ಕಲ್ಪಾಚ್ಚ ಮನೋಭವಾತ್ ॥೩೩॥

ವಿಲೀನಂ ಘೃತವದ್ ವ್ಯಾಯಾಮೋಷ್ಮಣಾ ಸ್ಥಾನವಿಚ್ಯುತಮ್ ॥
ಬಸ್ತೌ ಸಂಭೃತ್ಯ ನಿರ್ಯಾತಿ ಸ್ಥಲಾನ್ನಿಮ್ನಮಿವೋದಕಮ್ ॥೩೪॥

ಅರ್ಥಃ— ಹೀಗೆ ಶಿಷ್ಯನು ಕೇಳಲು ಗುರುಗಳು ಉತ್ತರವನ್ನು ಹೇಳುತ್ತಾರೆ ॥೨೬॥ ೧ ಎಲ್ಲ ಮನುಷ್ಯರಲ್ಲಿರುವ ರಸದ ತೇಜದ ರಾಗದಿಂದ, ಪಿತ್ತದ ಉಷ್ಣತೆಯಿಂದ ಪಚನವಾಗಿ, ರಸವು ರಕ್ತವಾಗುವದ ॥೨೭॥ ೨ ಆ ರಕ್ತವು ವಾಯು ಮತ್ತು ಜಲದ ತೇಜಸ್ಸಿನಿಂದ ಮತ್ತು ಉಷ್ಣತೆಯಿಂದ ಪಕ್ವವಾಗಿ॥೨೮॥ ತನ್ನಲ್ಲಿಯ ತೇಜ ಜಲಗುಣವ ಸ್ನೇಹವ ವೃದ್ಧಿ

ಯಿಂದ ತುಂಬಿದ ಮೇದವಾಗಿ ಪರಿಣಮಿಸುವುದು. ೪ ಪೃಥಿವಿ, ಅಗ್ನಿ, ವಾಯುಗಳ ಸಮೂಹವು ತಮ್ಮಲ್ಲಿಯ ಉಷ್ಣತೆಯಿಂದ ||೨೯|| ಇದನ್ನು ಬಿರುಸು ಮಾಡುವವು. ಆದ್ದರಿಂದ ಮನುಷ್ಯರ ಎಲವುಗಳು ಬಿರಸು ಆಗುವವು. ವಾಯುವು ಎಲವುಗಳ ಮಧ್ಯದಲ್ಲಿ ತೂತುಗಳನ್ನು ಮಾಡುವದು. ||೩೦|| ೬ ಆ ಮೇಲೆ ಮೇದವು ಅಸ್ಥಿಗಳನ್ನು ತುಂಬಿಕೊಳ್ಳುತ್ತದೆ. ಆ ಸ್ನೇಹವೇ ಮಜ್ಜವು. ಅವರಿಂದ ಆ ಮೇಲೆ ಮಜ್ಜದ ಸ್ನೇಹವಾದ ಶುಕ್ರವು ಉಂಟಾಗುತ್ತದೆ ||೩೧|| ವಾಯು ಮತ್ತು ಆಕಾಶ ಮುಂತಾದವುಗಳಿಂದ ಅಸ್ಥಿಗಳಲ್ಲಿ ಛಿದ್ರಗಳುಂಟಾಗುತ್ತವೆ. ಹೊಸ ಕೊಡದಿಂದ ನೀರು ಒರಸುವಂತೆ ಅವುಗಳಿಂದ ಶುಕ್ರವು ಒರಸುತ್ತದೆ. ||೩೨|| ಕಾಮ ವಿಕಾರಗಳಿಂದ ಉಂಟಾದ ಹರ್ಷದಿಂದ ವೇಗದಿಂದ ಬಿಡಲ್ಪಟ್ಟು ಬಂದ ಅದು ಶುಕ್ರವಹಸ್ರೋತಸ್ಸುಗಳಿಂದ ದೇಹದ ಹೊರಗೆ ಬರುವದು ||೩೩|| ವ್ಯಾಯಾಮದ ಉಷ್ಣತೆಯಿಂದ ತುಪ್ಪದಂತೆ ಕರಗಿ ಸ್ಥಾನಚ್ಯುತವಾಗಿ ಬಸ್ತಿಯಲ್ಲಿ ತುಂಬಿಕೊಂಡು ಅಲ್ಲಿಂದ ತೆಗ್ಗಿನ ಕಡೆಗೆ ನೀರು ಹೋಗುವಂತೆ ಹೊರಗೆ ಹೋರಡುತ್ತದೆ. ||೩೪||

ವ್ಯಾನೇನ ರಸಧಾತುರ್ಹಿ ವಿಕ್ಷೇಪೋಚಿತಕರ್ಮಣಾ ||
ಯುಗಪತ್ಸರ್ವತೋಽಜಸ್ರಂ ದೇಹೇ ವಿಕ್ಷಿಪ್ಯತೇ ಸದಾ ||೩೫||

ಕ್ಷಿಪ್ಯಮಾಣಃ ಖವೈಗುಣ್ಯಾದ್ರಸಃ ಸಜ್ಜತಿ ಯತ್ರ ಸಃ ||
ತಸ್ಮಿನ್ ವಿಕಾರಾನ್ ಕುರುತೇ ಖೇ ವರ್ಷಮಿವ ತೋಯದಃ ||೩೬||

ದೋಷಾಣಾಮಪಿ ಚೈವಂ ಸ್ಯಾತ್ ತತ್ರ ದೇಶೇ ಪ್ರಕೋಪಣಮ್ ||
ಇತಿ ಭೌತಿಕಧಾತ್ವನ್ನಪಕ್ತ್ರೃಣಾಂ ಕರ್ಮ ಭಾಷಿತಮ್ ||೩೭||

ಅನ್ನಸ್ಯ ಪಕ್ತಾ ಸರ್ವೇಷಾಂ ಪಕ್ತ್ರೃಣಾಮಧಿಪೋ ಮತಃ||
ತನ್ಮೂಲಾಸ್ತೇ ಹಿ ತದ್ವೃದ್ಧಿ ಕ್ಷಯವೃದ್ಧಿಕ್ಷಯಾತ್ಮಕಾಃ ||೩೮||

ತಸ್ಮಾತ್ ತಂ ವಿಧಿವದ್ಯುಕ್ತೈರನ್ನಪಾನೇಂಧನೈರ್ಹಿತೈಃ ||
ಪಾಲಯೇತ್ಪ್ರಯತಸ್ತಸ್ಯ ಸ್ಥಿತೌ ಹ್ಯಾಯುರ್ಬಲಸ್ಥಿತಿಃ ||೩೯||

ಯೋ ಹಿ ಭುಙ್ಕ್ತೇ ವಿಧಿಂ ತ್ಯಕ್ತ್ವಾ ಗ್ರಹಣೀದೋಷಜಾನ್ಗದಾನ್||
ಸ ಲೌಲ್ಯಾಲ್ಲಭತೇ ಶೀಘ್ರಂ ವಕ್ಷ್ಯಂತೇಽತಃ ಪರಂ ತು ಯೇ ||೪೦||

ಅರ್ಥ:— ಚಲ್ಲುವ ಕರ್ಮಮಾಡುವ ವ್ಯಾನವಾಯುವಿನಿಂದ ರಸ ಧಾತುವು ಎಲ್ಲಕಡೆಗೆ ಒಮ್ಮೆಲೇ ಯಾವಾಗಲೂ ಬಿಡದೇ ಚಲ್ಲಲ್ಪಡುತ್ತಿರುತ್ತದೆ. ||೩೫|| ಹೀಗೆ ಚಲ್ಲಲ್ಪಡುವ ರಸಧಾತುವು ಸ್ರೋತಸ್ಸಿನ ವೈಗುಣ್ಯದಿಂದ ಎಲ್ಲಿ ಪ್ರತಿಬಂಧಿಸಲ್ಪಡುವದು ಅಲ್ಲಿ, ಮುಂದೆಸಾಗುತ್ತಿರುವಾಗ್ಗೆ ತಡೆಯಲ್ಪಟ್ಟ ಮೋಡವು ಮಳೆಯನ್ನು ಮಾಡುವಂತೆ ವಿಕಾರಗಳನ್ನುಂಟು ಮಾಡುತ್ತದೆ. ||೩೬|| ಈ ರೀತಿಯಾಗಿ ಆ ಸ್ಥಳದಲ್ಲಿ ದೋಷಗಳ ಪ್ರಕೋಪವಾಗುತ್ತದೆ. ಇಲ್ಲಿಯ ವರೆಗೆ ಭೌತಿಕಾಗ್ನಿ, ಧಾತ್ವಗ್ನಿ, ಜಠರಾಗ್ನಿಗಳ ಕಾರ್ಯವು ಹೇಳಲ್ಪಟ್ಟಿತು. ||೩೭|| ಇವುಗಳಲ್ಲಿ ಅನ್ನವನ್ನು ಪಚನಮಾಡುವ (ಜಾಠರ) ಅಗ್ನಿಯು ಎಲ್ಲಕ್ಕೂ ಶ್ರೇಷ್ಠವು. ಏಕೆಂದರೆ ಅದರ ವೃದ್ಧಿಕ್ಷಯಗಳಿಂದಲೇ ಉಳಿದವುಗಳ ವೃದ್ಧಿಕ್ಷಯವಾಗುವದು||೩೮|| ಆದ್ದರಿಂದ ನೇಮಶೀಲನಾಗಿ ಹಿತಕರವಾದ ಅನ್ನಪಾನಗಳೆಂಬ ಉರುವಲಗಳನ್ನು ಹಾಕಿ ಅದನ್ನು ರಕ್ಷಿಸಬೇಕು. ಅದು ಇರಲು ಆಯುಷ್ಯ ಮತ್ತು ಬಲಗಳು ಇರುವವು. ||೩೯|| ಯಾವನು ಅತ್ಯಾಶೆಯಿಂದ ವಿಧಿಯನ್ನು ಬಿಟ್ಟು ಊಟಮಾಡುವನೋ ಅವನು ಗ್ರಹಣೀದೋಷದಿಂದುಂಟಾಗುವ ರೋಗಗಳನ್ನೂ ಮತ್ತು ಮುಂದೆ ಹೇಳುವ ರೋಗಗಳನ್ನೂ ಶೀಘ್ರವಾಗಿ ಹೊಂದುವನು. (೪೦)

**ಗ್ರಹಣೀ ವಿಕಾರಗಳ ಕಾರಣಗಳನ್ನು ಹೇಳುತ್ತಾರೆ.**

**ಅಭೋಜನಾದಜೀರ್ಣಾತಿಭೋಜನಾದ್ವಿಷಮಾಶನಾತ್ ||**
**ಅಸಾತ್ಮ್ಯಗುರುಶೀತಾತಿರುಕ್ಷಸಂದುಷ್ಟಭೋಜನಾತ್ ||೪೧||**

**ವಿರೇಕವಮನಸ್ನೇಹವಿಭ್ರಮಾದ್ವ್ಯಾಧಿಕರ್ಷಣಾತ್ ||**
**ದೇಶಕಾಲರ್ತುವೈಷಮ್ಯಾದ್ವೇಗಾನಾಂ ಚ ವಿಧಾರಣಾತ್ ||೪೨||**

**ದುಷ್ಯತ್ಯಗ್ನಿಃ ಸ ದುಷ್ಟೋಽನ್ನಂ ನ ತತ್ಪಚತಿ ಲಘ್ವಪಿ ||**
**ಅಪಚ್ಯಮಾನಂ ಶುಕ್ತತ್ವಂ ಯಾತ್ಯನ್ನಂ ವಿಷತಾಂ ಚ ತತ್ ||೪೩||**

**ಅರ್ಥ:—** ಉಪವಾಸ, ಜೀಯಿಸದ ಅನ್ನವನ್ನು ತಿನ್ನೋಣ, ಬಹಳ ಊಟ ಮಾಡೋಣ, ಅಕಾಲದಲ್ಲಿ ತಿನ್ನೋಣ, ತನಗೆ ಮಾನಿಸದ ಜಡ, ಶೀತ, ಅತಿರುಕ್ಷ, ದುಷ್ಟ ಅನ್ನವನ್ನು ತಿನ್ನುವದರಿಂದಲೂ, ||೪೧||

ವಮನ, ವಿರೇಚನ, ಸ್ನೇಹ ಪಾನಗಳಲ್ಲಿ ತಪ್ಪುವುದರಿಂದಲೂ, ಬೇಸೆಯಿಂದ ಬಂದ ಅಶಕ್ತಿಯಿಂದಲೂ, ದೇಶಕಾಲಋತುಗಳಲ್ಲಿಯು ಹೆಚ್ಚುಕಡಿಮೆ ಯಿಂದಲೂ, ವೇಗಗಳ ಪ್ರತಿಬಂಧದಿಂದಲೂ ||೪೨|| ಅಗ್ನಿಯು ದುಷ್ಟವಾಗಿ ಅದು ಹಗುರು ಅನ್ನವನ್ನು ಕೂಡ ಪಚನಮಾಡುವದಿಲ್ಲ. ಹೀಗೆ ಬೇಯದ ಆ ಅನ್ನವು ಹುಳಿ ಮತ್ತು ವಿಷವಾಗುವದು. (೪೩)

ಅಜೀರ್ಣದ ಲಕ್ಷಣಗಳನ್ನು ಹೇಳುತ್ತಾರೆ.

ತಸ್ಯ ಲಿಙ್ಗಮಜೀರ್ಣಸ್ಯ ವಿಷ್ಟಂಭಃ ಸದನಂ ತಥಾ ||
ಶಿರೋರುಕ್‌ಚೈವ ಮೂರ್ಚ್ಛಾ ಚ ಭ್ರಮಃ ಪೃಷ್ಠಕಟೀಗ್ರಹಃ ||೪೪||

ಜೃಂಭಾಙ್ಗಮರ್ದಸ್ತೃಷ್ಣಾ ಚ ಜ್ವರಶ್ಛರ್ದಿಃ ಪ್ರವಾಹಣಮ್ ||
ಅರೋಚಕಾವಿಪಾಕೌ ಚ ಘೋರಮನ್ನಂ ವಿಷಙ್ಚ ತತ್ ||೪೫||

ಪಿತ್ತೇನ ಸಹ ಸಂಸೃಷ್ಟಂ ದಾಹತೃಷ್ಣಾಮುಖಾಮಯಾನ್ ||
ಜನಯತ್ಯಮ್ಲಪಿತ್ತಞ್ಚ ಪಿತ್ತಜಾಂಶ್ಚಾಪರಾನ್ ಗದಾನ್ ||೪೬||

ಯಕ್ಷ್ಮಪೀನಸಮೇಹಾದೀನ್ ಕಫಜಾನ್ ಕಫಸಙ್ಗತಮ್ ||
ಕರೋತಿ ವಾತಸಂಸೃಷ್ಟಂ ವಾತಜಾಂಶ್ಚಾಪರಾನ್ ಗದಾನ್ ||೪೭||

ಮೂತ್ರರೋಗಾಂಶ್ಚ ಮೂತ್ರಸ್ಥಂ ಕುಕ್ಷಿರೋಗಾನ್ ಶಕೃದ್‌ಗತಮ್ ||
ರಸಾದಿಭಿಶ್ಚ ಸಂಸೃಷ್ಟಂ ಕುರ್ಯಾದ್‌ರೋಗಾನ್ ರಸಾದಿಜಾನ್ ||೪೮||

ಅರ್ಥ:— ಹೊಟ್ಟೆಯುಬ್ಬೋಣ, ನಿತ್ರಾಣ, ತಲೆಶೂಲಿ, ಮೂರ್ಛೆ, ಭ್ರಮ, ಬೆನ್ನು ಟೊಂಕಗಳು ಹಿಡಿಯೋಣ, ||೪೪|| ಆಕಳಿಕೆ, ಮೈನೋಯೋಣ, ನೀರಡಿಕೆ, ಜ್ವರ, ವಾಂತಿ, ಪ್ರವಾಹಿಕೆ, ಅರುಚಿ, ಅಗ್ನಿಮಾಂದ್ಯ ಇವು ಅಜೀರ್ಣದ ಲಕ್ಷಣಗಳು. ಈ ಅನ್ನವು ಬಯಂಕರ ವಿಷವಾಗುತ್ತದೆ. ||೪೫|| ಈ ಅನ್ನವಿಷವು ಪಿತ್ತದೊಡನೆ ಕೂಡಿ ದಾಹ, ನೀರಡಿಕೆ ಮುಂತಾದ ರೋಗಗಳನ್ನೂ ಅಮ್ಲಪಿತ್ತವನ್ನೂ ಪಿತ್ತದ ಬೇರೆ ರೋಗಗಳನ್ನೂ ಉಂಟುಮಾಡುತ್ತದೆ. ||೪೬|| ಕಫದೊಡನೆ ಕೂಡಿದರೆ ಕಫಜ ಕ್ಷಯ ನೆಗಡಿ ಮೇಹ ಮುಂತಾದ ರೋಗಗಳನ್ನೂ ವಾತದೊಡನೆ ಕೂಡಿದರೆ, ಬೇರೆ ರೋಗಗಳನ್ನೂ ಉಂಟುಮಾಡುತ್ತದೆ. ||೪೭|| ಮೂತ್ರದಲ್ಲಿ

ಸೇರಿ ಮೂತ್ರರೋಗಗಳನ್ನೂ ಮಲದಲ್ಲಿದ್ದುಕೊಂಡು ಹೊಟ್ಟೆಯಲ್ಲಿಯ ರೋಗಗಳನ್ನೂ ರಸಾದಿ ಧಾತುಗಳೊಡನೆ ಕೂಡಿಕೊಂಡು ರಸಾದಿ ಧಾತುಗಳ ರೋಗಗಳನ್ನೂ ಉಟುಂಮಾಡುತ್ತದೆ. ||೪೮||

ಇಲ್ಲಿಯ ವರೆಗೆ ಅಜೀರ್ಣ ಲಕ್ಷಣವನ್ನು ಹೇಳಿ ಇನ್ನು ಮೇಲೆ ದುಷ್ಟಾದುಷ್ಟ ಅಗ್ನಿಯ ಲಕ್ಷಣವನ್ನು ಹೇಳುತ್ತಾರೆ.

**ವಿಷಮೋ ಧಾತುವೈಷಮ್ಯಂ ಕರೋತಿ ವಿಷಮಂ ಪಚನ್ ||**
**ತೀಕ್ಷ್ಣೋ ಮಂದೇಂಧನೋ ಧಾತೂನ್ ವಿಶೋಷಯತಿ ಪಾವಕಃ ||೪೯||**

**ಯುಕ್ತಂ ಭುಕ್ತವತೋ ಯುಕ್ತೋ ಧಾತುಸಾಮ್ಯಂ ಸಮಂ ಪಚನ್||**
**ದುರ್ಬಲೋ ವಿದಹತ್ಯನ್ನಂ ತದ್ಯಾತ್ಯೂರ್ಧ್ವಮಧೋಽಪಿ ವಾ ||೫೦||**

ಅರ್ಥಃ— ವಿಷಮ ಅಗ್ನಿಯು ಅನ್ನವನ್ನು ಸರಿಯಾಗಿ ಬೇಯಿಸದೆ ವಾತಾದಿ ಧಾತುಗಳಲ್ಲಿ ವೈಷಮ್ಯವನ್ನುಂಟುಮಾಡುತ್ತದೆ. ತೀಕ್ಷ್ಣಾಗ್ನಿಯು ಆಹಾರವು ಕಡಿಮೆ ಬಿದ್ದರೆ ಅನ್ನವನ್ನಲ್ಲದೆ ಧಾತುಗಳನ್ನೂ ಒಣಗಿಸುತ್ತದೆ. ||೪೯|| ಸಮಾಗ್ನಿಯು ಸರಿಯಾಗಿ ಉಂಡ ಅನ್ನವನ್ನು ಯೋಗ್ಯ ರೀತಿಯಿಂದ ಪಚನಮಾಡಿ ಧಾತುಸಾಮ್ಯವನ್ನುಂಟುಮಾಡುತ್ತದೆ. ದುರ್ಬಲ ಅಗ್ನಿಯು ಅನ್ನವನ್ನು ಸರಿಯಾಗಿ ಬೇಯಿಸದು. ಆದ್ದರಿಂದ ಅದು ವಮನ ಅಥವಾ ವಿರೇಚನದಿಂದ ಮೇಲೆ ಅಥವಾ ಕೆಳಗೆ ಸರಿಯುವದು. ||೫೦||

ಸಂಗ್ರಹಣೀ ಲಕ್ಷಣವನ್ನು ಹೇಳುತ್ತಾರೆ.

**ಅಥಸ್ತು ಪಕ್ವಮಾಮಂ ವಾ ಪ್ರವೃತ್ತಂ ಗ್ರಹಣೀಗದಃ ||**
**ಉಚ್ಯತೇ ಸರ್ವಮೇವಾನ್ನಂ ಪ್ರಾಯೋ ಹ್ಯಸ್ಯ ವಿದಹ್ಯತೇ ||೫೧||**

**ಅತಿಸೃಷ್ಟಂ ವಿಬದ್ಧಂ ವಾ ದ್ರವಂ ತದುಪವೇಶ್ಯತೇ ||**
**ತೃಷ್ಣಾರೋಚಕವೈರಸ್ಯಪ್ರಸೇಕತಮಕಾನ್ವಿತಃ ||೫೨||**

**ಶೂನಪಾದಕರಃ ಸಾಸ್ಥಿಪರ್ವರುಕ್ ಛರ್ದನಂ ಜ್ವರಂ ||**
**ಲೋಹಾನುಗಂಧಿ ತಿಕ್ತಾಮ ಉದ್ಗಾರಶ್ಚಾಸ್ಯ ಜಾಯತೇ ||೫೩||**

ಪೂರ್ವರೂಪವನ್ನು ಹೇಳುತ್ತಾರೆ.

**ಪೂರ್ವರೂಪಂ ತು ತಸ್ಯೇದಂ ತೃಷ್ಣಾಲಸ್ಯಂ ಬಲಕ್ಷಯಃ ||**
**ವಿದಾಹೋಽನ್ನಸ್ಯ ಪಾಕಶ್ಚ ಚಿರಾತ್ ಕಾಯಸ್ಯ ಗೌರವಮ್ ||೫೪||**

**ಅರ್ಥ:—** ಪಕ್ವ ಅಥವಾ ಅಪಕ್ವವಾದ ಮಲವು ಕೆಳಗೆ ಬೀಳುವದು ಗ್ರಹಣೀ ರೋಗವೆಂದು ಹೇಳಲ್ಪಡುತ್ತದೆ. ಈ ರೋಗವುಳ್ಳವರು ತಿಂದ ಹಗುರು ಜಡ ಯಾವ ಆಹಾರವೂ ಸರಿಯಾಗಿ ಪಚನವೇ ಆಗದು. ||೫೧|| ಬಹಳ ತೆಳ್ಳಗಾದ ಅಥವಾ ಗಂಟುಗಳುಳ್ಳ ಮಲಗಳನ್ನು ಬಿಡುವನು. ನೀರಡಿಕೆ, ಅರುಚಿ, ಬಾಯಿಹೊಲಸು, ಬಾಯಿಗೆ ನೀರು ಬಿಡೋಣ, ಕಂಣಿಗೆ ಕತ್ತಲೆ ||೫೨|| ಕೈಕಾಲಿಗೆ ಬಾವು, ಸಂಧಿ ಅಸ್ಥಿಗಳಲ್ಲಿ ನೋವು, ವಾಂತಿ ಜ್ವರ, ಲೋಹದ ವಾಸನೆಯುಳ್ಳ ಕಹಿ-ಹುಳಿಯಾದ ತೇಗುಗಳು ಅವನಿಗೆ ಬರುವವು. ||೫೩|| ನೀರಡಿಕೆ, ಆಲಸ್ಯ, ನಿತ್ರಾಣ, ಅನ್ನಪಚನವಾಗದಿರೋಣ ಅಥವಾ ಬಹಳ ಹೊತ್ತಿಗೆ ಆಗೋಣ, ಮೈ ಜಡವಾಗೋಣ ಇವು ಈ ರೋಗದ ಪೂರ್ವರೂಪವು. (೫೪)

ಗ್ರಹಣೀ ಅಂದರೆ ಯಾವದೆಂಬದನ್ನು ಹೇಳುತ್ತಾರೆ.

**ಅಗ್ನ್ಯಧಿಷ್ಠಾನಮನ್ನಸ್ಯ ಗ್ರಹಣಾದ್ ಗ್ರಹಣೀ ಮತಾ ||**
**ನಾಭೇರುಪರ್ಯಗ್ನಿಬಲೇನೋಪಷ್ಟಬ್ಧೋಪಬೃಂಹಿತಾ ||೫೫||**

**ಅಪಕ್ವಂ ಧಾರಯತ್ಯನ್ನಂ ಪಕ್ವಂ ಸೃಜತಿ ಪಾರ್ಶ್ವತಃ ||**
**ದುರ್ಬಲಾಗ್ನಿಬಲಾದ್ ದುಷ್ಟಾ ತ್ವಾಮಮೇವ ವಿಮುಞ್ಚತಿ ||೫೬||**

**ಅರ್ಥಃ—** ಇದು ಅಗ್ನಿಯ ಆಶ್ರಯವಾಗಿದೆ. ಅನ್ನದ ಗ್ರಹಣ ಮಾಡುವದರಿಂದ ಗ್ರಹಣೀಯೆಂದು ಕರೆಯಲ್ಪಡುತ್ತದೆ. ಹೊಕ್ಕಳದ ಮೇಲೆ ಅಗ್ನಿಯ ಬಲದಿಂದ ಇದ್ದುಕೊಂಡು ಅದರಿಂದಲೇ ಪುಷ್ಟವಾಗಿರುತ್ತದೆ. ||೫೫|| ಇದು ಅಪಕ್ವವಾದ ಅನ್ನವನ್ನು ಹಿಡಿದುಕೊಳ್ಳುತ್ತದೆ. ಅದು ಪಕ್ವವಾಗಲು ಅದನ್ನು ಮಗ್ಗಲಿನಿಂದ ಬಿಡುತ್ತದೆ. ಆದರೆ ಅದು ದುರ್ಬಲಾಗ್ನಿಮೂಲಕ ದುಷ್ಟವಾದರೆ ಅಪಕ್ವವನ್ನೇ ಬಿಡುವದು. (೫೬)

ಗ್ರಹಣೀರೋಗದಭೇದಗಳನ್ನು ಹೇಳುತ್ತಾರೆ.

ವಾತಾತ್‌ಪಿತ್ತಾತ್‌ಕಫಾಚ್ಚ ಸ್ಯಾತ್‌ತದ್ರೋಗಸ್ತ್ರಿಭ್ಯ ಏವ ಚ ||
ಹೇತುಂ ಲಿಂಗಂ ಚಿಕಿತ್ಸಾಂ ಚ ಶೃಣು ತಸ್ಯ ಪೃಥಕ್‌ಪೃಥಕ್ ||೫೭||

ಅರ್ಥ:— ವಾತ, ಪಿತ್ತ, ಕಫಗಳಿಂದಲೂ ಸನ್ನಿಪಾತದಿಂದಲೂ ಹೀಗೆ ಈ ರೋಗವು ಉಂಟಾಗುವದು. ಇದರ ಬೇರೆ ಬೇರೆ ಕಾರಣ, ಚಿಹ್ನ, ಚಿಕಿತ್ಸೆಗಳನ್ನು ಕೇಳಿರಿ. (೫೭)

ವಾತಗ್ರಹಣೀ ರೋಗದ ಕಾರಣ ಲಕ್ಷಣಗಳನ್ನು ಹೇಳುತ್ತಾರೆ.

ಕಷಾಯಕಟುತಿಕ್ತಾತಿರುಕ್ಷಶೀತಾಲ್ಪಭೋಜನೈಃ ||
ಪ್ರಮೃತಾನಶನಾತ್ಯಧ್ವ ವೇಗನಿಗ್ರಹಮೈಥುನೈಃ ||೫೮||

ಮಾರುತಃ ಕುಪಿತೋ ವಹ್ನಿಂ ಸಂಛಾದ್ಯ ಕುರುತೇ ಗದಾನ್ ||
ತಸ್ಯಾನ್ನಂ ಪಚ್ಯತೇ ದುಃಖಂ ಶುಕ್ತಪಾಕಂ ಖರಾಙ್ಗತಾ ||೫೯||

ಕಂಠಾಸ್ಯಶೋಷಃ ಕ್ಷುತ್‌ತೃಷ್ಣಾ ತಿಮಿರಂ ಕರ್ಣಯೋಃ ಸ್ವನಃ ||
ಪಾರ್ಶ್ವೋರುವಙ್‌ಕ್ಷಣಗ್ರೀವಾರುಗಭೀಕ್ಷ್ಣಂ ವಿಷೂಚಿಕಾ ||೬೦||

ಹೃತ್ಪೀಡಾ ಕಾರ್ಶ್ಯದೌರ್ಬಲ್ಯಂ ವೈರಸ್ಯಂ ಪರಿಕರ್ತಿಕಾ ||
ಗೃದ್ಧಿಃ ಸರ್ವರಸಾನಾಞ್ಚ ಮನಸಃ ಸದನಂ ತಥಾ ||೬೧||

ಜೀರ್ಣೇ ಜೀರ್ಯತಿ ಚಾಧ್ಮಾನಂ ಭುಕ್ತೇ ಸ್ವಾಸ್ಥ್ಯಮುಪೈತಿ ಚ ||
ಸ ವಾತಗುಲ್ಮಹೃದ್ರೋಗಪ್ಲೀಹಾಶಙ್ಕೀ ಚ ಮಾನವಃ ||೬೨||

ಚಿರಾದ್ದುಃಖಂ ದ್ರವಂ ಶುಷ್ಕಂ ತನ್ವಾಮಂ ಶಬ್ದಫೇನವತ್ ||
ಪುನಃ ಪುನಃ ಸೃಜೇದ್ವರ್ಚಃ ಶ್ವಾಸಕಾಸಾರ್ದಿತೋಽನಿಲಾತ್ ||೬೩||

ಅರ್ಥ:—ಒಗರು, ಖಾರ, ಕಹಿ, ಅತಿರುಕ್ಷ, ಶೀತಅಲ್ಪಮತ್ತು ಕಾಲಮೀರಿದ ಊಟಗಳಿಂದಲೂಉಪವಾಸಗಳಿಂದಲೂ ಬಹಳ ನಡಿಯೋಣ ವೇಗನಿಗ್ರಹ ಮೈಥುನಗಳಿಂದಲೂ ||೫೮|| ವಾತವು ಕುಪಿತವಾಗಿ ಅಗ್ನಿಯನ್ನು ಮುಚ್ಚಿ ರೋಗಗಳನ್ನುಂಟುಮಾಡುತ್ತದೆ. ಅವನ ಅನ್ನವು ಸುಲಭವಾಗಿ ಪಚನ ವಾಗದೆ ಹುಳಿಯಾಗುವದು. ತ್ವಚೆಯು ಬಿರುಸಾಗುವದು. ||೫೯|| ಬಾಯಿ

ಗಂಟಲುಗಳು ಒಣಗುವವು. ಹಸಿವೆ, ನೀರಡಿಕೆ, ಕಂಣಿಗೆ ಕತ್ತಲೆ, ಕಿವಿಯಲ್ಲಿ ಶಬ್ದ, ಪಕ್ಕೆ-ತೊಡೆ ಗೆಜ್ಜೆ ಕುತ್ತಿಗೆಗಳಲ್ಲಿ ನೋವು ಆಗಾಗ್ಗೆ ಹೊಟ್ಟೆ ಜಾಡಿಸೋಣ ||೬೦|| ಎದೆಯಲ್ಲಿ ನೋವು, ಕೃಶತ್ವ, ನಿತ್ರಾಣ, ಬಾಯಿ ಹೊಲಸಾಗೋಣ, ಗುದದ್ವಾರದಲ್ಲಿ ಕತ್ತರಿಸಿದಂತೆ ಆಗೋಣ, ಎಲ್ಲ ರಸಗಳಲ್ಲಿಯೂ ಅತ್ಯಾಶೆ, ಮನಸ್ಸಿನ ದೌರ್ಬಲ್ಯ ಇವು ಉಂಟಾಗುವವು. ||೬೧|| ಅನ್ನವು ಜೀರ್ಣವಾಗಲು ಅಥವಾ ಆಗುತ್ತಿರಲು ಹೊಟ್ಟೆಯುಬ್ಬುವದು. ಊಟವಾಗಲು ಸಮಾಧಾನವೆನಿಸುವದು. ಅವನಿಗೆ ವಾತಗುಲ್ಮ ಹೃದ್ರೋಗ ಪ್ಲೀಹರೋಗಗಳು ಆವ ಸಂಶಯ ಬರುವದು. ||೬೨|| ಬಹಳ ಹೊತ್ತಿಗೆ ಒಳ್ಳೇ ಕಷ್ಟದಿಂದ ಒಮ್ಮೆ ತೆಳ್ಳಗೆ, ಒಮ್ಮೆ ಗಟ್ಟಿ, ಒಮ್ಮೆ ಸ್ವಲ್ಪ, ಒಮ್ಮೆ ಅಪಕ್ವ, ಒಮ್ಮೆ ಬುರುಗು-ಶಬ್ದಗಳುಳ್ಳ ಮಲವನ್ನು ಮೇಲೆ ಮೇಲೆ ಬಿಡುವನು. ಮತ್ತು ಕೆಮ್ಮು-ದಮ್ಮುಗಳಿಂದ ಪೀಡಿತನಾಗಿರುವನು. ಇವೆಲ್ಲ ವಾತಗ್ರಹಣೀರೋಗದಲ್ಲಿ ಆಗುವವು. (೬೩)

**ಪಿತ್ತಗ್ರಹಣೀ ರೋಗದ ಕಾರಣ ಲಕ್ಷಣಗಳನ್ನು ಹೇಳುತ್ತಾರೆ.**

**ಕಟ್ವಜೀರ್ಣವಿದಾಹ್ಯಮ್ಲ ಕ್ಷಾರಾದ್ಯೈಃ ಪಿತ್ತಮುಲ್ಬಣಮ್ ||**
**ಆಪ್ಲಾವಯದ್ಧಂತ್ಯನಲಂ ಜಲಂ ತಪ್ತಮಿವಾನಲಮ್** ||೬೪||

**ಸೋಽಜೀರ್ಣಂ ನೀಲಪೀತಾಭಃ ಪೀತಾಭಃ ಸಾರ್ಯತೇ ದ್ರವಮ್ ||**
**ಪೂತ್ಯಮ್ಲೋದ್ಗಾರಹೃತ್ಕಂಠದಾಹಾರುಚಿತೃಡರ್ದಿತಃ** ||೬೫||

**ಅರ್ಥಃ**—ಕಾರ, ಅಜೀರ್ಣ, ವಿದಾಹಿ, ಹುಳಿ, ಕ್ಷಾರ ಮುಂತಾದವುಗಳಿಂದ ಹೆಚ್ಚಾದ ಪಿತ್ತವು, ಬಿಸಿನೀರು ಬೆಂಕಿಯನ್ನು ಆರಿಸುವಂತೆ-ಜಠರಾಗ್ನಿಯ ಮೇಲೆ ಬಿದ್ದು ಅದನ್ನು ಆರಿಸುತ್ತದೆ. ||೬೪|| ಅವನ ಮೈ ಬಣ್ಣ ಹಳದೀ ಆಗುವದು, ನೀಲ. ಹಳದಿಯಾದ, ಅಪಕ್ವ, ತೆಳ್ಳಗಿನ ಮಲವನ್ನು ಬಿಡುವನು. ದುರ್ಗಂಧ, ಹುಳಿಯಾದ ತೇಗುಗಳು ಬರುವವು. ಎದೆ ಕುತ್ತಿಗೆಗಳಲ್ಲಿ ದಾಹವಾಗುವದು. ಅರುಚಿ ನೀರಡಿಕೆಗಳು ಇರುವವು. ||೬೫||

**ಕಫಜ ಗ್ರಹಣೀರೋಗದ ಕಾರಣಲಕ್ಷಣಗಳನ್ನು ಹೇಳುತ್ತಾರೆ.**

ಗುರ್ವತಿಸ್ನಿಗ್ಧಶೀತಾದಿಭೋಜನಾದತಿಭೋಜನಾತ್ ॥
ಭುಕ್ತಮಾತ್ರಸ್ಯ ಚ ಸ್ವಪ್ನಾದ್ಧಂತ್ಯಗ್ನಿಂ ಕುಪಿತಃ ಕಫಃ ॥೬೬॥

ತಸ್ಯಾನ್ನಂ ಪಚ್ಯತೇ ದುಃಖಂ ಹೃಲ್ಲಾಸಚ್ಛರ್ದ್ಯರೋಚಕಾಃ ॥
ಆಸ್ಯೋಪದೇಹಮಾಧುರ್ಯಕಾಸಷ್ಠೀವನಪೀನಸಾಃ ॥೬೭॥

ಹೃದಯಂ ಮನ್ಯತೇ ಸ್ತ್ಯಾನಮುದರಂ ಸ್ತಿಮಿತಂ ಗುರು ॥
ದುಷ್ಟೋ ಮಧುರ ಉದ್ಗಾರಃ ಸದನಂ ಸ್ತ್ರೀಷ್ವಹರ್ಷಣಮ್ ॥೬೮॥

ಭಿನ್ನಾಮಶ್ಲೇಷ್ಮಭೂಯಿಷ್ಠಗುರುವರ್ಚಃಪ್ರವರ್ತನಮ್ ॥
ಅಕೃಶಸ್ಯಾಪಿ ದೌರ್ಬಲ್ಯಮಾಲಸ್ಯಞ್ಚ ಕಫಾತ್ಮಕೇ ॥೬೯॥

**ಅರ್ಥ:**— ಜಡ, ಅತಿಸ್ನಿಗ್ಧ ಅತಿಶೀತ ಮುಂತಾದವುಗಳನ್ನು ತಿನ್ನುವದರಿಂದ, ಬಹಳ ಊಟಮಾಡುವದರಿಂದ, ಊಟಮಾಡಿದಕೂಡಲೇ ಮಲಗುವದರಿಂದ ಕುಪಿತವಾದ ಕಫವು ಅಗ್ನಿಯನ್ನು ನಾಶಮಾಡುವದು. ॥೬೬॥ ಅವನ ಅನ್ನವು ಒಳ್ಳೇ ಶ್ರಮದಿಂದ ಪಕ್ವವಾಗುವದು. ಮಳಮಳ, ವಾಂತಿ, ಅರುಚಿ, ಬಾಯಿಯಲ್ಲಿ ತೊಡೆದಂತೆ ಆಗೋಣ, ಬಾಯಿ ಸವಿಯಾಗೋಣ, ಕೆಮ್ಮು, ಉಗುಳು, ನೆಗಡಿಗಳು ಆಗುವವು. ॥೬೭॥ ಎದೆ ತುಂಬಿದಂತೆ, ಹೊಟ್ಟೆಯೂ ಜಡ ಮತ್ತು ಬಿಗಿದಂತೆ ಅನಿಸುತ್ತದೆ. ವಿಕೃತವಾದ ಸವಿತೇಗು ಬರುತ್ತದೆ. ನಿತ್ರಾಣವಾಗುತ್ತದೆ. ಸ್ತ್ರೀವಾಸನೆ ಇರುವದಿಲ್ಲ. ॥೬೮॥ ಒಡಕೊಡಕಾದ, ಅಪಕ್ವ ಕಫಾಧಿಕ ಜಡಮಲವು ಬೀಳುತ್ತದೆ. ಕೃಶನಾಗದಿದ್ದರೂ ನಿತ್ರಾಣ ಮತ್ತು ಆಲಸ್ಯಗಳು ಉಂಟಾಗುತ್ತವೆ. ಇವು ಕಫಗ್ರಹಣೀರೋಗದ ಲಕ್ಷಣಗಳು (೬೯)

ಬೇರೆ ಗ್ರಹಣೀದೋಷಗಳನ್ನು ಹೇಳುತ್ತಾರೆ.

ಯಶ್ಚಾಗ್ನಿಃ ಪೂರ್ವಮುದ್ದಿಷ್ಟೋ ರೋಗಾನೀಕೇ ಚತುರ್ವಿಧಃ ॥
ತಞ್ಚಾಪಿ ಗ್ರಹಣೀದೋಷಂ ಸಮವರ್ಜಂ ಪ್ರಚಕ್ಷತೇ ॥೭೦॥

ಪೃಥಗ್ವಾತಾದಿನಿರ್ದಿಷ್ಟಹೇತುಲಿಂಗಸಮಾಗಮೇ ॥
ತ್ರಿದೋಷಂ ನಿರ್ದಿಶೇದೇವಮತೋ ವಕ್ಷ್ಯಾಮಿ ಭೇಷಜಮ್ ॥೭೧॥

**ಅರ್ಥ:—** ಹಿಂದೆ ವಿಮಾನಸ್ಥಾನದಲ್ಲಿ ಹೇಳಿದ ನಾಲ್ಕು ತರದ ಅಗ್ನಿಗಳಲ್ಲಿ ಸಮಾಗ್ನಿಯು ಹೊರ್ತಾಗಿ ಉಳಿದ (ವಿಷಮ, ತೀಕ್ಷ್ಣ, ಮಂದ) ಅಗ್ನಿಗಳು ಗ್ರಹಣೀ ದೋಷವೆಂದು ಹೇಳುವರು. ||೭೦|| ಬೇರೆ ಬೇರೆಯಾಗಿ ವಾತ ಪಿತ್ತ ಕಫಜ ರೋಗಗಳಲ್ಲಿ ಹೇಳಿದ ಕಾರಣ ಮತ್ತು ಲಕ್ಷಣಗಳ ಸಂಗಮವಿರಲು ಸನ್ನಿಪಾತರೋಗವೆಂದು ಹೇಳಬೇಕು. ಇನ್ನು ಮೇಲೆ ಅವುಗಳ ಔಷಧವನ್ನು ಹೇಳುವೆವು. (೭೧)

**ಆಮದ ಚಿಕಿತ್ಸೆಯನ್ನು ಹೇಳುತ್ತಾರೆ.**

**ಗ್ರಹಣೀಮಾಶ್ರಿತಂ ದೋಷಂ ವಿದಗ್ಧಾಹಾರಮೂರ್ಛಿತಮ್ ||**
**ಸವಿಷ್ಟಂಭಪ್ರಸೇಕಾರ್ತಿವಿದಾಹಾರುಚಿಗೌರವೈಃ ||೭೨||**

**ಆಮಲಿಙ್ಗಾನ್ವಿತಂ ಜ್ಞಾತ್ವಾ ಸುಖೋಷ್ಣೇನಾಂಬುನೋದ್ಧರೇತ್ ||**
**ಫಲಾನಾಂ ವಾ ಕಷಾಯೇಣ ಪಿಪ್ಪಲೀಸರ್ಷಪೈಸ್ತಥಾ ||೭೩||**

**ಲೀನಂ ಪಕ್ವಾಶಯಸ್ಥಂ ವಾಪ್ಯಾಮಂ ಸ್ರಾವ್ಯಂ ಸದೀಪನೈಃ ||**
**ಶರೀರಾನುಗತೇ ಸಾಮೇ ರಸೇ ಲಂಘನಪಾಚನಮ್ ||೭೪||**

**ವಿಶುದ್ಧಾಮಾಶಯಾಯಾಸ್ಮೈ ಪಞ್ಚಕೋಲಾದಿಭಿಃ ಶೃತಮ್ ||**
**ದದ್ಯಾತ್ ಪೇಯಾದಿ ಲಘ್ವನ್ನಂ ಪುನರ್ಯೋಗಾಂಶ್ಚ ದೀಪನಾನ್**

**ಅರ್ಥ:—**ಅಪಚನ, ವಿಷ್ಟಂಭ, ಬಾಯಿಗೆ ನೀರು ಬಿಡೋಣ, ಶೂಲಿ ವಿದಾಹ, ಅರುಚಿ, ಜಡತ್ವ ಈ ಲಕ್ಷಣಗಳಿಂದ ||೭೨|| ಗ್ರಹಣೀ ದೋಷವು ಸಾಮವೆಂದು ತಿಳಿದುಕೊಂಡು, ಅದನ್ನು ಬಿಸಿನೀರಿನಿಂದ ಅಥವಾ ಹಿಪ್ಪಲಿ, ಸಾಸಿವೆ ಚೂರ್ಣವನ್ನು ಹಾಕಿದ ಮಂಗಾರಿಯ ಕಷಾಯದಿಂದ ವಮನ ಮಾಡಿಸಬೇಕು. ||೭೩|| ಪಕ್ವಾಶಯದಲ್ಲಿ ಅಡಗಿಕೊಂಡ ಆಮ ದೋಷವನ್ನು ದೀಪಕ ಔಷಧಗಳಿಂದ ಕೂಡಿದ ವಿರೇಚನಗಳಿಂದ ತೆಗೆಯಬೇಕು. ಸಾಮದೋಷವು ಶರೀರದಲ್ಲಿ ವ್ಯಾಪಿಸಿದ್ದರೆ ಲಂಘನ ಪಾಚನಗಳನ್ನು ಮಾಡಿಸಬೇಕು. ||೭೪|| ವಮನದಿಂದ ಆಮಾಶಯವು ಶುದ್ಧವಾಗಲು, ಪಂಚಕೋಲ (ಹಿಪ್ಪಲಿ, ಮೋಡಿ, ಚವಕ, ಚಿತ್ರಕ, ಶುಂಠಿ) ಗಳಿಂದ ಸಿದ್ಧವಾದ ಪೇಯಗಳನ್ನೂ ಲಘು ಆಹಾರವನ್ನೂ ದೀಪಕವಾದ ಔಷಧವನ್ನೂ ಕೊಡಬೇಕು. (೭೫)

ಜ್ಞಾತ್ವಾ ತು ಪರಿಪಕ್ವಾಮಂ ಮಾರುತಗ್ರಹಣೀಗದಮ್ ॥
ದೀಪನೀಯಯುತಂ ಸರ್ಪಿಃ ಪಾಯಯೇತಾಲ್ಪಶೋ ಭಿಷಕ್ ॥೭೬॥

ಕಿಂಚಿತ್ ಸಂಧುಕ್ಷಿತೇ ಚಾಗ್ನೌ ಸಕ್ತವಿಣ್ಮೂತ್ರ ಮಾರುತಮ್ ॥
ದ್ವ್ಯಹಂ ತ್ರ್ಯಹಂ ವಾ ಸಂಸ್ನೇಹ್ಯ ಸ್ವಿನ್ನಾಭ್ಯಕ್ತಂ
ನಿರೂಹಯೇತ್ ॥೭೭॥

ತತ ಏರಂಡತೈಲೇನ ಸರ್ಪಿಷಾ ತ್ರೈಲ್ವಕೇನ ವಾ ॥
ಸಕ್ಷಾರೇಣಾನಿಲೇ ಶಾಂತೇ ಸ್ರಸ್ತದೋಷಂ ವಿರೇಚಯೇತ್ ॥೭೮॥

ಶುದ್ಧಂ ರುಕ್ಷಾಶಯಂ ಜ್ಞಾತ್ವಾ ಸರ್ವಶಶ್ಚಾನುವಾಸಯೇತ್ ॥
ದೀಪನೀಯಾಮ್ಲವಾತಘ್ನಸಿದ್ಧತೈಲೇನ ಮಾತ್ರಯಾ ॥೭೯॥

ನಿರೂಢಞ್ಚ ವಿರಿಕ್ತಞ್ಚ ಸಮ್ಯಕ್ ಚಾಪ್ಯನುವಾಸಿತಮ್ ॥
ಲಘ್ವನ್ನಂ ಪ್ರತಿಸಂಭುಕ್ತಂ ಸರ್ಪಿರಭ್ಯಾಸಯೇತ್ ಪುನಃ ॥೮೦॥

**ಅರ್ಥ:**— ವಾತಗ್ರಹಣೀ ರೋಗಿಯ ಆಮವು ಪಚನವಾಗಲು ದೀಪಕ ದ್ರವ್ಯಗಳಿಂದ ಕೂಡಿದ ಘೃತವನ್ನು ವೈದ್ಯನು ಸ್ವಲ್ಪ ಸ್ವಲ್ಪ ಕುಡಿಸಬೇಕು. ॥೭೬॥ ಅಗ್ನಿಯು ಸ್ವಲ್ಪ ಪ್ರದೀಪ್ತವಾಗಲು ಮಲ ಮೂತ್ರವಾತಗಳ ಬಂಧವಿದ್ದರೆ, ಎರಡು ಮೂರು ದಿವಸ ಸ್ನೇಹಪಾನ ಮಾಡಿಸಿ, ಸ್ವೇದ ಅಭ್ಯಂಗಗಳನ್ನು ಮಾಡಿ, ನಿರೂಹಬಸ್ತಿಯನ್ನು ಕೊಡಬೇಕು. ॥೭೭॥ ಆಮೇಲೆ ವಾತವು ಹೋಗಿ, ದೋಷಗಳು ಕೆಳಗಿಳಿಯಲು ಕ್ಷಾರ ಹಾಕಿದ ಔಡಲ ಎಂಣೆಯಿಂದ ಅಥವಾ ತ್ರೈಲ್ವಕಘೃತದಿಂದ ವಿರೇಚನವನ್ನು ಕೊಡಬೇಕು. ॥೭೮॥ ಆಶಯವು ಶುದ್ಧವಿದ್ದರೂ ಎಲ್ಲಕಡೆಯಲ್ಲಿ ರುಕ್ಷವಾಗಿದ್ದರೆ, ದೀಪಕ ಅಮ್ಲ ವಾತನಾಶಕದ್ರವ್ಯಗಳಿಂದ ಸಿದ್ಧವಾದ ತೈಲದ ಯೋಗ್ಯ ಪ್ರಮಾಣದಿಂದ ಅನುವಾಸನಬಸ್ತಿಗಳನ್ನು ಕೊಡಬೇಕು. ॥೭೯॥ ಈ ಪ್ರಕಾರ ನಿರೂಹ, ವಿರೇಚನ, ಅನುವಾಸನಗಳನ್ನು ಕೊಟ್ಟು, ಹಗುರ ಆಹಾರವನ್ನು ತಿನ್ನಿಸಿ, ಆ ಮೇಲೆ ದಿನಾಲು ದೀಪಕಘೃತವನ್ನು ಕೊಡುತ್ತಿರಬೇಕು. (೮೦

**ದೀಪಕಘೃತಗಳನ್ನು ಹೇಳುತ್ತಾರೆ. ಮೊದಲು ದಶಮೂಲಘೃತವನ್ನು ಹೇಳುತ್ತಾರೆ.**

ದ್ವಿಪಞ್ಚಮೂಲ್ಯೌ ಸರಲಂ ದೇವದಾರು ಸನಾಗರಮ್ ||
ಪಿಪ್ಪಲೀಂ ಪಿಪ್ಪಲೀಮೂಲಂ ಚಿತ್ರಕಂ ಹಸ್ತಿಪಿಪ್ಪಲೀಮ್ ||೮೧||

ಶಣಬೀಜಂ ಯವಾನ್‌ಕೋಲಾನ್‌ಕುಲತ್ಥಾನ್‌ಸುಷವೀಸ್ತಥಾ ||
ಪಾಚಯೇದಾರನಾಲೇನ ದಧ್ನಾ ಸೌವೀರಕೇಣ ವಾ ||೮೨||

ಚತುರ್ಭಾಗಾವಶೇಷೇಣ ಪಚೇತ್ ತೇನ ಘೃತಾಢಕಮ್ ||
ಸ್ವರ್ಜಿಕಾಯಾವಶೂಕಾಖ್ಯೌ ಕ್ಷಾರೌ ದತ್ವಾ ತು ಯುಕ್ತಿತಃ ||೮೩||

ಸೈಂಧವೋದ್ಭಿದಸಾಮುದ್ರಬಿಡಾನಾಂ ರೌಮಕಸ್ಯ ಚ ||
ಸಸೌವರ್ಚಲಪಾಕ್ಯಾನಾಂ ಭಾಗಾನ್ ದ್ವಿಪಲಿಕಾನ್ ಪೃಥಕ್ ||೮೪||

ವಿನೀಯ ಚೂರ್ಣಿತಾಂಸ್ತಸ್ಮಾತ್ ಪಾಯಯೇತ್ ಪ್ರಸೃತಂ ಬುಧಃ||
ಕರೋತ್ಯಗ್ನಿಬಲಂ ವರ್ಣಂ ವಾತಘ್ನಂ ಭಕ್ತಪಾಚನಮ್ ||೮೫||

**ಅರ್ಥ:**— ದಶಮೂಲ, ಸರಲ, (ದೇವದಾರು ಜಾತಿ), ದೇವದಾರು, ಸುಂಠಿ, ಹಿಪ್ಪಲಿ, ಮೋಡಿ, ಚಿತ್ರಕ, ಗಜಹಿಪ್ಪಲಿ, ಶಣಬೀಜ, ಜವೆ, ಬೋರೆ, ಹುರಳಿ, ಸುಷವೀ (ಕರೇಜೀರಿಗೆ), ಈ ದ್ರವ್ಯಗಳನ್ನು ಕೂಡಿ ೫೧೨ ತೊಲಿ ತಕ್ಕೊಂಡು ಅದರಲ್ಲಿ ೪೦೯೬ ತೊಲಿ ಗಂಜಿ ಅಥವಾ ಮೊಸರು ಅಥವಾ ಸೌವೀರಕ (ಒಂದುತರದ ಗಂಜಿ) ಹಾಕಿ ಕುದಿಸಬೇಕು ||೮೨|| ¼ ಉಳಿಯಲು ೫೧೨ ತೊಲಿತುಪ್ಪವನ್ನು ಅದರಿಂದ ಸಿದ್ಧಪಡಿಸಬೇಕು. ಸಿದ್ಧವಾಗಲು ಅದರಲ್ಲಿ ಸಜ್ಜೀಖಾರ, ಜವಖಾರಗಳನ್ನು ಯೋಗ್ಯ ಪ್ರಮಾಣದಿಂದ ಹಾಕಿ ||೮೩|| ಮತ್ತು ಸೈಂಧವ, ಖನಿಜಲವಣ, ಸಾಮುದ್ರ, ಬಿಡ, ರೋಮಕ, ಕಾಚ, ಪಾಂಶುಜಲವಣಗಳನ್ನು ಚೂರ್ಣ ಮಾಡಿ ೮-೮ ತೊಲಿ ಹಾಕಿ ||೮೪|| ಅದನ್ನು ಪಂಡಿತನಾದ ವೈದ್ಯನು ೮ ತೊಲಿಯಂತೆ ಕುಡಿಸಬೇಕು. ಅದು ಅಗ್ನಿಪ್ರದೀಪಕ, ವರ್ಣಕರ, ವಾತನಾಶಕ ಮತ್ತು ಪಾಚಕವಾಗಿದೆ. (೮೫)

**ತ್ರ್ಯೂಷಣಾದಿಘೃತವನ್ನು ಹೇಳುತ್ತಾರೆ.**

ತ್ರ್ಯೂಷಣತ್ರಿಫಲಾಕಲ್ಕೈಃ ಬಿಲ್ವಮಾತ್ರೈಃ ಗುಡಾತ್ ಪಲೇ ||

ಸರ್ಪಿಷೋಽಷ್ಟಪಲಂ ಪಕ್ತ್ವಾ ಮಾತ್ರಾಂ ಮಂದಾನಲಃ
ಪಿಬೇತ್ ||೮೬||

ಅರ್ಥ:— ತ್ರಿಕಟು, ತ್ರಿಫಳೆ ಇವುಗಳ ಚೂರ್ಣ ಒಟ್ಟು ೪ ತೊಲೆ, ಬೆಲ್ಲ ೪ ತೊಲಿ ೬೪ ೧೨೮ ತೊಲೆ ನೀರಿನಲ್ಲಿ ೩೨ ತೊಲಿ ಘೃತವನ್ನು ಸಿದ್ಧ ಮಾಡಿ ಅದನ್ನು ಅಗ್ನಿಮಾಂದ್ಯವುಳ್ಳವನು ಕುಡಿಯಬೇಕು. (೮೬)

ಪಂಚಮೂಲಾದಿ ಘೃತ ತೈಲ ಚೂರ್ಣಗಳನ್ನು ಹೇಳುತ್ತಾರೆ.

ಪಞ್ಚಮೂಲಾಭಯಾಜಾಜೀಪಿಪ್ಪಲೀಮೂಲಸೈಂಧವೈಃ ||
ವಿಡಙ್ಗತ್ರ್ಯೂಷಣಶಟೀರಾಸ್ನಾಕ್ಷಾರದ್ವಯೈರ್ಘೃತಮ್ ||೮೭||

ಶುಕ್ತೇನ ಮಾತುಲುಙ್ಗಸ್ಯ ಸ್ವರಸೇನಾರ್ದ್ರಕಸ್ಯ ಚ ||
ಶುಷ್ಕಮೂಲಕಕೋಲಾಂಬುಚುಕ್ರಿಕಾದಾಡಿಮಸ್ಯ ಚ ||೮೮||

ತಕ್ರಮಸ್ತುಸುರಾಮಂಡಸೌವೀರಕತುಷೋದಕೈಃ ||
ಕಾಂಜಿಕೇನ ಚ ತತ್ಪಕ್ವಮಗ್ನಿದೀಪ್ತಿಕರಂ ಪರಮ್ ||೮೯||

ಶೂಲಗುಲ್ಮೋದರಶ್ವಾಸಕಾಸಾನಿಲಕಫಾಪಹಮ್ ||
ಸಬೀಜಪೂರಕರಸಂ ಸಿದ್ಧಂ ವಾ ಪಾಯಯೇದ್ಘೃತಮ್ ||೯೦||

ತೈಲಮಭ್ಯಂಜನಾರ್ಥಞ್ಚ ಸಿದ್ಧಮೇತೈಃ ಪ್ರದಾಪಯೇತ್ ||
ಏತೇಷಾಮೌಷಧಾನಾಂ ವಾ ಪಿಬೇಚ್ಚೂರ್ಣಂ ಸುಖಾಂಬುನಾ||೯೧||

ವಾತಶ್ಲೇಷ್ಮಾವೃತೇ ಸಾಮೇ ಕಫೇ ವಾ ವಾಯುನೋದ್ಧತೇ ||
ದದ್ಯಾಚ್ಚೂರ್ಣಂ ಪಾಚನಾರ್ಥಮಗ್ನಿಸಂದೀಪನಂ ಪರಮ್ ||೯೨||

ಅರ್ಥ:— ಬೃಹತ್ ಪಂಚಮೂಲ, ಅಣಲೆ, ಜೀರಿಗೆ, ಮೋಡಿ, ಸೈಂಧವ, ವಾಯುವಿಡಂಗ, ತ್ರಿಕಟು, ಕಚೋರೆ, ರಾಸ್ನಾ, ಸಜ್ಜೀಖಾರ, ಜವ ಖಾರ ಇವುಗಳ ಚೂರ್ಣವನ್ನು ಘೃತದ ೪, ||೮೮|| ಘೃತದಷ್ಟೇ ಶುಕ್ತ, ಅಷ್ಟೇ ಮಾದಾಳದರಸ, ಹಸಿಸುಂಠಿಯ ರಸ, ಒಣ ಮೂಲಂಗಿ, ಬೋರೆ,

ಚಾಂಗೇರಿ, ದಾಳಿಂಬತೋಟಿಗಳ ಕಷಾಯ||೮೮||ಮಜ್ಜಿಗೆ,ಮೊಸರಿನನೀರು ಸುರಾಮಂಡ, ಸೌವೀರಕ (ಹೊಟ್ಟು ತೆಗೆದ ಜವೆಯ ಅಂಬಲಿ), ತುಷೋದಕ (ಹೊಟ್ಟು ತೆಗೆಯದ ಜವೆಯ ಅಂಬಲಿ), ಕಾಂಜಿಕ (ಅಂಬಲಿ) ಇವುಗಳನ್ನು ಪ್ರತ್ಯೇಕವಾಗಿ ತುಪ್ಪದಷ್ಟು ಹಾಕಿ ಘೃತವನ್ನು ಸಿದ್ಧಮಾಡಬೇಕು. ಇದು ಬಹಳ ಅಗ್ನಿದೀಪಕವೂ ||೮೯|| ಶೂಲ, ಗುಲ್ಮ, ಉದರ, ಶ್ವಾಸ, ಕಾಸ, ವಾತ, ಕಫಗಳ ನಾಶಕವೂ ಆಗಿದೆ. ಅಥವಾ ತುಪ್ಪದಳ ಪಾಲು ಮಾದಾಳದ ರಸವನ್ನು ಹಾಕಿ ಮೇಲಿನ ಕಲ್ಕ ಮತ್ತು ದ್ರವಗಳಿಂದ ಸಿದ್ಧವಾದ ಘೃತವನ್ನು ಕುಡಿಸಬೇಕು. ||೯೦|| ಇವುಗಳಿಂದ ಸಿದ್ಧವಾದ ತೈಲವನ್ನು ಕೊಡಬೇಕು. ಈ ಔಷಧಗಳ ಚೂರ್ಣವನ್ನು ಬಿಸಿನೀರಿನೊಡನೆ ಕುಡಿಯಬೇಕು. ||೯೧|| ವಾತ ಕಫದಿಂದ ಕೂಡಿದ ಅಥವಾ ವಾತದಿಂದ ಪ್ರಬಲವಾದ ಸಾಮ ಕಫದಲ್ಲಿ ಪಚನಕ್ಕಾಗಿ ಈ ಚೂರ್ಣವನ್ನುಕೊಡಬೇಕು ಇದು ಒಳ್ಳೇ ಅಗ್ನಿದೀಪಕವಾಗಿದೆ. (೯೨)

ಮಲದ ಮೇಲಿಂದ ಆಮಪಕ್ವ ಸಂಗ್ರಹಣಿಯನ್ನು ತಿಳಿಯುವ ಬಗೆಯನ್ನು ಹೇಳುತ್ತಾರೆ.

**ಮಜ್ಜತ್ಯಾಮಾ ಗುರುತ್ವಾದ್‌ವಿಟ್ ಪಕ್ವಾ ತೂತ್ಪ್ಲವತೇ ಜಲೇ ||**
**ವಿನಾತಿದ್ರವಸಂಘಾತಶೈತ್ಯಶ್ಲೇಷ್ಮಪ್ರದೂಷಣಾತ್ ||೯೩||**
**ಪರೀಕ್ಷ್ಯೈವಂ ಪುರಾ ಸಾಮಂ ನಿರಾಮಞ್ಚಾಮದೋಷಿಣಮ್ ||**
**ವಿಧಿನೋಪಾಚರೇತ್‌ಸಮ್ಯಕ್‌ಪಾಚನೇನೇತರೇಣ ವಾ ||೯೪||**

**ಅರ್ಥಃ**— ಆಮ (ಅಪಕ್ವ) ಮಲವು ಜಡವಿರುವದರಿಂದ ನೀರಲ್ಲಿ ಮುಣುಗುವದು ಪಕ್ವಮಲವು ತೇಲುವದು. ಆದರೆ ಅತಿದ್ರವ ಅಥವಾ ಅತಿಗಟ್ಟಿ ಅತಿಶಯ ಶೈತ್ಯಕಫಗಳ ದೋಷದಿಂದ ಮುಣುಗುವದು ಅಥವಾ ತೇಲುವದು. ||೯೩|| ಹೀಗೆ ಮೊದಲು ಸಾಮನಿರಾಮಗಳನ್ನು ಪರೀಕ್ಷೆ ಮಾಡಿ ಆಮದೋಷವಿದ್ದರೆ ಪಾಚಕ, ಇಲ್ಲವಾದರೆ ಶಾಮಕ ಔಷಧವನ್ನು ಕೊಡಬೇಕು. ||೯೪||

**ಪಾಚಕ ಔಷಧಗಳನ್ನು ಹೇಳುತ್ತಾರೆ. ಮೊದಲು ಚಿತ್ರಕಾದಿಗುಟಕೆಯನ್ನು ಹೇಳುತ್ತಾರೆ.**

ಚಿತ್ರಕಂ ಪಿಪ್ಪಲೀಮೂಲಂ ದ್ವೌ ಕ್ಷಾರೌ ಲವಣಾನಿ ಚ ॥
ವ್ಯೋಷಂ ಹಿಙ್ಗ್ವಜಮೋದಾಙ್ಚ ಚವ್ಯಞ್ಚೈಕತ್ರ
ಚೂರ್ಣಯೇತ್ ॥೯೫॥

ಗುಟಿಕಾ ಮಾತುಲುಙ್ಗಸ್ಯ ದಾಡಿಮಸ್ಯ ರಸೇನ ವಾ ॥
ಕೃತಾ ವಿಪಾಚಯತ್ಯಾಮಂ ದೀಪಯತ್ಯಾಶು ಚಾನಲಮ್ ॥೯೬॥

ಅರ್ಥಃ— ಚಿತ್ರಕ, ಮೋಡಿ, ಜವಖಾರ, ಸಜ್ಜೀಖಾರ, ಪಂಚಲವಣ, ತ್ರಿಕಟು, ಇಂಗು, ಅಜವಾನ, ಚವಕ ಇವುಗಳನ್ನು ಒತ್ತಟ್ಟಿಗೆ ಚೂರ್ಣಮಾಡಿ ॥೯೫॥ ಮಾದಾಳದ ರಸದಿಂದ ಅಥವಾ ದಾಳಿಂಬದ ರಸದಿಂದ ಕಟ್ಟಿದ ಗುಳಿಗೆಗಳು ಆಮದ ಪಚನವನ್ನೂ ಅಗ್ನಿಯ ದೀಪನವನ್ನು ಮಾಡುವವು. (೯೬)

ನಾಗರಾತಿವಿಷಾಮುಸ್ತಕ್ವಾಥಃ ಸ್ಯಾದಾಮಪಾಚನಃ ॥
ಮುಸ್ತಾಂತಕಲ್ಕಃ ಪಥ್ಯಾ ವಾ ನಾಗರಂ ಚೋಷ್ಣವಾರಿಣಾ ॥೯೭॥

ದೇವದಾರುವಚಾಮುಸ್ತಾನಾಗರಾತಿವಿಷಾಭಯಾಃ ॥
ವಾರುಣ್ಯಾಮಾಸುತಾಸ್ತೋಯೇ ಕೋಷ್ಣೇ ಸಾಲವಣಾಃ
ಪಿಬೇತ್ ॥೯೮॥

ವರ್ಚಸ್ಯಾಮೇ ಸಶೂಲೇ ಚ ಪಿಬೇದ್ ವಾ ದಾಡಿಮಾಂಬುನಾ ॥
ಬಿಡೇನ ಲವಣಂ ಪಿಷ್ಟಂ ಬಿಲ್ವ ಚಿತ್ರಕನಾಗರಮ್ ॥೯೯॥

ಸಾಮೇ ವಾ ಸಕಫೇ ವಾತೇ ಕೋಷ್ಠಶೂಲಕರೇ ಪಿಬೇತ್ ॥
ಕಲಿಂಗಹಿಙ್ಗ್ವತಿವಿಷಾವಚಾಸೌವರ್ಚಲಾಭಯಾಃ ॥೧೦೦॥

ಛರ್ದ್ಯರ್ಶೋಗ್ರಂಥಿಶೂಲೇಷು ಪೇಯಮುಷ್ಣೇನ ವಾರಿಣಾ ॥
ಪಥ್ಯಾಸೌವರ್ಚಲಾಜಾಜೀ ಚೂರ್ಣಂ ಮರಿಚಸಂಯುತಮ್ ॥೧೦೧॥

ಪಿಪ್ಪಲೀ ಮೂಲಮುಭಯಾಂ ವಚಾಂ ಕಟುಕರೋಹಿಣೀಮ್ ॥
ಪಾಠಾಂ ವತ್ಸಕಬೀಜಾನಿ ಚಿತ್ರಕಂ ವಿಶ್ವಭೇಷಜಮ್ ॥೧೦೨॥

ಪಿಬೇನ್ನಿಃಕ್ವಾಥ್ಯ ಚೂರ್ಣಾನಿ ಕೃತ್ವಾ ಚೋಷ್ಣೇನ ವಾರಿಣಾ ॥
ಪಿತ್ತಶ್ಲೇಷ್ಮಾಭಿಭೂತಾಯಾಂ ಗ್ರಹಣ್ಯಾಂ ಶೂಲನುದ್ಧಿತಮ್ ॥೧೦೩॥

**ಸಾಮೇ ಸಾತಿವಿಷಂ ವ್ಯೋಷಂ ಲವಣಕ್ಷಾರಹಿಙ್ಗುಮತ್ ||**
**ನಿಃಕ್ವಾಥ್ಯ ಪಾಯಯೇಚ್ಚೂರ್ಣಂ ಕೃತ್ವಾ ವಾ**
**ಕೋಷ್ಣವಾರಿಣಾ ||೧೦೪||**

**ಅರ್ಥ:—** ಸುಂಠಿ, ಅತಿವಿಷ, ಜೇಕು, ಇವುಗಳ ಕಷಾಯ ಅಥವಾ ಕಲ್ಕವು ಆಮಪಾಚಕವಾಗಿದೆ. ಅದರಂತೆ ಅಣಲೇ ಚೂರ್ಣವು ಅಥವಾ ಶುಂಠಿ ಚೂರ್ಣವು ಬಿಸಿನೀರಿನೊಡನೆ ತಕ್ಕೊಂಡರೆ ಆಮವನ್ನು ಪಚನ ಮಾಡುತ್ತವೆ. ||೯೭|| ದೇವದಾರು, ಬಜಿ, ಜೇಕು, ಸುಂಠಿ, ಅತಿವಿಷ, ಅಣಲೇಕಾಯಿಗಳ ಚೂರ್ಣವನ್ನು ವಾರುಣೀಮದ್ಯದಲ್ಲಿ ಅಥವಾ ಬಿಸಿ ನೀರಿನಲ್ಲಿ ಹಾಕಿ ಸಂಧಾನ ಮಾಡಿ ಸ್ವಲ್ಪ ಉಪ್ಪುಹಾಕಿ ಕುಡಿಯಬೇಕು. ||೯೮|| ಮಲವು ಅಪಕ್ವ ಮತ್ತು ಶೂಲಯುಕ್ತವಿದ್ದರೆ ಮೇಲಿನ ಚೂರ್ಣ ವನ್ನು ದಾಳಿಂಬದ ರಸದೊಡನೆ ತಕ್ಕೊಳ್ಳಬೇಕು. ಕೋಷ್ಠದಲ್ಲಿ ಶೂಲ ವನ್ನುಂಟುಮಾಡುವ ಸಾಮ ಕಫಯುಕ್ತ ವಾತದಲ್ಲಿ, ಬಿಲ್ವ ಚಿತ್ರಕ ಸುಂಠಿ ಗಳ ಚೂರ್ಣದಲ್ಲಿ ಬಿಡಲವಣವನ್ನು ಹಾಕಿ ಕುಡಿಯಬೇಕು. ||೯೯|| ವಾಂತಿ, ಮೂಲವ್ಯಾಧಿ, ಗ್ರಂಥಿ ಶೂಲಗಳಲ್ಲಿ ಇಂದ್ರಜವೆ, ಇಂಗು, ಅತಿ ವಿಷ, ಬಜಿ, ಕಾಚಲವಣ, ಅಣಲೆಗಳ ಚೂರ್ಣವನ್ನು ||೧೦೦|| ಬಿಸಿನೀರಿ ನೊಡನೆ ಕುಡಿಯಬೇಕು. ಅಥವಾ ಅಣಲೆ, ಕಾಚಲವಣ, ಜೀರಿಗೆ, ಮೆಣಸುಗಳ ಚೂರ್ಣವನ್ನು ಬಿಸಿನೀರಿನೊಡನೆ ತಕ್ಕೊಳ್ಳಬೇಕು ||೧೦೧|| ಮೋಡಿ, ಅಣಲೆ, ಬಜಿ, ಕಟುಕರೋಣಿ, ಅಗಳಸುಂಠಿ, ಇಂದ್ರಜವೆ, ಚಿತ್ರಕ, ಸುಂಠಿ, ||೧೦೨|| ಇವುಗಳನ್ನು ಕಷಾಯಮಾಡಿ ಕುಡಿಯ ಬೇಕು. ಅಥವಾ ಚೂರ್ಣಮಾಡಿ ನೀರಿನೊಡನೆ ಕುಡಿಯಬೇಕು. ಇದು ಪಿತ್ತಕಫಜಗ್ರಹಣಿಯಲ್ಲಿಯ ಶೂಲವನ್ನು ಚನ್ನಾಗಿ ನಾಶಮಾಡುತ್ತದೆ. ||೧೦೩|| ಪಿತ್ತಕಫಗಳು ಸಾಮವಿದ್ದರೆ ಅತಿವಿಷ, ತ್ರಿಕಟುಗಳ ಕಷಾಯದಲ್ಲಿ ಸೈಂಧವ ಜವಖಾರ ಇಂಗುಗಳನ್ನು ಹಾಕಿ ಅಥವಾ ಇವುಗಳ ಚೂರ್ಣ ವನ್ನು ಬಿಸಿನೀರುಹಾಕಿ ಕುಡಿಸಬೇಕು. (೧೦೪)

**ಪಿಪ್ಪಲ್ಯಾದಿ ಚೂರ್ಣವನ್ನು ಹೇಳುತ್ತಾರೆ.**

**ಪಿಪ್ಪಲೀಂ ನಾಗರಂ ಪಾಠಾಂ ಸಾರಿವಾಂ ಬೃಹತೀದ್ವಯಮ್ ||**

ಚಿತ್ರಕಂ ಕೌಟಜಂ ಬೀಜಂ ಲವಣಾನ್ಯಥ ಪಞ್ಚ ಚ ||೧೦೫||

ತಚ್ಚೂರ್ಣಂ ಸಯುವಕ್ಷಾರಂ ದಧ್ಯುಷ್ಣಾಂಬುಸುರಾದಿಭಿಃ ||
ಪಿಬೇದಗ್ನಿವಿವೃದ್ಧ್ಯರ್ಥಂ ಕೋಷ್ಠವಾತಾಪಹಂ ನರಃ ||೧೦೬||

ಅರ್ಥಃ— ಹಿಪ್ಪಲಿ, ಸುಂಠಿ, ಅಗಳಸುಂಠಿ, ಅನಂತಮೂಲ, ಹೆಬ್ಬಗುಳ್ಳ, ನೆಲಗುಳ್ಳ, ಚಿತ್ರಕ, ಇಂದ್ರಜವೆ, ಪಂಚಲವಣ, ||೧೦೫|| ಜವಖಾರ, ಇವುಗಳ ಚೂರ್ಣವನ್ನು ಬಿಸಿನೀರು, ಮೊಸರು ಅಥವಾ ಮದ್ಯಮುಂತಾದವುಗಳೊಡನೆ ಕುಡಿಯಬೇಕು. ಇದು ಅಗ್ನಿದೀಪಕವೂ ಕೋಷ್ಠವಾತನಾಶಕವೂ ಆಗಿದೆ. (೧೦೬)

ಮರಿಚಾದಿ ಚೂರ್ಣವನ್ನು ಹೇಳುತ್ತಾರೆ.

ಮರಿಚೋಃ ಕುಞ್ಚಿಕಾಂಬಷ್ಠಾ ವೃಕ್ಷಾಮ್ಲಕುಡವಾನ್ ಪೃಥಕ್||
ದಶಾಮ್ಲವೇತಸಪಲಾನೀಮೂಂಶ್ಚಾಪಿ ಪಲಾಂಶಿಕಾನ್ ||೧೦೭||

ಸೌವರ್ಚಲಂ ಬಿಡಂ ಪಾಕ್ಯಂ ಯುವಕ್ಷಾರಂ ಸಸೈಂಧವಮ್ ||
ಶಠೀಪುಷ್ಕರಮೂಲಾನಿ ಹಿಙ್ಗು ಹಿಙ್ಗುಶಿವಾಟಿಕಾ ||೧೦೮||

ತತ್ಸರ್ವಮೇಕತಃ ಸೂಕ್ಷ್ಮಂ ಚೂರ್ಣಂ ಕೃತ್ವಾ ಪ್ರಯೋಜಯೇತ್||
ಹಿತಂ ವಾತಾಭಿಭೂತಾಯಾಂ ಗ್ರಹಣ್ಯಾಮರುಚೌ ತಥಾ ||೧೦೯||

ಅರ್ಥ:— ಮೆಣಸು, ಕರೀಜೀರಗಿ, ಅಂಬಷ್ಠಾ (ಅಗಳಸುಂಠಿ) ಅಮಸೂಲುಗಳನ್ನು ೧೬-೧೬ ತೊಲಿ ಅಮ್ಲವೇತಸ ೪೦ ತೊಲಿ ||೧೦೭|| ಕಾಚಲವಣ, ಬಿಡಲವಣ, ಔದ್ಭಿದಲವಣ, ಜವಖಾರ, ಸೈಂಧವ, ಕಚೋರ, ಪುಷ್ಕರಮೂಲ, ಇಂಗು, ಡಿಕ್ಕೇಮಲಿ, ||೧೦೮|| ಇವುಗಳನ್ನು ೪-೪ತೊಲಿ ತಕ್ಕೊಂಡು ಸಣ್ಣಚೂರ್ಣಮಾಡಿ ಕೂಡಿಸಿ ಉಪಯೋಗಿಸ ಬೇಕು. ಇದು ವಾತಗ್ರಹಣಿಯಲ್ಲಿಯೂ ಅರುಚಿಯಲ್ಲಿಯೂ ಹಿತಕರ ವಾಗಿದೆ. ||೧೦೯||

ಅವಚಾರಣ ಚೂರ್ಣವನ್ನು ಹೇಳುತ್ತಾರೆ.

ಚತುರ್ಣಾಂ ಪ್ರಸ್ಥಮಮ್ಲಾನಾಂ ತ್ರ್ಯೂಷಣಸ್ಯ ಪಲತ್ರಯಮ್||

**ಲವಣಾನಾಞ್ಚ ಚತ್ವಾರಿ ಶರ್ಕರಾಯಾಃ ಪಲಾಷ್ಟಕಮ್ ||೧೧೦||**

**ತಚ್ಚೂರ್ಣಂ ಶಾಕಸೂಪಾನ್ನರಾಗಾದಿಷ್ವವಚಾರಯೇತ್ ||**
**ಕಾಸಾಜೀರ್ಣಾರುಚಿಶ್ವಾಸಹೃತ್ಪಾಂಡ್ವಾಮಯಶೂಲನುತ್ ||೧೧೧||**

**ಅರ್ಥಃ—** ನಾಲ್ಕು ಅಮ್ಲದ್ರವ್ಯ (ಅಮ್ಲವೇತಸ, ಅಮಸೋಲು, ಬೋರೆ, ದಾಳಿಂಬ) ಗಳನ್ನು ೧೬-೧೬ ತೊಲಿ, ಸುಂಠಿ, ಮೆಣಸು ಹಿಪ್ಪಲಿಗಳನ್ನು ೪-೪ ತೊಲಿ, ನಾಲ್ಕು ಲವಣ (ಸೈಂಧವ, ಕಾಚಲವಣ, ಬಿಡಲವಣ ಔದ್ಭಿದ) ಗಳನ್ನು ೧-೧ ತೊಲಿ, ಸಕ್ಕರೆ ೩೨ ತೊಲಿ, ||೧೧೦|| ತಕ್ಕೊಂಡು ಅವುಗಳ ಚೂರ್ಣವನ್ನು ಮಾಡಿ ಪಲ್ಯೆ ತೊವ್ವಿ ಅನ್ನ ಪಾನಕಗಳಲ್ಲಿ ಹಾಕಬೇಕು. ಅದು ಕೆಮ್ಮು, ಅಜೀರ್ಣ, ಅರುಚಿ, ದಮ್ಮು, ಹೃದ್ರೋಗ, ಪಾಂಡುರೋಗ, ಶೂಲಗಳನ್ನು ಕಳೆಯುವದು. ||೧೧೧||

ಐದು ಪೇಯಗಳನ್ನು ಹೇಳುತ್ತಾರೆ.

**ಚವ್ಯತ್ವಕ್ಪಿಪ್ಪಲೀಮೂಲಧಾತಕೀವ್ಯೋಷಚಿತ್ರಕಾನ್ ||**
**ಕಪಿತ್ಥಾಂಬಷ್ಠಕೀಹಸ್ತಿಪಿಪ್ಪಲೀಬಿಲ್ವಶಾಲ್ಮಲಮ್ ||೧೧೨||**

**ಶಿಲೋದ್ಭೇದಂ ತಥಾಜಾಜೀಂ ಪಿಷ್ಟ್ವಾ ಬದರಸಮ್ಮಿತಾಮ್ ||**
**ಘೃತೇನ ಭರ್ಜಿತಾಂ ದಧ್ನಾ ಯವಾಗೂಂ ಸಾಧಯೇದ್ಭಿಷಕ್ ||೧೧೩||**

**ರಸೈಃ ಕಪಿತ್ಥಚುಕ್ರೀಕಾವೃಕ್ಷಾಮ್ಲೈರ್ದಾಡಿಮಸ್ಯ ಚ ||**
**ಸರ್ವಾತಿಸಾರಗ್ರಹಣೀರೋಗಾರ್ಶಃಪ್ಲೀಹನಾಶಿನೀಮ್ ||೧೧೪||**

**ಅರ್ಥಃ—** ಚವಕ, ದಾಲಚಿನ್ನಿ, ಮೋಡಿ, ಧಾತಕೀಪುಷ್ಪ, ತ್ರಿಕಟು ಚಿತ್ರಕ, ಬೆಳವಲು, ಅಗಳಸುಂಠಿ, ಗಜಪಿಪ್ಪಲಿ, ಬಿಲ್ವ, ಬೂರಲಅಂಟು. ||೧೧೨|| ಕಲ್ಲಹೂವು, ಜೀರಗಿ, ಇವುಗಳನ್ನು ಅರ್ಧ-ಅರ್ಧ ತೊಲಿ, ತಕ್ಕೊಂಡು ಕಲ್ಕಮಾಡಿ ಅದರ ಹದಿನಾರು ಪಾಲು ಮೊಸರುಹಾಕಿ ತುಪ್ಪದ ಒಗ್ಗರಣಿಕೊಟ್ಟು, ಪೇಯವನ್ನು ಮಾಡಬೇಕು. ||೧೧೩|| ಇದರಂತೆ ಬೆಳವಲಕಾಯಿರಸ ಹಾಕಿ ಅಥವಾ ಹುಣಸೀಹಣ್ಣಿನ ರಸಹಾಕಿ ಅಥವಾ ಅಮಸೂಲರಸ ಹಾಕಿ ಅಥವಾ ದಾಳಿಂಬರಸ ಹಾಕಿ ಪೇಯವನ್ನು ಸಿದ್ಧಮಾಡಬೇಕು. ಇವು ಎಲ್ಲ ಅತಿಸಾರ, ಸಂಗ್ರಹಣಿ, ಮೂಲವ್ಯಾಧಿ, ಪ್ಲೀಹಗಳನ್ನು ನಾಶಮಾಡುವವು. (೧೧೪)

ಪಞ್ಚಕೋಲಕಯೂಷಶ್ಚ ಮೂಲಕಾನಾಂ ಚ ಸೋಷಣಃ ||
ಸ್ನಿಗ್ಧೋ ದಾಡಿಮತಕ್ರಾಮ್ಲೋ ಜಾಙ್ಗಲಃ ಸಂಸ್ಕೃತೋ ರಸಃ ||೧೧೫||

ಕ್ರವ್ಯಾದಸ್ಯ ರಸಃ ಶಸ್ತೋ ಭೋಜನಾರ್ಥೇ ಸದೀಪನಃ ||
ತಕ್ರಾರನಾಲಂ ಪಾನಾರ್ಥಂ ಮದ್ಯಂ ವಾರಿಷ್ಟಮೇವ ವಾ ||೧೧೬||

**ಅರ್ಥಃ—** ಅವರ ಊಟಕ್ಕೆ ಪಂಚಕೋಲ (ಹಿಪ್ಪಲಿ, ಮೋಡಿ, ಚವಕ, ಚಿತ್ರಕ, ಸುಂಠಿ) ಗಳ ಕಲ್ಕದಿಂದ ಮಾಡಿದ, ಅಥವಾ ಒಣಗಿದ ಮೂಲಂಗಿಯ ಕಲ್ಕ ಹಾಕಿ ಮಾಡಿದ, ಹೆಸರು ಮುಂತಾದವುಗಳ ಕಟ್ಟನ್ನು ಅಥವಾ ದಾಳಿಂಬ, ಮಜ್ಜಿಗೆ ಹಾಕಿ ಹುಳಿಮಾಡಿದ, ಸ್ನೇಹಯುಕ್ತ ಮತು ಸಂಸ್ಕಾರ ಕೊಟ್ಟ ಜಾಂಗಲಮಾಂಸವನ್ನು ||೧೧೫|| ಅಥವಾ ದೀಪಕ ಔಷಧಗಳನ್ನು ಹಾಕಿದ ತೋಳದ ಮಾಂಸವನ್ನು ಕೊಡಬೇಕು. ಮೇಲೆ ಕುಡಿಯಲಿಕ್ಕೆ ಮಜ್ಜಿಗೆ, ಅಂಬಲಿ, ಮದ್ಯ, ಅಥವಾ ಅರಿಷ್ಟನ್ನು ಕೊಡಬೇಕು. ||೧೧೬||

ತಕ್ರದ ಗುಣಗಳನ್ನು ಹೇಳುತ್ತಾರೆ.

ಗ್ರಹಣೀದೋಷಿಣಾಂ ತಕ್ರಂ ದೀಪನಂ ಗ್ರಾಹಿ ಲಾಘವಾತ್||
ಪಥ್ಯಂ ಮಧುರಪಾಕಿತ್ವಾನ್ನ ಚ ಪಿತ್ತಪ್ರಕೋಪಣಮ್ ||೧೧೭||

ಕಷಾಯೋಷ್ಣವಿಕಾಶಿತ್ವಾದ್ರೌಕ್ಷ್ಯಾಚ್ಚಾಪಿ ಕಫೇ ಹಿತಮ್ ||
ವಾತೇ ಸ್ವಾದ್ವಮ್ಲಸಾಂದ್ರತ್ವಾತ್ಸದ್ಯಸ್ಕಮವಿದಾಹಿ ತತ್ ||೧೧೮||

ತಸ್ಮಾತ್ತಕ್ರಪ್ರಯೋಗಾ ಯೇ ಜಠರಾಣಾಂ ತಥಾರ್ಶಸಾಮ್ ||
ವಿಹಿತಾ ಗ್ರಹಣೀದೋಷೇ ಸರ್ವಶಸ್ತಾನ್ ಪ್ರಯೋಜಯೇತ್||೧೧೯||

**ಅರ್ಥಃ—** ಮಜ್ಜಿಗೆಯು ಹಗುರು, ಸ್ತಂಭ, ಮತ್ತು ಅಗ್ನಿದೀಪಕವಿದ್ದದರಿಂದ ಗ್ರಹಣೀ ರೋಗಿಗಳಿಗೆ ಪಥ್ಯವಾಗಿದೆ. ಇವರ ವಿಪಾಕವು ಮಧುರವಾದ್ದರಿಂದ ಪಿತ್ತಪ್ರಕೋಪವನ್ನು ಮಾಡದು. ||೧೧೭|| ಒಗರು, ಉಷ್ಣ, ವಿಕಾಸಿ (ಓಜನಾಶಕ) ಮತ್ತು ರೂಕ್ಷವಿದ್ದರಿಂದ ಕಫದಲ್ಲಿಯೂ ಮಧುರ, ಆಮ್ಲ, ಮತ್ತು ಸಾಂದ್ರ ವಿದ್ದದರಿಂದ ವಾತದಲ್ಲಿಯೂ ಹಿತಕರವು ಆದೇ ಕಡೆದ ಮಜ್ಜಿಗೆಯು ವಿದಾಹವನ್ನುಂಟುಮಾಡದು. ||೧೧೮|| ಆದ್ದ

ಆದ್ದರಿಂದ ಉದರ ಮತ್ತು ಮೂಲವ್ಯಾಧಿಗಳಲ್ಲಿ ಹೇಳಿದ ತಕ್ರಯೋಗಗಳನ್ನು ಗ್ರಹಣೀರೋಗದಲ್ಲಿಯೂ ಸಂಪೂರ್ಣವಾಗಿ ಉಪಯೋಗಿಸಬೇಕು. (೧೧೯)

ತಕ್ರಾರಿಷ್ಟವನ್ನು ಹೇಳುತ್ತಾರೆ.

**ಯವಾನ್ಯಾಮಲಕಂ ಪಥ್ಯಾ ಮರಿಚಂ ತ್ರಿಪಲಾಂಶಕಮ್ ॥**
**ಲವಣಾನಿ ಪಲಾಂಶಾನಿ ಪಞ್ಚ ಚೈಕತ್ರ ಚೂರ್ಣಯೇತ್ ॥೧೨೦॥**

**ತಕ್ರಕಂಸಾಸುತಂ ಜಾತಂ ತಕ್ರಾರಿಷ್ಟಂ ಪಿಬೇನ್ನರಃ ॥**
**ದೀಪನಂ ಶೋಫಗುಲ್ಮಾರ್ಶಃಕ್ರಿಮಿಮೇಹೋದರಾಪಹಮ್ ॥೧೨೧॥**

**ಅರ್ಥ:—** ಅಜವಾನ ೧೨ ತೊಲಿ, ನೆಲ್ಲೀಕಾಯಿ ೧೨ ತೊಲಿ, ಅಳ್ಳೀಕಾಯಿ ೧೨ ತೊಲಿ, ಮೆಣಸು ೧೨ ತೊಲಿ, ಐದೂ ಲವಣಗಳು ೪-೪ ತೊಲಿ, ತಕ್ಕೊಂಡು ಚೂರ್ಣಮಾಡಿ, ॥೧೨೦॥ ಅದನ್ನು ೫೧೨ತೊಲಿ ಮಜ್ಜಿಗೆಯಲ್ಲಿ ಹಾಕಿ (ಬೇಸಿಗೆಯಲ್ಲಿ ಮೂರು ದಿವಸ, ಗ್ರೀಷ್ಮ ಶರದೃತುಗಳಲ್ಲಿ ೪ ದಿವಸ, ವರ್ಷಾ ವಸಂತಋತುಗಳಲ್ಲಿ ೬ ದಿವಸ, ಹೇಮಂತಋತುವಿನಲ್ಲಿ ೮ ದಿವಸ) ಇಟ್ಟು ಸಿದ್ಧವಾಗಲು ಈ ತಕ್ರಾರಿಷ್ಟವನ್ನು ಕುಡಿಯಬೇಕು. ಇದು ದೀಪಕವಿದ್ದು ಬಾವು, ಗುಲ್ಮ, ಮೂಲವ್ಯಾಧಿ, ಕೃಮಿ, ಮೇಹ, ಉದರಗಳನ್ನು ಕಳೆಯುವದು. (೧೨೧)

ಪಿತ್ತಗ್ರಹಣೀ ಚಿಕಿತ್ಸೆಯನ್ನು ಹೇಳುತ್ತಾರೆ.

**ಸ್ವಸ್ಥಾನಗತಮುತ್ಕ್ಲಿಷ್ಟಮಗ್ನಿನಿರ್ವಾಪಕಂ ಭಿಷಕ್ ॥**
**ಪಿತ್ತಂ ಜ್ಞಾತ್ವಾ ವಿರೇಕೇಣ ನಿರ್ಹರೇದ್ವಮನೇನ ವಾ ॥೧೨೨॥**

**ಅವಿದಾಹಿಭಿರನ್ನೈಶ್ಚ ಲಘುಭಿಸ್ತಿಕ್ತಸಂಯುತೈಃ ॥**
**ಜಾಙ್ಗಲಾನಾಂ ರಸೈರ್ಯೂಷೈರ್ಮುದ್ಗಾದೀನಾಂ ಖಡೈರಪಿ ॥೧೨೩॥**

**ದಾಡಿಮಾಮ್ಲೈಃ ಸಸರ್ಪಿಷ್ಕೈರ್ದೀಪನಗ್ರಾಹಿಸಂಯುತೈಃ ॥**
**ತಸ್ಯಾಗ್ನಿಂ ದೀಪಯೇಚ್ಚೂರ್ಣೈಃ ಸರ್ಪಿರ್ಭಿಶ್ಚಾಪಿ ತಿಕ್ತಕೈಃ ॥೧೨೪॥**

**ಅರ್ಥಃ—** ಅಗ್ನಿಯನ್ನು ನಾಶಮಾಡುವ, ತನ್ನ ಸ್ಥಾನದಲ್ಲಿದ್ದ,

ಉತ್ಕ್ಲೇಶಹೊಂದಿದ ಪಿತ್ತವನ್ನು ವಿರೇಚನ ಅಥವಾ ವಮನದಿಂದ ಹೊರಗೆ ಹಾಕಬೇಕು. ||೧೨೨|| ಆ ಮೇಲೆ ವಿದಾಹ ಮಾಡದ ಹಗುರಾದ ಅನ್ನಗಳಿಂದಲೂ ಕಹಿಪದಾರ್ಥಗಳಿಂದ ಕೂಡಿದ ಜಾಂಗಲಮಾಂಸರಸಗಳಿಂದಲೂ ||೧೨೩|| ದಾಳಿಂಬದ ಹುಳಿಹಾಕಿದ, ತುಪ್ಪದ ಒಗ್ಗರಣೆ ಕೊಟ್ಟ ಕಟ್ಟುಗಳಿಂದಲೂ ದೀಪಕಸ್ತಂಭಕ ಔಷಧಗಳಿಂದ ಮಾಡಿದ ಚೂರ್ಣಗಳಿಂದಲೂ ಕಹಿಯಾದ ಘೃತಗಳಿಂದಲೂ ಅವನ ಅಗ್ನಿಯನ್ನು ಪ್ರದೀಪ್ತಮಾಡಬೇಕು. (೧೨೪)

ಚಂದನಾದಿ ಘೃತವನ್ನು ಹೇಳುತ್ತಾರೆ.

**ಚಂದನಂ ಪದ್ಮಕೋಶೀರಂ ಪಾಠಾಂ ಮೂರ್ವಾಂ ಕುಟನ್ನಟಮ್ ||**
**ಷಡ್‌ಗ್ರಂಥಾಸಾರಿವಾಸ್ಫೋತಾ ಸಪ್ತಪರ್ಣಾಟರೂಷಕಾನ್ ||೧೨೫||**

**ಪಟೋಲೋದುಂಬರಾಶ್ವತ್ಥ ವಟಪ್ಲಕ್ಷಕಪೀತನಾನ್ ||**
**ಕಟುಕಾರೋಹಿಣೀಮುಸ್ತಂ ನಿಂಬಞ್ಚ ದ್ವಿಪಲಾಂಶಿಕಮ್ ||೧೨೬||**

**ದ್ರೋಣೇಽಪಾಂ ಸಾಧಯೇತ್ಪಾದ ಶೇಷಂ ಪ್ರಸ್ಥಂ ಘೃತಾತ್ ಪಚೇತ್ ||**
**ಕಿರಾತತಿಕ್ತೇಂದ್ರಯವವೀರಾಮಾಗಧಿಕೋತ್ಪಲೈಃ ||೧೨೭||**

**ಕಲ್ಕೈರಕ್ಷಸಮೈಃ ಪೇಯಂ ತತ್‌ಪಿತ್ತಗ್ರಹಣೀಗದೇ ||**
**ತಿಕ್ತಕಂ ಯದ್ಘೃತಂ ಚೋಕ್ತಂ ಕೌಷ್ಠಿಕೇ ತಚ್ಚ ದಾಪಯೇತ್||೧೨೮||**

**ಅರ್ಥ:—** ಚಂದನ, ಪದ್ಮಕಾಷ್ಠ, ಕರೇಬಾಳದಬೇರು, ಅಗಳಸುಂಠಿ, ಮೂರ್ವಾ (ಹೆಗ್ಗೊರಟಿಗೆ) ಅಡವೀಜೇಕು, ಬಜೆ, ಅನಂತಮೂಲ, ಆಸ್ಫೋತಾ ಸಪ್ತಪರ್ಣೀ, ಆಡಸೋ, ||೧೨೫|| ಕಹಿಪಡವಲ ಅತ್ತಿತೋಟಿ ಅರಳೀತೋಟಿ ಆಲದತೋಟಿ ಬಸರೀತೋಟಿ ಕಪೀತನತೋಟಿ (ಹೆಬ್ಬೆಜಾತಿ) ಕಟುಕರೋಣಿ, ಜೇಕು, ಬೇವು ಇವುಗಳನ್ನು ೮-೮ ತೊಲಿ ||೧೨೬|| ತಕ್ಕೊಂಡು ಎರಡು ದ್ರೋಣ ನೀರಿನಲ್ಲಿ ಹಾಕಿ ಕುದಿಸಿ, ¼ ಉಳಿಯಲು ಸೋಸಿ ತಕ್ಕೊಂಡು, ಅದರಲ್ಲಿ ಚಿರಾಯತ, ಇಂದ್ರಜವಿ, ವೀರಾ (ಕಾಕೋಲಿ), ಹಿಪ್ಪಲಿ, ನೀಲಕಮಲಗಳ (೧೨೭)

ಚೂರ್ಣವನ್ನು ೧-೧ ತೊಲಿ ಹಾಕಿ ೧೨೮ ತೊಲಿ ತುಪ್ಪವನ್ನು ಸಿದ್ಧಮಾಡಬೇಕು. ಇದನ್ನು ಪಿತ್ತಗ್ರಹಣಿಯಲ್ಲಿ ಕುಡಿಯಬೇಕು. ಅಥವಾ ಕುಷ್ಠ ಚಿಕಿತ್ಸೆಯಲ್ಲಿ ಹೇಳಿದ ತಿಕ್ತಕ ಘೃತವನ್ನು ಕೊಡಬೇಕು. ||೧೨೮||

ನಾಗರಾದಿ ಚೂರ್ಣವನ್ನು ಹೇಳುತ್ತಾರೆ.

**ನಾಗರಾತಿವಿಷಾ ಮುಸ್ತಂ ಧಾತಕೀಂ ಸರಸಾಂಜನಮ್ ॥**
**ವತ್ಸಕತ್ವಕ್ಫಲಂ ಬಿಲ್ವಂ ಪಾಠಾಂ ತಿಕ್ತಕರೋಹಿಣೀಮ್ ||೧೨೯||**

**ಪಿಬೇತ್ಸಮಾಂಶಂ ತಚ್ಚೂರ್ಣಂ ಸಕ್ಷೌದ್ರಂ ತಂಡುಲಾಂಬುನಾ ॥**
**ಪೈತ್ತಿಕೇ ಗ್ರಹಣೀದೋಷೇ ರಕ್ತಂ ಯಚ್ಚೋಪವೇಶ್ಯತೇ ||೧೩೦||**

**ಅರ್ಶಾಂಸ್ಯಥ ಗುದೇ ಶೂಲಂ ಜಯೇಚ್ಚೈವ ಪ್ರವಾಹಿಕಾಮ್ ॥**
**ನಾಗರಾದ್ಯಮಿದಂ ಚೂರ್ಣಂ ಕೃಷ್ಣಾತ್ರೇಯೇಣ ಪೂಜಿತಮ್||೧೩೧||**

**ಅರ್ಥಃ—** ಸುಂಠಿ, ಅತಿವಿಷ, ಜೇಕು, ಧಾತಕೀಪುಷ್ಪ, ರಸಾಂಜನ, ಹಲಗತ್ತಿತೋಟಿ, ಇಂದ್ರಜವೆ, ಬಿಲ್ವತಿಳಲು, ಅಗಳಸುಂಠಿ, ಕಟುಕರೋಣಿ ||೧೨೯|| ಇವುಗಳ ಸಮಭಾಗ ಚೂರ್ಣವನ್ನು ಜೇನುಕಲಿಸಿ ಅಕ್ಕಿತೊಳೆದ ನೀರಿನೊಡನೆ ಕುಡಿಯಬೇಕು. ಇದು ಪಿತ್ತಗ್ರಹಣಿಯನ್ನೂ ರಕ್ತಬೀಳುವದನ್ನೂ ||೧೩೦|| ಮೂಲವ್ಯಾಧಿ, ಗುದದಲ್ಲಿಯ ಶೂಲ, ಪ್ರವಾಹಿಕೆಗಳನ್ನೂ ಕಳೆಯುವದು. ಈ ನಾಗರಾದಿಚೂರ್ಣವು ಕೃಷ್ಣಾತ್ರೇಯವರಿಗೆ ಬಹುಮಾನ್ಯವಾಗಿದೆ. (೧೩೧)

ಭೂನಿಂಬಾದಿ ಚೂರ್ಣವನ್ನು ಹೇಳುತ್ತಾರೆ.

**ಭೂನಿಂಬಕಟುಕಾವ್ಯೋಷಮುಸ್ತಕೇಂದ್ರಯವಾನ್ಸಮಾನ್ ॥**
**ದ್ವೌ ಚಿತ್ರಕಾದ್ವತ್ಸಕತ್ವಗ್‌ಭಾಗಾನ್ ಷೋಡಶ ಚೂರ್ಣಯೇತ್**

**ಗುಡಶೀತಾಂಬುನಾ ಪೀತಂ ಗ್ರಹಣೀದೋಷಗುಲ್ಮನುತ್ ॥**
**ಕಾಮಲಾಜ್ವರಪಾಂಡುತ್ವಮೇಹಾರುಚ್ಯತಿಸಾರನುತ್ ||೧೩೩||**

**ಅರ್ಥಃ—** ಚಿರಾಯತ, ಕಟುಕರೋಣಿ, ತ್ರಿಕಟು, ಜೇಕು, ಇಂದ್ರ

ಜವೆ, ಇವುಗಳನ್ನು ಒಂದೊಂದು ಭಾಗ, ಚಿತ್ರಕ ೨ ಭಾಗ, ಹಲಗತ್ತೀ ತೋಟಿ ೧೬ ಭಾಗ, ಇವುಗಳ ಚೂರ್ಣವನ್ನು ಮಾಡಬೇಕು. ||೧೩೨|| ಇವನ್ನು ಬೆಲ್ಲ ಮತ್ತು ತಣ್ಣೀರಿನೊಡನೆ ಕುಡಿವರೆ ಸಂಗ್ರಹಣಿ, ಗುಲ್ಮ, ಕಾಮಣಿ, ಜ್ವರ, ಪಾಂಡುರೋಗ, ಮೇಹ, ಅರುಚಿ, ಅತಿಸಾರಗಳನ್ನು ಕಳೆಯುವದು. ||೧೩೩||

**ವಚಾಮತಿವಿಷಾಂ ಪಾಠಾಂ ಸಪ್ತಪರ್ಣಾಂ ರಸಾಂಜನಮ್ ||**
**ಶ್ಯೋನಾಕೋದೀಚ್ಯಕಟ್ವಂಗ್ಗವತ್ಸಕತ್ವಗ್ದುರಾಲಭಾಃ ||೧೩೪||**

**ದಾರ್ವೀಂಪರ್ಪಟಕಂ ಪಾಠಾಂ ಯಮಾನೀಂ ಮಧುಶಿಗ್ರುಕಮ್ ||**
**ಪಟೋಲಪತ್ರಂ ಸಿದ್ಧಾರ್ಥಾನ್ಯೂಥಿಕಾಂ ಜಾತಿಪಲ್ಲವಾನ್ ||೧೩೫||**

**ಜಂಬ್ವಾಮ್ರಬಿಲ್ವಮಧ್ಯಾನಿ ನಿಂಬಶಾಕಫಲಾನಿ ಚ ||**
**ತದ್ರೋಗಶಮನುನ್ನಿಚ್ಛನ್ಭೂನಿಂಬಾದ್ಯೇನ ಯೋಜಯೇತ್ ||೧೩೬||**

ಅರ್ಥ:— ಮೇಲಿನ ರೋಗಗಳ ಶಮನಕ್ಕಾಗಿ ಬಜಿ, ಅತಿವಿಷ, ಅಗಳಸುಂಠಿ, ಸಪ್ತಪರ್ಣ, ರಸಾಂಜನ, ಹೆಮ್ಮರ, ಬಾಳದಬೇರು, ಹಲಗತ್ತಿಯ ತೋಟಿ, ನೆಲಇಂಗಳ, ಮರ ಅರಿಷಿಣ, ಕಲ್ಲುಸಬ್ಬಸಿಗೆ,||೧೩೪|| ಅಜವಾನ, ಮಧುಶಿಗ್ರು (ಕೆಂಪುನುಗ್ಗಿ), ಕಹಿಪಡವಲ, ಬಿಳೇಸಾಸಿವೆ, ಕಾಡು ಮಲ್ಲಿಗೆ, ಮಲ್ಲಿಗೆಎಲೆ, ||೧೩೫|| ನೇರಲ, ಮಾವು, ಬಿಲ್ವಗಳ ಮಜ್ಜ, ಬೇವು, ಶಾಕ (ಸಾಗ,ರಾಳದಜಾತಿ) ಫಲಗಳನ್ನು ಮೇಲಿನ ಭೂನಿಂಬಾದಿ ಚೂರ್ಣದೊಡನೆ ಯೋಜಿಸಬೇಕು. (೧೩೬)

ಕಿರಾತಾದಿ ಚೂರ್ಣವನ್ನು ಹೇಳುತ್ತಾರೆ.

**ಕಿರಾತತಿಕ್ತಂ ಷಡ್‌ಗ್ರಂಥಾ ತ್ರಾಯಮಾಣಾ ಕಟುತ್ರಿಕಮ್ ||**
**ಚಂದನಂ ಪದ್ಮಕೋಶೀರಂ ದಾರ್ವೀತ್ವಕ್ ಕಟುರೋಹಿಣೀ||೧೩೭||**

**ಕುಟಜತ್ವಕ್‌ಫಲಂ ಮುಸ್ತಂ ಯಮಾನೀ ದೇವದಾರು ಚ ||**
**ಪಟೋಲನಿಂಬಪತ್ರೈಲಾಸೌರಾಷ್ಟ್ರ್ಯತಿವಿಷಾತ್ವಚಃ ||೧೩೮||**

**ಮಧುಶಿಗ್ರೋಶ್ಚ ಬೀಜಾನಿ ಮೂರ್ವಾ ಪರ್ಪಟಕಂ ತಥಾ ||**
**ತಚ್ಚೂರ್ಣಂ ಮಧುನಾ ಲೇಹ್ಯಂ ಪೇಯಂ ಮದ್ಯೈರ್ಜಲೇನ ವಾ**

ಹೃತ್ಪಾಂಡುಗ್ರಹಣೀರೋಗ ಗುಲ್ಮಶೂಲಾರುಚಿಜ್ವರಾನ್ ||
ಕಾಮಲಾಂ ಪಾಂಡುರೋಗಞ್ಚ ಮುಖರೋಗಞ್ಚ ನಾಶಯೇತ್

**ಅರ್ಥ:—** ಚಿರಾಯತ, ಬಜಿ, ತ್ರಾಯಮಾಣ, ತ್ರಿಕಟು, ಚಂದನ, ಪದ್ಮಕಾಷ್ಠ, ಬಾಳದಬೇರು, ಮರ ಅರಿಷಿಣ ತೋಟಿ, ಕಟುಕರೋಣಿ, ||೧೩೭|| ಹಲಗತ್ತಿಯತೋಟಿ, ಇಂದ್ರಜವೆ, ಜೇಕು, ಅಜವಾನ, ದೇವ ದಾರು, ಕಹಿಪಡವಲ, ಬೇವಿನ ಎಲೆ, ಯಾಲಕ್ಕಿ, ಘಟಿಕ, ಅತಿವಿಷ, ದಾಲ ಚಿನ್ನಿ ||೧೩೮|| ಕೆಂಪುನುಗ್ಗೀಬೀಜ, ಮೂರ್ವಾ (ಹೆಗ್ಗೊರಟಿಗೆ), ಕಲ್ಲು ಸಬಸಿಗೆ ಇವುಗಳ ಚೂರ್ಣವನ್ನು ಜೇನಿನೊಡನೆ ನೆಕ್ಕಬೇಕು. ಅಥವಾ ಮದ್ಯದೊಡನೆ ಅಥವಾ ನೀರಿನೊಡನೆ ಕುಡಿಯಬೇಕು. ||೧೩೯|| ಇದು ಹೃದ್ರೋಗ, ಪಾಂಡುರೋಗ, ಸಂಗ್ರಹಣೀ, ಗುಲ್ಮ, ಶೂಲ, ಅರುಚಿ, ಜ್ವರ, ಕಾಮಣಿ, ಪಾಂಡುರೋಗ, ಮುಖರೋಗಗಳನ್ನು ಕಳೆಯು ತ್ತದೆ. (೧೪೦)

ಶ್ಲೇಷ್ಮಗ್ರಹಣೀ ಚಿಕಿತ್ಸೆಯನ್ನು ಹೇಳುತ್ತಾರೆ.

ಗ್ರಹಣ್ಯಾಂ ಶ್ಲೇಷ್ಮದುಷ್ಟಾಯಾಂ ವಮಿತಸ್ಯ ಯಥಾವಿಧಿ ||
ಕಟ್ವಮ್ಲಲವಣಕ್ಷಾರೈಸ್ತಿಕ್ತೈಶ್ಚಾಗ್ನಿಂ ವಿವರ್ಧಯೇತ್ ||೧೪೧||

ಪಲಾಶಂ ಚಿತ್ರಕಂ ಚವ್ಯಂ ಮಾತುಲುಙ್ಗಂ ಹರೀತಕೀ ||
ಪಿಪ್ಪಲೀ ಪಿಪ್ಪಲೀಮೂಲಂ ಪಾಠಾಧಾನ್ಯಕನಾಗರಮ್ ||೧೪೨||

ಕಾರ್ಷಿಕಾಣ್ಯುದಕಪ್ರಸ್ಥೇ ಪಕ್ತ್ವಾ ಪಾದಾವಶೇಷಿತೇ ||
ಪಾನಾರ್ಥಂ ತತ್ಪ್ರಯುಞ್ಜೀತ ಯವಾಗೂಂ ತೈಶ್ಚ
ಸಾಧಯೇತ್ ||೧೪೩||

ಶುಷ್ಕಮೂಲಕಯೂಷೇಣ ಕೌಲತ್ಥೇನಾಥವಾ ಪುನಃ ||
ಕಟ್ವಮ್ಲಕ್ಷಾರಪಟುನಾ ಲಘೂನ್ಯನ್ನಾನಿ ಭೋಜಯೇತ್ ||೧೪೪||

ಅಮ್ಲಞ್ಚಾನುಪಿಬೇತ್ ತಕ್ರಂ ತಕ್ರಾರಿಷ್ಟಮಥಾಪಿ ವಾ ||
ಮದಿರಾಂ ಮಧ್ವರಿಷ್ಟಂ ವಾ ನಿಗದಂ ಸೀಧುಮೇವ ವಾ ||೧೪೫||

**ಅರ್ಥಃ**— ಕಫಸಂಗ್ರಹಣಿಯಲ್ಲಿ ವಿಧಿಯಂತೆ ವಮನಮಾಡಿಸಿ, ಕಾರ-ಹುಳಿ-ಉಪ್ಪು-ಕ್ಷಾರ-ಕಹಿ ಔಷಧಗಳಿಂದ ಅಗ್ನಿಯನ್ನು ಬೆಳಿಸಬೇಕು. ||೧೪೧|| ಮುತ್ತಲು, ಚಿತ್ರಕ, ಚವಕ, ಮಾದಾಳಫಲ, ಅಣಲೆ, ಹಿಪ್ಪಲಿ, ಮೋಡಿ, ಅಗಳಸುಂಠಿ, ಹವೀಜ, ಸುಂಠಿ ||೧೪೨|| ಇವುಗಳನ್ನು ಒಂದೊಂದು ತೊಲಿ ತಕ್ಕೊಂಡು ೧೨೮ ತೊಲಿ ನೀರಿನಲ್ಲಿ ಹಾಕಿ ಕುದಿಸಿ ¼ ಉಳಿಯಲು ಅದನ್ನು ಕುಡಿಯಲಿಕ್ಕೆ ಕೊಡಬೇಕು. ಅವುಗಳಿಂದ ಪೇಯವನ್ನು ಸಿದ್ಧಪಡಿಸಬೇಕು. ||೧೪೩|| ಕಾರ, ಹುಳಿ, ಕ್ಷಾರ, ಉಪ್ಪು ಹಾಕಿದ, ಒಣಮೂಲಂಗಿಯ ಅಥವಾ ಹುರಳಿಯ ಕಷಾಯದಿಂದ ಹಗರು ಅನ್ನವನ್ನು ತಿನ್ನಬೇಕು. ||೧೪೪|| ಆ ಮೇಲೆ ಹುಳಿ ಮಜ್ಜಿಗೆಯನ್ನು ಅಥವಾ ತಕ್ರಾರಿಷ್ಟವನ್ನು ಮದ್ಯವನ್ನು ಮಧ್ವರಿಷ್ಟವನ್ನು ಅಥವಾ ನಿಗದ (ಹಳೀ ಮದ್ಯ )ಮತ್ತು ಸೀಧು(ಕಬ್ಬಿನಮದ್ಯ)ವನ್ನು ಕುಡಿಯಬೇಕು.(೧೪೫)

ಮಧೂಕಾಸವವನ್ನು ಹೇಳುತ್ತಾರೆ.

**ದ್ರೋಣಂ ಮಧೂಕಪುಷ್ಪಾಣಾಂ ವಿಡಙ್ಗಾಞ್ಚ ತತೋಽರ್ಧತಃ ||**
**ಚಿತ್ರಕಸ್ಯ ತತೋಽರ್ಧಞ್ಚ ತಥಾ ಭಲ್ಲಾತಕಾಢಕಮ್ ||೧೪೬||**

**ಮಂಜಿಷ್ಠಾತ್ರಿಪಲಂ ಚೈವಂ ತ್ರಿದ್ರೋಣೇಽಪಾಂ ವಿಪಾಚಯೇತ್||**
**ದ್ರೋಣಶೇಷಞ್ಚ ತಚ್ಛೀತಂ ಮಧ್ವಾಢಕಸಂಯುತಮ್ ||೧೪೭||**

**ಏಲಾಮೃಣಾಲಾಗುರುಭಿಶ್ಚಂದನೇನ ಚ ರೂಷಿತೇ ||**
**ಕುಂಭೇ ಮಾಸಸ್ಥಿತಂ ಜಾತಮಾಸವಂ ತಂ ಪ್ರಯೋಜಯೇತ್||೧೪೮||**

**ಗ್ರಹಣೀಂ ದೀಪಯತ್ಯೇಷ ಬೃಂಹಣೋಽನಿಲರೋಗಜಿತ್ ||**
**ಶೋಥಕುಷ್ಠಕಿಲಾಸಾನಾಂ ಪ್ರಮೇಹಾಣಾಞ್ಚ ನಾಶನಃ ||೧೪೯||**

**ಅರ್ಥಃ**—ಮಧೂಕ ಪುಷ್ಪ(ಇಪ್ಪೇಹೂವು) ೧೦೨೪ತೊಲಿ, ವಾಯುವಿಡಂಗ ೫೧೨ ತೊಲಿ, ಚಿತ್ರಕ ೨೫೬ ತೊಲಿ, ಕೇರು ೨೫೬ ತೊಲಿ, ||೧೪೬|| ಮಂಜಿಷ್ಠಾ ೧೨ ತೊಲಿ, ತಕ್ಕೊಂಡು ಆರು ದ್ರೋಣ (೬೧೪೪ ತೊಲಿ) ನೀರಿನಲ್ಲಿ ಕುದಿಸಬೇಕು. ಎರಡು ದ್ರೋಣ ಉಳಿಯಲು ತೆಗೆದು ತಣ್ಣಗೆ ಮಾಡಿ ಅದರಲ್ಲಿ ಒಂದು ಆಢಕ (೨೫೬ತೊಲಿ) ಜೇನು ಹಾಕಿ, ಯಾಲಕ್ಕಿ

ಮೃಣಾಲ (ಕಮಲದ ಸಣ್ಣ ದೇಟು), ಅಗುರು, ಚಂದನಗಳ ಲೇಪಮಾಡಿದ ಕೊಡದಲ್ಲಿ ಒಂದು ತಿಂಗಳವರೆಗೆ ಇಟ್ಟು ಆಸವವು ಸಿದ್ಧವಾಗಲು ಉಪಯೋಗಿಸಬೇಕು. ||೧೪೮|| ಈ ಆಸವವು ಅಗ್ನಿಯನ್ನು ಪ್ರದೀಪ್ತಮಾಡುವದೂ ಪೋಷಕವೂ ವಾತರೋಗ, ಬಾವು, ಕುಷ್ಠ, ಕಿಲಾಸ, ಪ್ರಮೇಹಗಳ ನಾಶಕವೂ ಆಗಿದೆ. (೧೪೯)

**ಬೇರೆ ಆಸವಗಳನ್ನು ಹೇಳುತ್ತಾರೆ.**

**ಮಧೂಕಪುಷ್ಪಸ್ವರಸಂ ಶೃತಮರ್ಧಕ್ಷಯೀಕೃತಮ್ ||**
**ಕ್ಷೌದ್ರಪಾದಯುತಂ ಶೀತಂ ಪೂರ್ವವತ್ ಸನ್ನಿಧಾಪಯೇತ್ ||೧೫೦||**

**ತಂ ಪಿಬನ್ ಗ್ರಹಣೀದೋಷಾಞ್ಜಯೇತ್ಸರ್ವಾನ್ಹಿತಾಶನಃ ||**
**ತದ್ವದ್ದ್ರಾಕ್ಷೇಕ್ಷುಕಾಶ್ಮರ್ಯಸ್ವರಸಾನಾಸುತಾನ್ಪಿಬೇತ್ ||೧೫೧||**

**ಅರ್ಥಃ—** ಇಪ್ಪೇಹೂವಿನ ರಸವನ್ನು ಕುದಿಸಿ ಅರ್ಧ ಉಳಿಯಲು ಆರಿಸಿ ಅದರಲ್ಲಿ ಅದರ ೪ನೇ ಭಾಗ ಜೇನುಹಾಕಿ ಮೇಲೆ ಹೇಳಿದಂತೆ ಯಾಲಕ್ಕಿ ಮುಂತಾದವುಗಳಿಂದ ಲೇಪಮಾಡಿದ ಕೊಡದಲ್ಲಿ ೧ ತಿಂಗಳು ಇಡಬೇಕು. ||೧೫೦|| ಇದನ್ನು ಕುಡಿದು ಪಥ್ಯಮಾಡುತ್ತಿದ್ದರೆ ಎಲ್ಲ ಸಂಗ್ರಹಣೀ ರೋಗಗಳು ಹೋಗುವವು. ಇದರಂತೆ **ದ್ರಾಕ್ಷಾಸ್ವರಸ ಇಕ್ಷುಸ್ವರಸ, ಶಿವನ್ನೀಫಲಸ್ವರಸ**ಗಳನ್ನು ಕುದಿಸಿ, ಇದೇ ರೀತಿಯಾಗಿ ದ್ರಾಕ್ಷಾಸವ, ಇಕ್ಷಾಸವ ಕಾಶ್ಮರ್ಯಾಸವಗಳನ್ನು ಸಿದ್ಧಪಡಿಸಿ ಕುಡಿಯಬೇಕು (೧೫೧)

**ದುರಾಲಭಾಸವವನ್ನು ಹೇಳುತ್ತಾರೆ.**

**ದುರಾಲಭಾಯಾ ದ್ವಿಪ್ರಸ್ಥಂ ಪ್ರಸ್ಥಮಾಮಲಕಸ್ಯ ಚ ||**
**ಮುಷ್ಟೀ ಚಿತ್ರಕದಂತ್ಯೋರ್ದ್ವೇ ಪ್ರತ್ಯಗ್ರಾಞ್ಞ್ಚಭಯಾಶತಮ್ ||೧೫೨||**

**ಚತುರ್ದ್ರೋಣೇಽಂಭಸಃ ಪಕ್ತ್ವಾ ಶೀತಂ ದ್ರೋಣಾವಶೇಷಿತಮ್ ||**
**ಸಗುಡದ್ವಿಶತಂ ಪೂತಂ ಮಧುನಃ ಕುಡುವಾಯುತಮ್ ||೧೫೩||**

**ತದ್ವತ್ಪ್ರಿಯಙ್ಗ್ವೋಃ ಪಿಪ್ಪಲ್ಯಾ ವಿಡಙ್ಗಾನಾಞ್ಚ ಚೂರ್ಣಿತೈಃ ||**
**ಕುಡವೈಸ್ಸೃತಕುಂಭಸ್ಥಂ ಪಕ್ಷಾದೂರ್ಧ್ವಂ ಪಿಬೇನ್ನರಃ ||೧೫೪||**

**ಗ್ರಹಣೀಪಾಂಡುರೋಗಾರ್ಶಃಕುಷ್ಠವೀಸರ್ಪಮೇಹನುತ್ ||**
**ಸ್ವರವರ್ಣಕರಶ್ಚೈವ ರಕ್ತಪಿತ್ತಕಫಾಪಹಃ ||೧೫೫||**

**ಅರ್ಥಃ—** ನೆಲಇಂಗಳ ೧೨೮ ತೊಲಿ, ನೆಲ್ಲೀಕಾಯಿ ೬೪ ತೊಲಿ, ಚಿತ್ರಕಮೂಲ ೪ ತೊಲಿ, ದಂತೀಮೂಲ ೪ ತೊಲಿ, ೧೦೦ ಹೊಸ ಅಣಲೇಕಾಯಿ, ||೧೫೨|| ಇವುಗಳನ್ನು ತಕ್ಕೊಂಡು ೮ ದ್ರೋಣ (೮೧೯೨ತೊ.) ನೀರಿನಲ್ಲಿ ಕುದಿಸಿ, ಎರಡು ದ್ರೋಣ ಉಳಿಯಲು ಆರಿಸಿ, ಅದರಲ್ಲಿ ಬೆಲ್ಲ ೮೦೦ತೊಲಿ, ಜೇನು ಎರಡು ಕುಡವ (೩೨ ತೊಲಿ) ||೧೫೩|| ಪ್ರಿಯಂಗು (ಗವ್ಹಲಾ), ಹಿಪ್ಪಲಿ, ವಾವಡಿಂಗಗಳ ಚೂರ್ಣವನ್ನು ೧೬ ತೊಲಿ ಹಾಕಿ ತುಪ್ಪದಕೊಡದಲ್ಲಿ ಇಟ್ಟು ೧೫ ದಿವಸಗಳನಂತರ ಕುಡಿಯಬೇಕು. ||೧೫೪|| ಇದು ಸಂಗ್ರಹಣಿ, ಪಾಂಡುರೋಗ, ಮೂಲವ್ಯಾಧಿ, ಕುಷ್ಠ, ವಿಸರ್ಪ ಪ್ರಮೇಹ, ರಕ್ತಪಿತ್ತ, ಕಫಗಳನ್ನು ನಾಶಮಾಡುವದು. ಸ್ವರ ವರ್ಣಗಳನ್ನು ಹೆಚ್ಚಿಸುವದು. (೧೫೫)

**ಮೂಲಾಸವವನ್ನು ಹೇಳುತ್ತಾರೆ.**

**ದ್ವಿಪಞ್ಚಮೂಲ್ಯಾ ರಜನೀ ಏರರ್ಷಭಕಜೀವಕಾನ್ ||**
**ಪೃಥಕ್ಪಞ್ಚಪಲಾನ್ಭಾಗಾಂಶ್ಚತುರ್ದ್ರೋಣೇಽಂಭಸಃ ಪಚೇತ್||೧೫೬||**
**ದ್ರೋಣಶೇಷೇ ರಸೇ ಪೂತೇ ಗುಡಸ್ಯ ದ್ವಿಶತಂ ಭಿಷಕ್ ||**
**ಚೂರ್ಣಿತಾನ್ ಕುಲವಾರ್ದ್ಧಾಂಶಾನ್ ದದ್ಯಾಚ್ಚಾತ್ರ**
**ಸಮಾಕ್ಷಿಕಾನ್ ||೧೫೭||**

**ಪ್ರಿಯಙ್ಗುಮುಸ್ತಮಂಜಿಷ್ಠಾವಿಡಙ್ಗಮಧುಕಪ್ಲವಾನ್ ||**
**ಲೋಧ್ರಂ ಶಾಬರಕಂ ಚೈವ ಮಾಸಾರ್ದ್ಧಂ ತಂ ಪಿಬೇತ್ತತಃ||೧೫೮||**

**ಏಷ ಮೂಲಾಸವಃ ಸಿದ್ಧೋ ದೀಪನೋ ರಕ್ತಪಿತ್ತನುತ್ ||**
**ಅನಾಹಕಫಹೃದ್ರೋಗಪಾಂಡುರೋಗಾಂಗಸಾದನುತ್ ||೧೫೯||**

**ಅರ್ಥಃ—** ದಶಮೂಲ, ಅರಿಷಿಣ, ಒಂದೆಲೆಹೊನ್ನೆ, ಋಷಭಕ, ಜೀವಕ ಇವುಗಳನ್ನು ೨೦-೨೦ ತೊಲಿ ತಕ್ಕೊಂಡು ಎಂಟು ದ್ರೋಣ (೮೧೯೨ ತೊಲಿ) ನೀರಿನಲ್ಲಿ ಕುದಿಸಬೇಕು. ||೧೫೬|| ೧/೪ ಉಳಿಯಲು ಸೋಸಿ ಅದರಲ್ಲಿ ೮೦೦ ತೊಲಿ ಬೆಲ್ಲ, ಪ್ರಿಯಂಗು (ಗವ್ಹಲಾ), ಜೇನು, ಮಂಜಿಷ್ಠ, ವಾವಡಿಂಗ, ಜ್ಯೇಷ್ಠಮಧು, ಪ್ಲವ (ಭದ್ರಮುಸ್ತೆ) ಶಾಬರಕ ಲೋಧ್ರ ಇವುಗಳ ಚೂರ್ಣ ಮತ್ತು ಜೇನು ಇವುಗಳನ್ನು ೮-೮ ತೊಲಿ

ಹಾಕಿ ತುಪ್ಪದ ಕೊಡದಲ್ಲಿ ಇಟ್ಟು ೧೫ ದಿವಸಗಳ ನಂತರ ಕುಡಿಯಬೇಕು. ||೧೫೭|| ||೧೫೮|| ನಿಶ್ಚಿತವಾಗಿ ಫಲಕೊಡುವ ಈ ಮೂಲಾಸವವು ದೀಪಕವಾಗಿದ್ದು ರಕ್ತಪಿತ್ತ, ಹೊಟ್ಟೆಯುಬ್ಬು, ಕಫ, ಹೃದ್ರೋಗ, ಪಾಂಡುರೋಗ ನಿತ್ರಾಣಗಳನ್ನು ಕಳೆಯುವದು. (೧೫೯)

ಪಿಂಡಾಸವವನ್ನು ಹೇಳುತ್ತಾರೆ.

ಪ್ರಾಸ್ಥಿಕೀಂ ಪಿಪ್ಪಲೀಂ ಪಿಷ್ಟ್ವಾ ಗುಡಂ ಮಧ್ಯಬಿಭೀತಕಾತ್ ||
ಉದಕಪ್ರಸ್ಥಸಂಯುಕ್ತಂ ಯವಪಲ್ಲೇ ನಿಧಾಪಯೇತ್ ||೧೬೦||

ತಸ್ಮಾತ್ಪಲಂ ಸುಜಾತಾತ್ತು ಸಲಿಲಾಞ್ಜಲಿಸಂಯುತಮ್ ||
ಪಿಬೇತ್ಪಿಂಡಾಸವೋ ಹ್ಯೇಷ ರೋಗಾನೀಕವಿನಾಶನಃ ||೧೬೧||

ಸ್ವಸ್ಥೋಽಪ್ಯೇನಂ ಪಿಬೇನ್ಮಾಸಂ ನರಃ ಸಿದ್ಧರಸಾಯನಮ್ ||
ಇಚ್ಛಂಸ್ತೇಷಾಮನುತ್ಪತ್ತಿಂ ರೋಗಾಣಾಂ ಯೇ
ಪ್ರಕೀರ್ತಿತಾಃ ||೧೬೨||

**ಅರ್ಥ**:— ಹಿಪ್ಪಲಿ ೬೪ ತೊಲಿ, ಬೆಲ್ಲ ೬೪ ತೊಲಿ, ತಾರೀಕಾಯಿ ಮಜ್ಜೆ ೬೪ ತೊಲಿ, ಇವುಗಳಲ್ಲಿ ೧೨೮ ತೊಲಿ ನೀರು ಹಾಕಿ, ಯವದರಾಶಿಯಲ್ಲಿ ೧ ತಿಂಗಳು ಇಡಬೇಕು ||೧೬೦|| ಚನ್ನಾಗಿ ಸಿದ್ಧವಾಗಲು ೪ ತೊಲಿಯಷ್ಟು ತಕ್ಕೊಂಡು ೧೬ ತೊಲಿ ನೀರಿನೊಡನೆ ಕುಡಿಯಬೇಕು. ಈ ಪಿಂಡಾಸವವು ರೋಗದ ಸಮೂಹವನ್ನು ನಾಶಮಾಡುವದು. ||೧೬೧|| ನಿರೋಗಿಯೂ ಕೂಡ ರೋಗಗಳು ಆಗಬಾರದೆಂದು ಈ ಸಿದ್ಧರಸಾಯನವನ್ನು ೧ ತಿಂಗಳವರೆಗೆ ಕುಡಿಯಬೇಕು. (೧೬೨)

ಮಧ್ವರಿಷ್ಟವನ್ನು ಹೇಳುತ್ತಾರೆ.

ನವೇ ಪಿಪ್ಪಲಿಮಧ್ವಾಕ್ತೇ ಕಲಸೇಽಗುರುಧೂಪಿತೇ ||
ಮಧ್ವಾಢಕಂ ಜಲಸಮಂ ಚೂರ್ಣಾನೀಮಾನಿ ದಾಪಯೇತ್ ||೧೬೩||

ಕುಡವಾರ್ಧಂ ವಿಡಙ್ಗಾನಾಂ ಪಿಪ್ಪಲ್ಯಾಃ ಕುಡವಂ ತಥಾ ||
ಚಾತುರ್ಥಿಕಾಂಶಾಂ ತ್ವಕ್ಕ್ಷೀರೀಂ ಕೇಶರಂ ಮರಿಚಾನಿ ಚ ||೧೬೪||

ತ್ವಗೇಲಾಪತ್ರಕಶಟೀಕ್ರಮುಕಾತಿವಿಷಾಘನವ್ ॥
ಹರೇಣ್ವೇಲುಕತೇಜೋಹ್ವಾ ಪಿಪ್ಪಲೀ ಮೂಲಚಿತ್ರಕಾನ್ ॥೧೬೫॥

ಕಾರ್ಷಿಕಾಂಸ್ತಂ ಸ್ಥಿತಂ ಮಾಸಮತ ಊರ್ಧ್ವಂ ಪ್ರಯೋಜಯೇತ್॥
ಮಂದಂ ಸಂದೀಪಯತ್ಯಗ್ನಿಂ ಕರೋತಿ ವಿಷಮಂ ಸಮಮ್ ॥೧೬೬॥

ಹೃತ್ಪಾಂಡುಗ್ರಹಣೀರೋಗಕುಷ್ಠಾರ್ಶಃಶ್ವಯಥುಜ್ವರಾನ್ ॥
ವಾತಶ್ಲೇಷ್ಮಾಮಯಾಂಶ್ಚಾನ್ಯಾನ್ಮಧ್ವರಿಷ್ಟೋ ವ್ಯಪೋಹತಿ ॥೧೬೭॥

**ಅರ್ಥಃ—** ಹಿಪ್ಪಲಿ ಚೂರ್ಣ ಜೇನುಗಳ ಲೇಪಮಾಡಿ ಅಗುರುವಿನ ಧೂಪಕೊಟ್ಟ ಹೊಸ ಮಣ್ಣಿನಕೊಡದಲ್ಲಿ ಜೇನು ೫೧೨ ತೊಲಿ, ನೀರು ೫೧೨ ತೊಲಿ ಹಾಕಿ ಅದರಲ್ಲಿ ॥೧೬೩॥ ವಾವಡಿಂಗ ಚೂರ್ಣ ೮ ತೊಲಿ, ಹಿಪ್ಪಲಿಚೂರ್ಣ ೧೬ ತೊಲಿ, ವಂಶಲೋಚನ ೪ ತೊಲಿ, ನಾಗಕೇಶರ, ಮೆಣಸು, ॥೧೬೪॥ ದಾಲಚಿನ್ನಿ, ಯಾಲಕ್ಕಿ, ತಮಾಲಪತ್ರ, ಕಚೋರ, ಕ್ರಮುಕ (ಅಡಿಕೆ) ಅತಿವಿಷ, ಜೇಕು, ಹರೇಣು (ರೇಣುಕಬೀಜ), ಏಲುಕ (ಏಲವಾಲುಕ), ತೇಜೋಹ್ವ(ಚವಕ) ಮೋಡಿ, ಚಿತ್ರಕ, ॥೧೬೫॥ ಇವುಗಳ ಚೂರ್ಣವನ್ನು ೧-೧ ತೊಲಿ ಹಾಕಿ ೧ ತಿಂಗಳು ಇಟ್ಟು ಆ ಮೇಲೆ ಅದನ್ನು ಉಪಯೋಗಿಸಬೇಕು. ಈ ಮಧ್ವರಿಷ್ಟವು ಅಗ್ನಿಮಾಂದ್ಯವನ್ನು ಕಳಿಯುವದು. ವಿಷಮವಾದ ಅಗ್ನಿಯನ್ನು ಸಮಮಾಡುವದು ॥೧೬೬॥ ಹೃದ್ರೋಗ, ಪಾಂಡುರೋಗ, ಸಂಗ್ರಹಣೀ, ಕುಷ್ಠ, ಮೂಲವ್ಯಾಧಿ, ಬಾವು, ಜ್ವರಗಳನ್ನು ಮತ್ತು ಬೇರೆ ವಾತಕಫರೋಗಗಳನ್ನು ಕಳೆಯುತ್ತದೆ. (೧೬೭)

ಸಮೂಲಾಂ ಪಿಪ್ಪಲೀಂ ಕ್ಷಾರೌ ದ್ವೌ ಪಞ್ಚ ಲವಣಾನಿ ಚ ॥
ಮಾತುಲುಙ್ಗಾಭಯಾರಾಸ್ನಾಶಠೀಮರಿಚನಾಗರಮ್ ॥೧೬೮॥

ಕೃತ್ವಾ ಸಮಾಂತಂ ತಚ್ಚೂರ್ಣಂ ಪಿಬೇತ್ಪ್ರಾತಃ ಸುಖಾಂಬುನಾ ॥
ಕಫಜೇ ಗ್ರಹಣೀದೋಷೇ ಬಲವರ್ಣಾಗ್ನಿವರ್ಧನಮ್ ॥೧೬೯॥

ಏತೈರೇವೌಷಧೈಃ ಸಿದ್ಧಂ ಸರ್ಪಿಃ ಪೇಯಂ ಸಮಾರುತೇ ॥
ಗೌಲ್ಮಿಕೋಕ್ತಂ ಷಟ್ಪಲಕಂ ಭಲ್ಲಾತಕಘೃತಞ್ಚ ಯತ್ ॥೧೭೦॥

**ಅರ್ಥ**— ಕಫಸಂಗ್ರಹಣಿಯಲ್ಲಿ ಹಿಪ್ಪಲಿ, ವೋಡಿ, ಜವಖಾರ, ಸಜ್ಜೀಖಾರ, ಪಂಚಲವಣ, ಮಾದಾಳದಮೂಲ ಅಣಲೇಕಾಯಿ, ರಾಸ್ನಾ, ಕಚೋರೆ, ಮೆಣಸು, ಸುಂಠಿ, ||೧೬೮|| ಇವುಗಳನ್ನು ಸಮನಾಗಿ ತಕ್ಕೊಂಡು ಚೂರ್ಣಮಾಡಿ ಮುಂಜಾನೆ ಬಿಸಿಸೀರಿನೊಡನೆ ಕುಡಿಯ ಬೇಕು. ಇದು ಬಲ, ವರ್ಣ, ಅಗ್ನಿಗಳನ್ನು ಹೆಚ್ಚಿಸುವದು. ||೧೬೯|| ಕಫ ಸಂಗ್ರಹಣಿಗೆ ವಾತದ ಅನುಬಂಧವಿದ್ದರೆ ಇವೇ ಔಷಧಗಳಿಂದ ಸಿದ್ಧವಾದ ಘೃತವನ್ನು ಅಥವಾ ಗುಲ್ಮ ಚಿಕಿತ್ಸೆಯಲ್ಲಿ ಹೇಳಿದ ಷಟ್‌ಪಲಘೃತವನ್ನು ಅಥವಾ ಭಲ್ಲಾತಕಘೃತವನ್ನು ಕುಡಿಯಬೇಕು. (೧೭೦)

ಕ್ಷಾರೌಷಧಗಳನ್ನು ಹೇಳುತ್ತಾರೆ.

**ಬಿಡಂ ಕಾಚೋತ್ಥಲವಣಂ ಸ್ವರ್ಜಿಕಾಯಾವಶೂಕಜಮ್ ||**
**ನಿದಿಗ್ಧಿಕಾಂ ಸಪ್ತಲಾಙ್ಚ ಚಿತ್ರಕಞ್ಚೇತಿ ದಾಹಯೇತ್ ||೧೭೧||**

**ಸಪ್ತಕೃತ್ವಃ ಸ್ರುತಸ್ಯಾಥ ಕ್ಷಾರಸ್ಯ ದ್ವ್ಯಾಢಕೇನ ತು ||**
**ಆಢಕಂ ಸರ್ಪಿಷಃ ಪಕ್ತ್ವಾ ಪಿಬೇದಗ್ನಿವಿವರ್ಧನಮ್ ||೧೭೨||**

**ಸಮೂಲಾಂ ಪಿಪ್ಪಲೀಂ ಪಾಠಾಂ ಚವ್ಯೇಂದ್ರಯವನಾಗರಮ್ ||**
**ಚಿತ್ರಕಾತಿವಿಷೇ ಹಿಙ್ಗು ಶ್ವದಂಷ್ಟ್ರಾಂ ಕಟುರೋಹಿಣೀಮ್ ||೧೭೩||**

**ವಚಾಞ್ಚ ಕಾರ್ಷಿಕಾನ್ ಪಞ್ಚ ಲವಣಾನಾಂ ಪಲಾನಿ ಚ||**
**ಘೃತತೈಲೇ ದ್ವಿಕುಡವೇ ದ್ವೇ ಪ್ರಸ್ಥೇ ದಧ್ನ ಏವ ಚ ||೧೭೪||**

**ಚೂರ್ಣೀಕೃತಾನಿ ನಿಃಕ್ವಾಥ್ಯ ಶನೈರಂತರ್ಗತೇ ರಸೇ ||**
**ಅಂತರ್ಧೂಮಂ ತತೋ ದಗ್ಧ್ವಾ ಚೂರ್ಣಂ ಕೃತ್ವಾ ಘೃತಾಪ್ಲುತಮ್ ||೧೭೫||**

**ಖಾದೇತ್ ಪಾಣಿತಲಂ ತಸ್ಮಿಞ್ ಜೀರ್ಣೇ ಸ್ಯಾನ್ಮಧುರಾಶನಃ ||**
**ವಾತಶ್ಲೇಷ್ಮಾಮಯಾನ್ ಸರ್ವಾನ್ ಹನ್ಯಾದ್ವಿಷಗರಾಂಶ್ಚ ಸಃ ||೧೭೬||**

**ಭಲ್ಲಾತಕಂ ತ್ರಿಕಟುಕಂ ತ್ರಿಫಲಾಂ ಲವಣತ್ರಯಮ್ ||**
**ಅಂತರ್ಧೂಮಂ ದ್ವಿಪಲಿಕಂ ಗೋಪುರೀಷಾಗ್ನಿನಾ ದಹೇತ್ ||೧೭೭||**

**ಸಕ್ಷಾರಃ ಸರ್ಪಿಷಾ ಪೀತೋ ಭೋಜ್ಯೇ ವಾಪ್ಯವಚಾರಿತಃ ||**

ಹೃತ್ಪಾಂಡುಗ್ರಹಣೀರೋಗಗುಲ್ಮೋದಾವರ್ತಶೂಲನುತ್ ||೧೭೮||
ದುರಾಲಭಾಕರಂಜೌ ಚ ಸಪ್ತಪರ್ಣಂ ಸವತ್ಸಕಮ್ ||
ಷಡ್ಗ್ರಂಥಾಂ ಮದನಂ ಮೂರ್ವಾಂ ಪಾಠಾಮಾರಗ್ವಧಂ
ತಥಾ ||೧೭೯||

ಗೋಮೂತ್ರೇಣ ಸಮಾಂಶಾನಿ ಕೃತ್ವಾ ಚೂರ್ಣಾನಿ ದಾಹಯೇತ್||
ದಗ್ಧ್ವಾ ಚ ತಂ ಪಿಬೇತ್ ಕ್ಷಾರಂ ಗ್ರಹಣ್ಯಾಂ ಬಲವರ್ಧನಮ್||೧೮೦||

ಭೂನಿಂಬಂ ರೋಹಿಣೀಂ ತಿಕ್ತಾಂ ಪಟೋಲಂ ನಿಂಬಪರ್ಪಟಮ್ ||
ದಹೇನ್ಮಾಹಿಷಮೂತ್ರೇಣ ಕ್ಷಾರ ಏಷೋಽಗ್ನಿವರ್ಧನಃ ||೧೮೧||

ದ್ವೇ ಹರಿದ್ರೇ ವಚಾ ಕುಷ್ಠಂ ಚಿತ್ರಕಂ ಕಟುರೋಹಿಣೀಮ್ ||
ಮುಸ್ತಂ ಚ ಛಾಗಮೂತ್ರೇಣ ದಹೇತ್ ಕ್ಷಾರೋಽಗ್ನಿವರ್ಧನಃ||೧೮೨||

ಚತುಃಪಲಂ ಸುಧಾಕಾಂಡಾತ್ ತ್ರಿಪಲಂ ಲವಣತ್ರಯಾತ್||
ವಾರ್ತಾಕೀಕುಡವಂ ಚಾರ್ಕಾದಷ್ಟೌ ದ್ವೇ ಚಿತ್ರಕಾತ್ಪಲೇ ||೧೮೩||

ದಗ್ಧಾನಿ ವಾರ್ತಾಕುರಸೇ ಗುಡಿಕಾ ಭೋಜನೋತ್ತರಾಃ ||
ಭುಕ್ತಂ ಭಕ್ತಂ ಪಚತ್ಯಾಶು ಕಾಸಶ್ವಾಸಾರ್ಶಸಾಂ ಹಿತಾಃ ||೧೮೪||

ವಿಷೂಚಿಕಾಪ್ರತಿಶ್ಯಾಯಹೃದ್ರೋಗಶಮನಾಶ್ಚ ತಾ ಮತಾಃ ||
ಇತ್ಯೇಷಾ ಕ್ಷಾರಗುಡಿಕಾ ಕೃಷ್ಣಾತ್ರೇಯೇಣ ಕೀರ್ತಿತಾ ||೧೮೫||

ವತ್ಸಕಾತಿವಿಷೇ ಪಾಠಾ ದುಃಸ್ಪರ್ಶಾ ಹಿಂಗು ಚಿತ್ರಕಮ್ ||
ಚೂರ್ಣೀಕೃತ್ಯ ಪಲಾಶಾನಾಂ ಕ್ಷಾರೇ ಮೂತ್ರಸೃತೇ ಪಚೇತ್||೧೮೬||

ಆಯಸೇ ಭಾಜನೇ ಸಾಂದ್ರಂ ತಸ್ಮಾತ್ ಕೋಲಂ ಸುಖಾಂಬುನಾ ||
ಮದ್ಯೈರ್ವಾ ಗ್ರಹಣೀದೋಷೇ ಶೋಥಾರ್ಶಃಪಾಂಡುಮಾನ್
ಪಿಬೇತ್ ||೧೮೭||

ತ್ರಿಫಲಾಂ ಕಟಭೀಂ ಚವ್ಯಂ ಬಿಲ್ವಮಧ್ಯಮಯೋರಜಃ ||
ರೋಹಿಣೀಂ ಕಟುಕಾಂ ಮುಸ್ತಂ ಕುಷ್ಠಂ ಪಾಠಾಂ ಚ ಹಿಂಗು ಚ

ಮಧುಕಂ ಮುಷ್ಕಕಯವಕ್ಷಾರೌ ತ್ರಿಕಟುಕಂ ವಚಾಮ್ ||

ವಿಡಙ್ಗಂ ಪಿಪ್ಪಲೀಮೂಲಂ ಸ್ವರ್ಜಿಕಾ ನಿಂಬಚಿತ್ರಕೌ ||೧೮೯||

ಮೂರ್ವಾಜಮೋದೇಂದ್ರಯವಗುಡೂಚೀ ದೇವದಾರು ಚ ||
ಕಾರ್ಷಿಕಂ ಲವಣಾನಾಞ್ಚ ಪಞ್ಚಾನಾಂ ಪಲಿಕಾನ್ ಪೃಥಕ್ ||೧೯೦||

ಭಾಗಾನ್ದಧ್ನಿ ತ್ರಿಕುಡವೇ ಘೃತತೈಲೇನ ಮೂರ್ಛಿತಮ್ ||
ಅಂತರ್ಧೂಮಂ ಶನೈರ್ದಗ್ಧ್ವಾ ತಸ್ಮಾತ್ಪಾಣಿತಲಂ ಪಿಬೇತ್ ||೧೯೧||

ಸರ್ಪಿಷಾ ಕಫವಾತಾರ್ಶೋಗ್ರಹಣೀಪಾಂಡುರೋಗವಾನ್ ||
ಪ್ಲೀಹಮೂತ್ರಗ್ರಹಶ್ವಾಸಹಿಕ್ಕಾಕಾಸಕ್ರಿಮಿಜ್ವರಾನ್ ||೧೯೨||

ಶೋಷಾತಿಸಾರಶ್ವಯಥುಪ್ರಮೇಹಾನ್ ಹೃದ್ಗ್ರಹಾಂಸ್ತಥಾ||
ಹನ್ಯಾತ್ಸರ್ವವಿಷಾಣಾಞ್ಚ ಕ್ಷಾರೋಽಯಂ ಶಮನೋ ವರಃ ||೧೯೩||

ಜೀರ್ಣೇ ರಸೈರ್ವಾ ಮಧುರೈರಶ್ನೀಯಾತ್ಪಯಸಾ ಸಹ ||
ಏಷ ಕ್ಷಾರೋ ಮಹಾವೀರ್ಯಃ ಕೃಷ್ಣಾತ್ರೇಯೇಣ ಭಾಷಿತಃ||೧೯೪||

ಅರ್ಥ:— ಬಿಡಲವಣ, ಕಾಚಲವಣ, ಸಜ್ಜೀಖಾರ, ಜವಖಾರ, ನೆಲಗುಳ್ಳದ ಬೇರು, ಸೀಗೇಬೇರು, ಚಿತ್ರಕಬೇರು ಇವುಗಳನ್ನು ಸುಟ್ಟು ||೧೭೧|| ಆರುಪಾಲು ನೀರು ಹಾಕಿ ಏಳುಸಾರೆ ಸೋಸಿ ತೆಗೆದ ಕ್ಷಾರೋದಕವನ್ನು ೧೦೨೪ ತೊಲಿ ತಕ್ಕೊಂಡು ಅದರಲ್ಲಿ ೫೧೨ ತೊಲಿ ತುಪ್ಪವನ್ನು ಹಾಕಿ ಸಿದ್ಧಮಾಡಿ ಕುಡಿಯಬೇಕು. ಇದು ಅಗ್ನಿವರ್ಧಕವಾಗಿದೆ.
(೧ ಕ್ಷಾರ ಘೃತವು) (೧೭೨)

ಪಿಪ್ಪಲ್ಯಾದಿ ಕ್ಷಾರವನ್ನು ಹೇಳುತ್ತಾನೆ.

ಹಿಪ್ಪಲಿ, ಮೋಡಿ, ಅಗಳಸುಂಠಿ, ಚವಕ, ಇಂದ್ರಜವೆ, ಸುಂಠಿ, ಚಿತ್ರಕ, ಅತಿವಿಷ, ಇಂಗು, ನೆಗ್ಗಿಲು ಕಟುಕರೋಣಿ, ||೧೭೩|| ಬಜಿ ಇವುಗಳ ಚೂರ್ಣವನ್ನು ೧-೧ ತೊಲಿ, ಪಂಚಲವಣಗಳನ್ನು ೪-೪ ತೊಲಿ, ಘೃತ ತೈಲಗಳನ್ನು ೩೨-೩೨ ತೊಲಿ, ಮೊಸರು ೨೫೬ ತೊಲಿ ||೧೭೪|| ಇವುಗಳನ್ನು ಕೂಡಿಸಿ ರಸವು ಅಟ್ಟಿಸಲು ಅದರ ಮೇಲೆ ಪರಿವಾಣವನ್ನು ಮುಚ್ಚಿ ಹೊಗೆ ಹೊರಗೆ ಹೋಗದಂತೆ ಸುಟ್ಟು ತೆಗೆದು ಚೂರ್ಣಮಾಡಿ ೧ ತೊಲಿಯಷ್ಟು ತಕ್ಕೊಂಡು ತುಪ್ಪಕಲಿಸಿ ತಿನ್ನಬೇಕು. ||೧೭೫|| ಅದು ಪಚನವಾಗಲು ಮಧುರವಾದ ಆಹಾರವನ್ನು ಮಾಡಬೇಕು. ಅದು ಎಲ್ಲ

ವಾತಕಫರೋಗಗಳನ್ನು ವಿಷ ಮತ್ತು ಗರ (ಕೃತ್ರಿಮವಿಷ)ಗಳನ್ನು ಕಳೆಯುವದು. (೨ನೇಕ್ಷಾರ ಯೋಗವು) (೧೭೬)

**ಭಲ್ಲಾತಕಾದಿ ಕ್ಷಾರವನ್ನು ಹೇಳುತ್ತಾರೆ.**

ಕೇರು, ತ್ರಿಕಟು, ತ್ರಿಫಳೆ, ಸೈಂಧವ, ಸೌವರ್ಚಲ, ಬಿಡಲವಣ ಇವುಗಳನ್ನು ೮-೮ತೊಲೆ ತಕ್ಕೊಂಡು ಹೊಗೆ ಹೊರಗೆ ಹೋಗದಂತೆ ಕುಳ್ಳಿನ ಬೆಂಕಿಯಿಂದ ಸುಡಬೇಕು. ||೧೭೭|| ಈ ಕ್ಷಾರವನ್ನು ತುಪ್ಪದೊಡನೆ ಕುಡಿದರೆ ಅಥವಾ ಆಹಾರದೊಡನೆ ಸೇವಿಸಿದರೆ ಹೃದ್ರೋಗ, ಪಾಂಡುರೋಗ ಸಂಗ್ರಹಣಿ, ಗುಲ್ಮ, ಉದಾವರ್ತ, ಶೂಲಗಳನ್ನು ಕಳೆಯುವದು. (೩ನೇ ಕ್ಷಾರವು) (೧೭೮)

**ದುರಾಲಭಾದಿ ಕ್ಷಾರವನ್ನು ಹೇಳುತ್ತಾರೆ.**

ನೆಲಇಂಗಳ, ಹುಲಗಲಿ, ಸಪ್ತಪರ್ಣ, ಹಲಗತ್ತೀತೋಟಿ, ಬಜೆ, ಮಂಗಾರಿಕಾಯಿ, ಮೂರ್ವಾ (ಹೆಗ್ಗೊರಟಿಗೆ), ಆಗಳಸುಂಠಿ, ಕಕ್ಕಿ ಇವುಗಳ ಚೂರ್ಣವನ್ನು ಸಮಭಾಗ ತಕ್ಕೊಂಡು ||೧೭೯|| ಅದರಷ್ಟೇ ಗೋಮೂತ್ರಹಾಕಿ ಅಂತರ್ಧೂಮ ವಿಧಿಯಿಂದ ಸುಡಬೇಕು. ಈ ಕ್ಷಾರವನ್ನು ಕುಡಿದರೆ ಗ್ರಹಣಿಗೆ ಬಲ ಬರುವದು. (೪ನೇ ಕ್ಷಾರವು) (೧೮೦)

**ಭೂನಿಂಬಾದಿ ಕ್ಷಾರವನ್ನು ಹೇಳುತ್ತಾರೆ.**

ಚಿರಾಯತ, ಕಟುಕರೋಣಿ, ಕಹಿಪಡವಲ, ಬೇವು, ಕಲ್ಲುಸಬಸಿಗೆ ಇವುಗಳನ್ನು ಸಮವಾಗಿ ತಕ್ಕೊಂಡು ಇವುಗಳಷ್ಟೇ ಎಮ್ಮೆ ಮೂತ್ರವನ್ನು ಹಾಕಿ ಮೇಲಿನಂತೆ ಸುಡಬೇಕು. ಈ ಕ್ಷಾರವು ಅಗ್ನಿವರ್ಧಕವಾಗಿದೆ. (೫ನೇ ಕ್ಷಾರವು) (೧೮೧)

**ಹರಿದ್ರಾದಿ ಕ್ಷಾರವನ್ನು ಹೇಳುತ್ತಾರೆ.**

ಅರಿಷಿಣ, ಮರಅರಿಷಿಣ, ಬಜೆ, ಕೋಷ್ಠ, ಚಿತ್ರಕ, ಕಟುಕರೋಣಿ ಜೇಕು ಇವುಗಳನ್ನು ಸಮವಾಗಿ ತಕ್ಕೊಂಡು ಅದರಷ್ಟೇ ಆಡಿನ ಮೂತ್ರ ಹಾಕಿ ಮೇಲಿನಂತೆ ಸುಡಬೇಕು. ಈ ಕ್ಷಾರವು ಅಗ್ನಿವರ್ಧಕವಾಗಿದೆ. (೬ನೇ ಕ್ಷಾರವು) (೧೮೨)

**ಸುಧಾದಿ ಕ್ಷಾರವನ್ನು ಹೇಳುತ್ತಾರೆ.**

ಮೂರೇಣಿನಕಳ್ಳಿಯದೇಟು ೧೬ ತೊಲೆ, ಸೈಂಧವ, ಸೌವರ್ಚಲ,

ಬಿಡಲವಣ ೪-೪ ತೊಲಿ, ವಾರ್ತಾಕಿ (ಹೆಬ್ಬಗುಳ್ಳ) ರಸ ೩೨ ತೊಲಿ, ಎಕ್ಕೆಯ ಚೂರ್ಣ ೩೨ ತೊಲಿ, ಚಿತ್ರಕಮೂಲಚೂರ್ಣ ೮ ತೊಲಿ ||೧೭೩|| ಇವುಗಳನ್ನು ಮೇಲಿನಂತೆ ಸುಟ್ಟು, ವಾರ್ತಾಕಿ (ಹೆಬ್ಬಗುಳ್ಳ) ರಸದಲ್ಲಿ ಗುಳಿಗೆಮಾಡಿ ಊಟದ ನಂತರ ತಕ್ಕೊಳ್ಳಬೇಕು. ಇವು ಉಂಡ ಅನ್ನವನ್ನು ಪಚನಮಾಡುವವು. ಕೆಮ್ಮು, ದಮ್ಮು, ಮೂಲವ್ಯಾಧಿಗಳಿಗೂ ಹಿತಕರವಾಗಿವೆ. ||೧೮೪|| ವಿಷೂಚಿಕೆ, ನೆಗಡಿ, ಹೃದ್ರೋಗಗಳನ್ನು ಅವು ಕಳೆಯುವವು. ಈ ಕ್ಷಾರಗುಟಿಕೆಯು ಕೃಷ್ಣಾತ್ರೇಯರಿಂದ ಹೇಳಲ್ಪಟ್ಟದೆ (೭ನೇ ಕ್ಷಾರವು) (೧೮೫)

ವತ್ಸಕಾದಿ ಕ್ಷಾರವನ್ನು ಹೇಳುತ್ತಾರೆ.

ಹಲಗತ್ತಿತೊಟೆ, ಅತಿವಿಷ, ಅಗಳಸುಂಠಿ, ನೆಲಇಂಗಳ, ಇಂಗು, ಚಿತ್ರಕಮೂಲ ಇವುಗಳ ಚೂರ್ಣವನ್ನು ಸಮಭಾಗ ತಕ್ಕೊಂಡು ಪಲಾಶದ (ಆರುಪಾಲು ಗೋಮುತ್ರಹಾಕಿ ಕುದಿಸಿ ಅರ್ಧ ಉಳಿಯಲು ೭ ಸಾರೆ ಪರಿಸ್ರಾವಮಾಡಿದ) ಕ್ಷಾರದಲ್ಲಿ ಹಾಕಿ ಲೋಹಪಾತ್ರದಲ್ಲಿ ಗಟ್ಟಿಯಾಗುವವರೆಗೆ ಕುದಿಸಬೇಕು. ||೧೮೬|| ಅದನ್ನು ಮೂರು ಮಾಸಿಯಷ್ಟು ಬೆಚ್ಚಗಿನ ನೀರಿನೊಡನೆ ಅಥವಾ ಮದ್ಯದೊಡನೆ ಕುಡಿದರೆ ಸಂಗ್ರಹಣಿ, ಬಾವು, ಮೂಲವ್ಯಾಧಿ, ಪಾಂಡುರೋಗಗಳನ್ನು ಕಳೆಯುವದು. (೮ನೇಕ್ಷಾರವು) (೧೮೭)

ತ್ರಿಫಲಾದಿ ಕ್ಷಾರವನ್ನು ಹೇಳುತ್ತಾರೆ.

ತ್ರಿಫಳೆ, ಕಟಭೀ (ಕ್ಷುದ್ರಶಿರೀಷದಗಿಡ), ಚವಕ, ಬಿಲ್ವದ ತಿಳಲು, ಲೋಹಭಸ್ಮ, ಕಟುಕರೋಣಿ, ಜೇಕು, ಕೋಷ್ಠ, ಅಗಳಸುಂಠಿ, ಇಂಗು ||೧೮೮|| ಜೇಷ್ಠಮಧು, ಮುಷ್ಕಕ (ಮುಳ್ಳುಮುತ್ತಗ) ಕ್ಷಾರ, ಜವಖಾರ, ತ್ರಿಕಟು, ಬಜಿ, ವಾವಡಿಂಗ, ಮೋಡಿ, ಸಜ್ಜೀಖಾರ, ಬೇವು, ಚಿತ್ರಕಮೂಲ ||೧೮೯|| ಮೂರ್ವಾ (ಹೆಗ್ಗೊರಟಿಗೆ), ಅಜವೋದ, ಇಂದ್ರಜವೆ, ಅಮೃತಬಳ್ಳಿ, ದೇವದಾರು, ಇವುಗಳನ್ನು ೧-೧ ತೊಲಿ, ಐದು ಲವಣಗಳನ್ನು ೪-೪ ತೊಲಿ ತಕ್ಕೊಂಡು ||೧೯೦|| ೯೬ ತೊಲಿ ನೊಸರಿನಲ್ಲಿ ಹಾಕಿ, ಘೃತತೈಲಗಳನ್ನು ಕೂಡಿಸಿ ಅಂತರ್ಧೂಮವಿಧಿಯಿಂದ ಸಾವಕಾಶವಾಗಿ

ಸುಟ್ಟು ಒಂದು ತೊಲಿಯಷ್ಟು (೪ ಪಾಲು) ತುಪ್ಪದೊಡನೆ ತಿನ್ನಬೇಕು. ॥೧೯೧॥ ಈ ಕ್ಷಾರವು ಕಫವಾತ, ಮೂಲವ್ಯಾಧಿ, ಸಂಗ್ರಹಣಿ, ಪಾಂಡುರೋಗ, ಪ್ಲೀಹ, ಮೂತ್ರಾಘಾತ, ಶ್ವಾಸ, ಬಿಕ್ಕು, ಕೆಮ್ಮು, ಕೃಮಿ, ಜ್ವರ, ॥೧೯೨॥ ಶೋಷ, ಅತಿಸಾರ, ಬಾವು, ಪ್ರಮೇಹ, ಹೃದ್ಗ್ರಹ, ಗಳನ್ನು ಕಳೆಯುವದು. ಅಲ್ಲದೆ ಎಲ್ಲ ವಿಷಗಳ ಒಳ್ಳೇ ಶಾಮಕವೂ ಆಗಿದೆ. ॥೧೯೩॥ ಇದು ಪಚನವಾದನಂತರ ಮಧುರ ರಸದೊಡನೆ ಅಥವಾ ಹಾಲಿನೊಡನೆ ಅನ್ನವನ್ನು ತಿನ್ನಬೇಕು. ಮಹಾಶಕ್ತಿಯುಳ್ಳ ಈ ಕ್ಷಾರವನ್ನು ಕೃಷ್ಣಾತ್ರೇಯರು ಹೇಳಿದ್ದಾರೆ. ॥೧೯೪॥

**ತ್ರಿದೋಷ ಗ್ರಹಣೀ ಚಿಕಿತ್ಸೆಯನ್ನು ಹೇಳುತ್ತಾರೆ.**

**ತ್ರಿದೋಷೇ ವಿಧಿವದ್ವೈದ್ಯಃ ಪಞ್ಚ ಕರ್ಮಾಣಿ ಕಾರಯೇತ್ ॥**
**ಘೃತಕ್ಷಾರಾಸವಾರಿಷ್ಟಾನ್ದದ್ಯಾಚ್ಚಾಗ್ನಿವಿವರ್ಧನಾನ್ ॥೧೯೫॥**

**ಕ್ರಿಯಾ ಯಾ ಚಾನಿಲಾದೀನಾಂ ನಿರ್ದಿಷ್ಟಾ ಗ್ರಹಣೀಂ ಪ್ರತಿ ॥**
**ವ್ಯತ್ಯಾಸಾತ್ತಾಂ ಸಮಸ್ತಾಂ ವಾ ಕುರ್ಯಾದ್ರೋಗ ವಿಶೇಷವಿತ್ ॥೧೯೬॥**

**ಸ್ನೇಹನಂ ಸ್ವೇದನಂ ಶುದ್ಧಿಂ ಲಂಘನಂ ದೀಪನಂ ಚ ಯತ್ ॥**
**ಚೂರ್ಣಾನಿ ಮಧುರಕ್ಷಾರಮಧ್ವರಿಷ್ಟಸುರಾಸವಾಃ ॥೧೯೭॥**

**ತಕ್ರಪ್ರಯೋಗಾ ವಿವಿಧಾ ದೀಪನಾನಾಞ್ಚ ಸರ್ಪಿಷಾಮ್ ॥**
**ಗ್ರಹಣೀದೋಷಿಭಿಃ ಸೇವ್ಯಾಃ ಕ್ರಿಯಾಞ್ಚಾವಸ್ಥಿಕೀಂ ಶೃಣು ॥೧೯೮॥**

**ಷ್ಠೀವನಂ ಶ್ಲೈಷ್ಮಿಕೇ ರುಕ್ಷಂ ದೀಪನಂ ತಿಕ್ತಸಂಯುತಮ್ ॥**
**ಸಕೃದ್ರುಕ್ಷಂ ಸಕೃತ್ಸ್ನಿಗ್ಧಂ ಕೃಶೇ ಬಹುಕಫೇ ಹಿತಮ್ ॥೧೯೯॥**

**ಪರೀಕ್ಷ್ಯಾಮುಂ ಶರೀರಸ್ಯ ದೀಪನಂ ಸ್ನೇಹಸಂಯುತಮ್ ॥**
**ದೀಪನಂ ಬಹುಪಿತ್ತಸ್ಯ ತಿಕ್ತಂ ಮಧುರಸಂಯುತಮ್ ॥೨೦೦॥**

**ಬಹುವಾತಸ್ಯ ತು ಸ್ನೇಹಲವಣಾಮ್ಲಯುತಂ ಹಿತಮ್ ॥**
**ಸಂಧುಕ್ಷತಿ ಯಥಾ ವಹ್ನಿರೇಷಾಂ ವಿಧಿವದಿನ್ಧನೈಃ ॥೨೦೧॥**

**ಸ್ನೇಹಮೇವ ಪರಂ ವಿದ್ಯಾದ್ ದುರ್ಬಲಾನಾಂ ಪ್ರದೀಪನಮ್ ||**
**ನಾಲಂ ಸ್ನೇಹಸಮಿದ್ಧಸ್ಯ ಶಮಾಯಾನ್ನಂ ಸುಗುರ್ವಪಿ ||೨೦೨||**

**ಅರ್ಥ:—** ವೈದ್ಯನು ತ್ರಿದೋಷಗ್ರಹಣಿಯಲ್ಲಿ ಪಂಚಕರ್ಮಗಳನ್ನು ಮಾಡಬೇಕು ಮತ್ತು ಅಗ್ನಿವರ್ಧಕವಾದ ಘೃತ, ಕ್ಷಾರ, ಆಸವ, ಅರಿಷ್ಟಗಳನ್ನು ಕೊಡಬೇಕು. ||೧೯೫|| ವಾತ ಪಿತ್ತ ಕಫ ಗ್ರಹಣಿಗಳಲ್ಲಿ ಹೇಳಿದ ಚಿಕಿತ್ಸೆಯನ್ನು ಒಂದರಹಿಂದೆ ಮಂತ್ತೊಂದರಂತೆ (ಸರತಿಯಿಂದ) ಮಾಡಬೇಕು. ಅಥವಾ ರೋಗದ ವೈಶಿಷ್ಟ್ಯವನ್ನು ನೋಡಿ ಒಮ್ಮೇ ಮಾಡಬೇಕು. ||೧೯೬|| ಸ್ನೇಹ, ಸ್ವೇದ, ಶೋಧನ, ಲಂಘನ, ದೀಪನ ದ್ರವ್ಯ, ಹಿಂದೆ ಹೇಳಿದ ಚೂರ್ಣ ಮಧುರವಾದ ಕ್ಷಾರ, ಮಧ್ವರಿಷ್ಟ, ಸುರೆ, ಆಸವ, ||೧೯೭|| ಅನೇಕ ತರದ ತಕ್ರಯೋಗ, ದೀಪಕವಾದ ಘೃತಪ್ರಯೋಗಗಳನ್ನು ಸಂಗ್ರಹಣೀ ರೋಗಿಗಳು ಸೇವಿಸತಕ್ಕದ್ದು. ಇನ್ನು ಮೇಲೆ ಬೇರೆ ಬೇರೆ ಅವಸ್ಥೆಯಲ್ಲಿ ಮಾಡಬೇಕಾದ ಚಿಕಿತ್ಸೆಯನ್ನು ಹೇಳುತ್ತೇವೆ. ಕೇಳಿರಿ. ||೧೯೮|| ಕಫವು ಬಹಳವಿದ್ದಾಗ್ಗೆ ಕಾರ, ರೂಕ್ಷ, ಮತ್ತು ದೀಪಕವಾದ (ದ್ರವ್ಯಗಳಿಂದ ಮಾಡಿದ) ಕಷಾಯದ ಕವಲವನ್ನು ಮಾಡಬೇಕು. ಮತ್ತು ಉಗಳಬೇಕು. ರೋಗಿಯು ಕೃಶನಿದ್ದರೆ ಒಮ್ಮೆ ರುಕ್ಷ, ಒಮ್ಮೆ ಸ್ನಿಗ್ಧ, ಕರ್ಮವನ್ನು ಮಾಡಬೇಕು. ||೧೯೯|| ಗ್ರಹಣಿಯಲ್ಲಿಯ ದೋಷವು ಆಮ (ಅಪಕ್ವ)ವಿದ್ದರೆ, ಸ್ನೇಹಯುಕ್ತವಾದ ದೀಪನ ಔಷಧ ಕೊಡಬೇಕು. ಬಹಳ ಪಿತ್ತವಿದ್ದರೆ, ಕಹಿ, ಮತ್ತು ಮಧುರ ದೀಪಕ ಔಷಧವನ್ನು ಕೊಡಬೇಕು. ||೨೦೦|| ವಾತವು ಬಹಳವಿದ್ದರೆ, ಸ್ನೇಹ, ಲವಣ, ಆಮ್ಲಗಳಿಂದ ಕೂಡಿದ ದೀಪಕ ಔಷಧವು ಹಿತಕರವು. ಅಂತೂ ಯಾವಸಾಧನಗಳಿಂದ ಅಗ್ನಿಯು ಕ್ರಮವಾಗಿ ಪ್ರದೀಪ್ತವಾಗುವದೋ ಅವುಗಳನ್ನು ಮಾಡಬೇಕು. ||೨೦೧|| ಅಶಕ್ತವಾದ ಅಗ್ನಿಯನ್ನು ಪ್ರದೀಪ್ತಮಾಡುವದರಲ್ಲಿ ಸ್ನೇಹವೇ ಶ್ರೇಷ್ಠವಾದದ್ದು. ಸ್ನೇಹದಿಂದ ಪ್ರಜ್ವಲಿತವಾದ ಅಗ್ನಿಯು ಎಂಥ ಜಡ ಆಹಾರದಿಂದಲೂ ಮಂದವಾಗದು. (೨೦೨)

**ಮಂದಾಗ್ನಿಯ ಚಿಕಿತ್ಸೆಯನ್ನು ಹೇಳುತ್ತಾರೆ.**

**ಮಂದಾಗ್ನಿರವಿಪಕ್ವಂ ತು ಪುರೀಷಂ ಯೋಽತಿಸಾರ್ಯತೇ||**
**ದೀಪನೀಯೌಷಧೈರ್ಯುಕ್ತಾಂ ಘೃತಮಾತ್ರಾಂ ಪಿಬೇತ್ತು ಸಃ||೨೦೩||**

ತಯಾ ಸಮಾನಃ ಪವನಃ ಪ್ರಸನ್ನೋ ಮಾರ್ಗಮಾಶ್ರಿತಃ ॥
ಅಗ್ನೇಃ ಸಮೀಪಚಾರಿತ್ವಾದಾಶು ಪ್ರಕುರುತೇ ಬಲಮ್ ॥೨೦೪॥

ಕಾಠಿನ್ಯಾದ್ಯಃ ಪುರೀಷಂ ತು ಕೃಚ್ಛ್ರಾನ್ಮುಂಚತಿ ಮಾನವಃ॥
ಸಘೃತಂ ಲವಣೈರ್ಯುಕ್ತಾಂ ನರೋಽನ್ನಾವಗ್ರಹಂ ಪಿಬೇತ್ ॥೨೦೫॥

ರೌಕ್ಷ್ಯಾನ್ಮಂದೇ ಪಿಬೇತ್ಸರ್ಪಿಸ್ತೈಲಂ ವಾ ದೀಪನೈರ್ಯುತಮ್ ॥
ಅತಿಸ್ನೇಹಾತ್ತು ಮಂದೇಽಗ್ನೌ ಚೂರ್ಣಾರಿಷ್ಟಾಸವಾ ಹಿತಾಃ॥೨೦೬॥

ಭಿನ್ನೇ ಗುದೋಪಲೇಪಾತ್ತು ಮಲೇ ತೈಲಸುರಾಸವಾಃ ॥
ಉದಾವರ್ತಾತ್ತು ಮಂದೇಽಗ್ನೌ ನಿರೂಹಾಃ ಸ್ನೇಹಬಸ್ತಯಃ

ದೋಷವೃದ್ಧ್ಯಾ ಚ ಮಂದೇಽಗ್ನೌ ಶುದ್ಧೋ ದೋಷವಿಧಿಂ ಚರೇತ್
ವ್ಯಾಧಿಯುಕ್ತಸ್ಯ ಮಂದೇ ತು ಸರ್ಪಿರೇವಾಗ್ನಿದೀಪನೈಃ ॥೨೦೮॥

ಉಪವಾಸಾಚ್ಚ ಮಂದೇಽಗ್ನೌ ಯವಾಗೂಭಿಃ ಪಿಬೇದ್ ಘೃತಮ್ ॥
ಅನ್ನಾವಪೀಡಿತೇ ಚಾಲಂ ದೀಪನಂ ಬೃಂಹಣಂಚ ತತ್ ॥೨೦೯॥

ದೀರ್ಘಕಾಲಪ್ರಸಙ್ಗಾತ್ತು ಕ್ಷಾಮಕ್ಷೀಣಕೃಶಾನ್ನರಾನ್ ॥
ಪ್ರಸಹಾನಾಂ ರಸೈಃಸಾಮ್ಲೈರ್ಭೋಜಯೇತ್ಪಿಶಿತಾಶಿನಮ್॥೨೧೦॥

ಲಘುತೀಕ್ಷ್ಣೋಷ್ಣಶೋಧಿತ್ವಾದ್ ದೀಪಯಂತ್ಯಾಶು ತೇಽನಲಮ್ ॥
ಮಾಂಸೋಪಚಿತಮಾಂಸತ್ವಾತ್ತಥಾಶುತರಬೃಂಹಣಾಃ ॥೨೧೧॥

ನಾಭೋಜನೇನ ಕಾಯಾಗ್ನಿರ್ದೀಪ್ಯತೇ ನಾತಿಭೋಜನಾತ್ ॥
ಯಥಾ ನಿರಿಂಧನೋ ವಹ್ನಿರಲ್ಪೋ ವಾತೀಂಧನಾವೃತಃ ॥೨೧೨॥

ಸ್ನೇಹಾನ್ನಪಾನೈರ್ವಿವಿಧೈಶ್ಚೂರ್ಣಾರಿಷ್ಟಸುರಾಸವೈಃ ॥
ಸಮ್ಯಕ್ಪ್ರಯುಕ್ತೈರ್ಭಿಷಜಾ ಬಲಮಗ್ನೇಃ ಪ್ರವರ್ಧತೇ ॥೨೧೩॥

ಯಥಾ ಹಿ ಸಾರದಾರ್ವಗ್ನಿಃ ಸ್ಥಿರಃ ಸಂತಿಷ್ಠತೇ ಚಿರಮ್ ॥
ಸ್ನೇಹಾಶನಾದಿಭಿಸ್ತದ್ವದಂತವಹ್ನಿರ್ಭವೇತ್ಸ್ಥಿರಃ ॥೨೧೪॥

ಹಿತಂ ಜೀರ್ಣೇ ಮಿತಂ ಚಾಶ್ನಂಶ್ಚಿರಮಾರೋಗ್ಯಮಶ್ನುತೇ ॥
ಅವೈಷಮ್ಯೇಣ ಧಾತೂನಾಮಗ್ನಿವೃದ್ಧೌ ಯತೇತ ನಾ ॥೨೧೫॥

**ಸವ್ಯೈರ್ದೋರ್ಷ್ಯೈಃ ಸಮೋ ಮಧ್ಯೇ ದೇಹಸ್ಯೋಷ್ಮಾಗ್ನಿಸಂಸ್ಥಿತಃ ||**
**ಪಚತ್ಯನ್ನಂ ತದಾರೋಗ್ಯಪುಷ್ಟ್ಯಾಯುರ್ಬಲವರ್ಧನಮ್ ||೨೧೬||**
**ದೋಷೈರ್ಮಂದೋತಿವೃದ್ಧೋ ವಾ ವಿಷಮೋ ಜನಯೇದ್ ಗದಾನ್**
**ಪಾಚ್ಯಂ ಮಂದಸ್ಯ ತತ್ರೋಕ್ತಮತಿವೃದ್ಧಸ್ಯ ವಕ್ಷ್ಯತೇ ||೨೧೭||**

**ಅರ್ಥಃ**— ಅಗ್ನಿಯು ಮಂದವಿದ್ದು ಯಾವನು ಅಪಕ್ವ ಮಲವನ್ನು ಬಿಡುವನು ಅವನಿಗೆ ದೀಪಕ ಔಷಧಗಳಿಂದ ಸಿದ್ಧವಾದ ಘೃತವನ್ನು ಯೋಗ್ಯ ಪ್ರಮಾಣದಿಂದ ಕೊಡಬೇಕು. ||೨೦೩|| ಅದರಿಂದ ಮಾರ್ಗದಲ್ಲಿ ಇರುವ ಸಮಾನವಾಯುವು ಸರಳವಾಗಿ ಅಗ್ನಿಯ ಸಮೀಪದಲ್ಲಿ ಇರುವದರಿಂದ ಅದಕ್ಕೆ ಬಲವನ್ನು ಕೊಡುತ್ತದೆ. ||೨೦೪|| ಮಲವು ಕಠಿಣವಿರುವದರಿಂದ ಯಾವನಿಗೆ ಕಷ್ಟದಿಂದ ಮಲವು ಬೀಳುವದೊ, ಅವನು ಅನ್ನದಲ್ಲಿ ಲವಣ ಮತ್ತು ಘೃತವನ್ನು ಹಾಕಿ ಕುಡಿಯಬೇಕು. ||೨೦೫|| ರುಕ್ಷತೆಯಿಂದ ಅಗ್ನಿಯು ಮಂದವಾಗಿದ್ದರೆ ದೀಪನದ್ರವ್ಯಗಳಿಂದ ಕೂಡಿದ ಘೃತ ಅಥವಾ ತೈಲವನ್ನು ಕುಡಿಯಬೇಕು. [**ಅತಿಸ್ನೇಹದಿಂದ** ಅಗ್ನಿಯು ಮಂದವಾಗಿದ್ದರೆ ಚೂರ್ಣ, ಅರಿಷ್ಟ, ಆಸವಗಳು ಹಿತಕರ. ||೨೦೬|| ಗುದಕ್ಕೆ ಮಲಲೇಪವಾಗುವದರಿಂದ ಮಲವು ತೆಳ್ಳಗೆ ಬೀಳುತ್ತಿದ್ದರೆ ತೈಲ, ಸುರೆ, ಆಸವಗಳು ಹಿತಕರ [**ಉದಾವರ್ತದಿಂದ** ಅಗ್ನಿಮಾಂದ್ಯವಾಗಿದ್ದರೆ ನಿರೂಹ ಅನುವಾಸನ ಬಸ್ತಿಗಳು ಹಿತಕರವು ||೨೦೭|| [**ದೋಷಕಫವು ಹೆಚ್ಚಾಗಿ** ಅಗ್ನಿಯು ಮಂದವಾಗಿದ್ದರೆ ಶೋಧನಕೊಟ್ಟು ದೋಷಚಿಕಿತ್ಸೆ ಮಾಡಬೇಕು. [**ಬೇನೆಗಳಿಂದ** ಅಗ್ನಿಯು ಮಂದವಾಗಿದ್ದರೆ ದೀಪನದ್ರವ್ಯಗಳಿಂದ ಸಿದ್ಧಮಾಡಿದ ಘೃತಗಳನ್ನು ಕೊಡಬೇಕು. ||೨೦೮|| [**ಉಪವಾಸದಿಂದ** ಅಗ್ನಿಯು ಮಂದವಾಗಿದ್ದರೆ ಪೇಯಗಳಲ್ಲಿ ತುಪ್ಪಹಾಕಿ ಕೊಡಬೇಕು. **ಈ** ತುಪ್ಪವು ಅನ್ನದೊಡನೆ ಸೇರಿದ್ದರಿಂದ ಅಗ್ನಿದೀಪನ ಮತ್ತು ಶರೀರ ಪೋಷಣ ಮಾಡುವದರಲ್ಲಿ ಸಮರ್ಥವಾಗುತ್ತದೆ ||೨೦೯|| [**ಬಹು ದಿವಸದ ರೋಗದಿಂದ** ಅತ್ಯಂತ ದುರ್ಬಲ ಮತ್ತು ಕೃಶನಾದರೋಗಿಗೆ ಅವನು ಮಾಂಸಾಹಾರಿಯಾಗಿದ್ದರೆ ಹುಳಿ ಮಾಡಿದ ಪ್ರಸಹ (ಕಸಿದು ತಿನ್ನುವ ಮೃಗಪಕ್ಷಿ) ಪ್ರಾಣಿಗಳ ಮಾಂಸರಸಗಳಿಂದ ಊಟಮಾಡಿಸಬೇಕು. ||೨೧೦||ಅವು ಹಗುರು, ತೀಕ್ಷ್ಣ, ಉಷ್ಣ ಶೋಧಕವಾದ್ದರಿಂದ ಅಗ್ನಿಯನ್ನು ಪ್ರದೀಪ್ತಮಾಡುತ್ತವೆ. ಮತ್ತು ಅವುಗಳ ಮಾಂಸವು ಮಾಂಸದಿಂದಲೇ

ಪುಷ್ಟವಾದ್ದರಿಂದ ತೀವ್ರವಾಗಿ ಪುಷ್ಟಿಯನ್ನು ಕೊಡುತ್ತವೆ. ||೨೧೧|| ಸಣ್ಣ ಬೆಂಕಿಯು ಉರವಲ ಹಾಕದಿದ್ದರೆ ಅಥವಾ ಬಹಳ ಹಾಕಿದರೆ ಹೇಗೆ ಹೆಚ್ಚಾಗದೋ ಅದರಂತೆ ಶರೀರದಲ್ಲಿಯ ಅಗ್ನಿಯು, ಊಟಮಾಡದೆ ಇದ್ದರೆ ಅಥವಾ ಬಹಳ ಊಟಮಾಡಿದರೆ ಪ್ರದೀಪ್ತವಾಗದು. ||೨೧೨|| ಆದ್ದರಿಂದ ವೈದ್ಯನು ವಿವಿಧ ಸ್ನೇಹ, ಅನ್ನ, ಪಾನ, ಚೂರ್ಣ, ಅರಿಷ್ಟ, ಸುರೆ, ಆಸವ ಗಳನ್ನು ಚನ್ನಾಗಿ ಯೋಜಿಸಬೇಕು. ಅಂದರೆ ಅಗ್ನಿಯ ಬಲವು ಬೆಳೆಯು ತ್ತದೆ. ||೨೧೩|| ಹೇಗೆ ಗಟ್ಟಿಯಾದ ಕಟ್ಟಿಗೆಯ ಬೆಂಕಿಯು ಬಹುಕಾಲ ಸ್ಥಿರವಾಗಿ ನಿಲ್ಲುವದೋ ಅದರಂತೆ ಸ್ನೇಹ ಮತ್ತು ಅನ್ನ ಮುಂತಾದವು ಗಳಿಂದ ದೇಹದಲ್ಲಿಯ ಅಗ್ನಿಯು ಸ್ಥಿರವಾಗಿ ನಿಲ್ಲುವದು. ||೨೧೪|| ಹಿಂದಿನ ಅನ್ನವು ಪಚನವಾಗಲು ಹಿತಕರವಾದ ಮಿತಾಹಾರವನ್ನು ಮಾಡಿದರೆ ಬಹು ಕಾಲ ಆರೋಗ್ಯವುಂಟಾಗುವದು. ದೋಷಗಳು ವೈಷಮ್ಯವನ್ನು ಹೊಂದ ದೆ ಅಗ್ನಿಯು ಹೆಚ್ಚಾಗುವಂತೆ ಮನುಷ್ಯನು ಯತ್ನಿಸತಕ್ಕದ್ದು ||೨೧೫|| ಏಕೆಂದರೆ ದೋಷಗಳು ಸಮವಾಗಿದ್ದರೆ ದೇಹದಲ್ಲಿರುವ ಅಗ್ನಿಯ ಒಳಗೆ ಇರುವ ಉಷ್ಣತೆಯು ಸಮವಾಗಿದ್ದುಕೊಂಡು ಅನ್ನವನ್ನು ಬೇಯಿಸುತ್ತದೆ. ಆಗ್ಗೆ ಆರೋಗ್ಯ ಪುಷ್ಟಿ ಆಯುಷ್ಯ ಬಲಗಳು ಹೆಚ್ಚುತ್ತವೆ.||೨೧೬|| ದೋಷ ಗಳಿಂದ ಅಗ್ನಿಯು ಮಂದ, ಅತಿವೃದ್ಧ ಅಥವಾ ವಿಷಮವಾದರೆ ಅದು ರೋಗಗಳನ್ನುಂಟುಮಾಡುತ್ತದೆ. ಇವುಗಳಲ್ಲಿ ಮಂದ ಅಗ್ನಿಯ ಚಿಕಿತ್ಸೆಯು ಹಿಂದೆ ಹೇಳಲ್ಪಟ್ಟಿತು. ಅತಿವೃದ್ಧ ಅಗ್ನಿಯ ಚಿಕಿತ್ಸೆಯು ಮುಂದೆ ಹೇಳಲ್ಪಡುವದು. (೨೧೭

**ನರೇ ಕ್ಷೀಣಕಫೇ ಪಿತ್ತಂ ಕುಪಿತಂ ಮಾರುತಾನುಗಮ್||**
**ಸೋಷ್ಮಕಂ ಪಾವಕಸ್ಥಾನೇ ಬಲಮಗ್ನೇಃ ಪ್ರಯಚ್ಛತಿ ||೨೧೮||**

**ತದಾ ಲಬ್ಧಬಲೋ ದೇಹೇ ವಿರೂಕ್ಷೇ ಸಾನಿಲೋಽನಲಃ||**
**ಅಭಿಭೂಯ ಪಚತ್ಯನ್ನಂ ತೈಕ್ಷ್ಣ್ಯಾದಾಶು ಮುಹುರ್ಮುಹುಃ**

**ಪಕ್ತ್ವಾನ್ನಂ ಸ ತತೋ ಧಾತೂನ್ ಶೋಣಿತಾದೀನ್ ಪಚತ್ಯಪಿ ||**
**ತತೋ ದೌರ್ಬಲ್ಯಮಾತಙ್ಕಂ ಮೃತ್ಯುಂ ಚೋಪನಯೇನ್ನರಮ್**

**ಭುಕ್ತೇಽನ್ನೇ ಲಭತೇ ಶಾಂತಿಂ ಜೀರ್ಣಮಾತ್ರೇ ಪ್ರತಾಮ್ಯತಿ ||**

ತೃಟ್ ಶ್ವಾಸಮೋಹಮೂರ್ಛಾದ್ಯಾ ವ್ಯಾಧಯೋಽತ್ಯಗ್ನಿಸಂಭವಾಃ
ತಮತ್ಯಗ್ನಿಂ ಗುರುಸ್ನಿಗ್ಧಶೀತೈರ್ಮಧುರವಿಜ್ಜಲೈಃ ॥
ಅನ್ನಪಾನೈರ್ನಯೇಚ್ಛಾಂತಿಂ ದೀಪ್ತಮಗ್ನಿಮಿವಾಂಬುಭಿಃ ॥೨೨೨॥
ಮುಹುರ್ಮುಹುರಜೀರ್ಣೇಽಪಿ ಭೋಜ್ಯಾನ್ಯಸ್ಯೋಪಹಾರಯೇತ್ ॥
ನಿರಿಂಧನೋಽಂತರಂ ಲಬ್ಧ್ವಾ ಯಥೈನಂ ನ ವಿಪಾದಯೇತ್ ॥೨೨೩॥

ಕೃಶರಾಂ ಪಾಯಸಂ ಸ್ನಿಗ್ಧಂ ಪೈಷ್ಟಿಕಂ ಗುಡವೈಕೃತಮ್ ॥
ಅದ್ಯಾತ್ತಥೌದಕಾನೂಪಪಿಶಿತಾನಿ ಭೃತಾನಿ ಚ ॥೨೨೪॥

ಮತ್ಸ್ಯಾನ್ವಿಶೇಷತಃ ಶ್ಲಕ್ಷ್ಣಾನ್ ಸ್ಥಿರತೋಯಚರಾನಪಿ ॥
ಆವಿಕಂ ಚ ಭೃತಂ ಮಾಂಸಮದ್ಯಾದತ್ಯಗ್ನಿವಾರಣಮ್ ॥೨೨೫॥

ಯವಾಗೂಂ ಸಮಧೂಚ್ಛಿಷ್ಟಾಂ ಭೃತಂ ವಾ ಕ್ಷುಧಿತಃ ಪಿಬೇತ್ ॥
ಗೋಧೂಮಚೂರ್ಣಮಂಥಂ ವಾ ವ್ಯಧಯಿತ್ವಾ ಶಿರಾಂ ಪಿಬೇತ್

ಪಯೋ ವಾ ಶರ್ಕರಾ ಸರ್ಪಿರ್ಜೀವನೀಯೌಷಧೈಃ ಶೃತಮ್ ॥
ಫಲಾನಿ ತೈಲಯೋನೀನಾಂ ಮೃತ್ಕುಂಚಾಕ್ಷ ಸಶರ್ಕರಾಃ ॥೨೨೭॥

ಮಾರ್ದವಂ ಜನಯಂತ್ಯಗ್ನೇಃ ಸ್ನಿಗ್ಧಮಾಂಸರಸಾಸ್ತಥಾ ॥
ಪಿಬೇಚ್ಛೀತಾಂಬುನಾ ಸರ್ಪಿರ್ಮಧೂಚ್ಛಿಷ್ಟೇನ ಸಂಯುತಮ್ ॥೨೨೮॥
ಗೋಧೂಮಚೂರ್ಣಂ ಪಯಸಾ ಸಸರ್ಪಿಷ್ಕಂ ಪಿಬೇನ್ನರಃ ॥
ಆನೂಪರಸಸಿದ್ಧಾನ್ವಾ ತ್ರೀನ್ ಸ್ನೇಹಾಂಸ್ತೈಲವರ್ಜಿತಾನ್ ॥೨೨೯॥

ಪಯಸಾ ಸಮಿತಾಂ ವಾಪಿ ಘನಾಂ ತ್ರಿಸ್ನೇಹಸಂಯುತಾಮ್ ॥
ನಾರೀಸ್ತನ್ಯೇನ ಸಂಯುಕ್ತಾಂ ಪಿಬೇದೌದುಂಬರೀಂ ತ್ವಚಮ್ ॥೨೩೦॥

ತಾಭ್ಯಾಂ ವಾ ಪಾಯಸಂ ಸಿದ್ಧಂ ಪಿಬೇದತ್ಯಗ್ನಿಶಾಂತಯೇ ॥
ಶ್ಯಾಮಾತ್ರಿವೃದ್ವಿಪಕ್ವಂ ವಾ ಪಯೋ ದದ್ಯಾದ್ವಿರೇಚನಮ್ ॥೨೩೧॥

ಅಸಕೃತ್ ಪಿತ್ತಹರಣಂ ಪಾಯಸಂ ಪ್ರತಿಭೋಜನಮ್ ॥
ಭಿಷಕ್ ಪ್ರಾಜ್ಞಃ ಪ್ರಸಮೀಕ್ಷ್ಯ ತಸ್ಮೈ ದದ್ಯಾದ್ವಿಧಾನವಿತ್ ॥೨೩೨॥

ಯತ್ಕಿಂಚಿದ್ಗುರು ಮೇಧ್ಯಂ ಯತ್ ಶ್ಲೇಷ್ಮಲಂ ಚಾಪಿ
ಭೋಜನಮ್ ॥

**ಸರ್ವಂ ತದತ್ಯಗ್ನಿಹಿತಂ ಭುಕ್ತ್ವಾ ಚ ಸ್ವಪನಂ ದಿವಾ ||೨೩೩||**
**ಮೇಧ್ಯಾನ್ಯನ್ನಾನಿ ಯೋಽತ್ಯಗ್ನಾವಪ್ರತಾಂತಃ ಸಮಶ್ನುತೇ ||**
**ನ ತನ್ನಿಮಿತ್ತಂ ವ್ಯಸನಂ ಲಭತೇ ಪುಷ್ಟಿಮೇವ ಚ ||೨೩೪||**
**ಕಫೇ ವೃದ್ಧೇ ಜಿತೇ ಪಿತ್ತಮಾರುತೇ ಚಾನಲಃ ಸಮಃ ||**
**ಸಮಧಾತೋಃ ಪಚತ್ಯನ್ನಂ ಪುಷ್ಟ್ಯಾಯುರ್ಬಲವೃದ್ಧಯೇ ||೨೩೫||**

**ಅರ್ಥಃ**—ಮನುಷ್ಯನಲ್ಲಿಯ ಕಫವು ಕ್ಷೀಣವಾಗಲು ಉಷ್ಣತೆಯಿಂದ ಕೂಡಿದ ಕುಪಿತವಾದ ಪಿತ್ತವು ವಾತದ ಸಹಾಯದಿಂದ ಹೊಕ್ಕಳದ ಮೇಲಿದ್ದ ಅಗ್ನಿಗೆ ಬಲವನ್ನು ಕೊಡುತ್ತದೆ. ||೨೧೮|| ಆಗ್ಗೆ ಬಲಿಷ್ಠವಾದ ಅಗ್ನಿಯು ವಾತದೊಡನೆ ಕೂಡಿಕೊಂಡು, ರುಕ್ಷವಾದ ದೇಹದಲ್ಲಿ ಆಗಾಗ್ಗೆ ಹಾಕಿದ ಅನ್ನವನ್ನು ತನ್ನ ತೀಕ್ಷ್ಣತೆಯಿಂದ ಲೆಕ್ಕಿಸದೆ ಕೂಡಲೇ ಪಚನ ಮಾಡುವದು. ||೨೧೯|| ಅನ್ನವನ್ನು ಪಚನಮಾಡಿ ರಕ್ತ ಮುಂತಾದ ಧಾತುಗಳನ್ನು ಸುಡುವದು. ಅದರಿಂದ ಅಶಕ್ತಿ, ರೋಗ ಮತ್ತು ಮೃತ್ಯು ವನ್ನು ಮನುಷ್ಯನಿಗೆ ತಂದು ಕೊಡುವದು. ||೨೨೦|| ಅನ್ನವನ್ನು ತಿಂದರೂ ಸಮಾಧಾನ ಹೊಂದನು. ಅದು ಪಚನವಾದಕೂಡಲೇ ಚಡಪಡಿಸಹತ್ತು ವನು. ಈ ಅತ್ಯಗ್ನಿಯಿಂದ ನೀರಡಿಕೆ, ಶ್ವಾಸ, ಮೋಹ, ಮೂರ್ಛೆ ಮುಂತಾದ ರೋಗಗಳುಂಟಾಗುವವು. ||೨೨೧|| ಈ ಅತ್ಯಗ್ನಿಯನ್ನು ಜಡ, ಸ್ನಿಗ್ಧ, ಶೀತ, ಮಧುರ, ಲೋಳೆಯಾದ ಅನ್ನಪಾನಗಳಿಂದ, ಉರಿಯುವ ಬೆಂಕಿಯನ್ನು ನೀರುಗಳಿಂದ ಶಾಂತಮಾಡುವಂತೆ ಶಾಂತಮಾಡಬೇಕು ||೨೨೨|| ಹಿಂದಿನ ಅನ್ನವು ಪಚನವಾಗದಿರುವಾಗಲೇ ಆಗಾಗ್ಗೆ ಅವನಿಗೆ ಅನ್ನವನ್ನು ಕೊಡುತ್ತಿರಬೇಕು. ಇಲ್ಲವಾದರೆ ಅದಕ್ಕೆ ಅನ್ನವೆಂಬ ಉರು ವಲು ದೊರಕದೇ ಹೋಗಲು ಅವಕಾಶ ದೊರೆತು (ಧಾತುಗಳನ್ನು ಸುಟ್ಟು) ಅವನನ್ನು ಕೊಲ್ಲಬಹುದು. ||೨೨೩|| ಅತ್ಯಗ್ನಿವುಳ್ಳವನು ಬಲ ಬರುವ ವರೆಗೆ ಕೃಶರಾ (ಹುಗ್ಗಿ), ಸ್ನಿಗ್ಧವಾದ ಪಾಯಸ, ಹಿಟ್ಟಿನಪದಾರ್ಥ ಬೆಲ್ಲದ ವಿಕಾರ, ನೀರಲ್ಲಿರುವ ಮತ್ತು ಮಲೆನಾಡಿನಲ್ಲಿರುವ ಪ್ರಾಣಿಗಳ ಮಾಂಸಗಳನ್ನೂ ತುಪ್ಪವನ್ನೂ ತಿನ್ನಬೇಕು. ||೨೨೪|| ವಿಶೇಷವಾಗಿ ನಿಂತ ನೀರಲ್ಲಿಯ ಮೆತ್ತನ್ನ ಮೀನುಗಳನ್ನೂ ಉಣ್ಣೆಗುರಿಯ ತುಪ್ಪ ಮತ್ತು ಮಾಂಸಗಳನ್ನು ತಿನ್ನಬೇಕು ||೨೨೫|| ಹಸಿವೆಯಾಗಲು ಮೇಣ ಹಾಕಿದ ಪೇಯವನ್ನು ಅಥವಾ ಘೃತವನ್ನು ಕುಡಿಯಬೇಕು. ಅಥವಾ ಹಿರೆಯನ್ನು ಕಡಿದು ಗೋದಿಯ ರವೆಯನ್ನು ದ್ರವಪದಾರ್ಥದೊಡನೆ ಕುಡಿಯಬೇಕು. ||೨೨೬|| ಹಾಲು, ಸಕ್ಕರೆ ಪಾನಕಗಳನ್ನು ಅಥವಾ ಜೀವ

ನೀಯ ಔಷಧಗಳನ್ನು ಹಾಕಿ ಕುದಿಸಿದ ತುಪ್ಪವನ್ನು, ಎಣ್ಣೆ (ಎಳ್ಳುಮುಂತಾದ) ಧಾನ್ಯಗಳಿಂದ ಸಕ್ಕರೆ ಹಾಕಿ ಮಾಡಿದ ಹಣ್ಣಿನ ಮುದ್ದೆಗಳನ್ನೂ ತಿನ್ನಬೇಕು. ||೨೨೭|| ಅದರಂತೆ ಸ್ನಿಗ್ಧವಾದ ಮಾಂಸರಸಗಳನ್ನು ತಿನ್ನಬೇಕು. ಇವು ಅಗ್ನಿಯ ತೀಕ್ಷ್ಣತೆಯನ್ನು ಕಳೆಯುವವು. ಮೇಣ ಹಾಕಿದ ತುಪ್ಪವನ್ನು ತಣ್ಣೀರಿನೊಡನೆ ಕುಡಿಯಬೇಕು. ||೨೨೮|| ಗೋಧಿಯ ರವೆಯಲ್ಲಿ ತುಪ್ಪಹಾಕಿ ಹಾಲಿನೊಡನೆ ಕುಡಿಯಬೇಕು. ನಾಲ್ಕು ಪಾಲು ಆನೂಪಮಾಂಸರಸದಲ್ಲಿ ಸಿದ್ಧಪಡಿಸಿದ ತುಪ್ಪ, ನೆಣ, ಮಜ್ಜಗಳನ್ನು ಕುಡಿಯಬೇಕು. ||೨೨೯|| ಹಾಲು ಕಲಿಸಿದ ಗಟ್ಟಿಯಾದ ಗೋಧಿಯ ಹಿಟ್ಟಿಯಲ್ಲಿ ತುಪ್ಪ, ನೆಣ, ಮಜ್ಜಗಳನ್ನು ಹಾಕಿ ತಿನ್ನಬೇಕು. ಸಾರೀಸ್ತನ್ಯದಿಂದ ಅತ್ತಿಯ ತೊಗಟೆಯ ಚೂರ್ಣವನ್ನು ಕುಡಿಯಬೇಕು. ||೨೩೦|| ಅಥವಾ ಅವೆರಡರಿಂದ ಪಾಯಸವನ್ನು ಮಾಡಿ ಕುಡಿಯಬೇಕು. ಇವು ಅತ್ಯಗ್ನಿಯನ್ನು ಕಳೆಯುವವು. ಕರೀ ಮತ್ತು ಕೆಂಪು ತಿಗಡಿಗಳಿಂದ ಸಿದ್ಧಮಾಡಿದ ಹಾಲನ್ನು ವಿರೇಚನಕ್ಕಾಗಿ ಕೊಡಬೇಕು. ||೨೩೧|| ವಿಧಿಯನ್ನು ಬಲ್ಲ ಪಂಡಿತ ವೈದ್ಯನು ವಿಚಾರಮಾಡಿ ಅವನಿಗೆ ಪಿತ್ತನಾಶಕವಾದ ಪಾಯಸವನ್ನು ಆಗಾಗ್ಗೆ ಪ್ರತಿಯೊಂದು ಭೋಜನಕ್ಕೂ ಕೊಡಬೇಕು. ||೨೩೨|| ಯಾವದು ಜಡ, ಮೇದೋಧಾತುವರ್ಧಕ, ಕಫಕರ, ಆಹಾರವೋ ಅದೆಲ್ಲವೂ ಮತ್ತು ಊಟಮಾಡಿ ಹಗಲು ಮಲಗುವದೂ ಅತ್ಯಗ್ನಿಉಳ್ಳವರಿಗೆ ಹಿತಕರವು ||೨೩೩|| ಯಾವ ಅತ್ಯಗ್ನಿಉಳ್ಳವನು ಹಸಿವೆಯಿಂದ ಪೀಡಿತನಾಗುವ ಮೊದಲೇ ಮೇದೋಧಾತುವರ್ಧಕ ಅನ್ನಗಳನ್ನು ತಿನ್ನುವನೋ ಅವನಿಗೆ ಅದರಿಂದ ಅಪಾಯವಾಗದೇ ಪುಷ್ಟಿಯೇ ಆಗುವದು. ||೨೩೪|| ಕಫವು ಬೆಳೆದು ಪಿತ್ತವಾತಗಳು ಕಡಿಮೆಯಾಗಲು ಅಗ್ನಿಯು ಸಮವಾಗಿ, ಸಮದೋಷವುಳ್ಳ ಆ ರೋಗಿಯ ಅನ್ನವನ್ನು ಪಚನಮಾಡಿ ಪುಷ್ಟಿ ಆಯುಷ್ಯ ಬಲಗಳನ್ನು ಹೆಚ್ಚಿಸುವದು. (೨೩೫)

## ಭವಂತಿ ಚಾತ್ರ

**ಪಥ್ಯಾಪಥ್ಯಮಿಹೈಕತ್ರ ಭುಕ್ತಂ ಸಮಶನಂ ಮತಮ್ ||**
**ವಿಷಮಂ ಬಹು ಚಾಲ್ಪಂ ವಾಽಪ್ಯಪ್ರಾಪ್ತಾತೀತಕಾಲಯೋಃ ||೨೩೬||**

**ಪೂರ್ವಾನ್ನಶೇಷೇ ಚ ಪುನರ್ಭುಕ್ತಮಧ್ಯಶನಂ ಮತಮ್ ||**

ತ್ರೀಣ್ಯಪ್ಯೇತಾನಿ ಮೃತ್ಯುಂ ವಾ ಘೋರಾನ್ ವ್ಯಾಧೀನ್
ಸೃಜಂತಿ ವಾ ||೨೩೭||

ಪ್ರಾತರಾಶೇ ತ್ವಜೀರ್ಣೇಽಪಿ ಸಾಯಮಾಶೋ ನ ದುಷ್ಯತಿ ||
ದಿವಾ ಪ್ರಬೋಧ್ಯತೇಽರ್ಕೇಣ ಹೃದಯಂ ಪುಂಡರೀಕವತ್ ||೨೩೮||

ತಸ್ಮಿನ್ವಿಬುದ್ಧೇ ಸ್ರೋತಾಂಸಿ ಸ್ಫುಟತ್ವಂ ಯಾಂತಿ ಸರ್ವಶಃ ||
ವ್ಯಾಯಾಮಾಚ್ಚ ವಿಚಾರಾಚ್ಚ ವಿಕ್ಷಿಪ್ತತ್ವಾಚ್ಚ ಚೇತಸಃ ||೨೩೯||

ನ ಕ್ಲೇದಮುಪಗಚ್ಛಂತಿ ದಿವಾ ತೇನಾಸ್ಯ ಧಾತವಃ ||
ಅಕ್ಲಿನ್ನೇಷ್ವನ್ನಮಾಸಿಕ್ತಮತ್ಯಂತೇಷು ನ ದುಷ್ಯತಿ ||೨೪೦||

ಅವಿದಗ್ಧೇಽಪ್ಯೇವ ಪಯಸ್ಯನ್ಯತ್ ಸಮ್ಮಿಶ್ರಿತಂ ಪಯಃ ||
ನೈವ ದುಷ್ಯತಿ ತೇನೈವ ಸಮಂ ಸಂಪದ್ಯತೇ ಯಥಾ ||೨೪೧||

ರಾತ್ರೌ ತು ಹೃದಯೇ ಮ್ಲಾನೇ ಸಂವೃತೇಷ್ವಯನೇಷು ಚ ||
ಪರಿಕ್ಲೇದಂ ಯಾಂತಿ ಕೋಷ್ಠೇ ಸಂವೃತೇ ದೇಹಧಾತವಃ ||೨೪೨||

ಕ್ಲಿನ್ನೇಷ್ವನ್ನಪಕ್ವೇಷು ತೇಷ್ವಾಸಿಕ್ತಂ ಪ್ರದುಷ್ಯತಿ ||
ವಿದಗ್ಧೇಷು ಪಯಃಸ್ವನ್ಯತ್ ಪಯಸ್ತಪ್ತೇಷ್ವಿವಾರ್ಪಿತಮ್ ||೨೪೩||

ನೈತೇಷ್ವಾಹಾರಜಾತೇಷು ನಾಪಕ್ವೇಷು ಬುದ್ಧಿಮಾನ್ ||
ತಸ್ಮಾದನ್ನಂ ಸಮಶ್ನೀಯಾತ್ ಪಾಲಯಿಷ್ಯನ್ ಬಲಾಯುಷೀ ||೨೪೪||

**ಅರ್ಥ:**— ಊಟದಲ್ಲಿ ಪಥ್ಯ ಮತ್ತು ಅಪಥ್ಯ ಇವೆರಡನ್ನು ಕೂಡಿಯೇ ತಿನ್ನುವದು ಸಮಶನವು. ಆಹಾರ ಕಾಲಬರದೇ ಅಥವಾ ಮೀರಿ ಹೋದ ಮೇಲೆ ಸ್ವಲ್ಪ ಅಥವಾ ಬಹಳ ತಿನ್ನುವದು ವಿಷಮಾಶನವು. ||೨೩೬|| ಹಿಂದಿನ ಅನ್ನವು ಪಚನವಾಗದೇ ಇರಲು ಪುನಃ ತಿನ್ನುವದು ಅಧ್ಯಶನವು. ಇವು ಮೂರೂ ಮೃತ್ಯುವನ್ನು ಅಥವಾ ಭಯಂಕರ ಬೇನೆಗಳನ್ನು ಉಂಟುಮಾಡುತ್ತವೆ. ||೨೩೭|| ಮುಂಜಾನೆ ಆಹಾರವು ಜೀರ್ಣವಾಗದಿದ್ದರೂ ರಾತ್ರಿಯಲ್ಲಿ ಊಟಮಾಡಬಹುದು. ಏಕೆಂದರೆ ಹಗಲು ಸೂರ್ಯನಿಂದ

ಹೃದಯವು ಕಮಲದಂತೆ ಅರಳುತ್ತದೆ. ||೨೩೮|| ಅದು ಅರಳಲು ಎಲ್ಲ ಸ್ರೋತಸ್ಸುಗಳು ತೆರೆಯುತ್ತವೆ. ಹಗಲು ವ್ಯಾಯಾಮ ಸಂಚಾರ ಮನೋವಿಕ್ಷೇಪಗಳು ಇರುವದರಿಂದ ||೨೩೯|| ಮನುಷ್ಯನ ಧಾತುಗಳು ಅಗ್ಗ ಕ್ಲೇದವನ್ನು ಹೊಂದುವದಿಲ್ಲ. ಆದ್ದರಿಂದ ಅವುಗಳಲ್ಲಿ ಹಾಕಿದ ಬೇರೆ ಅನ್ನವು, ಹುಳಿ ಇಲ್ಲದ ಹಾಲಿನಲ್ಲಿ ಕೂಡಿಸಿದ ಬೇರೆ ಹಾಲು ಹೇಗೆ ಕೆಡದೋ ಅದರಂತೆ ಕೆಡುವದಿಲ್ಲ. ಅದರೊಡನೆ ಕೂಡಿಕೊಳ್ಳುವದು. ||೨೪೦|| ||೨೪೧|| ರಾತ್ರಿಯಲ್ಲಿ ಹೃದಯವು ಸಂಕುಚಿತವಾಗಲು ಎಲ್ಲ ಸ್ರೋತಸ್ಸುಗಳು ಮತ್ತು ಕೋಷ್ಠವು ಸಂಕುಚಿತವಾಗುವದರಿಂದ (ರಸವು ಹರಿದಾಡದೆ) ದೇಹದಲ್ಲಿಯ ಧಾತುಗಳು ಕ್ಲೇದವನ್ನು ಹೊಂದುವವು. ||೨೪೨|| ಕ್ಲೇದಹೊಂದಿ ಅಪಕ್ವವಾದ ಅವುಗಳಲ್ಲಿ ಹಾಕಿದ ಬೇರೆ ಅನ್ನವು, ಹುಳಿಯಾದ ಕಾಯ್ದ ಹಾಲಿನಲ್ಲಿ ಹಾಕಿದ ಬೇರೆ ಚಲೋ ಹಾಲಿನಂತೆ ಕೆಟ್ಟುಹೊಗುತ್ತದೆ. ||೨೪೩|| ಆದ್ದರಿಂದ ಬಲ ಮತ್ತು ಆಯುಷ್ಯವನ್ನು ರಕ್ಷಿಸಬೇಕಾಗಿದ್ದರೆ ಬುದ್ಧಿವಂತನು ರಾತ್ರಿ ಆಹಾರವು ಪಚನವಾಗದಿರಲು ಬೇರೆ ಆಹಾರವನ್ನು ಉಣ್ಣಬಾರದು. (೨೪೪)

### ಸಂಗ್ರಹಶ್ಲೋಕಾಃ

**ಅಂತರಗ್ನಿಗುಣಾ ದೇಹಂ ಯಥಾ ಸಂಧಾರಯೇಚ್ಚ ಸಃ ||**
**ಯಥಾನ್ನಂ ಪಚ್ಯತೇ ಯಜ್ಞಾ ಯಥಾಹಾರಃ ಕರೋತ್ಯಪಿ ||೨೪೫||**

**ಯೇಽಗ್ನಯೋ ಯಾಂಶ್ಚ ಪುಷ್ಯಂತಿ ಯಾವಂತೋ ಯೇ ಪಚಂತಿ ಯಾನ್ ||**
**ರಸಾದೀನಾಂ ಕ್ರಮೋತ್ಪತ್ತಿರ್ಮಲಾನಾಂ ತೇಭ್ಯ ಏವ ಚ ||೨೪೬||**

**ವೃಷ್ಯಾಣಾಮಾಶುಕೃದ್ಧೇತುರ್ಧಾತುಕಾಲೋದ್ಭವಕ್ರಮಃ ||**
**ರೋಗೈಕದೇಶಕೃದ್ಧೇತುರಾಂತರಾಗ್ನಿರ್ಯಥಾಧಿಕಃ ||೨೪೭||**

**ಪ್ರದುಷ್ಯತಿ ಯಥಾ ದುಷ್ಟೋ ಯಾನ್ ರೋಗಾಞ್ ಜನಯತ್ಯಪಿ||**
**ಗ್ರಹಣೀ ಯಾ ಸಮಾಸಾಚ್ಚ ಗ್ರಹಣೀದೋಷಲಕ್ಷಣಮ್ ||೨೪೮||**

**ಪೂರ್ವರೂಪಂ ಪೃಥಕ್ ಚಾಪಿ ವ್ಯಞ್ಜನಂ ಸಚಿಕಿತ್ಸಿತಮ್ ||**

ಚತುರ್ವಿಧಸ್ಯ ನಿರ್ದಿಷ್ಟಾ ತಥೈವಾವಸ್ಥಿಕೀ ಕ್ರಿಯಾ ॥೨೪೯॥

ಜಾಯತೇ ಚ ಯಥಾತ್ಯಗ್ನಿರ್ಯಚ್ಚ ತಸ್ಯ ಚಿಕಿತ್ಸಿತಮ್ ॥
ತದುಕ್ತವಾನಶೇಷೇಣ ಗ್ರಹಣೀದೋಷಿಕೇ ಮುನಿಃ ॥೨೫೦॥

**ಅರ್ಥ:**— ಜಠರಾಗ್ನಿಯ ಗುಣಗಳು (ಆಯುರ್ವರ್ಣ ಬಲಗಳ ಉತ್ಪಾದನ ಶ್ಲೋ. ೨) ಅದು ದೇಹವನ್ನು ಹೇಗೆ (ಅನ್ನವನ್ನು ಪಚನ ಮಾಡಿ ರಸಾದಿ ಹುಟ್ಟಿಸಿ ಶ್ಲೋ. ೪) ಧಾರಣಮಾಡುತ್ತದೆ. ಅನ್ನವು ಹೇಗೆ ಪಚನವಾಗುತ್ತದೆ. ಆಹಾರವು ಏನನ್ನು ಮಾಡುತ್ತದೆ. ॥೨೪೫॥ (ಇಂದ್ರಿಯಾದಿಗಳ ತರ್ಪಣ ಶ್ಲೋ. ೧೧) ಯಾವ ಅಗ್ನಿಗಳು ಯಾವ ಗುಣಗಳನ್ನು ಪೋಷಿಸುತ್ತವೆ; (ಪಂಚಭೂತಾಗ್ನಿಗಳು ತಮ್ಮ ತಮ್ಮ ಗುಣಗಳನ್ನು ಪೋಷಿಸುತ್ತವೆ ಶ್ಲೋ. ೧೨) ಅಗ್ನಿಗಳು ಎಷ್ಟು (ಏಳು ಧಾತ್ವಗ್ನಿ. ಶ್ಲೋ. ೧೪) ಅವು ಏನನ್ನು ಪಚನಮಾಡುವವು (ಸಪ್ತಧಾತುಗಳನ್ನು. ಶ್ಲೋ. ೧೪) ರಸಾದಿಧಾತುಗಳ ಉತ್ಪತ್ತಿಯು ಕ್ರಮದಿಂದ ಹೇಗೆ ಆಗುತ್ತದೆ. ॥೨೪೬॥ ವೃಷ್ಯಾದಿ ದ್ರವ್ಯಗಳು ಕಾರ್ಯವನ್ನು ತೀವ್ರವಾಗಿ ಮಾಡುವ ಕಾರಣವು (ಪ್ರಭಾವ. ಶ್ಲೋ. ೧೯) ಯಾವದು? ರಸಧಾತುವು ಶುಕ್ರವಾಗಲು (ಆರು ದಿವಸ ಶ್ಲೋ. ೨೦) ಎಷ್ಟು ಕಾಲ ಬೇಕಾಗುವದು. ಮತ್ತು ಅದರ ಕ್ರಮವು ಹೇಗೆ? (ರಸದಿಂದ ರಕ್ತ ರಕ್ತದಿಂದ ಮಾಂಸ ಇತ್ಯಾದಿ ಶ್ಲೋ. ೨೭) ಏಕದೇಶದಲ್ಲಿ ರೋಗವಾಗಲು ಕಾರಣ (ರಸವಹ ಸ್ರೋತಸ್ಸಿನ ವೈಗುಣ್ಯ ಶ್ಲೋ. ೩೬) ಜಠರಾಗ್ನಿಯು ಶ್ರೇಷ್ಠವೇಕೆ ॥೨೪೭॥ (ಉಳಿದ ಅಗ್ನಿಗಳ ವೃದ್ಧಿಕ್ಷಯಗಳಿಗೆ ಇದು ಕಾರಣವಾಗಿದೆ ಶ್ಲೋ. ೩೮) ಅಗ್ನಿಯು ಹೇಗೆ ದುಷ್ಟವಾಗುತ್ತದೆ (ಅಜೀರ್ಣಾದಿಗಳಿಂದ. ಶ್ಲೋ. ೪೧) ಯಾವ ರೋಗಗಳನ್ನುಂಟುಮಾಡುತ್ತದೆ. (ದಾಹ ತೃಷ್ಣಾ ಇತ್ಯಾದಿ ಶ್ಲೋ. ೪೬) ಗ್ರಹಣೀ ರೋಗವು ಯಾವದು (ಪಕ್ವ ಅಪಕ್ವ ಮಲಬೀಳುವದು. ಶ್ಲೋ. ೫೧) ಸಂಕ್ಷೇಪದಿಂದ ಗ್ರಹಣೀ ದೋಷದ ಲಕ್ಷಣವು ॥೨೪೮॥ ಯಾವದು (ಗಟ್ಟಿ ಅಥವಾ ತೆಳ್ಳಗೆ ಮಲಬೀಳುವದು ಶ್ಲೋ. ೫೨) ಅದರ ಪೂರ್ವರೂಪ (ತೃಷ್ಣಾ ಆಲಸ್ಯ ಬಲಕ್ಷಯ ಇತ್ಯಾದಿ ಶ್ಲೋ. ೫೪) ಇವುಗಳ ಭೇದಗಳು ಬೇರೆ ಬೇರೆ ಲಕ್ಷಣ, ನಾಲ್ಕು ಪ್ರಕಾರದ ಅವುಗಳ ಚಿಕಿತ್ಸೆ, ಆಯಾ ಅವಸ್ಥೆಯಲ್ಲಿಯ ಚಿಕಿತ್ಸೆ (ಶ್ಲೋ. ೨೦೫) ಅತ್ಯಗ್ನಿಯ ಕಾರಣ (ಶ್ಲೋ. ೨೧೫)

ಅದರ ಚಿಕಿತ್ಸೆ (ಶ್ಲೋ ೨೨೨) ಇವನ್ನೆಲ್ಲ ಈ ಗ್ರಹಣೀದೋಷಾಧ್ಯಾಯದಲಿ ಆತ್ರೇಯ ಋಷಿಗಳು ಹೇಳಿದರು. (೨೫೦)

**ಇತ್ಯಗ್ನಿವೇಶಕೃತೇ ತಂತ್ರೇ ದೃಢಬಲಪ್ರತಿಸಂಸ್ಕೃತೇ ಚಿಕಿತ್ಸಿತಸ್ಥಾನೇ ಗ್ರಹಣೀದೋಷಚಿಕಿತ್ಸಿತಂ ನಾಮ ಪಂಚದಶೋಽಧ್ಯಾಯಃ॥**

ಈ ಪ್ರಕಾರ ಅಗ್ನಿವೇಶರಿಂದ ರಚಿಸಲ್ಪಟ್ಟು ದೃಢಬಲರಿಂದ ಸಂಸ್ಕಾರ ಪಡೆದ ಚರಕಸಂಹಿತೆಯು ಚಿಕಿತ್ಸಾಸ್ಥಾನದಲ್ಲಿ 'ಗ್ರಹಣೀ ದೋಷ ಚಿಕಿತ್ಸೆ' ಎಂಬ ಹದಿನೈದನೇ ಅಧ್ಯಾಯವು ಮುಗಿದುದು.

ಶ್ರೀಮದಾದ್ಯಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ ಚರಕ 'ಚಿಕಿತ್ಸಾ ಬೋಧಿನೀ' ಎಂಬ ಚರಕಸಂಹಿತೆಯ ಟಿಪ್ಪಣಿಯಲ್ಲಿ ಚಿಕಿತ್ಸಾಸ್ಥಾನದಲ್ಲಿ 'ಗ್ರಹಣೀದೋಷ ಚಿಕಿತ್ಸೆ' ಎಂಬ ಹದಿನೈದನೆಯ ಅಧ್ಯಾಯವು ಮುಗಿದುದು.



# ಹದಿನಾರನೇಯ ಅಧ್ಯಾಯ

## (ಪಾಂಡುರೋಗ ಚಿಕಿತ್ಸೆ)

ಗ್ರಹಣೀ ಚಿಕಿತ್ಸೆಯಿಂದ ಅಗ್ನಿಯು ಪ್ರಬಲವಾಗಿ ಪಾಂಡುರೋಗವಾಗುವ ಸಂಭವವಿರುವದರಿಂದ ಗ್ರಹಣಿಯ ನಂತರ ಪಾಂಡುರೋಗಚಿಕಿತ್ಸೆಯನ್ನು ಹೇಳುತ್ತಾರೆ.

ಅಥಾತಃ ಪಾಂಡುರೋಗಚಿಕಿತ್ಸಿತಂ ವ್ಯಾಖ್ಯಾಸ್ಯಾಮಃ ||

ಅರ್ಥಃ— ಇನ್ನು ಮೇಲೆ ಪಾಂಡುರೋಗ ಚಿಕಿತ್ಸೆಯನ್ನು ಹೇಳುವೆವು.

ಇತಿ ಹ ಸ್ಮಾಹ ಭಗವಾನಾತ್ರೇಯಃ ||೧||

ಅರ್ಥಃ— ಪೂಜ್ಯರಾದ ಆತ್ರೇಯರು ಹೀಗೆ ಹೇಳಿದರು. (೧)

ಪಾಂಡುರೋಗಾಃ ಸ್ಮೃತಾಃ ಪಞ್ಚ ವಾತಪಿತ್ತಕಫೈಸ್ತ್ರಯಃ ||
ಚತುರ್ಥಃ ಸನ್ನಿಪಾತೇನ ಪಞ್ಚಮೋ ಭಕ್ಷಣಾನ್ಮೃದಃ ||೨||

ಅರ್ಥಃ— ಪಾಂಡುರೋಗಗಳು ೫. ವಾತ ಪಿತ್ತ ಕಫಗಳಿಂದ ೩. ಮತ್ತು ಸನ್ನಿಪಾತದಿಂದ ೧ ಮಣ್ಣು ತಿನ್ನುವದರಿಂದ ೧ (೨)

ಸಂಪ್ರಾಪ್ತಿಯನ್ನು ಹೇಳುತ್ತಾರೆ.

ದೋಷಾಃ ಪಿತ್ತಪ್ರಧಾನಾಶ್ಚ ಯಸ್ಯ ಕುಪ್ಯಂತಿ ಧಾತುಷು ||
ಶೈಥಿಲ್ಯಂ ತಸ್ಯ ಧಾತೂನಾಂ ಗೌರವಞ್ಚೋಪಜಾಯತೇ ||೩||

ತತೋ ವರ್ಣಬಲಸ್ನೇಹಾ ಯೇ ಚಾನ್ಯೇಪ್ಯೋಜಸೋ ಗುಣಾಃ ||
ವ್ರಜಂತಿ ಕ್ಷಯಮತ್ಯರ್ಥಂ ದೋಷದೂಷ್ಯಪ್ರದೂಷಣಾತ್ ||೪||

ಸೋಽಲ್ಪರಕ್ತೋಽಲ್ಪಮೇದಸ್ಕೋ ನಿಃಸಾರಃ ಶಿಥಿಲೇಂದ್ರಿಯಃ ||
ವೈವರ್ಣ್ಯಂ ಭಜತೇ ತಸ್ಯ ಹೇತುಂ ಶೃಣು ಸಲಕ್ಷಣಮ್ ||೫||

ಅರ್ಥಃ—ಪಿತ್ತಾಧಿಕದೋಷಗಳು ಯಾವನ ಧಾತುಗಳಲ್ಲಿ ಕುಪಿತವಾಗು ವವೋ ಅವನ ಧಾತುಗಳು ಶಿಥಿಲ ಮತ್ತು ಜಡವಾಗುವವು. ಆಮೇಲೆ ||೩||

ವರ್ಣ, ಬಲ, ಸ್ನೇಹಗಳು ಮತ್ತು ಓಜಸ್ಸಿನ ಇತರ ಗುಣಗಳೂ ಬಹಳವಾಗಿ ನಷ್ಟವಾಗುವವು. ಹೀಗೆ ದೋಷ ದೂಷ್ಯಗಳು ಕೆಡುವದರಿಂದ ||೪|| ರಕ್ತ, ಮೇದಬಲಗಳು ಕಡಿಮೆಯಾಗಿ ಇಂದ್ರಿಯಗಳು ಶಿಥಿಲವಾಗಿ ಅವನ ಬಣ್ಣವು ಕೆಡುವದು. ಅದರ ಕಾರಣ ಮತ್ತು ಲಕ್ಷಣವನ್ನು ಹೇಳುತ್ತೇವೆ; ಕೇಳಿರಿ (೫)

ಕಾರಣಗಳನ್ನು ಹೇಳುತ್ತಾರೆ.

ಕ್ಷಾರಾಮ್ಲಲವಣಾತ್ಯುಷ್ಣವಿರುದ್ಧಾಹಾರಸೇವನಾತ್ ||
ನಿಷ್ಪಾವಮಾಷಪಿಣ್ಯಾಕತಿಲತೈಲನಿಷೇವಣಾತ್ ||೬||

ವಿದಗ್ಧೇಽನ್ನೇ ದಿವಾಸ್ವಪ್ನಾದ್ ವ್ಯಾಯಾಮಾನ್ಮೈಥುನಾತ್ತಥಾ ||
ಪ್ರತಿಕರ್ಮರ್ತುವೈಷಮ್ಯಾದ್ ವೇಗಾನಾಞ್ಚ ವಿಧಾರಣಾತ್ ||೭||

ಕಾಮಚಿಂತಾಭಯಕ್ರೋಧಶೋಕೋಪಹತಚೇತಸಃ ||
ಸಮುದೀರ್ಣಂ ಯಥಾ ಪಿತ್ತಂ ಹೃದಯೇ ಸಮವಸ್ಥಿತಮ್ ||೮||

ವಾಯುನಾ ಬಲಿನಾ ಕ್ಷಿಪ್ತಂ ಸಂಪ್ರಾಪ್ಯ ಧಮನೀರ್ದಶ ||
ಪ್ರಪನ್ನಂ ಕೇವಲಂ ದೇಹಂ ತ್ವಙ್ಮಾಂಸಾಂತರಸಂಶ್ರಿತಮ್ ||೯||

ಪ್ರದೂಷ್ಯ ಕಫವಾತಾಸೃಕ್ತ್ವಙ್ಮಾಂಸಾನಿ ಕರೋತಿ ತತ್ ||
ಪಾಂಡುಹಾರಿದ್ರಹರಿತಾನ್ ವರ್ಣಾಂಶ್ಚ ವಿವಿಧಾಂಸ್ತ್ವಚಿ ||೧೦||

ಸ ಪಾಂಡುರೋಗ ಇತ್ಯುಕ್ತಃ ||೧೧||

**ಅರ್ಥ:**— ಕ್ಷಾರ, ಅಮ್ಲ, ಲವಣ, ಅತ್ಯುಷ್ಣ, ವಿರುದ್ಧ ಆಹಾರದ ಸೇವನೆಯಿಂದಲೂ ಅವರೆ ಉದ್ದು, ಎಳ್ಳುಹಿಂಡಿ, ಎಳ್ಳೆಣ್ಣೆಗಳ ಸೇವನೆಯಿಂದಲೂ ||೬|| ಅನ್ನದ ವಿದಾಹವಾಗಿರಲು, ಹಗಲುನಿದ್ರೆ, ವ್ಯಾಯಾಮ ಮೈಥುನಗಳಿಂದ ಪಂಚಕರ್ಮಗಳಲ್ಲಿ ಆಗುವ ತಪ್ಪಿನಿಂದ ಮತ್ತು ಋತುವೈಷಮ್ಯದಿಂದ ವೇಗಧಾರಣಗಳಿಂದ ||೭|| ಕಾಮ-ಚಿಂತೆ-ಅಂಜಿಕೆ-ಸಿಟ್ಟು ದುಃಖಗಳಿಂದ ಮನಸ್ಸು ಪೀಡಿತವಾಗುವದರಿಂದ, ಹೆಚ್ಚಾದ ಹೃದಯದಲ್ಲಿರುವ ಪಿತ್ತವು ||೮|| ಪ್ರಬಲವಾದ ವಾಯುವಿನಿಂದ ಚಲ್ಲಲ್ಪಟ್ಟು, ಹತ್ತು ಧಮನಿಗಳ ದ್ವಾರಾ ತ್ವಚೆ ಮತ್ತು ಮಾಂಸಗಳ ನಡುವಿನ ದೇಹದಲ್ಲಿ ಸೇರಿ, ||೯|| ಕಫ-ವಾತ-ರಕ್ತ-ತ್ವಚೆ-ಮಾಂಸಗಳನ್ನು ಕೆಡಿಸಿ, ತ್ವಚದ

ಬಣ್ಣಗಳನ್ನು ಕಳೆದು, ಬಿಳೀ ಹಳದಿ ಹಸರು ಮೊದಲಾದ ವಿವಿಧ ಬಣ್ಣಗಳನ್ನು ಉಂಟುಮಾಡುತ್ತದೆ. ||೧೦|| ಅದಕ್ಕೆ ಪಾಂಡುರೋಗ ಎನ್ನುತ್ತಾರೆ. (೧೦೩)

ಪೂರ್ವರೂಪವನ್ನು ಹೇಳುತ್ತಾರೆ.

ತಸ್ಯ ಲಿಙ್ಗಂ ಭವಿಷ್ಯತಃ ||
ಹೃದಯಸ್ಪಂದನಂ ರೌಕ್ಷ್ಯಂ ಸ್ವೇದಾಭಾವಃ ಶ್ರಮಸ್ತಥಾ ||೧೧||

**ಅರ್ಥಃ**— ಎದೆಹಾರೋಣ, ರುಕ್ಷತೆ, ಬೆವರು ಬರದೆ ಇರೋಣ, ಮತ್ತು ಶ್ರಮ ಇವು ಅದರ ಪೂರ್ವರೂಪವು. (೧೧)

ಸಾಮಾನ್ಯ ಲಕ್ಷಣವನ್ನು ಹೇಳುತ್ತಾರೆ.

ಸಂಭೂತೇಽಸ್ಮಿನ್ ಭವೇತ್ ಸರ್ವಃ ಕರ್ಣಕ್ಷ್ವೇಡೀ ಹತಾನಲಃ ||
ದುರ್ಬಲಃ ಸದನೋಽನ್ನದ್ವಿಟ್ ಶ್ರಮಭ್ರಮನಿಪೀಡಿತಃ ||೧೨||

ಗಾತ್ರಶೂಲಜ್ವರಶ್ವಾಸ ಗೌರವಾರುಚಿಮಾನ್ನರಃ ||
ಮೃದಿತೈರಿವ ಗಾತ್ರೈಶ್ಚ ಪೀಡಿತೋನ್ಮಥಿತೈರಿವ ||೧೩||

ಶೂನಾಕ್ಷಿಕೂಟೋ ಹರಿತಃ ಶೀರ್ಣರೋಮಾ ಹತಪ್ರಭಃ ||
ಕೋಪನಃ ಶಿಶಿರದ್ವೇಷೀ ನಿದ್ರಾಲುಃ ಷ್ಠೀವನೋಽಲ್ಪವಾಕ್ ||೧೪||

ಪಿಂಡಿಕೋದ್ವೇಷ್ಟಕಟ್ಯೂರುಪಾದರುಕ್ ಸದನಾನಿ ಚ ||
ಸ್ಯುರಧ್ವಾರೋಹಣಾಯಾಸೈರ್ವಿಶೇಷಸ್ತಸ್ಯ ವಕ್ಷ್ಯತೇ ||೧೫||

**ಅರ್ಥಃ**— ಇದು ಉಂಟಾಗಲು ಕಿವಿಯಲ್ಲಿ ಶಬ್ದವಾಗುವದು. ಅಗ್ನಿಮಾಂದ್ಯ ದೌರ್ಬಲ್ಯ ನಿತ್ರಾಣ, ಅನ್ನದ್ವೇಷ, ಶ್ರಮ, ಭ್ರಮ ||೧೨|| ಶೂಲ ಜ್ವರ, ಶ್ವಾಸ, ಜಡತ್ವ, ಅರುಚಿಗಳುಂಟಾಗುವವು. ಅವಯವಗಳು ಮೆತ್ತಗಾಗಿ ನೋಯುವವು. ಬಡಿದಂತೆ ವೇದನೆಯಾಗುವದು ||೧೩|| ಕಣ್ಣು ಬಾಯುವದು, ಹಸರುಬಣ್ಣ ಬರುವದು. ರೋಮಾಂಚಗಳು ಉದರುವವು, ಕಾಂತಿಯು ಹೋಗುವದು, ಸಿಟ್ಟು ಬರುವದು, ಶೀತವನ್ನು ದ್ವೇಷಿ

ಷುವನು, ನಿದ್ದೆ ಬಹಳ ಬರುವದು. ಆಗಾಗ್ಗೆ ಉಗುಳುವನು; ಮಾತು ಸ್ವಲ್ಪ ಆಡುವನು ||೧೪|| (ಸ್ವಲ್ಪ) ಹಾದಿನಡೆಯೋಣ, ಏರೋಣ ಇವುಗಳಿಂದ ಪಿಂಡರಿಗಳು, ಟೊಂಕ-ತೊಡೆ-ಕಾಲುಗಳು ನೋಯುವವು. ಮತ್ತು ನಿತ್ರಾಣವಾಗುವವು. ಇವು ಎಲ್ಲ ಪಾಂಡುರೋಗದ ಸಾಮಾನ್ಯ ಲಕ್ಷಣಗಳು ವಿಶಿಷ್ಟ ಪಾಂಡುರೋಗದ ಲಕ್ಷಣವನ್ನು ಮುಂದೆ ಹೇಳುತ್ತೇವೆ. ||೧೫||

**ವಾತಪಾಂಡುರೋಗದ ಕಾರಣ ಲಕ್ಷಣಗಳನ್ನು ಹೇಳುತ್ತಾರೆ.**

**ಆಹಾರೈರುಪಚಾರೈಶ್ಚ ವಾತಲೈಃ ಕುಪಿತೋಽನಿಲಃ ||**
**ಜನಯೇತ್ ಕೃಚ್ಛ್ರಪಾಂಡುತ್ವಂ ಪರುಕ್ಷಾರುಣಭಾಸತಾಮ್ ||೧೬||**

**ಅಙ್ಗಮರ್ದಂ ಜ್ವರಂ ತೋದಂ ಕಂಪಂ ಪಾರ್ಶ್ವಶಿರೋರುಜಮ್ ||**
**ವರ್ಚಃಶೋಷಾಸ್ಯವೈರಸ್ಯಂ ಶೋಥಾನಾಹಬಲಕ್ಷಯಾನ್ ||೧೭||**

**ಅರ್ಥ:**— ವಾತಕಾರಕ ಆಹಾರ ಮತ್ತು ಉಪಚಾರಗಳಿಂದ ಕುಪಿತವಾದ ವಾಯುವು ಕಷ್ಟಸಾಧ್ಯವಾದ ಪಾಂಡುರೋಗವನ್ನು ಉಂಟುಮಾಡುತ್ತದೆ. ಅದರಲ್ಲಿ ಶರೀರವು ರುಕ್ಷ, ನಸುಗೆಂಪು ಆಗುವದು. ||೧೬|| ಮೈನೋವು, ಜ್ವರ, ಚುಚ್ಚುನಿಕೆ, ಕಂಪ, ಪಾರ್ಶ್ವತಲೆಗಳಲ್ಲಿ ಶೂಲಿ, ಮಲ ಒಣಗೋಣ, ಬಾಯಿ ಹೊಲಸಾಗೋಣ, ಬಾವು, ಹೊಟ್ಟೆಯುಬ್ಬು, ಬಲ ನಾಶಗಳಿರುವವು. (೧೭)

**ಪಿತ್ತಪಾಂಡುರೋಗದ ಕಾರಣ ಲಕ್ಷಣಗಳನ್ನು ಹೇಳುತ್ತಾರೆ.**

**ಪಿತ್ತಲಸ್ಯಾಚಿತಂ ಪಿತ್ತಂ ಯಥೋಕ್ತೈಃ ಸ್ವೈಃ ಪ್ರಕೋಪಣೈಃ ||**
**ದೂಷಯಿತ್ವಾ ತು ರಕ್ತಾದೀನ್ ಪಾಂಡುರೋಗಾಯ ಕಲ್ಪತೇ ||೧೮||**

**ಸ ಪೀತೋ ಹರಿತಾಭೋ ವಾ ಜ್ವರದಾಹಸಮನ್ವಿತಃ ||**
**ಛರ್ದಿಮೂರ್ಛಾಪಿಪಾಸಾರ್ತಃ ಪೀತಮೂತ್ರಶಕೃನ್ನರಃ ||೧೯||**

**ಸ್ವೇದನಃ ಶೀತಕಾಮಶ್ಚ ನ ಚಾನ್ನಮಭಿನಂದತಿ ||**
**ಕಟುಕಾಸ್ಯೋ ನ ಚಾಸ್ಯೋಷ್ಣಮುಪಶೇತೇಽಮ್ಲಮೇವ ಚ ||೨೦||**

**ಉದ್ಗಾರೋಽಮ್ಲೋ ವಿದಾಹಶ್ಚ ವಿದಗ್ಧಾನ್ನಸ್ಯ ಜಾಯತೇ ||**
**ದೌರ್ಬಲ್ಯಂ ಭಿನ್ನವರ್ಚಸ್ತ್ವಂ ದೌರ್ಗಂಧ್ಯಂ ತಮ ಏವ ಚ ||೨೦||**

**ಅರ್ಥ:—** ಮೊದಲೇ ಪಿತ್ತವು ಹೆಚ್ಚಾಗಿ ಉಳ್ಳವನು ಹಿಂದೆ ಹೇಳಿದ ಪಿತ್ತಪ್ರಕೋಪಕ ದ್ರವ್ಯಗಳನ್ನು ಸೇವಿಸುವದರಿಂದ ಪಿತ್ತವು ಸಂಚಿತವಾಗಿ ಅವನ ರಕ್ತಾದಿ ಧಾತುಗಳನ್ನು ದೂಷಿಸಿ ಪಾಂಡುರೋಗವನ್ನುಂಟುಮಾಡುತ್ತದೆ. ||೧೮|| ಅವನ ಬಣ್ಣವು ಹಳದಿ ಅಥವಾ ಹಸರು ಆಗುವದು ಜ್ವರ, ದಾಹ, ವಾಂತಿ, ಮೂರ್ಛೆ, ನೀರಡಿಕೆ, ಹಳದಿವರ್ಣದ ಮಲಮೂತ್ರಗಳು ಉಂಟಾಗುವವು. ||೧೯|| ಬೆವರು ಬಹಳ ಬರುವದು. ಶೀತದ ಅಪೇಕ್ಷೆಯಾಗುವದು. ಅನ್ನಬೇಡವಾಗುವದು. ಬಾಯಿ ಕಹಿಯಾಗುವದು. ಹುಳಿ ಮತ್ತು ಉಷ್ಣಪದಾರ್ಥಗಳಿಂದ ಬೇನೆ ಹೆಚ್ಚಾಗುವದು.||೨೦|| ವಿದಗ್ಧ ಅನ್ನದ ಹುಳಿತೇಗು ಬರುವದು. ದೌರ್ಬಲ್ಯ, ಅತಿಸಾರ, ದುರ್ಗಂಧ ಕಣ್ಣಿಗೆ ಕತ್ತಲೆಗಳು ಉಂಟಾಗುವವು. (೨೧)

**ಕಫ ಪಾಂಡುರೋಗದ ಕಾರಣ ಲಕ್ಷಣಗಳನ್ನು ಹೇಳುತ್ತಾರೆ.**

**ವಿವೃದ್ಧಃ ಶ್ಲೇಷ್ಮಲೈಃ ಶ್ಲೇಷ್ಮಾ ಪಾಂಡುರೋಗಂ ಸ ಪೂರ್ವವತ್||**
**ಕರೋತಿ ಗೌರವಂ ತಂದ್ರಾಂ ಛರ್ದಿಂ ಶ್ವೇತಾವಭಾಸತಾಮ್ ||೨೨||**

**ಪ್ರಸೇಕಂ ಲೋಮಹರ್ಷಂಚ ಸಾದಂ ಮೂರ್ಚ್ಛಾಂ ಭ್ರಮಂ ಕ್ಲಮಮ್ ||**
**ಶ್ವಾಸಂ ಕಾಸಂ ತಥಾಲಸ್ಯಮರುಚಿಂ ವಾಕ್ ಸ್ವರಗ್ರಹಮ್ ||೨೩||**

**ಮೂತ್ರಾಕ್ಷಿವರ್ಚಸಾಂ ಶೌಕ್ಲ್ಯಂ ಕಟುರುಕ್ಷೋಷ್ಣಕಾಮತಾಮ್ ||**
**ಶ್ವಯಥುಂ ಲವಣಾಸ್ಯತ್ವಮಿತಿ ಪಾಂಡ್ವಾಮಯಃ ಕಫಾತ್ ||೨೪||**

**ಅರ್ಥ:—** ಹಿಂದಿನಂತೆಯೇ ಕಫಕಾರಕ ಆಹಾರಗಳಿಂದ ಕಫವೃದ್ಧಿ, ಪಾಂಡುರೋಗವನ್ನುಂಟುಮಾಡುತ್ತದೆ. ಜಡತ್ವ, ಆಲಸ್ಯ,ವಾಂತಿ ಶ್ವೇತಬಿಳೀ ಬಣ್ಣ, ||೨೨|| ಬಾಯಿಗೆ ನೀರು ಬಿಡೋಣ, ರೋಮಾಂಚ ನಿಶ್ರಾಣ, ಮೂರ್ಛೆ, ಭ್ರಮ, ದಣುವು, ಶ್ವಾಸ, ಕಾಸ, ಆಲಸ್ಯ, ಅರುಚಿ ಶಬ್ದ ಮತ್ತು ಸ್ವರಗಳು ಹಿಡಿದುಕೊಳ್ಳೋಣ, ||೨೩|| ಮಲಮೂತ್ರ

ಕಣ್ಣುಗಳು ಬೆಳ್ಳಗಾಗೋಣ, ಕಾರ ರುಕ್ಷ ಹುಳಿಪದಾರ್ಥಗಳು ಬೇಕಾಗೋಣ ಬಾವು, ಬಾಯಿ ಉಪ್ಪಾಗೋಣ ಇವು ಕಫಪಾಂಡುರೋಗದ ಲಕ್ಷಣಗಳು. (೨೪)

ಸನ್ನಿಪಾತ ಪಾಂಡುರೋಗದ ಕಾರಣ ಲಕ್ಷಣಗಳನ್ನು ಹೇಳುತ್ತಾರೆ.

**ಸರ್ವಾನ್ನಸೇವಿನಃ ಸರ್ವದೋಷಾ ದುಷ್ಟಾಸ್ತ್ರಿದೋಷಜಮ್ ॥**
**ತ್ರಿದೋಷಲಿಙ್ಗಂ ಕುರ್ವಂತಿ ಪಾಂಡುರೋಗಂ ಸುದುಃಸಹಮ್॥೨೫॥**

**ಅರ್ಥಃ—** ಮೂರೂ ದೋಷಗಳನ್ನುಂಟುಮಾಡುವ ಆಹಾರವನು ಸೇವಿಸುವವನ ಎಲ್ಲ ದೋಷಗಳೂ ದುಷ್ಟವಾಗಿ ಮೂರೂ ದೋಷಗಳ ಲಕ್ಷಣಗಳುಳ್ಳ, ಸಹಿಸಲು ಕಠಿಣವಾದ ಸನ್ನಿಪಾತಜ ಪಾಂಡುರೋಗವನ್ನುಂಟು ಮಾಡುತ್ತವೆ. (೨೫)

ಮೃತ್ತಿಕಾ ಪಾಂಡುರೋಗದ ಕಾರಣ ಲಕ್ಷಣವನ್ನು ಹೇಳುತ್ತಾರೆ.

**ಮೃತ್ತಿಕಾದನಶೀಲಸ್ಯ ಕುಪ್ಯತ್ಯನ್ಯತಮೋ ಮಲಃ ॥**
**ಕಷಾಯಾ ಮಾರುತಂ ಪಿತ್ತಮೂಷರಾ ಮಧುರಾ ಕಫಮ್ ॥೨೬॥**

**ಕೋಪಯೇನ್ಮೃದ್ರಸಾದೀಂಶ್ಚ ರೌಕ್ಷ್ಯಾದ್ಭುಕ್ತಞ್ಚ ರುಕ್ಷಯೇತ್ ॥**
**ಪೂರಯತ್ಯವಿಪಕ್ವೈವ ಸ್ರೋತಾಂಸಿ ನಿರುಣದ್ಧ್ಯಪಿ ॥೨೭॥**

**ಇಂದ್ರಿಯಾಣಾಂ ಬಲಂ ಹತ್ವಾ ತೇಜೋ ವೀರ್ಯೌಜಸೀ ತಥಾ ॥**
**ಪಾಂಡುರೋಗಂ ಕರೋತ್ಯಾಶು ಬಲವರ್ಣಾಗ್ನಿನಾಶನಮ್ ॥೨೮॥**

**ಶೂನಾಕ್ಷಿಕೂಟಗಂಡಭ್ರೂಃ ಶೂನಪನ್ನಾಭಿಮೇಹನಃ ॥**
**ಕ್ರಿಮಿಕೋಷ್ಠೋಽತಿಸಾರ್ಯೇತ ಮಲಂ ಸಾಸೃಕ್‌ಕಫಾನ್ವಿತಮ್॥೨೯॥**

**ಅರ್ಥಃ—** ಮಣ್ಣು ತಿನ್ನುವ ಚಟವುಳ್ಳವನ ಯಾವುದಾದರೊಂದು ದೋಷವು ಕುಪಿತವಾಗುವದು. ಒಗರು ಮಣ್ಣು ವಾತವನ್ನೂ ಉಪ್ಪು ಮಣ್ಣು ಪಿತ್ತವನ್ನೂ ಸಿಹಿಮಣ್ಣು ಕಫವನ್ನೂ ಕುಪಿತಮಾಡುವದು.॥೨೬॥ ಮಣ್ಣು ರಸಾದಿಧಾತುಗಳನ್ನು ಕೆಡಿಸಿ ತನ್ನ ರುಕ್ಷತೆಯಿಂದ ಉಂಡ ಅನ್ನ

ವನ್ನು ರೂಕ್ಷಮಾಡುವದು. ಪಚನವಾಗದೆ ಸ್ರೋತಸ್ಸುಗಳನ್ನು ಸೇರಿ ಅವುಗಳಲ್ಲಿ ತಡೆಯನ್ನುಂಟು ಮಾಡುವದು. ॥೨೭॥ ಇಂದ್ರಿಯಗಳ ಬಲ, ತೇಜ, ವೀರ್ಯ ಮತ್ತು ಓಜಸ್ಸುಗಳನ್ನು ನಾಶಮಾಡಿ ಬಲ, ವರ್ಣ, ಅಗ್ನಿಗಳನಾಶಕ ಪಾಂಡುರೋಗವನ್ನುಂಟು ಮಾಡುವದು. ॥೨೮॥ ಅವನ ಕಣ್ಣು, ಗಲ್ಲ, ಹುಬ್ಬು, ಕಾಲು, ಹೊಕ್ಕಳ, ಶಿಶ್ನಗಳು ಬಾಯುವವು. ಹೊಟ್ಟೆಯಲ್ಲಿ ಜಂತುಗಳಾಗುವವು. ರಕ್ತ ಮತ್ತು ಕಫದಿಂದ ಕೂಡಿದ ಮಲವು ಬೀಳುವದು. (೨೯)

ಅಸಾಧ್ಯ ಲಕ್ಷಣವನ್ನು ಹೇಳುತ್ತಾರೆ.

ಪಾಂಡುರೋಗಶ್ಚಿರೋತ್ಪನ್ನಃ ಖರೀಭೂತೋ ನ ಸಿಧ್ಯತಿ ॥
ಕಾಲಪ್ರಕರ್ಷಾಚ್ಛೂನೋ ನಾ ಯೋ ವಾ ಪೀತಾನಿ ಪಶ್ಯತಿ ॥೩೦॥

ಬದ್ಧಾಲ್ಪವಿಟ್ ಸಹರಿತಂ ಸಕಫಂ ಯೋಽತಿಸಾರ್ಯತೇ ॥
ದೀನಃ ಶ್ವೇತಾತಿದಿಗ್ಧಾಂಗಶ್ಛರ್ದಿಮೂರ್ಚ್ಛಾತೃಡನ್ವಿತಃ ॥೩೧॥

ಸ ನಾಸ್ತ್ಯಸೃಕ್ಕ್ಷಯಾದ್ಯಶ್ಚ ಪಾಂಡುಃ ಶ್ವೇತತ್ವಮಾಪ್ನುಯಾತ್ ॥
ಇತಿ ಪಂಚವಿಧಸ್ಯೋಕ್ತಂ ಪಾಂಡುರೋಗಸ್ಯ ಲಕ್ಷಣಮ್ ॥೩೨॥

ಅರ್ಥಃ— ಬಹಳ ದಿವಸಗಳ ವರೆಗೆ ಇದ್ದು ಬಿರುಸಾದ ಪಾಂಡುರೋಗವು ಸಾಧ್ಯವಾಗದು. ಅಥವಾ ಬಹಳದಿವಸ ಇರುವದರಿಂದ ಬಾವು ಬಂದು, ಎಲ್ಲ ಪದಾರ್ಥಗಳು ಯಾವನಿಗೆ ಹಳದಿ ಕಾಣುವವೋ ಅವನ ರೋಗವು ಸಾಧ್ಯವಾಗದು. ॥೩೦॥ ಯಾವನಿಗೆ ಗಟ್ಟಿ ಅಲ್ಪ ಹಸರು ಕಫಯುಕ್ತ ಮಲವು ಬೀಳುವದೋ ಮೈಯು ಬಿಳೀ ಮತ್ತು ಎಣ್ಣೆ ಹಚ್ಚಿದಂತೆ ಇರುವದೋ ವಾಂತಿ, ಮೂರ್ಛೆ, ನೀರಡಿಕೆಗಳಾಗುವವೋ ॥೩೧॥ ದೈನ್ಯವಿರುವದೋ ಅವನ ರೋಗವು ಅಸಾಧ್ಯವು. ರಕ್ತಕ್ಷಯದಿಂದ ಯಾವ ಪಾಂಡುರೋಗಿಯು ಬೆಳ್ಳಗಾಗುವನೋ ಅವನ ರೋಗವು ಅಸಾಧ್ಯವು. ಈ ಮೇರೆಗೆ ಐದು ಪಾಂಡುರೋಗಗಳ ಲಕ್ಷಣಗಳು ಹೇಳಲ್ಪಟ್ಟವು. (೩೨)

ಕಾಮಲೆಯ ಕಾರಣ ಲಕ್ಷಣಗಳನ್ನು ಹೇಳುತ್ತಾರೆ.

ಪಾಂಡುರೋಗೀ ತು ಯೋಽತ್ಯರ್ಥಂ ಪಿತ್ತಲಾನಿ ನಿಷೇವತೇ ॥

ತಸ್ಯ ಪಿತ್ತಮಸೃಙ್ಮಾಂಸಂ ದಗ್ಧ್ವಾ ರೋಗಾಯ ಕಲ್ಪತೇ ॥೩೩॥
ಹಾರಿದ್ರನೇತ್ರಃ ಸ ಭೃಶಂ ಹಾರಿದ್ರತ್ವಙ್ನಖಾನನಃ ॥
ರಕ್ತಪೀತಶಕೃನ್ಮೂತ್ರೋ ಭೇಕವರ್ಣೋ ಹತೇಂದ್ರಿಯಃ ॥೩೪॥
ದಾಹಾವಿಪಾಕದೌರ್ಬಲ್ಯಸದನಾರುಚಿಕರ್ಷಿತಃ ॥
ಕಾಮಲಾ ಬಹುಪಿತ್ತೈಷಾ ಕೋಷ್ಠಶಾಖಾಶ್ರಯಾ ಮತಾ ॥೩೫॥

**ಅರ್ಥ:—** ಪಾಂಡುರೋಗಿಯು ಅತ್ಯಂತ ಪಿತ್ತಕರ ದ್ರವ್ಯಗಳನ್ನು ತಿಂದರೆ ಅವನ ಪಿತ್ತವು ಹೆಚ್ಚಿ ರಕ್ತ ಮಾಂಸವನ್ನು ಸುಟ್ಟು, ಕಾಮಾಲೆ ಎಂಬ ರೋಗವನ್ನುಂಟು ಮಾಡುತ್ತದೆ. ॥೩೩॥ ಅವನ ಕಣ್ಣು, ತ್ವಚೆ, ಉಗುರು, ಮೋರೆಗಳು ಬಹಳ ಹಳದಿ ಆಗುವವು. ಮಲ ಮೂತ್ರಗಳೂ ಕೆಂಪು ಅಥವಾ ಹಳದಿ ಆಗುವವು. ಮಳೆಗಾಲದ ಕಪ್ಪೆಯಂತೆ ಬಣ್ಣ ಬರುವದು. ಇಂದ್ರಿಯಗಳ ಶಕ್ತಿಯು ಕುಗ್ಗುವದು. ॥೩೪॥ ದಾಹ, ಅಪಚನ, ದೌರ್ಬಲ್ಯ, ನಿತ್ರಾಣ, ಅರುಚಿಗಳುಂಟಾಗುವವು. ಈ ಕಾಮಾಲೆಯು ಆಮಾಶಯಾದಿ ಕೋಷ್ಠಗಳಲ್ಲಿಯೂ ರಕ್ತಾದಿ ಧಾತುಗಳಲ್ಲಿಯೂ ಸಂಚಿತವಾದ ಬಹಳ ಪಿತ್ತದಿಂದ ಉಂಟಾಗುತ್ತದೆ. ॥೩೫॥

ಕುಂಭಕಾಮಲೆಯನ್ನು ಹೇಳುತ್ತಾರೆ.

ಕಾಲಾಂತರಾತ್ಖರೀಭೂತಾ ಕೃಚ್ಛ್ರಾ ಸ್ಯಾತ್ ಕುಂಭಕಾಮಲಾ ॥
ಕೃಷ್ಣಪೀತಶಕೃನ್ಮೂತ್ರೋ ಭೃಶಂ ಶೂನಶ್ಚ ಮಾನವಃ ॥೩೬॥

**ಅರ್ಥ:—** ಕಾಲಾಂತರದಲ್ಲಿ ಕಾಮಾಲೆಯು ಬಿರುಸು ಆಗಿ, ಕಷ್ಟಸಾಧ್ಯವಾದ ಕುಂಭಕಾಮಾಲೆಯಾಗುವದು. ಅವನ ಮಲ ಮೂತ್ರ ಕಣ್ಣುಗಳು ಕರ್‍ರಗಾಗುವವು. ಬಹಳ ಬಾಯುವನು. (೩೬)

ಅಸಾಧ್ಯ ಲಕ್ಷಣವನ್ನು ಹೇಳುತ್ತಾರೆ.

ಸರಕ್ತಾಕ್ಷಿಮುಖಚ್ಛರ್ದಿವಿಣ್ಮೂತ್ರೋ ಯಶ್ಚ ತಾಮ್ಯತಿ
ದಾಹಾರುಚಿತೃಡಾನಾಹತಂದ್ರಾಮೋಹಸಮನ್ವಿತಃ ॥೩೭॥
ನಷ್ಟಾಗ್ನಿಸಂಜ್ಞಃ ಕ್ಷಿಪ್ರಂ ಹಿ ಕಾಮಲಾವಾನ್ ವಿಪದ್ಯತೇ ॥೩೭½॥

**ಅರ್ಥ:—** ಕಣ್ಣು, ಮೋರೆ, ಕಾಂತಿ, ಮಲಮೂತ್ರಗಳು ಕೆಂಪು ಇದ್ದು ಚಡಪಡಿಸುತ್ತಿರುವ, ಮತ್ತು ದಾಹ, ಅರುಚಿ, ನೀರಡಿಕೆ, ಹೊಟ್ಟೆ ಯುಬ್ಬು, ತಂದ್ರೆ, ಮೋಹ, ಅಗ್ನಿ ಸಂಜ್ಞಾನಾಶವಿರುವ ಕಾಮಲಾ ರೋಗಿಯು ತೀವ್ರ ಮರಣ ಹೊಂದುವನು. ॥೩೭॥

ಸಾಧ್ಯ, ಕಷ್ಟಸಾಧ್ಯ ರೋಗಗಳ ಚಿಕಿತ್ಸೆಯನ್ನು ಹೇಳುತ್ತಾರೆ.

**ಸಾಧ್ಯಾನಾಮಿತರೇಷಾಞ್ಚ ಪ್ರವಕ್ಷ್ಯಾಮಿ ಚಿಕಿತ್ಸಿತಮ್ ।೩೮॥**

**ತತ್ರ ಪಾಂಡ್ವಾಮಯೀ ಸ್ನಿಗ್ಧೈಸ್ತೀಕ್ಷ್ಣೈರೂರ್ಧ್ವಾನುಲೋಮಿಕೈಃ ॥**
**ಶೋಧ್ಯಃ ಸಾನ್ಮೃದುಭಿಸ್ತಿಕ್ತೈಃ ಕಾಮಲಾವಾನ್ ವಿರೇಚನೈಃ ॥೩೯॥**

**ತಾಭ್ಯಾಂ ಸಂಶುದ್ಧಕೋಷ್ಠಾಭ್ಯಾಂ ಪಥ್ಯಾನ್ಯನ್ನಾನಿ ದಾಪಯೇತ್ ॥**
**ಶಾಲೀನ್ ಸಯವಗೋಧೂಮಾನ್ ಪುರಾಣಾನ್ ಯೂಷಸಂಹಿತಾನ್**

**ಮುದ್ಗಾಢಕೀಮಸೂರಾದ್ಯೈ ರ್ಜಾಂಗಲೈಶ್ಚ ರಸೈರ್ಹಿತೈಃ॥**
**ಯಥಾದೋಷಂ ವಿಶಿಷ್ಟಞ್ಚ ತಯೋರ್ಭೈಷಜ್ಯಮಾಚರೇತ್ ॥೪೦॥**

**ಕಲ್ಯಾಣಕಂ ಪಞ್ಚಗವ್ಯಂ ಮಹಾತಿಕ್ತಮಥಾಪಿ ವಾ ॥**
**ಸ್ನೇಹನಾರ್ಥಂ ಘೃತಂ ದದ್ಯಾತ್ ಕಾಮಲಾಪಾಂಡುರೋಗಿಣೇ ॥೪೧॥**

**ಅರ್ಥ:—** ಸಾಧ್ಯ ಕಷ್ಟಸಾಧ್ಯಗಳ ಚಿಕಿತ್ಸೆಯನ್ನು ಹೇಳುವೆವು ॥೩೮॥ ಪಾಂಡುರೋಗಿಗೆ ಸ್ನಿಗ್ಧ ಮತ್ತು ತೀಕ್ಷ್ಣವಿರುವ ವಮನವಿರೇಚನಗಳಿಂದ ಶೋಧನ ಕೊಡಬೇಕು. ಕಾಮಲಾರೋಗಿಗೆ ಮೃದು ಮತ್ತು ಕಹಿ ಔಷಧಗಳಿಂದ ವಿರೇಚನ ಮಾಡಿಸಬೇಕು. ॥೩೯॥ ಅವುಗಳಿಂದ ಕೋಷ್ಠದ ಶುದ್ಧಿಯಾಗಲು ಹಳೇ ಅಕ್ಕಿ ಜವೆ ಗೋದಿಗಳ ಅನ್ನವನ್ನು ॥೪೦॥ ಹೆಸರು, ತೊಗರೆ, ಚೆನ್ನಂಗಿಬೇಳೆಗಳ ಕಟ್ಟುಗಳೊಡನೆ ಅಥವಾ ಹಿತಕರವಾದ ಜಾಂಗಲಮಾಂಸದ ರಸದೊಡನೆ ಪಥ್ಯಕ್ಕಾಗಿ ಕೊಡಿಸಬೇಕು. ದೋಷಾನುಸಾರವಾಗಿ ಈ ಪಾಂಡುರೋಗಕಾಮಲಾರೋಗಿಗಳಿಗೆ ಬೇರೆ ಬೇರೆ ಔಷಧ ಕೊಡಬೇಕು ॥೪೧॥ ಸ್ನೇಹನಕ್ಕಾಗಿ ಅವರಿಗೆ ಕಲ್ಯಾಣಕ (ಉನ್ಮಾದೋಕ್ತ) ಘೃತ ಅಥವಾ ಪಂಚಗವ್ಯಘೃತ (ಅಪಸ್ಮಾರೋಕ್ತ) ಅಥವಾ ಮಹಾತಿಕ್ತಘೃತವನ್ನು ಕೊಡಬೇಕು. (೪೧)

ದಾಡಿಮಾದಿಘೃತವನ್ನು ಹೇಳುತ್ತಾರೆ.

ದಾಡಿಮಾತ್ಕುಡವಂ ಧಾನ್ಯಾತ್ಕುಡವಾರ್ಧಂ ಪಲಂ ಪಲಮ್ ॥
ಚಿತ್ರಕಾಚ್ಛೃಂಗಬೇರಾಚ್ಚ ಪಿಪ್ಪಲ್ಯಷ್ಟಮಿಕಾ ತಥಾ ॥೪೩॥

ತೈಃ ಕಲ್ಕೈರ್ವಿಂಶತಿಪಲಂ ಘೃತಸ್ಯ ಸಲಿಲಾಢಕೇ ॥
ಸಿದ್ಧಂ ಹೃತ್ಪಾಂಡುಗುಲ್ಮಾರ್ಶಃಪ್ಲೀಹವಾತಕಫಾರ್ತಿನುತ್ ॥೪೪॥

ದೀಪನಂ ಶ್ವಾಸಕಾಸಘ್ನಂ ಮೂಢವಾತೇ ಚ ಶಸ್ಯತೇ ॥
ದುಃಖಪ್ರಸವಿನೀನಾಂ ಚ ವಂಧ್ಯಾನಾಂ ಚೈವ ಗರ್ಭದಮ್ ॥೪೫॥

**ಅರ್ಥಃ**— ದಾಳಿಂಬದ ತೋಟಿ ೧೬ ತೊಲಿ, ಹವೀಜ ೮ ತೊಲಿ, ಚಿತ್ರಕ ೪ ತೊಲಿ, ಸುಂಠಿ ೪ ತೊಲಿ, ಹಿಪ್ಪಲಿ ೨ ತೊಲಿ, ॥೪೩॥ ತಕ್ಕೊಂಡು ಅವುಗಳ ಕಲ್ಕ ಮಾಡಿ, ೫೧೨ ತೊಲಿ ನೀರು ಹಾಕಿ, ೮೦ ತೊಲಿ ಘೃತವನ್ನು ಸಿದ್ಧ ಮಾಡಬೇಕು. ಇದು ಹೃದ್ರೋಗ, ಪಾಂಡುರೋಗ, ಗುಲ್ಮ, ಮೂಲವ್ಯಾಧಿ, ಪ್ಲೀಹ, ವಾತ ಕಫ ರೋಗ, ಶ್ವಾಸ ಕಾಸಗಳನ್ನು ಕಳೆಯುವದು. ॥೪೪॥ ಮೂಢವಾತದಲ್ಲಿಯೂ ಕಷ್ಟದಿಂದ ಹಡೆಯುವವರಿಗೂ ಹಿತಕರವಾಗಿದೆ. ಇದು ದೀಪಕವೂ ಬಂಜೆಯರಿಗೆ ಗರ್ಭಪ್ರದವೂ ಆಗಿದೆ. (೪೫)

ಕಟುಕಾದಿ ಘೃತವನ್ನು ಹೇಳುತ್ತಾರೆ.

ಕಟುಕಾಂ ರೋಹಿಣೀಂ ಮುಸ್ತಂ ಹರಿದ್ರೇ ವತ್ಸಕಾತ್ಫಲಮ್ ॥
ಪಟೋಲಂ ಚಂದನಂ ಮೂರ್ವಾಂ ತ್ರಾಯಮಾಣಾಂ ದುರಾಲಭಾಮ್ ॥೪೬॥

ಸಪಿಪ್ಪಲೀಂ ಪರ್ಪಟಕಂ ಭೂನಿಂಬಂ ದೇವದಾರು ಚ ॥
ಪಿಷ್ಟ್ವಾಕ್ಷಮಾತ್ರೈಸ್ತೈಃ ಸರ್ಪಿಃಪ್ರಸ್ಥಂ ಕ್ಷೀರಾಢಕೇ ಪಚೇತ್ ॥೪೭॥

ರಕ್ತಪಿತ್ತಂ ಜ್ವರಂ ದಾಹಂ ಶ್ವಯಥುಂ ಸಭಗಂದರಮ್॥
ಅರ್ಶಾಂಸ್ಯಸೃಗ್ದರಂ ಚೈವ ಹನ್ಯಾದ್ವಿಸ್ಫೋಟಕಾಂಸ್ತಥಾ ॥೪೮॥

ಅರ್ಥಃ — ಕಟುಕರೋಹಿಣಿ, ಜೇಕು, ಅರಿಷಣ, ಮರಅರಿಷಣ

ಇಂದ್ರಜವೆ, ಕಹಿ ಪಡವಲ, ಚಂದನ, ಮೂರ್ವಾ (ಹಾಲುಗೊರಟಿಗೆ), ತ್ರಾಯಮಾಣ, ನೆಲಇಂಗಳ, ||೪೬|| ಹಿಪ್ಪಲಿ, ಕಲ್ಲುಸಬ್ಬಸಿಗೆ, ಚಿರಾಯಿತ, ದೇವದಾರು, ಇವುಗಳ ೧-೧ ತೊಲಿ ಚೂರ್ಣವನ್ನು ೫೧೨ ತೊಲಿ ಹಾಲಿನಲ್ಲಿ ಹಾಕಿ ೧೨೮ ತೊಲಿ ತುಪ್ಪವನ್ನು ಸಿದ್ಧಮಾಡಬೇಕು. ||೪೭|| ಅದು ರಕ್ತಪಿತ್ತ, ಜ್ವರ, ದಾಹ, ಬಾವು, ಭಗಂದರ, ಮೂಲವ್ಯಾಧಿ, ರಕ್ತ ಪ್ರದರ, ವಿಸ್ಫೋಟಕಗಳನ್ನು ಕಳೆಯುವದು. (೪೮)

ಪಥ್ಯಾ ಘೃತವನ್ನು ಹೇಳುತ್ತಾರೆ.

ಪಥ್ಯಾಶತರಸೇ ಪಥ್ಯಾವೃಂತಾರ್ಧಶತಕಲ್ಕವಾನ್ ||
ಪ್ರಸ್ಥಃ ಸಿದ್ಧೋ ಘೃತಾತ್ ಸೇಯಃ ಸ ಪಾಂಡ್ವಾಮಯಗುಲ್ಮನುತ್

**ಅರ್ಥಃ**— ಅಣಲೇಕಾಯಿ ೧೦೦ ತಕ್ಕೊಂಡು ಎರಡು ದ್ರೋಣ ನೀರು ಹಾಕಿ ¼ ಉಳಿಯಲು ಅದರಲ್ಲಿ ೫೦ ಅಣಲೇವೃಂತ (ತುಂಬು)ಗಳ ಕಲ್ಕವನ್ನು ಹಾಕಿ, ೧೨೮ ತೊಲಿ ಘೃತವನ್ನು ಸಿದ್ಧಮಾಡಿ ಕುಡಿಯಬೇಕು ಅದು ಪಾಂಡುರೋಗ ಗುಲ್ಮಗಳನ್ನು ಕಳೆಯುವದು. (೪೯)

ದಂತೀ ಘೃತವನ್ನು ಹೇಳುತ್ತಾರೆ.

ದಂತ್ಯಾಃ ಶತಪಲರಸೇ ಪಿಷ್ಟ್ವೈರ್ದಂತೀಶಲಾಟುಭಿಃ ||
ತದ್ವತ್ ಪ್ರಸ್ಥೋ ಘೃತಾತ್ ಸಿದ್ಧಃ ಪ್ಲೀಹಪಾಂಡ್ವರ್ತಿಶೋಫಜಿತ್ ||

**ಅರ್ಥಃ**—೪೦೦ತೊಲಿ ದಂತೀ ಮೂಲದಲ್ಲಿ ಎರಡು ದ್ರೋಣ ನೀರು ಹಾಕಿ ಕುದಿಸಿ ¼ ಉಳಿಯಲು ಅದರಲ್ಲಿ ದಂತೀಫಲದ ನಿಮಿತಿಗಳ ಕಲ್ಕವನ್ನು ¼ ಹಾಕಿ, ೧೨೮ ತೊಲಿ ಘೃತವನ್ನು ಸಿದ್ಧಮಾಡಬೇಕು. ಅದು ಪ್ಲೀಹ ಪಾಂಡುರೋಗ ಬಾವುಗಳನ್ನು ಕಳೆಯುವದು (೫೦)

ದ್ರಾಕ್ಷಾ ಘೃತವನ್ನು ಹೇಳುತ್ತಾರೆ.

ಪುರಾಣಸರ್ಪಿಷಃ ಪ್ರಸ್ಥೋ ದ್ರಾಕ್ಷಾರ್ಧಪ್ರಸ್ಥಸಾಧಿತಃ ||
ಕಾಮಲಾಗುಲ್ಮಪಾಂಡ್ವರ್ತಿಜ್ವರಮೇಹೋದರಾಪಹಃ ||೫೧||

**ಅರ್ಥ:**—೩೨ತೊಲಿ ದ್ರಾಕ್ಷದ ಕಲ್ಕದಲ್ಲಿ, ಘೃತದಳ ಪಾಲು ನೀರು ಹಾಕಿ ೧೨೮ ತೊಲಿ ಹಳೇ ತುಪ್ಪವನ್ನು ಸಿದ್ಧಮಾಡಬೇಕು. ಅದು ಕಾಮಣಿ, ಗುಲ್ಮ, ಪಾಂಡುರೋಗ, ಜ್ವರ, ಪ್ರಮೇಹ, ಉದರಗಳನ್ನು ಕಳೆಯುವದು. (೫೧)

**ಹರಿದ್ರಾದಿ ಘೃತವನ್ನು ಹೇಳುತ್ತಾರೆ.**

**ಹರಿದ್ರಾತ್ರಿಫಲಾನಿಂಬಬಲಾಮಧುಕಸಾಧಿತಮ್ ||**
**ಸಕ್ಷೀರಂ ಮಾಹಿಷಂ ಸರ್ಪಿಃ ಕಾಮಲಾಹರಮುತ್ತಮಮ್ ||೫೨||**

ಅರ್ಥ:— ಅರಿಷಿಣ, ತ್ರಿಫಳಿ, ಬೇವು, ಕಳ್ಳಂಗಡ್ಲೆ ಜ್ಯೇಷ್ಠಮಧುಗಳ ಕಲ್ಕವನ್ನು ೩೨ ತೊಲಿ ತಕ್ಕೊಂಡು ೫೧೨ ತೊಲಿ ಹಾಲಿನಲ್ಲಿ ಹಾಕಿ, ೧೨೮ ತೊಲಿ ಎಮ್ಮೆಯ ತುಪ್ಪವನ್ನು ಸಿದ್ಧಮಾಡಬೇಕು. ಇದು ಕಾಮಲಾನಾಶಕ ಉತ್ತಮ ಔಷಧವಾಗಿದೆ. (೫೨)

**ದಾರ್ವೀಘೃತ ಕಾಲೀಯಕ ಘೃತಗಳನ್ನು ಹೇಳುತ್ತಾರೆ.**

**ಗೋಮೂತ್ರೇ ದ್ವಿಗುಣೇ ದಾರ್ವೀಕಲ್ಕಾಕ್ಷದ್ವಯಸಂಯುತಃ||**
**ದಾರ್ವ್ಯಾಃ ಪಞ್ಚಪಲಕ್ವಾಥೇ ಕಲ್ಕೇ ಕಾಲೀಯಕೇಽಪರಃ ||೫೩||**

**ಮಾಹಿಷಾಜ್ಯಸ್ಯ ತು ಪ್ರಸ್ಥಃ ಪೂರ್ವಃ ಪೂರ್ವೇ ಪರೇ ಪರಃ ||**
**ಸ್ನೇಹೈರೇತೈರುಪಕ್ರಮ್ಯ ಸ್ನಿಗ್ಧಂ ಮತ್ವಾ ವಿರೇಚಯೇತ್ ||೫೪||**

**ಅರ್ಥ:**— ೨೫೬ ತೊಲಿ ಗೋಮೂತ್ರದಲ್ಲಿ ಮರಅರಿಷಿಣದ ೨ತೊಲಿ ಕಲ್ಕವನ್ನು ಹಾಕಿ, ೧೨೮ತೊಲಿ ಎಮ್ಮೆಯ ತುಪ್ಪವನ್ನು ಸಿದ್ಧಮಾಡಿ ಪಾಂಡುರೋಗಿಗೆ ಕೊಡಬೇಕು. ಮರಅರಿಷಿಣವನ್ನು ೨೦ತೊಲಿ ತಕ್ಕೊಂಡು, ೧೬೦ ತೊಲಿ ನೀರಿನಲ್ಲಿ ಹಾಕಿ ಕುದಿಸಿ ¼ ಉಳಿಯಲು ಕಾಲೀಯಕ (ಕಾಲಿಕಾಷ್ಠ) ಕಲ್ಕವನ್ನು ೨ ತೊಲಿ ಹಾಕಿ ||೫೩|| ೧೨೮ ತೊಲಿ ಎಮ್ಮೆ ತುಪ್ಪವನ್ನು ಸಿದ್ಧಮಾಡಿ ಕಾಮಲಾರೋಗಿಗೆ ಕೊಡಬೇಕು. ಈ ಸ್ನೇಹಗಳಿಂದ ಅವರು ಸ್ನಿಗ್ಧವಾದದ್ದನ್ನು ನೋಡಿ ವಿರೇಚನವನ್ನು ಕೊಡಬೇಕು. (೫೪)

ಆ ವಿರೇಚನಗಳನ್ನು ಹೇಳುತ್ತಾರೆ.

**ಪಯಸಾ ಮೂತ್ರಯುಕ್ತೇನ ಬಹುಶಃ ಕೇವಲೇನ ವಾ ॥**
**ದಂತೀಫಲರಸೇ ಕೋಷ್ಣೇ ಕಾಶ್ಮರ್ಯಾಞ್ಜಲಿನಾ ಶೃತಮ್ ॥೫೫॥**

**ದ್ರಾಕ್ಷಾಞ್ಜಲಿಂ ಮೃದಿತ್ವಾ ವಾ ದದ್ಯಾತ್ ಪಾಂಡ್ವಾಮಯಾಪಹಮ್**
**ದ್ವಿಶರ್ಕರಂ ತ್ರಿವೃಚ್ಚೂರ್ಣಂ ಪಲಾರ್ಧಂ ಪೈತ್ತಿಕಃ ಪಿಬೇತ್ ॥೫೬॥**

**ಕಫಪಾಂಡುಸ್ತು ಗೋಮೂತ್ರಯುಕ್ತಾಂ ಕ್ಲಿನ್ನಾಂ ಹರೀತಕೀಮ್ ॥**
**ಆರಗ್ವಧರಸೇನೇಕ್ಷೋರ್ವಿದಾರ್ಯಾಮಲಕಸ್ಯ ಚ ॥೫೭॥**

**ಅರ್ಥಃ—** ಕೇವಲ ಹಾಲನ್ನು ಅಥವಾ ಗೋಮೂತ್ರ ಕೂಡಿದ ಹಾಲನ್ನು ಕೊಟ್ಟು ವಿರೇಚನಮಾಡಿಸಬೇಕು. ಅಥವಾ ಎಂಟು ಪಾಲು ನೀರು ಹಾಕಿ ¼ ಉಳಿಸಿದ ದಂತೀಫಲದ ಬೆಚ್ಚಗಿನ ಕಷಾಯದಲ್ಲಿ ಶಿವನ್ನಿ ಫಲ ೧೬ ತೊಲಿ, ॥೫೫॥ ದ್ರಾಕ್ಷೆ ೧೬ ತೊಲಿ, ಹಾಕಿ ಕುದಿಸಿ ¼ ಉಳಿಯಲು ಅಥವಾ ದಂತೀಫಲದ ಕಷಾಯದಲ್ಲಿ ಇವುಗಳನ್ನು ಹಾಕಿ ಕಿವುಚಿ ಕುಡಿಯಲು ಕೊಡಬೇಕು. ಇದು ಪಾಂಡುರೋಗವನ್ನು ಕಳೆಯುವದು. ಪಿತ್ತಪಾಂಡು ರೋಗಿಯು ೨ ತೊಲಿ ನಿಶೋತ್ತರ ಚೂರ್ಣವನ್ನು ಇಮ್ಮಡಿ ಸಕ್ಕರೆ ಹಾಕಿ ಕುಡಿಯಬೇಕು. ॥೫೬॥ ಕಫಪಾಂಡುರೋಗಿಯು ಗೋಮೂತ್ರದಲ್ಲಿ ನೆನೆಸಿದ ಅಥವಾ ಕಕ್ಕೀತಿಳಲಿನ ಕಷಾಯದಲ್ಲಿ ನೆನೆಯಿಟ್ಟ ಅಥವಾ ಕಬ್ಬಿನ ರಸದಲ್ಲಿ ಅಥವಾ ನೆಲಗುಂಬಳ ಕಷಾಯದಲ್ಲಿ ಅಥವಾ ನೆಲ್ಲಿ ಕಷಾಯದಲ್ಲಿ ನೆನೆಯಿಟ್ಟ ಅಣಲೇಕಾಯಿಯನ್ನು ತಿನ್ನಬೇಕು. (೫೭)

**ಸತ್ರ್ಯೂಷಣಂ ಬಿಲ್ವಪತ್ರಂ ಪಿಬೇದ್ವಾ ಕಾಮಲಾಪಹಮ್ ॥**
**ದಂತ್ಯರ್ಧಪಲಕಲ್ಕಂ ವಾ ದ್ವಿಗುಡಂ ಶೀತವಾರಿಣಾ ॥೫೮॥**

**ಪಿಬೇದ್ವಾ ಕಾಮಲಾವಾನ್ ನಾ ತ್ರಿವೃತಾಂ ತ್ರಿಫಲಾರಸೈಃ ॥**
**ವಿಶಾಲಾತ್ರಿಫಲಾಮುಸ್ತಕುಷ್ಠದಾರುಕಲಿಙ್ಗಕಾನ್ ॥೫೯॥**

**ಕರ್ಷೋನ್ಮಿತಾನತಿವಿಷಾಂ ಕರ್ಷಾರ್ಧಾಂಶ್ಚ ಪ್ರದಾಪಯೇತ್ ॥**

ಕಷೌ೯ ಮಧುರಸಾಯಾ ದ್ವಾ ಸರ್ವಮೇತತ್‌ಸುಖಾಂಬುನಾ ||೬೦||

ಸ್ಪ್ರುದಿತಂ ತಂ ರಸಂ ಪೂತಂ ಪೀತ್ವಾ ಲಿಹ್ಯಾಚ್ಚ ಮಾಕ್ಷಿಕಮ್ ||
ಕಾಸಂ ಶ್ವಾಸಂ ಜ್ವರಂ ದಾಹಂ ಪಾಂಡುರೋಗಮರೋಚಕಮ್

ಗುಲ್ಮಾನಾಹಾಮವಾತಾಂಶ್ಚ ರಕ್ತಪಿತ್ತಞ್ಚ ನಾಶಯೇತ್||
ತ್ರಿಫಲಾಯಾ ಗುಡೂಚ್ಯಾ ವಾ ದಾರ್ವ್ಯಾ ನಿಂಬಸ್ಯ ವಾ ರಸಃ ||೬೧||

ಪ್ರಾತಃ ಪ್ರಾತರ್ಮಧುಯುತಃ ಶೀಲಿತಃ ಕಾಮಲಾಪಹಃ||
ಕ್ಷೀರಂ ಮೂತ್ರಂ ಪಿಬೇತ್‌ಪಕ್ಷಂ ಗವ್ಯಂ ಮಾಹಿಷಮೇವ ವಾ ||೬೩||

ಪಾಂಡುರೋಗೀ ಮೂತ್ರಯುಕ್ತಂ ವಾ ಸಪ್ತಾಹಂ ತ್ರಿಫಲಾರಸಮ್ ||
ತರುಜಾಞ್ ಜ್ವಲಿತಾನ್‌ಮೂತ್ರೇ ನಿರ್ವಾಪ್ಯಾಮ್ಮೃದ್ಯ ಚಾಙ್ಕುರಾನ್

ಮಾತುಲುಙ್ಗಸ್ಯ ತತ್ ಪೂತಂ ಪಾಂಡುಶೋಥಹರಂ ಪಿಬೇತ್||
ಸ್ವರ್ಣಕ್ಷೀರೀ ತ್ರಿವೃಚ್ಛ್ಯಾಮಾ ಭದ್ರದಾರು ಸನಾಗರಮ್ ||೬೫||

ಗೋಮೂತ್ರಾಞ್ಜಲಿನಾ ಕಲ್ಕಂ ಮೂತ್ರೇ ವಾ ಕ್ವಥಿತಂ ಪಿಬೇತ್ ||
ಕ್ಷೀರಮೇಭಿಃ ಶೃತಂ ವಾಪಿ ಪಿಬೇದ್ದೋಷಾನುಲೋಮನಮ್ ||೬೬||

ಹರೀತಕೀಂ ಮೂತ್ರಯುತಾಂ ಪ್ರಯೋಗೇಣಾಥವಾ ಪಿಬೇತ್ ||
ಜೀರ್ಣೇ ಕ್ಷೀರೇಣ ಭುಞ್ಜೀತ ಮಧುರೇಣ ರಸೇನ ವಾ ||೬೭||

ಸಪ್ತರಾತ್ರಂ ಗವಾಂ ಮೂತ್ರೇ ಭಾವಿತಂ ವಾಪ್ಯಯೋರಜಃ ||
ಪಾಂಡುರೋಗಪ್ರಶಾಂತ್ಯರ್ಥಂ ಪಯಸಾ ಪಾಯಯೇದ್ಭಿಷಕ್||೬೮||

ಅರ್ಥಃ— ತ್ರಿಕಟು ಚೂರ್ಣದಿಂದ ಕೂಡಿದ ಬಿಲ್ವದೆಲೆಯ ಕಲ್ಕವನ್ನು ಅಥವಾ ದಂತೀಮೂಲದ ತೊಗಟೆ ಚೂರ್ಣವನ್ನು ಇಪ್ಪಟ್ಟು ಬೆಲ್ಲ ಕೂಡಿಸಿ ತಣ್ಣೀರಿನೊಡನೆ ಕುಡಿಯಬೇಕು. ಅದು ಕಾಮಲೆಯನ್ನು ಕಳೆಯುವದು. ||೫೮|| ಅಥವಾ ನಿಶೋತ್ತರ ಚೂರ್ಣವನ್ನು ತ್ರಿಫಳಾಕಷಾಯದೊಡನೆ ಕುಡಿಯಬೇಕು. ಅದು ಕಾಮಲೆಯನ್ನು ಕಳೆಯುವದು. ಕಾಡಕವಡೀಬೇರು ತ್ರಿಫಳೆ, ಜೇಕು, ಕೋಷ್ಟ, ದೇವದಾರು, ಇಂದ್ರಜವಿ ||೫೯|| ಇವುಗಳನ್ನು

ಒಂದೊಂದು ತೊಲಿ ಅತಿವಿಷ ೩ ತೊಲಿ, ಮೂರ್ವಾ (ಕಗ್ಗೊರಟಗೆ) ೨ ತೊಲಿ, ತಕ್ಕೊಂಡು ಇವನ್ನೆಲ್ಲ ಬಿಸಿ ನೀರು ಹಾಕಿ ||೬೦|| ಕಿವಚಿ ಘಾಂಟೆ ಮಾಡಿ ಸೋಸಿ ಕುಡಿದು ಮೇಲೆ ಜೇನನ್ನು ನೆಕ್ಕಬೇಕು. ಇದು ಕೆಮ್ಮ, ದಮ್ಮು, ಜ್ವರ, ದಾಹ, ಪಾಂಡು, ಅರುಚಿ ||೬೧|| ಗುಲ್ಮ, ಹೊಟ್ಟೆಯುಬ್ಬು, ಆಮವಾತ, ರಕ್ತಪಿತ್ತಗಳನ್ನು ಕಳೆಯುವದು. ತ್ರಿಫಳೆಯು ಅಥವಾ ಅಮೃತಬಳ್ಳಿಯು, ಅಥವಾ ಮರಅರಿಷಿಣದ ಅಥವಾ ಬೇವಿನ ಕಷಾಯವನ್ನು ||೬೨|| ದಿನಾಲು ಮುಂಜಾನೆ ಜೇನುಹಾಕಿ ಕುಡಿಯುವ ಅಭ್ಯಾಸ ಮಾಡಿದರೆ ಅದು ಕಾಮಲೆಯನ್ನು ನಾಶ ಮಾಡುವದು. ಆಕಳ ಅಥವಾ ಎಮ್ಮೆಯ ಹಾಲು ಮತ್ತು ಮೂತ್ರಗಳನ್ನು ೧೫ ದಿವಸ ಕುಡಿಯಬೇಕು. ||೬೩|| ಅಥವಾ ೭ ದಿವಸ ಗೋಮೂತ್ರಹಾಕಿದ ತ್ರಿಫಳಾಕಷಾಯವನ್ನು ಕುಡಿಯಬೇಕು. ಅವು ಪಾಂಡುರೋಗವನ್ನು ಕಳೆಯುವವು. ಮಾಳುಂಗದ ಗಿಡದ ಅಂಕುರಗಳನ್ನು ಸುಟ್ಟು ಗೋಮೂತ್ರದಲ್ಲಿ ಅರಿಸಿ ಕಲಿಸಿ ||೬೪|| ಸೋಸಿ ಕುಡಿಯಬೇಕು. ಅದು ಪಾಂಡುರೋಗದ ಬಾವನ್ನು ಕಳೆಯುವದು. ಗೋಳಗೊಳಿಕೆ, ಬಿಳೀ ನಿಶೋತ್ತರ, ಕರೀ ನಿಶೋತ್ತರ, ದೇವದಾರು, ಸುಂಠಿ ಇವುಗಳ ಚೂರ್ಣವನ್ನು ||೬೫|| ೧೬ ತೊಲಿ ಗೋಮೂತ್ರದಲ್ಲಿ ಹಾಕಿ ಅಥವಾ ಗೋಮೂತ್ರದಲ್ಲಿ ಕುದಿಸಿ ಕುಡಿಯಬೇಕು. ಅಥವಾ ಇವುಗಳಿಂದ ಸಿದ್ಧಮಾಡಿದ ಹಾಲನ್ನು ಕುಡಿಯಬೇಕು. ಇದು ವಿರೇಚನ ಮಾಡಿ ದೋಷಗಳನ್ನು ಕಳೆಯುವದು. ||೬೬|| ಗೋಮೂತ್ರದೊಡನೆ ಅಣಲೇಕಾಯಿ ಚೂರ್ಣವನ್ನು ತಿನ್ನುತ್ತಿರಬೇಕು. ಅದು ಪಚನವಾಗಲು ಹಾಲಿನೊಡನೆ ಅಥವಾ ಮಧುರ ಮಾಂಸರಸದೊಡನೆ ಊಟ ಮಾಡಬೇಕು. ||೬೭|| ಅಥವಾ ೭ ದಿವಸ ಗೋಮೂತ್ರದ ಭಾವನೆ ಕೊಟ್ಟ ಲೋಹ ಭಸ್ಮವನ್ನು ವೈದ್ಯನು ಹಾಲಿನೊಡನೆ ಕುಡಿಸಬೇಕು. ಅದು ಪಾಂಡುರೋಗವನ್ನು ಕಳೆಯುವದು. (೬೮)

ನವಾಯಸ ಚೂರ್ಣವನ್ನು ಹೇಳುತ್ತಾರೆ.

**ತ್ರ್ಯೂಷಣತ್ರಿಫಲಾಮುಸ್ತವಿಡಙ್ಗಚಿತ್ರಕಾಃ ಸಮಾಃ ॥**
**ನವಾಯೋರಜಸೋ ಭಾಗಾಸ್ತಚ್ಚೂರ್ಣಂ ಮಧುಸರ್ಪಿಷಾ ||೬೯||**
**ಭಕ್ಷಯೇತ್ ಪಾಂಡುಹೃದ್ರೋಗಕುಷ್ಠಾರ್ಶಃಕಾಮಲಾದಹೇತ್**

**ಅರ್ಥ:**— ಸುಂಠಿ, ಮೆಣಸು, ಹಿಪ್ಪಲಿ, ಅಣಲೆ, ತಾರೆ, ನೆಲ್ಲಿ, ಜೇಕು

ವಾವಡಿಂಗ ಚಿತ್ರಕ ಈ ಚೂರ್ಣಗಳನ್ನು ಸಮನಾಗಿ ತಕ್ಕೊಂಡು, ಅವುಗಳಲ್ಲಿ ಇವೆಲ್ಲದರಸಮ ಲೋಹಭಸ್ಮವನ್ನು ಕೂಡಿಸಿ ಆಚೂರ್ಣವನ್ನು ತುಪ್ಪ ಜೇನಿನೊಡನೆ. ||೬೯|| ತಿನ್ನಬೇಕು. ಇದು ಪಾಂಡು, ಹೃದ್ರೋಗ, ಕುಷ್ಠ, ಮೂಲವ್ಯಾಧಿ, ಕಾಮಣಿಗಳನ್ನು ಕಳೆಯುವದು. (೬೯)

ಮಂಡೂರವಟಕಗಳನ್ನು ಹೇಳುತ್ತಾರೆ.

ತ್ರಿಫಲಾಂ ತ್ರ್ಯೂಷಣಂ ಮುಸ್ತಂ ವಿಡಙ್ಗಂ ಚವ್ಯಚಿತ್ರಕೌ ||೭೦||
ದಾರ್ವೀತ್ವಚ್ಮಾಕ್ಷಿಕೋ ಧಾತುರ್ಗ್ರಂಥಿಕೋ ದೇವದಾರು ಚ ||
ಏಷಾಂ ದ್ವಿಪಲಿಕಾನ್ಭಾಗಾಂಶ್ಚೂರ್ಣಂ ಕುರ್ಯಾತ್ಪೃಥಕ್ ಪೃಥಕ್ ||೭೧||
ಮಂಡೂರಂ ದ್ವಿಗುಣಂ ಚೂರ್ಣಾಚ್ಛುದ್ಧಮಞ್ಜನಸನ್ನಿಭಮ್ ||
ಗೋಮೂತ್ರೇಽಷ್ಟಗುಣೇ ಪಕ್ತ್ವಾ ತಚ್ಚೂರ್ಣಂ ಪ್ರಕ್ಷಿಪೇತ್ಪುನಃ
ಉದುಂಬರಸಮಾನ್ಕುರ್ಯಾತ್ ವಟಕಾಂಸ್ತಾನ್ ಯಥಾಗ್ನಿನಾ ||
ಉಪಯುಞ್ಜೀತ ತಕ್ರೇಣ ಜೀರ್ಣೇ ಸಾತ್ಮ್ಯಞ್ಚ ಭೋಜನಮ್
ಮಂಡೂರವಟಕಾ ಹ್ಯೇತೇ ಪ್ರಾಣದಾಃ ಪಾಂಡುರೋಗಿಣಾಮ್ ||
ಕುಷ್ಠಾನ್ಯಜರಕಂ ಶೋಥಮೂರುಸ್ತಂಭಂ ಕಫಾಮಯಾನ್ ||೭೪||
ಅರ್ಶಾಂಸಿ ಕಾಮಲಾಂ ಮೇಹಂ ಪ್ಲೀಹಾನಂ ಶಮಯಂತಿ ಚ||೭೪||

ಅರ್ಥಃ—ತ್ರಿಫಳೆ, ತ್ರಿಕಟು, ಜೇಕು, ವಾವಡಿಂಗ, ಚವಕ ಚಿತ್ರಕ, ||೭೦|| ಮರಅರಿಷಿಣದ ತೊಗಟೆ, ಸೂವರ್ಣಮಾಕ್ಷಿಕ, ಮೋಡಿ, ದೇವದಾರು ಇವುಗಳನ್ನು ೨-೨ತೊಲಿ ತಕ್ಕೊಂಡು ಬೇರೆಬೇರೆಯಾಗಿ ಅವುಗಳ ಚೂರ್ಣವನ್ನು ಮಾಡಬೇಕು ||೭೧|| ಆಮೇಲೆ ಶುದ್ಧ ಮಾಡಿದ, ಕಾಡಿಗೆಯಂತೆ ಸಣ್ಣಾಗಿರುವ ಮಂಡೂರವನ್ನು ಅವುಗಳ ೨ ಭಾಗ ತಕ್ಕೊಂಡು ಅದರ ೮ ಪಾಲು ಗೋಮೂತ್ರದಲ್ಲಿ ಕುದಿಸಿ, ಮೇಲಿನ ಚೂರ್ಣವನ್ನು ಅದರಲ್ಲಿ ಹಾಕಬೇಕು ||೭೨|| ಅತ್ತೀಕಾಯಿಯಂಥ ವಟಿಗಳನ್ನುಮಾಡಿ ಅಗ್ನಿಯ ಬಲದಂತೆ ಮಜ್ಜಿಗೆಯೊಡ ಉಪಯೋಗಿಸಬೇಕು. ಪಚನವಾಗಲು ಮಾನಿಸುವ ಆಹಾರವನ್ನು ಉಣ್ಣಬೇಕು. ||೭೩||

ಈ ಮಂಡೂರವಟಕಗಳು ಪಾಂಡುರೋಗಿಗೆ ಪ್ರಾಣಗಳನ್ನು ಕೊಡುತ್ತವೆ. ಕುಷ್ಠ, ಅಜೀರ್ಣ, ಬಾವು ಉರುಸ್ತಂಭ, ಕಫರೋಗ, ||೭೪|| ಮೂಲವ್ಯಾಧಿ, ಕಾಮಲೆ, ಪ್ರಮೇಹ, ಪ್ಲೀಹರೋಗಗಳನ್ನು ಕಳೆಯುತ್ತವೆ. ||೭೪ ½||

ಗುಡನಾಗರಮಂಡೂರತಿಲಾಂಶಾನ್ ಮಾನತಃ ಸಮಾನ್ ||೭೫||
ಪಿಪ್ಪಲೀಂ ದ್ವಿಗುಣಾಂದದ್ಯಾದ್ ಗುಡಿಕಾಂ ಪಾಂಡುರೋಗಿಣೇ ||೭೫ ½||

ಅರ್ಥ:— ಬೆಲ್ಲ, ಸುಂಠಿ, ಮಂಡೂರ, ಎಳ್ಳುಗಳನ್ನು ಸಮಭಾಗ, ಹಿಪ್ಪಲಿ ೨ ಭಾಗ ತಕ್ಕೊಂಡು ಗುಳಿಗೆಗಳನ್ನು ಮಾಡಿ ಪಾಂಡುರೋಗಿಗೆ ಕೊಡಬೇಕು. ||೭೫ ½||

ಯೋಗರಾಜವನ್ನು ಹೇಳುತ್ತಾರೆ.

ತ್ರಿಫಲಾಯಾಸ್ತ್ರಯೋಭಾಗಾಗಾಸ್ತ್ರಯಸ್ತ್ರಿಕಟುಕಸ್ಯ ಚ ||೭೬||
ಭಾಗಶ್ಚಿತ್ರಕಮೂಲಸ್ಯ ವಿಡಙ್ಗಾನಾಂ ತಥೈವ ಚ ||
ಪಞ್ಚಾಶ್ಮಜತುನೋ ಭಾಗಾಸ್ತಥಾ ರೂಪ್ಯಮಲಸ್ಯ ಚ ||೭೭||

ಮಾಕ್ಷಿಕಸ್ಯ ಚ ಶುದ್ಧಸ್ಯ ಲೌಹಸ್ಯ ರಜಸಸ್ತಥಾ ||
ಅಷ್ಟೌ ಭಾಗಾಃ ಸಿತಾಯಾಶ್ಚ ತತ್ ಸರ್ವಂ ಸೂಕ್ಷ್ಮಚೂರ್ಣಿತಮ್

ಮಾಕ್ಷಿಕೇಣಾಪ್ಲುತಂ ಸ್ಥಾಪ್ಯಮಾಯಸೇ ಭಾಜನೇ ಶುಭೇ ||
ಉದುಂಬರಸಮಾಂ ಮಾತ್ರಾಂ ತತಃ ಖಾದೇದ್ ಯಥಾಗ್ನಿ ನಾ ||೭೯||

ದಿನೇ ದಿನೇ ಪ್ರಯೋಗೇಣ ಜೀರ್ಣೇ ಭೋಜ್ಯಂ ಯಥೇಪ್ಸಿತಂ ||
ವರ್ಜಯಿತ್ವಾ ಕುಲತ್ಥಾಂಶ್ಚ ಕಾಕಮಾಚೀಂ ಕಪೋತಕಾನ್ ||೮೦||

ಯೋಗರಾಜ ಇತಿ ಖ್ಯಾತೋ ಯೋಗೋಽಯಮಮೃತೋಪಮಃ ||
ರಸಾಯನಮಿದಂ ಶ್ರೇಷ್ಠಂ ಸರ್ವರೋಗಹರಂ ಶಿವಮ್ ||೮೧||

ಪಾಂಡುರೋಗಂ ವಿಷಂ ಕಾಸಂ ಯಕ್ಷ್ಮಾಣಂ ವಿಷಮಜ್ವರಮ್ ||
ಕುಷ್ಠಾನ್ಯಜರಕಂ ಮೇಹಂ ಶ್ವಾಸಂ ಹಿಕ್ಕಾಮರೋಚಕಮ್ ||೮೨||

ವಿಶೇಷಾದ್ಧಂತ್ಯಪಸ್ಮಾರಂ ಕಾಮಲಾಂ ಗುದಜಾನಿ ಚ ||೮೨ ½||

ಅರ್ಥ:— ತ್ರಿಫಳೆ ೩ ಭಾಗ, ತ್ರಿಕಟು ೩ ಭಾಗ, ||೭೬|| ಚಿತ್ರಕ ಮೂಲ ೧ ಭಾಗ, ವಾವಂಡಿಗ ೧ ಭಾಗ, ಶಿಲಾಜಿತು ೫ ಭಾಗ, ರೂಪ್ಯ ಮಲ ೫ ಭಾಗ, ||೭೭|| ಶುದ್ಧ ಸುವರ್ಣಮಾಕ್ಷಿಕ ೫ ಭಾಗ, ಲೋಹ ಭಸ್ಮ ೫ ಭಾಗ, ಕಲ್ಲುಸಕ್ಕರೆ ೮ ಭಾಗ, ಇವನ್ನೆಲ್ಲ ಸಣ್ಣಾಗಿ ಚೂರ್ಣಮಾಡಿ ||೭೮|| ಜೇನಿನಲ್ಲಿ ಕಲಿಸಿ ಸ್ವಚ್ಛವಾದ ಕಬ್ಬಿಣ ಕೊಡದಲ್ಲಿ ಇಡಬೇಕು. ಅಗ್ನಿಯ ಬಲದಂತೆ ಅತ್ತಿಕಾಯಿಯಷ್ಟು ದಿನಾಲು ತಿನ್ನಬೇಕು. ||೭೯|| ಅದು ಪಚನವಾದನಂತರ ಬೇಕಾದದ್ದನ್ನು ಊಟಮಾಡಬಹುದು. ಆದರೆ ಹುರಳಿ, ಕಾಕಮಾಚಿ (ಕಾಕೇಸೊಪ್ಪು), ಪಾರಿವಾಳಗಳನ್ನು ತಿನ್ನಬಾರದು. ||೮೦|| ಅಮೃತ ಸಮಾನವಾದ ಈ ಔಷಧವು ಯೋಗರಾಜವೆಂದು ಪ್ರಸಿದ್ಧವದೆ. ಇದು ಶ್ರೇಷ್ಠ ರಸಾಯನವೂ ಮಂಗಲಕರವೂ||೮೧|| ಪಾಂಡು ರೋಗ, ವಿಷ, ಕೆಮ್ಮು, ಕ್ಷಯ, ವಿಷಮಜ್ವರ ಕುಷ್ಠ, ಅಗ್ನಿಮಾಂದ್ಯ, ಪ್ರಮೇಹ, ಶ್ವಾಸ, ಬಿಕ್ಕು, ಅರುಚಿ, ||೮೨|| ಮುಂತಾದ ಎಲ್ಲ ರೋಗ ಗಳನ್ನು ಕಳೆಯುವದು. ವಿಶೇಷವಾಗಿ ಅಪಸ್ಮಾರ, ಕಾಮಲೆ, ಮೂಲ ವ್ಯಾಧಿಗಳನ್ನು ಕಳೆಯುವದು. ||೮೩||

ಶಿಲಾಜತುವಟಕವನ್ನು ಹೇಳುತ್ತಾರೆ.

ಕೌಟಜತ್ರಿಫಲಾನಿಂಬಪಟೋಲಘನನಾಗರೈ: ||೮೪||

ಭಾವಿತಾನಿ ದಶಾಹಾನಿ ರಸೈರ್ದ್ವಿತ್ರಿಗುಣಾನಿ ಚ ||
ಶಿಲಾಜತುಪಲಾನ್ಯಷ್ಟೌ ತಾವತೀ ಸಿತಶರ್ಕರಾ ||೮೫||

ತ್ವಕ್‌ಕ್ಷೀರೀಪಿಪ್ಪಲೀಧಾತ್ರೀಕಟುಕಾಖ್ಯಾ: ಪಲೋನ್ಮಿತಾ: ||
ನಿದಿಗ್ಧ್ಯಾ: ಫಲಮೂಲಾಭ್ಯಾಂ ಪಲಂ ಯುಕ್ತ್ಯಾ ತ್ರಿಗಂಧಕಮ್

ಮಧುತ್ರಿಪಲಸಂಯುಕ್ತಂ ಕುರ್ಯಾದಕ್ಷಸಮಾನ್‌ಗುಡಾನ್ ||
ದಾಡಿಮಾಂಬುಪಯ:ಪಕ್ಷಿರಸತೋಯಸುರಾಸವಾನ್ ||೮೬||

ತಾನ್‌ಭಕ್ಷಯಿತ್ವಾನುಪಿಬೇನ್ನಿರನ್ನೋ ಭುಕ್ತ ಏವ ವಾ ||
ಪಾಂಡುಕುಷ್ಠಜ್ವರಪ್ಲೀಹತಮಕಾರ್ಶೋಭಗಂದರಾನ್ ||೮೭||

ಹೃದ್ರೋಗಶುಕ್ರಮೂತ್ರಾಗ್ನಿದೋಷಶೋಥಗರೋದರಾನ್ ||

ಕಾಸಾಸೃಗ್ದರಪಿತ್ತಾಸೃಕ್‌ಶೋಷಗುಲ್ಮಜ್ವರಾಮಯಾನ್ ॥೮೭॥
ತೇ ಚ ಸರ್ವವ್ರಣಾನ್ ಹನ್ಯುಃ ಸರ್ವರೋಗಹರಾಃ ಶಿವಾಃ ॥೮೮॥

**ಅರ್ಥಃ—** ಇಂದ್ರಜವೆ, ತ್ರಿಫಳೆ, ಬೇವು, ಕಹಿಪಡವಲ, ಪಂಚಮೂಲಗಳ ॥೮೩॥ ಕಷಾಯದಿಂದ ೧೦ ಅಥವಾ ೨೦ ಅಥವಾ ೩೦ ದಿವಸಗಳವರೆಗೆ ಭಾವನೆ ಕೊಟ್ಟ ಶಿಲಾಜಿತು ೩೨ ತೊಲಿ, ಅಷ್ಟೇ ಕಲ್ಲುಸಕ್ಕರೆ ॥೮೪॥ ಮತ್ತು ವಂಶಲೋಚನ, ಹಿಪ್ಪಲಿ, ನೆಲ್ಲಿ, ಕಟುಕರೋಣಿ, ಇವುಗಳನ್ನು ೪-೪ ತೊಲಿ, ನೆಲಗುಳ್ಳದ ಕಾಯಿ ಮತ್ತು ಬೇರುಗಳನ್ನು ೪ ತೊಲಿ, ದಾಲಚಿನ್ನಿ ತಮಾಲಪತ್ರ ಯಾಲಕ್ಕಿಗಳನ್ನು ಯೋಗ್ಯ ತೋರಿದಷ್ಟು ॥೮೫॥ ಚೂರ್ಣಮಾಡಿ, ೧೨ ತೊಲಿ ಜೇನುತುಪ್ಪ ಕೂಡಿಸಿ ೧-೧ ತೊಲಿಯ ಗುಳಿಗೆಗಳನ್ನು ಮಾಡಬೇಕು. ಅವುಗಳನ್ನು ಊಟಕ್ಕಿಂತ ಮೊದಲು ಅಥವಾ ಊಟದ ನಂತರ ತಕ್ಕೊಂಡು ಮೇಲೆ ದಾಳಿಂಬದರಸ, ಹಾಲು, ಪಕ್ಷಿಗಳ ಮಾಂಸರಸ, ನೀರು, ಸುರೆ, ಅಥವಾ ಆಸವಗಳನ್ನು ಕುಡಿಯಬೇಕು. ॥೮೬॥ ಇವು ಪಾಂಡು, ಕುಷ್ಠ, ಜ್ವರ, ಪ್ಲೀಹ, ತಮಕ, ಮೂಲವ್ಯಾಧಿ, ಭಗಂದರ, ॥೮೭॥ ಹೃದ್ರೋಗ, ಶುಕ್ರರೋಗ, ಮೂತ್ರರೋಗ, ಅಗ್ನಿಮಾಂದ್ಯ, ಶೋಷ, ಚಾಪ್ಪ, ಕೃತ್ರಿಮವಿಷ, ಉದರ, ಕಾಸ, ರಕ್ತಪ್ರದರ, ರಕ್ತಪಿತ್ತ, ಶೋಷ, ಗುಲ್ಮ, ಜ್ವರ ಮುಂತಾದ ॥೮೮॥ ಎಲ್ಲ ರೋಗಗಳನ್ನೂ ಮತ್ತು ವ್ರಣಗಳನ್ನೂ ಕಳೆಯುವವು, ಮತ್ತು ಮಂಗಲಕರವಾಗಿವೆ. ॥೮೮॥

ಪುನರ್ನವಾ ಮಂಡೂರವನ್ನು ಹೇಳುತ್ತಾರೆ.

ಪುನರ್ನವಾತ್ರಿವೃದ್ವ್ಯೋಷ ವಿಡಙ್ಗಂ ದಾರು ಚಿತ್ರಕಮ್ ॥೮೯॥
ಕುಷ್ಠಂ ಹರಿದ್ರೇ ತ್ರಿಫಲಾ ದಂತೀ ಚವ್ಯಂ ಕಲಿಙ್ಗಕಾಃ ॥
ಕಟುಕಾ ಪಿಪ್ಪಲೀಮೂಲಂ ಮುಸ್ತಞ್ಚೇತಿ ಪಲೋನ್ಮಿತಮ್ ॥೯೦॥
ಮಂಡೂರಂ ದ್ವಿಗುಣಂ ಚೂರ್ಣಾದ್‌ಗೋಮೂತ್ರೇ ದ್ವ್ಯಾಢಕೇ ಪಚೇತ್
ಕೋಲವದ್‌ಗುಡಿಕಾಃ ಕೃತ್ವಾ ತಕ್ರೇಣಾಲೋಡ್ಯ ನಾ ಪಿಬೇತ್
ತಾಃ ಪಾಂಡುರೋಗಂ ಪ್ಲೀಹಾನಮರ್ಶಾಂಸಿ ವಿಷಮಜ್ವರಮ್ ॥

ಷ್ಠ್ಯಯಥುಂಗ್ರಹಣೀ ದೋಷಂ ಹನ್ಯುಃ ಕುಷ್ಠಂ ಕ್ರಿಮೀಂಸ್ತಥಾ
ಆತ್ರೇಯೇಣ ಪುನರ್ನವಾಮಂಡೂರಂ ಕೀರ್ತಿತಂ ಪರವಮ್ ||೯೨||

**ಅರ್ಥಃ**— ಬಿಳೇಗಣಜಲಬೇರು, ನಿಶೋತ್ತರ, ತ್ರಿಕಟು, ವಾಪ ಡಿಂಗ, ದೇವದಾರು, ಚಿತ್ರಕ, ||೮೯|| ಕೋಷ್ಠ, ಅರಿಷಣ, ಮರಅರಿಷಿಣ, ತ್ರಿಫಳೆ, ದಂತೀಮೂಲ, ಚವಕ, ಇಂದ್ರಜವಿ, ಕಟುಕರೋಣಿ, ನೋಡಿ, ಜೇಕು ಇವುಗಳ ಚೂರ್ಣವನ್ನು ೪-೪ ತೊಲಿ ತಕ್ಕೊಂಡು, ||೯೦|| ಇಮ್ಮಡಿ ಮಂಡೂರ ಚೂರ್ಣವನ್ನು ಕೂಡಿಸಿ ೧೦೨೪ ತೊಲಿ ಗೋಮೂತ್ರದಲ್ಲಿ ಕುದಿಸಬೇಕು. ಬೋರೀ ಕಾಯಿಯಷ್ಟು ಗುಳಿಗೆಗಳನ್ನು ಮಾಡಿ ಮಜ್ಜಿಗೆಯೊಡನೆ ಕುಡಿಯಬೇಕು. ||೯೧|| ಇವು ಪಾಂಡುರೋಗ, ಪ್ಲೀಹ, ಮೂಲವ್ಯಾಧಿ, ವಿಷಮಜ್ವರ, ಬಾವು, ಸಂಗ್ರಹಣಿ, ಕುಷ್ಠ, ಕೃಮಿಗಳನ್ನು ನಾಶಮಾಡುವವು. ||೯೨|| ಈ ಶ್ರೇಷ್ಠನಾದ ಪುನರ್ನವಾಮಂಡೂರವನ್ನು ಆತ್ರೇಯ ಋಷಿಗಳು ಹೇಳಿದ್ದಾರೆ. ||೯೨||

ದಾರ್ವೀತ್ವಕ್‌ತ್ರಿಫಲಾವ್ಯೋಷವಿಡಙ್ಗಮಯಸೋ ರಜಃ|| ||೯೨||
ಮಧುಸರ್ಪಿರ್ಯುತಂ ಲಿಹ್ಯಾತ್‌ಕಾಮಲಾಪಾಂಡುರೋಗವಾನ್ ||
ತುಲ್ಯಾ ಅಯೋರಜಃಪಥ್ಯಾಹರಿದ್ರಾಃ ಕ್ಷೌದ್ರಸರ್ಪಿಷಾ ||೯೪||
ಚೂರ್ಣಿತಾಃ ಕಾಮಲೀ ಲಿಹ್ಯಾದ್‌ಗುಡಕ್ಷೌದ್ರೇಣ ವಾಭಯಾಮ್||
ತ್ರಿಫಲಾ ದ್ವೇ ಹರಿದ್ರೇ ಚ ಕಟುರೋಹಿಣ್ಯಯೋರಜಃ ||೯೫||
ಚೂರ್ಣಿತಂ ಮಧುಸರ್ಪಿರ್ಭ್ಯಾಂ ಲೇಹಯೇತ್‌ಕಾಮಲಾಪಹಮ್ ||

**ಅರ್ಥಃ**— ಕಾಮಲೆ, ಪಾಂಡುರೋಗವಾದವನು ಮರಅರಿಷಿಣದ ತೊಗಟೆ, ತ್ರಿಫಳೆ, ತ್ರಿಕಟು, ವಾವಡಿಂಗ, ಲೋಹಭಸ್ಮಗಳ ಚೂರ್ಣವನ್ನು ||೯೩|| ತುಪ್ಪ ಜೇನಿನೊಡನೆ ನೆಕ್ಕಬೇಕು. ಅದರಂತೆ ಕಾಮಲೆಯುಳ್ಳವನು ಲೋಹಭಸ್ಮ, ಅಣಲೆ, ಅರಿಷಿಣಗಳ ಸಮಭಾಗ ಚೂರ್ಣವನ್ನು ತುಪ್ಪ ಜೇನಿನೊಡನೆ ||೯೪|| ಅಥವಾ ಬರೀ ಅಳ್ಳೀಕಾಯಿ ಚೂರ್ಣವನ್ನು ಬೆಲ್ಲ ಜೇನಿನೊಡನೆ ನೆಕ್ಕಬೇಕು. ತ್ರಿಫಳೆ, ಅರಿಷಿಣ ಮರಅರಿಷಿಣ, ಕಟು

ಕರೋಣಿ, ಲೋಹಭಸ್ಮ ಇವುಗಳ ಚೂರ್ಣವನ್ನು ||೯೫|| ತುಪ್ಪಜೇನಿನೊ ಡನೆ ನೆಕ್ಕಲು ಕಾಮಾಲೆಯು ಹೋಗುವದು. ||೯೫||

ಧಾತ್ರ್ಯವಲೇಹವನ್ನು ಹೇಳುತ್ತಾರೆ.

ದ್ವಿಪಲಾಂಶಾಂ ತುಗಾಕ್ಷೀರೀಂ ನಾಗರಂ ಮಧುಯಷ್ಟಿಕಾಮ್ ||೯೬||
ಪ್ರಾಸ್ಥಿಕೀಂ ಪಿಪ್ಪಲೀಂ ದ್ರಾಕ್ಷಾಂ ಶರ್ಕರಾರ್ದ್ಧತುಲಾಂ ಶಥಾ ||
ಧಾತ್ರೀಫಲರಸದ್ರೋಣೇ ಚೂರ್ಣಿತಂ ಲೇಹವತ್ಪಚೇತ್ ||೯೭||
ಶೀತಾನ್ಮಧುಪ್ರಸ್ಥಯುತಾಲ್ಲಿಹ್ಯಾತ್ ಪಾಣಿತಲಂ ತತಃ ||
ಹಲೀಮಕಂ ಪಾಂಡುರೋಗಂ ಕಾಮಲಾಞ್ಚೈವ ನಾಶಯೇತ್
ಆತ್ರೇಯಕೀರ್ತಿತಸ್ತ್ವೇಷ ಧಾತ್ರೀಲೇಹಃ ಪರಃ ಸ್ಮೃತಃ ||೯೮||

**ಅರ್ಥ:—** ವಂಶಲೋಚನ ಸುಂಠಿ, ಜ್ಯೇಷ್ಠಮಧು ||೯೬|| ೬-೬ ತೊಲಿ ಹಿಪ್ಪಲಿ ದ್ರಾಕ್ಷೆಗಳು ೬೪-೬೪ ತೊಲಿ, ಸಕ್ಕರೆ ೨೦೦ ತೊಲಿ ಇವು ಗಳ ಚೂರ್ಣವನ್ನು ೭೦೪೮ ತೊಲಿ ನೆಲ್ಲೀ ಕಷಾಯದಲ್ಲಿ ಹಾಕಿ ಲೇಹವನ್ನು ಮಾಡಬೇಕು. ||೯೭|| ತಣ್ಣಗಾದ ಮೇಲೆ ೧೨೮ ತೊಲಿ ಜೇನು ಹಾಕಿ ಕಲಿಸಿ, ೧ ತೊಲಿ ನೆಕ್ಕಬೇಕು. ಇದು ಹಲೀಮಕ, ಪಾಂಡುರೋಗ, ಕಾಮಾ ಲೆಗಳನ್ನು ನಾಶಮಾಡುತ್ತದೆ. ||೯೮|| ಈ ಶ್ರೇಷ್ಠವಾದ ಧಾತ್ರೀಲೇಹವು ಆತ್ರೇಯರಿಂದ ಹೇಳಲ್ಪಟ್ಟಿದೆ. ||೯೮||

೨ ನೇ ಮಂಡೂರವಟಕಗಳನ್ನು ಹೇಳುತ್ತಾರೆ.

ತ್ರ್ಯೂಷಣಂ ತ್ರಿಫಲಾಂ ಚವ್ಯಂ ಚಿತ್ರಕಂ ದೇವದಾರು ಚ ||೯೯||
ವಿಡಙ್ಗಾನ್ಯಥ ಮುಸ್ತಞ್ಚ ವತ್ಸಕಞ್ಚೇತಿ ಚೂರ್ಣಯೇತ್ ||
ಮಂಡೂರತುಲ್ಯಂ ಚೂರ್ಣಂ ತು ಗೋಮೂತ್ರೇಽಷ್ಟಗುಣೇ ಪಚೇತ್
ತಸ್ಯೈಃ ಸಿದ್ಧಾಸ್ತಥಾ ಶೀತಾಃ ಕಾರ್ಯಾಃ ಕರ್ಷಸಮಾ ಗುಡಾಃ ||
ಯಥಾಗ್ನಿ ಭಕ್ಷಣೀಯಾಸ್ತೇ ಪ್ಲೀಹಪಾಂಡ್ವಾಮಯಾಪಹಾಃ ||೧೦೦||
ಗ್ರಹಣ್ಯರ್ಶೋಽನುದಶ್ಚೈವ ತಕ್ರವಾಟ್ಯಾಶಿನಃ ಸ್ಮೃತಾಃ ||೧೦೧||

**ಅರ್ಥ:**— ತ್ರಿಕಟು, ತ್ರಿಫಲೆ, ಚವಕ, ಚಿತ್ರಕ, ದೇವದಾರು, ||೯|| ವಾಯುವಿಡಂಗ, ಚೇಕು, ಹಲಗತ್ತೀತೋಟಿ ಇವುಗಳ ಸಮ ಚೂರ್ಣದಲ್ಲಿ ಇವೆಲ್ಲವರ ಸಮ ಮಂಡೂರಚೂರ್ಣವನ್ನು ಹಾಕಿ ಇವುಗಳ ೮ ಪಾಲು ಗೋಮೂತ್ರದಲ್ಲಿ ಅವಕಾಶವಾಗಿ ಕುದಿಸಿ ||೧೦೦|| ಸಿದ್ಧವಾಡಿ ತಣ್ಣಗಾಗಲು ೧-೧ ತೊಲಿ ಗುಳಿಗೆಗಳನ್ನು ಮಾಡಬೇಕು. ಅಗ್ನಿಯ ಬಲವನ್ನು ನೋಡಿ ಇವುಗಳನ್ನು ತಿಂದರೆ ಪ್ಲೀಹ, ಪಾಂಡು, ಸಂಗ್ರಹಣಿ, ಮೂಲ ವ್ಯಾಧಿಗಳು ಹೋಗುವವು. ||೧೦೧|| ಇವನ್ನು ತಿನ್ನುವಾಗ್ಗೆ ಮಜ್ಜಿಗೆ ಮತ್ತು ಜವೆಯ ಮಂಡದಮೇಲೆ ಇರಬೇಕು. ||೧೦೧||

ಗೌಡಾರಿಷ್ಟವನ್ನು ಹೇಳುತ್ತಾರೆ.

ದ್ರಾಕ್ಷಾಹರಿದ್ರಾಮಂಜಿಷ್ಠಾಬಲಾಮೂಲಾನ್ಯಯೋರಜಃ ||೧೦೨||
ಲೋಧ್ರಶ್ಚೈತೇಷು ಗೌಡಃ ಸ್ಯಾದರಿಷ್ಟಃ ಪಾಂಡುರೋಗಿಣಾಮ್

**ಅರ್ಥ:**— ದ್ರಾಕ್ಷೆ, ಅರಿಷಿಣ, ಮಂಜಿಷ್ಠ, ಬಲಾಮೂಲ, ಲೋಹ ಭಸ್ಮ ||೧೦೩|| ಲೋಧ ಇವುಗಳ ಸಮಭಾಗ ಚೂರ್ಣದಲ್ಲಿ ಇವೆಲ್ಲದರ ೮ ಪಾಲು ಬೆಲ್ಲ, ಬೆಲ್ಲದ ೪ ಪಾಲು ನೀರು ಹಾಕಿ ತುಪ್ಪದ ಕೊಡದಲ್ಲಿ ಇಡಬೇಕು. ಅದು ಸಿದ್ಧವಾಗಲು ಪಾಂಡುರೋಗಿಗೆ ಕೊಡಬೇಕು. ||೧೦೩||

ಜೀರಕಾದ್ಯರಿಷ್ಟವನ್ನು ಹೇಳುತ್ತಾರೆ.

ಜೀರಕಪಲಾನ್ಯಷ್ಟೌ ತ್ರಿಫಲಾಯಾಶ್ಚ ವಿಂಶತಿಃ ೧೦೩||
ದ್ರಾಕ್ಷಾಯಾಃ ಷಷ್ಠಾ ಲಾಕ್ಷಾಯಾಃ ಸಪ್ತ ದ್ರೋಣೇ ಜಲಸ್ಯ ತತ್ ||
ಸಾಧ್ಯಂ ಪಾದಾವಶೇಷೇ ಚ ಪೂತಶೀತೇ ಪ್ರದಾಪಯೇತ್ ||೧೦೪||

ಶರ್ಕರಾಯಾಸ್ತುಲಾಂ ಪ್ರಸ್ಥಂ ಕ್ಷಾದ್ರಂ ದದ್ಯಾಚ್ಚ ಕಾರ್ಷಿಕಮ್ ||
ತ್ರ್ಯೋಷವ್ಯಾಘ್ರನಖೋಶೀರಂ ಕ್ರಮುಕಂ ಸ್ಯೆಲವಾಲುಕಮ್ ||೧೦೫||

ಮಧೂಕಂ ಕುಷ್ಠಮಿತ್ಯೇತಚ್ಚೂರ್ಣಿತಂ ಘೃತಭಾಜನೇ ||
ಮವೇಷು ದಶರಾತ್ರಸ್ಥಂ ಗ್ರೀಷ್ಮೇ ದ್ವಿಃ ಶಿಶಿರೇ ಸ್ಥಿತಮ್ ||೧೦೬||

ಪಿಬೇತ್ ತದ್ಗ್ರಹಣೀಪಾಂಡುರೋಗಾರ್ಶಃಶೋಥಗುಲ್ಮನುತ್ ||
ಮೂತ್ರಕೃಚ್ಛ್ರಾಶ್ಮರೀಮೇಹಕಾಮಲಾಸನ್ನಿಪಾತನುತ್ ||೧೦೭||

ಜೀರಕಾರಿಷ್ಟ ಏಷ್ಯೈಷ ಆತ್ರೇಯೇಣ ಪ್ರಕೀರ್ತಿತಃ ||೧೦೭½||

**ಅರ್ಥಃ**— ಜೀರಿಗೆ ೩೨ ತೊಲಿ, ಶಾಜೀರಿಗೆ ೩೨ ತೊಲಿ, ತ್ರಿಫಳೆ ೮೦ ತೊಲಿ, ||೧೦೩|| ದ್ರಾಕ್ಷೆ ೨೦ ತೊಲಿ, ಅರಗು ೨೮ ತೊಲಿ, ನೀರು ೨ ದ್ರೋಣ (೨೦೪೮ ತೊಲಿ), ಹಾಕಿ ಕುದಿಸಿ ¼ ಉಳಿಯಲು ಸೋಸಿ ಆರಿಸಿ ||೧೦೪|| ಅದರಲ್ಲಿ ಸಕ್ಕರೆ ೪೦೦ ತೊಲಿ, ಜೇನು ೧೨೮ ತೊಲಿ, ತ್ರಿಕಟು, ವ್ಯಾಘ್ರನಖ (ಗಂಧದ್ರವ್ಯ), ಬಾಳದಬೇರು, ಕ್ರಮುಕ (ಅಡಿಕೆ), ಏಲವಾಲುಕ (ಸುರಸುರಿಕೆ), ||೧೦೫|| ಇಪ್ಪೇಹೂವು, ಕೋಷ್ಠ ಇವುಗಳ ಚೂರ್ಣವನ್ನು ೧-೧ ತೊಲಿ ಕೂಡಿಸಿ ತುಪ್ಪದ ಕೊಡದಲ್ಲಿ ಹಾಕಿ ಜವೆಯ ರಾಶಿಯಲ್ಲಿ, ಬೇಸಿಗೆಯಿದ್ದರೆ ೧೦ ದಿವಸ, ಚಳಿಗಾಲವಿದ್ದರೆ ೨೦ ದಿವಸ ಹುಗಿದಿಟ್ಟು ||೧೦೬|| ನಂತರ ತಕ್ಕೊಂಡು ಕುಡಿಯಬೇಕು. ಅದು ಸಂಗ್ರಹಣಿ, ಪಾಂಡುರೋಗ, ಮೂಲವ್ಯಾಧಿ, ಬಾವು, ಗುಲ್ಮ, ಮೂತ್ರಕೃಚ್ಛ್ರ, ಮೂತ್ರಾಶ್ಮರಿ ಪ್ರಮೇಹ, ಕಾಮಲೆ, ಸನ್ನಿಪಾತಗಳನ್ನು ಕಳೆಯುವದು.||೧೦೭|| ಈ ಜೀರಕಾರಿಷ್ಟವು ಆತ್ರೇಯರಿಂದ ಹೇಳಲ್ಪಟ್ಟದೆ.(೧೦೭½)

ಧಾತ್ರ್ಯರಿಷ್ಟವನ್ನು ಹೇಳುತ್ತಾರೆ.

ಧಾತ್ರೀಫಲಸಹಸ್ರೇ ದ್ವೇ ಪೀಡಯಿತ್ವಾ ರಸಂ ಭಿಷಕ್ ||೧೦೮||

ಕ್ಷೌದ್ರಾಷ್ಟಭಾಗಂ ಪಿಪ್ಪಲ್ಯಾಶ್ಚೂರ್ಣಾರ್ಧಕುಡವಾಯುತಮ್||
ಶರ್ಕರಾರ್ಧತುಲೋನ್ಮಿಶ್ರಂ ಪಕ್ಷಂ ಸ್ನಿಗ್ಧಘಟೇ ಸ್ಥಿತಮ್ ||೧೦೯||

ಪ್ರಪಿಬೇನ್ಮಾತ್ರಯಾ ಪ್ರಾತರ್ಜೀರ್ಣೇ ಹಿತಮಿತಾಶನಃ ||
ಕಾಮಲಾಪಾಂಡುಹೃದ್ರೋಗವಾತಾಸೃಗ್ವಿಷಮಜ್ವರಾನ್ ||೧೧೦||

ಕಾಸಹಿಕ್ಕಾರುಚಿಶ್ವಾಸಾನೇಷೋಽರಿಷ್ಟಃ ಪ್ರಣಾಶಯೇತ್ ||೧೧೦½||

**ಅರ್ಥಃ**— ೨೦೦೦ ನೆಲ್ಲೀಕಾಯಿಗಳನ್ನು ಜಜ್ಜಿ ಹಿಂಡಿ ವೈದ್ಯನು ಅದರ ರಸವನ್ನು ತೆಗೆದು ||೧೦೮|| ಅದರಲ್ಲಿ ಅದರ ಎಂಟನೇಭಾಗ ಜೇನು,

ಪಿಪ್ಪಲೀ ಚೂರ್ಣ ೮ ತೊಲಿ ಸಕ್ಕರೆ ೨೦೦ ತೊಲಿ, ಕೂಡಿಸಿ ತುಪ್ಪದ ಕೊಡದಲ್ಲಿ ೧೫ ದಿವಸ ಇಡಬೇಕು ||೧೦೯|| ಬೆಳಿಗ್ಗೆ ಯೋಗ್ಯ ಪ್ರಮಾಣದಲ್ಲಿ ಕುಡಿದು ಅದು ಜೀರ್ಣವಾಗಲು ಹಿತಕರವಾದ ಆಹಾರವನ್ನು ಮಿತಿಯಿಂದ ತಿನ್ನಬೇಕು. ಈ ಅರಿಷ್ಟವು ಕಾಮಾಲೆ, ಪಾಂಡು ಹೃದ್ರೋಗ, ವಾತರಕ್ತ, ವಿಷಮಜ್ವರ, ||೧೧೦|| ಕೆಮ್ಮು, ಬಿಕ್ಕು, ಅರುಚಿ, ಶ್ವಾಸಗಳನ್ನು ಕಳೆಯುತ್ತದೆ. (೧೧೦ತ್ತಿ)

**ಸ್ಥಿರಾದಿಭಿಃ ಶೃತಂ ತೋಯಂ ಪಾನಾಹಾರೇ ಪ್ರಶಸ್ಯತೇ ||೧೧೧||**

**ಪಾಂಡೂನಾಂ ಕಾಮಲಾರ್ತಾನಾಂ ಮೃದ್ವೀಕಾಮಲಕಾದ್ರಸಃ||**
**ಪಾಂಡುರೋಗಪ್ರಶಾಂತ್ಯರ್ಥಮಿದಮುಕ್ತಂ ಚಿಕಿತ್ಸಿತಮ್ ||೧೧೧||**

**ವಿಕಲ್ಪ್ಯಮೇತದ್ ಬಿಷಜಾ ಪೃಥಗ್ ದೋಷಬಲಂ ಪ್ರತಿ ||**
**ಸ್ನೇಹಪ್ರಾಯಂ ಪವನಜೇ ತಿಕ್ತಶೀತಂ ತು ಪೈತ್ತಿಕೇ ||೧೧೩||**

**ಶ್ಲೈಷ್ಮಿಕೇ ಕಟುರುಕ್ಷೋಷ್ಣಂ ಮಿಶ್ರಂ ಸ್ಯಾತ್ ಸಾನ್ನಿಪಾತಿಕೇ||೧೧೩ತ್ತಿ||**

**ಅರ್ಥಃ—** ಪಾಂಡುರೋಗಿಗಳಿಗೆ ಕುಡಿಯಲಿಕ್ಕೆ ಮತ್ತು ಆಹಾರವಲ್ಲಿ ||೧೧೧|| ಲಘುಪಂಚಮೂಲದಿಂದ ಸಿದ್ಧವಾದ ನೀರೂ ಕಾಮಲಾರೋಗಿಗಳಿಗೆ ದ್ರಾಕ್ಷಿ, ನೆಲ್ಲಿಕಾಯಿಗಳ ಕಷಾಯವು ಪ್ರಶಸ್ತವು. ಪಾಂಡುರೋಗದ ನಾಶಕ್ಕಾಗಿ ಈ ಸಾಮಾನ್ಯಚಿಕಿತ್ಸೆಯು ಹೇಳಲ್ಪಟ್ಟಿತು. ||೧೧೨|| ಆದರೆ ವೈದ್ಯನು ಬೇರೆ ಬೇರೆ ದೋಷಗಳ ಬಲವನ್ನು ನೋಡಿ ಬೇರೆ ಬೇರೆ ಚಿಕಿತ್ಸೆ ಮಾಡಬೇಕು. ವಾತಿಕಪಾಂಡುವಿನಲ್ಲಿ ಸ್ನಿಗ್ಧ, ಪೈತ್ತಿಕಪಾಂಡುವಿನಲ್ಲಿ ಕಹಿ ಮತ್ತು ಶೀತ ||೧೧೩|| ಕಫಜಪಾಂಡುವಿನಲ್ಲಿ ಕಾರ ರುಕ್ಷ ಉಷ್ಣ ಮತ್ತು ತ್ರಿದೋಷಜ ಪಾಂಡುವಿನಲ್ಲಿ ಮಿಶ್ರವಾದ ಔಷಧಗಳನ್ನು ಉಪಯೋಗಿಸಬೇಕು. (೧೧೩ತ್ತಿ)

ಮೃತ್ತಿಕಾಪಾಂಡುರೋಗದ ಚಿಕಿತ್ಸೆಯನ್ನು ಹೇಳುತ್ತಾರೆ.

**ನಿಪಾತಯೇಚ್ಛರೀರಾತ್ತು ಭಕ್ಷಿತಾಂ ಮೃತ್ತಿಕಾಂ ಭಿಷಕ್ ||೧೧೪||**

**ಯುಕ್ತಿಜ್ಞಃ ಶೋಧನೈಸ್ತೀಕ್ಷ್ಣೈಃ ಪ್ರಸಮೀಕ್ಷ್ಯ ಬಲಾಬಲಮ್ ||**

**ಶುದ್ಧಕಾಯಸ್ಯ ಸರ್ಪೀಂಷಿ ಬಲಾಧಾನಾನಿ ಯೋಜಯೇತ್ ||೧೧೫||**

**ಅರ್ಥ:—** ಯೋಜನೆಗಳನ್ನು ಬಲ್ಲ ವೈದ್ಯನು ತಿಂದ ಮಣ್ಣನ್ನು ||೧೧೪|| ಅವನ ಬಲಾಬಲಗಳನ್ನು ನೋಡಿ ತೀಕ್ಷ್ಣವಾದ ಶೋಧನಗಳಿಂದ ಶರೀರದ ಹೊರಗೆ ತೆಗೆಯಬೇಕು. ಶರೀರವು ಶುದ್ಧವಾದ ನಂತರ ಬಲಕರವಾದ (ಮುಂದೆ ಹೇಳಿದ) ಘೃತಗಳನ್ನು ಕೊಡಬೇಕು. (೧೧೫)

**ವ್ಯೋಷಾದಿ ಘೃತವನ್ನು ಹೇಳುತ್ತಾರೆ.**

**ವ್ಯೋಷಂ ಬಿಲ್ವಂ ಹರಿದ್ರೇ ದ್ವೇ ತ್ರಿಫಲಾ ದ್ವೇ ಪುನರ್ನವೇ ||**
**ಮುಸ್ತಾನ್ಯಯೋರಜಃ ಪಾಠಾಂ ವಿಡಙ್ಗಂ ದೇವದಾರು ಚ ||೧೧೬||**
**ವೃಶ್ಚಿಕಾಲೀ ಚ ಭಾರ್ಗೀ ಚ ಸಕ್ಷೀರೈಸ್ತೈಃ ಸಮೈಶ್ಚೂರ್ಣೈಮ್ ||**
**ಸಾಧಯಿತ್ವಾ ಪಿಬೇದ್ಯುಕ್ತ್ಯಾ ನರೋ ಮೃದ್ದೋಷಪೀಡಿತಃ ||೧೧೭||**
**ತದ್ವತ್ಕೇಶರಯಷ್ಟ್ಯಾಹ್ವಪಿಪ್ಪಲೀಕ್ಷಾರಶಾದ್ವಲೈಃ ||೧೧೭||**

**ಅರ್ಥ:—** ತ್ರಿಕಟು, ಬಿಲ್ವ, ಅರಿಶಿಣ, ಮರಅರಿಷಿಣ, ತ್ರಿಫಳೆ, ಬಿಳೀ, ಕೆಂಪು ಗಣಜಲಬೇರು, ಜೇಕು, ಲೋಹಭಸ್ಮ, ಅಗಳಸುಂಠಿ, ವಾವಡಿಂಗ, ದೇವದಾರು, ||೧೧೬|| ಮೇಷಶೃಂಗಿ, ಜವಖಾರ, ಭಾರಂಗಮೂಲ ಇವುಗಳ ಚೂರ್ಣವನ್ನು ಸಮವಾಗಿ ತಕ್ಕೊಂಡು ಇವರ ೧೬ ಪಾಲು ನೀರು ಹಾಕಿ (ಚೂರ್ಣದ) ೪ ಪಾಲು ಘೃತವನ್ನು ಸಿದ್ಧಪಡಿಸಬೇಕು. ಮೃತ್ಪಾಂಡುರೋಗಿಯು ಅದನ್ನು ಯೋಗ್ಯ ಪ್ರಮಾಣದಲ್ಲಿ ತಕ್ಕೊಳ್ಳಬೇಕು. ||೧೧೭|| ಅದರಂತೆ ನಾಗಕೇಶರ, ಜ್ಯೇಷ್ಠಮಧು, ಪಿಪ್ಪಲಿ, ಜವಖಾರ, ಕರಿಕೆಗಳ ಕಲ್ಕವನ್ನು ಸಮವಾಗಿ ತಕ್ಕೊಂಡು ೧೬ ಪಾಲು ನೀರುಹಾಕಿ ಕಲ್ಕದ ೪ ಪಾಲು ಘೃತವನ್ನು ಸಿದ್ಧಮಾಡಿ ತಕ್ಕೊಳ್ಳಬೇಕು. (೧೧೭)

**ಮೃದ್ಭಕ್ಷಣಾದಾತುರಸ್ಯ ಲೌಲ್ಯಾದವಿನಿವರ್ತಿನಃ (೧೧೮)**

**ದ್ವೇಷಾರ್ಥೇ ಭಾವಿತಾಂ ಕಾಮಂ ದದ್ಯಾತ್ತದ್ದೋಷನಾಶನೈಃ ||**
**ವಿಡಂಗೈಲಾತಿವಿಷಯಾ ನಿಂಬಪತ್ರೇಣ ಪಾಠಯಾ ||೧೧೯||**

**ವಾರ್ತಾಕೈಃ ಕಟುರೋಹಿಣ್ಯಾ ಕೌಟಜೈರ್ಮೂರ್ವಯಾಪಿ ವಾ ||**
**ಯಥಾದೋಷಂ ಪ್ರಕುರ್ವೀತ ಭೇಷಜಂ ಪಾಂಡುರೋಗಿಣಾಮ್**

**ಕ್ರಿಯಾವಿಶೇಷ ಏಷೋಽಸ್ಯ ಮತೋ ಹೇತುವಿಶೇಷತಃ ||೧೨೦||**

**ಅರ್ಥ:—** ನಾಲಿಗೆ ಚಾಪಲ್ಯದಿಂದ, ಮಣ್ಣು ತಿನ್ನುವುದನ್ನು ಬಿಡದ ರೋಗಿಗೆ ||೧೧೮|| ಮಣ್ಣಿನಲ್ಲಿ ದ್ವೇಷಉಂಟಾಗುವದಕ್ಕಾಗಿ ವೃದ್ಧ್ಯಕ್ಷಣ ದೋಷನಾಶಕವಾದ ವಾವಡಿಂಗ, ಯಾಲಕ್ಕಿ, ಅತಿವಿಷ, ಬೇವು, ಅಗಳ ಸುಂಠಿ, ||೧೧೯|| ವಾರ್ತಾಕ (ಬದನೆ), ಕಟುಕರೋಣಿ, ಇಂದ್ರಜವ ಮೂರ್ವಾ (ಹಾಲುಗೊರಟಿಗೆ) ಗಳ ಭಾವನೆಕೊಟ್ಟ ಮಣ್ಣನ್ನು ಯಥೇಷ್ಟ ವಾಗಿ ತಿನ್ನಲು ಕೊಡಬೇಕು. ವೃತ್ಪಾಂಡುರೋಗಿಗೆ ದೋಷಕ್ಕೆ ತಕ್ಕ ಚಿಕಿತ್ಸೆಯನ್ನು ಮಾಡಬೇಕು. ||೧೨೦|| ಕಾರಣವನ್ನು ಗೊತ್ತುಹಿಡಿದು ಅದಕ್ಕೆ ತಕ್ಕ ಚಿಕಿತ್ಸೆಯನ್ನು ಈ ರೋಗದಲ್ಲಿ ಮಾಡಬೇಕು ||೧೨೦||

**ಕೋಷ್ಠಾಶ್ರಯ ಕಾಮಲಾಭೇದಚಿಕಿತ್ಸೆಯನ್ನು ಹೇಳುತ್ತಾರೆ.**

**ತಿಲಪಿಷ್ಟನಿಭಂ ಯಸ್ತು ಕಾಮಲಾವಾನ್‌ಸೃಜೇನ್ಮಲಮ್ ||೧೨೧||**

**ಶ್ಲೇಷ್ಮಣಾ ರುದ್ಧಮಾರ್ಗಂ ತಂ ಕಫಪಿತ್ತಹರೈರ್ಜಯೇತ್ ||೧೨೧||**

**ಅರ್ಥಃ—** ಯಾವ ಕಾಮಲಾರೋಗಿಗೆ ಎಳ್ಳಿನ ಕಲ್ಕದಂತೆ ಬಿಳೀ ಮಲವು ಬೀಳುವದೋ ||೧೨೧|| ಅವನ ಪಿತ್ತದ ಮಾರ್ಗವು ಕಫದಿಂದ ಪ್ರತಿಬಂಧಿಸಲ್ಪಟ್ಟಿರುತ್ತದೆ ಆದ್ದರಿಂದ ಕಫಪಿತ್ತನಾಶಕ ಔಷಧಗಳನ್ನು ಕೊಟ್ಟು ಆ ಮಾರ್ಗವನ್ನು ಸರಿಪಡಿಸಬೇಕು. ||೧೨೧||

**ಶಾಖಾಶ್ರಿತಕಾಮಲಾ ಲಕ್ಷಣ ಚಿಕಿತ್ಸೆಗಳನ್ನು ಹೇಳುತ್ತಾರೆ.**

**ರೂಕ್ಷಶೀತಗುರುಸ್ವಾದು ವ್ಯಾಯಾಮೈರ್ವೇಗನಿಗ್ರಹೈಃ ||೧೨೨||**

**ಕಫಸಮ್ಮೂರ್ಛಿತೋ ವಾಯುಃ ಸ್ಥಾನಾತ್‌ಪಿತ್ತಂ ಕ್ಷಿಪೇದ್‌ಬಲೀ||**
**ಹಾರಿದ್ರನೇತ್ರಮೂತ್ರತ್ವಕ್ ಶ್ವೇತವರ್ಚಾಸ್ತದಾ ನರಃ ||೧೨೩||**

**ಭವೇತ್‌ಸಾಟೋಪವಿಷ್ಟಂಭೋ ಗುರುಣಾ ಹೃದಯೇನ ಚ ||**

ದೌರ್ಬಲ್ಯಾಲ್ಪಾಗ್ನಿಪಾರ್ಶ್ವಾರ್ತಿಹಿಕ್ಕಾಕಾಸಾರುಚಿಜ್ವರೈಃ ॥೧೨೪॥
ಕ್ರಮೇಣಾಲ್ಪೇನ ಸಜ್ಯೇತ ಪಿತ್ತೇ ಶಾಖಾಸಮಾಶ್ರಿತೇ ॥
ಬರ್ಹಿತಿತ್ತಿರಿದಕ್ಷಾಣಾಂ ರುಕ್ಷಾಮ್ಲಕಟುಕೈ ರಸೈಃ ॥೧೨೫
ಶುಷ್ಕಮೂಲಕಕೌಲತ್ಥೈರ್ಯೂಷೈಶ್ಚಾನ್ನಾನಿ ಭೋಜಯೇತ್ ॥
ಮಾತುಲುಙ್ಗರಸಂ ಕ್ಷೌದ್ರಪಿಪ್ಪಲೀಮರಿಚಾನ್ವಿತಮ್ ॥೧೨೬॥
ಸನಾಗರಂ ಪಿಬೇತ್ಪಿತ್ತಂ ತಥಾಸ್ಯೈತಿ ಸ್ವಮಾಶಯಮ್ ॥೧೨೬॥

**ಅರ್ಥ:—** ರುಕ್ಷ, ಶೀತ, ಜಡ, ಮಧುರ, ಆಹಾರಗಳಿಂದ ಮತ್ತು ವ್ಯಾಯಾಮ ವೇಗನಿಗ್ರಹಗಳಿಂದ ॥೧೨೨॥ ಬಲಿಷ್ಠವಾದ, ಕಫಯುಕ್ತ ವಾಯುವು ಪಿತ್ತವನ್ನು ಅದರ ಸ್ಥಾನದಿಂದ ಹೊರಗೆ ಚೆಲ್ಲುವದು. ಅದರಿಂದ ಪಿತ್ತವು ರಕ್ತಾದಿಧಾತು ಮತ್ತು ತ್ವಚೆಯನ್ನು ಸೇರುವದು. ಆಗ್ಗೆ ರೋಗಿಯ ಕಣ್ಣು, ಮೂತ್ರ, ತ್ವಚೆಗಳು ಹಳದಿ; ಆದರೆ ಮಲವು ಬೆಳ್ಳಗೆ ಆಗುವದು. ॥೧೨೩॥ ಹೊಟ್ಟೆಯಲ್ಲಿ ಶಬ್ದ, ಮಲಬಂಧ, ಹೃದಯವು ಜಡ ಆಗುವದು ಅಶಕ್ತಿ, ಅಗ್ನಿಮಾಂದ್ಯ, ಪಾರ್ಶ್ವಶೂಲ, ಬಿಕ್ಕು, ಕೆಮ್ಮು, ಅರುಚಿ, ಜ್ವರಗಳು ॥೧೨೪॥ ಕ್ರಮವಾಗಿ ಸ್ವಲ್ಪ ಸ್ವಲ್ಪ ಉಂಟಾಗಹತ್ತುವವು. ಅವನಿಗೆ ನವಿಲು, ತಿತ್ತಿರಿ, ಕೋಳಿಗಳ ರುಕ್ಷ, ಹುಳಿ, ಕಾರ, ಮಾಂಸರಸಗಳಿಂದಲೂ ॥೧೨೫॥ ಒಣಮೂಲಂಗಿ ಹುರಳಿಯ ಕಟ್ಟುಗಳಿಂದಲೂ ಅನ್ನವನ್ನು ತಿನ್ನಿಸಬೇಕು. ಜೇನು, ಹಿಪ್ಪಲಿ, ಮೆಣಸು, ಸುಂಠಿಗಳ ಚೂರ್ಣವನ್ನು ಹಾಕಿದ ॥೧೨೬॥ ಮಾದಾಳದ ರಸವನ್ನು ಕುಡಿಸಬೇಕು. ಹೀಗೆ ಮಾಡಲು ಪಿತ್ತವು ತನ್ನ ಸ್ಥಾನವನ್ನು ಸೇರುವದು. (೧೨೬)

ಕಟುತೀಕ್ಷ್ಣೈಸ್ತು ಲವಣೈರ್ಭೂಯೋಽಮ್ಲೈಶ್ಚಾಪ್ಯುಪಕ್ರಮಃ॥೧೨೭॥
ಆಪಿತ್ತರೋಗಾಚ್ಚ ಕೃತೋ ವಾಯೋಶ್ಚಾಪ್ರಶಮಾದ್ಭವೇತ್ ॥
ಸ್ವಸ್ಥಾನಮಾಗತೇ ಪಿತ್ತೇ ಮಲೇ ಪಿತ್ತಾನುರಞ್ಜಿತೇ ॥೧೨೮॥
ನಿವೃತ್ತೋಪದ್ರವಸ್ಯಾಸ್ಯ ಪೂರ್ವಃ ಕಾಮಲಿಕೋ ವಿಧಿಃ (೧೨೮)

**ಅರ್ಥ:—** (ಕಣ್ಣು ಮುಂತಾದವುಗಳಲ್ಲಿ) ಪಿತ್ತದ ಲಕ್ಷಣಗಳಿರುವವರೆಗೆ ವಾತದ ಶಮನವಾಗುವವರೆಗೆ ಬಹಳ ಕಾರ, ತೀಕ್ಷ್ಣ, ಉಪ್ಪು ಹುಳಿ ದ್ರವ್ಯಗಳನ್ನು ಕೊಡಬೇಕು. ॥೧೨೭॥ ಪಿತ್ತವು ತನ್ನ ಸ್ಥಾನಕ್ಕೆ

ಬರಲು ಮಲದಲ್ಲಿ ಪಿತ್ತದ ಬಣ್ಣವು ಕಾಣಲು ||೧೨೮|| ಉಪದ್ರವಗಳು ಹೋಗಲು ಮೊದಲಿನ ಕಾಮಲಾಚಿಕಿತ್ಸೆಯನ್ನು ಮಾಡಬೇಕು. ||೧೨೮½||

ಹಲೀಮಕವನ್ನು ಹೇಳುತ್ತಾರೆ-

**ಯದಾ ತು ಪಾಂಡೋರ್ವರ್ಣಃ ಸ್ಯಾದ್ಧರಿತಶ್ಯಾವಪೀತಕಃ ||೧೨೯||**
**ಬಲೋತ್ಸಾಹಕ್ಷಯಸ್ತಂದ್ರಾ ಮಂದಾಗ್ನಿತ್ವಂ ಮೃದುಜ್ವರಃ ||**
**ಸ್ತ್ರೀಷ್ವಹರ್ಷೋಽಙ್ಗಮರ್ದಶ್ಚ ಶ್ವಾಸಸ್ತೃಷ್ಣಾರುಚಿರ್ಭ್ರಮಃ ||೧೩೦||**
**ಹಲೀಮಕಂ ತದಾ ತಸ್ಯ ವಿದ್ಯಾದನಿಲಪಿತ್ತತಃ ||೧೩೦½||**

**ಅರ್ಥಃ**— ಯಾವಾಗ್ಗೆ ಪಾಂಡುರೋಗಿಯ ಬಣ್ಣವು ಹಸರು, ಕಪ್ಪು, ಹಳದಿ, ||೧೨೯|| ಬಲಉತ್ಸಾಹಗಳ ನಾಶ, ತಂದ್ರೆ, ಅಗ್ನಿಮಾಂದ್ಯ, ಸಣ್ಣ ಜ್ವರ, ಕಾಮವಿಕಾರನಾಶ, ಮೈನೋಯೋಣ, ಶ್ವಾಸ, ನೀರಡಿಕೆ, ಅರುಚಿ, ಭ್ರಮಗಳುಂಟಾಗುವವೋ ||೧೩೦|| ಆಗ್ಗೆ ಅವನಿಗೆ ವಾತಪಿತ್ತದಿಂದ ಹಲೀಮಕವಾಗಿದೆಯೆಂದು ತಿಳಿಯಬೇಕು. (೧೩೦½)

ಹಲೀಮಕ ಚಿಕಿತ್ಸೆಯನ್ನು ಹೇಳುತ್ತಾರ.

**ಗುಡೂಚೀಸ್ವರಸಕ್ಷೀರಸಾಧಿತಂ ಮಾಹಿಷಂ ಘೃತಮ್ ||೧೩೧||**
**ಸ ಪಿಬೇತ್ ತ್ರಿವೃತಾಂ ಸ್ನಿಗ್ಧೋ ರಸೇನಾಮಲಕಸ್ಯ ತು ||**
**ವಿರಿಕ್ತೋ ಮಧುರಪ್ರಾಯಂ ಭಜೇತ್ ಪಿತ್ತಾನಿಲಾಪಹಮ್ ||೧೩೨||**
**ದ್ರಾಕ್ಷಾಲೇಹಞ್ಚ ಪೂರ್ವೋಕ್ತಂ ಸರ್ಪೀಂಷಿ ಮಧುರಾಣಿ ಚ ||**
**ಯಾಪನಾನ್ ಕ್ಷೀರಬಸ್ತೀಂಶ್ಚ ಶೀಲಯೇತ್ ಸಾನುವಾಸನಾನ್ ||೧೩೩||**
**ಮಾರ್ದ್ವೀಕಾರಿಷ್ಟಯೋಗಾಂಶ್ಚ ಪಿಬೇದ್ ಯುಕ್ತ್ಯಾಗ್ನಿವೃದ್ಧಯೇ ||**
**ಕಾಸಿಕಞ್ಚಾಭಯಾಲೇಹಂ ಪಿಪ್ಪಲೀಂ ಮಧುಕಂ ಬಲಾಮ್ ||೧೩೪||**
**ಪಯಸಾ ಚ ಪ್ರಯುಞ್ಜೀತ ಯಥಾದೋಷಂ**
**ಯಥಾಬಲಮ್ ||೧೩೪½||**

**ಅರ್ಥಃ**—ಅವನು ಅಮೃತಬಳ್ಳಿಯರಸ, ಹಾಲುಗಳಿಂದ ಸಿದ್ಧವಾದ ಎಮ್ಮೆಯ ಘೃತವನ್ನು ಕುಡಿಯಬೇಕು. ||೧೩೧|| ಅದರಿಂದ ಸ್ನಿಗ್ಧನಾಗಿ

ನೆಲ್ಲೀರಸದೊಡನೆ ನಿಶೋತ್ತರವನ್ನು ತೆಗೆದುಕೊಳ್ಳಬೇಕು. ಅದರಿಂದ ವಿರೇಚನವಾಗಲು ವಾತಪಿತ್ತನಾಶಕಗಳಾದ, ಮಧುರದ್ರವ್ಯಗಳು ಹೆಚ್ಚಾಗಿ ಉಳ್ಳ ಆಹಾರ ಔಷಧಗಳನ್ನು ತಿನ್ನಬೇಕು ||೧೩೨|| ಹಿಂದೆ ಹೇಳಿದ ದ್ರಾಕ್ಷಾಲೇಹ, ಮಧುರ ಘೃತಗಳನ್ನೂ(ಸಿದ್ಧಿಸ್ಥಾನದಲ್ಲಿ ಹೇಳಿದ) ಯಾಪನ ಕ್ಷೀರಬಸ್ತಿ ಅನುವಾಸನ ಬಸ್ತಿಗಳನ್ನೂ ||೧೩೩|| ಆಗಾಗ್ಗೆ ಕೊಡಬೇಕು. ಅಗ್ನಿಯ ವೃದ್ಧಿಗಾಗಿ ದ್ರಾಕ್ಷಾರಿಷ್ಟಗಳನ್ನೂ ಕುಡಿಯಬೇಕು. ಅವನ ದೋಷ ಮತ್ತು ಬಲಗಳನ್ನು ವಿಚಾರಿಸಿ ಕಾಸಚಿಕಿತ್ಸೆಯಲ್ಲಿ ಹೇಳಿದ ಅಭಯಾಲೇಹವನ್ನೂ ಅಥವಾ ಹಾಲಿನೊಡನೆ ಹಿಪ್ಪಲಿ, ಜೇಷ್ಠಮಧು, ಬಲಾ ಮೂಲಗಳ ಚೂರ್ಣವನ್ನು ಕೊಡಬೇಕು. (೧೩೪೧)

## ತತ್ರ ಶ್ಲೋಕಾ

**ಪಾಂಡೋಃ ಪಞ್ಚವಿಧಸ್ಯೋಕ್ತಂ ಹೇತುಲಕ್ಷಣಭೇಷಜಮ್ ||೧೩೫||**
**ಕಾಮಲಾ ದ್ವಿವಿಧಾ ತೇಷಾಂ ಸಾಧ್ಯಾಸಾಧ್ಯತ್ವಮೇವ ಚ ||**
**ತೇಷಾಂ ವಿಕಲ್ಪೋ ಯಶ್ಚಾನ್ಯೋ ಮಹಾವ್ಯಾಧಿರ್ಹಲೀಮಕಃ ||**
**ತಸ್ಯ ಚೋಕ್ತಂ ಸಮಾಸೇನ ಲಕ್ಷಣಂ ಸಚಿಕಿತ್ಸಿತಮ್ ||೧೩೬೧||**

**ಅರ್ಥಃ—** ಐದು ಪ್ರಕಾರದ ಪಾಂಡುರೋಗದ ಕಾರಣ ಲಕ್ಷಣ ಚಿಕಿತ್ಸೆಗಳು ಹೇಳಲ್ಪಟ್ಟವು. ||೧೩೫|| ಮತ್ತು ಎರಡು ಪ್ರಕಾರದ ಕಾಮಲೆಗಳು, ಅವುಗಳ ಸಾಧ್ಯಾಸಾಧ್ಯತೆಗಳು ಮತ್ತು ಅದರ ಬೇರೊಂದು ಅವಸ್ಥೆಯು, ದೊಡ್ಡರೋಗವಾದ ಹಲೀಮಕದ ||೧೩೬|| ಲಕ್ಷಣ ಚಿಕಿತ್ಸೆಗಳೂ, ಸಂಕ್ಷೇಪವಾಗಿ ಇಲ್ಲಿ ಹೇಳಲ್ಪಟ್ಟವು. (೧೩೬೧)

**ಇತ್ಯಗ್ನಿವೇಶಕೃತೇ ತಂತ್ರೇ ದೃಢಬಲಪ್ರತಿಸಂಸ್ಕೃತೇ ಚಿಕಿತ್ಸಿತಸ್ಥಾನೇ ಪಾಂಡುರೋಗಚಿಕಿತ್ಸಿತಂ ನಾಮ ಷೋಡಶೋಽಧ್ಯಾಯಃ**
**||೧೬||**

ಈ ಪ್ರಕಾರ ಅಗ್ನಿವೇಶರಿಂದ ರಚಿಸಲ್ಪಟ್ಟು ದೃಢಬಲರಿಂದ ಸಂಸ್ಕಾರ ಪಡೆದ ಚರಕಸಂಹಿತೆಯ ಚಿಕಿತ್ಸಾಸ್ಥಾನದಲ್ಲಿ '**ಪಾಂಡುರೋಗ ಚಿಕಿತ್ಸೆ**' ಎಂಬ ಹದಿನಾರನೆಯ ಅಧ್ಯಾಯವು ಮುಗಿದುದು.

ಶ್ರೀಮದಾದ್ಯ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯ ರಿಂದ ರಚಿತವಾದ ಚರಕ 'ಚಿಕಿತ್ಸಾ ಬೋಧಿನೀ' ಎಂಬ ಚರಕಸಂಹಿತೆಯು ಟಿಪ್ಪಣೆಯಲ್ಲಿ ಚಿಕಿತ್ಸಾಸ್ಥಾನದಲ್ಲಿ 'ಪಾಂಡುರೋಗ ಚಿಕಿತ್ಸೆ' ಎಂಬ ಹದಿನಾರನೆಯ ಅಧ್ಯಾಯವು ಮುಗಿದುದು. ‖೧೬‖



# ಹದಿನೇಳನೇ ಅಧ್ಯಾಯವು

## ( ಹಿಕ್ಕಾಶ್ವಾಸ ಚಿಕಿತ್ಸೆ )

ಪಾಂಡುರೋಗದಿಂದ ಹಿಕ್ಕಾಶ್ವಾಸಗಳುಂಟಾಗುವದರಿಂದ
ಪಾಂಡುರೋಗದ ನಂತರ ಹಿಕ್ಕಾಶ್ವಾಸಗಳ ಚಿಕಿತ್ಸೆಯನ್ನು ಹೇಳುತ್ತಾರೆ.

**ಅಥಾತೋ ಹಿಕ್ಕಾಶ್ವಾಸಚಿಕಿತ್ಸಿತಂ ವ್ಯಾಖ್ಯಾಸ್ಯಾಮಃ ||**

ಅರ್ಥ:— ಇನ್ನು ಮೇಲೆ ಹಿಕ್ಕಾಶ್ವಾಸ ಚಿಕಿತ್ಸೆಯನ್ನು ಹೇಳುವೆವು.

**ಇತಿ ಹ ಸ್ಮಾಹ ಭಗವಾನಾತ್ರೇಯಃ ||೧||**

ಅರ್ಥ:— ಪೂಜ್ಯರಾದ ಆತ್ರೇಯ ಋಷಿಗಳು ಹೀಗೆ ಹೇಳಿ ||೧||

**ವೇದಲೋಕಾರ್ಥತತ್ವಜ್ಞಮಾತ್ರೇಯಮೃಷಿಮುತ್ತಮಮ್ ||**
**ಅಪೃಚ್ಛತ್ ಸಂಶಯಂ ಧೀಮಾನಗ್ನಿವೇಶಃ ಕೃತಾಞ್ಜಲಿಃ ||೨||**

**ಯ ಇಮೇ ದ್ವಿವಿಧಾಃ ಪ್ರೋಕ್ತಾಸ್ತ್ರಿದೋಷಾಸ್ತ್ರಿಪ್ರಕೋಪಣಾಃ ||**
**ರೋಗಾಣಾಂ ವಿವಿಧಾಸ್ತೇಷಾಂ ಕಸ್ಮೋ ಭವತಿ ದುರ್ಜಯಃ ||೩||**

**ಇತ್ಯಗ್ನಿವೇಶಸ್ಯ ವಚಃ ಶ್ರುತ್ವಾ ಮತಿಮತಾಂ ವರಃ ||**
**ಉವಾಚ ಪರಮಪ್ರೀತಃ ಪರಮಾರ್ಥವಿನಿಶ್ಚಯಮ್ ||೪||**

ಅರ್ಥ:— ವೈದಿಕ ಲೌಕಿಕ ವಿಷಯಗಳಲ್ಲಿ ಪಂಡಿತರಾದ ಋಷಿಶ್ರೇಷ್ಠರಾದ ಆತ್ರೇಯ ಋಷಿಗಳಿಗೆ ಬುದ್ಧಿವಂತನಾದ ಅಗ್ನಿವೇಶನು ಕೈಜೋಡಿಸಿ ತನ್ನ ಸಂಶಯವನ್ನು ಕೇಳಿದನು. ||೨|| ಇದುವರೆಗೆ ಸೌಮ್ಯ, ಆಗ್ನೇಯವೆಂದೂ, ನಿಜ ಆಗಂತುವೆಂದೂ, ಶಾರೀರ ಮಾನಸವೆಂದೂ, ಎರಡು ಪ್ರಕಾರದ, (ವಾತಪಿತ್ತ ಕಫಗಳೆಂಬ) ಮೂರುದೋಷಗಳಿಂದುಂಟಾಗುವ, (ಅಸಾತ್ಮ್ಯೇಂದ್ರಿಯಸಂಯೋಗ ಪ್ರಜ್ಞಾಪರಾಧ ಪರಿಣಾಮಗಳೆಂಬ) ಮೂರು ಪ್ರಕೋಪಕ ಕಾರಣಗಳುಳ್ಳ ರೋಗಗಳ ಬೇರೆ ಬೇರೆ ಪ್ರಕಾರ

ಗಳು ಹೇಳಲ್ಪಟ್ಟವು. ಅವುಗಳಲ್ಲಿ ಯಾವ ಯಾವದು ಕಠಿಣವಾಗಿರುವದು ? ॥೩॥ ಈ ಪ್ರಕಾರದ ಅಗ್ನಿವೇಶನ ಮಾತನ್ನು ಕೇಳಿ ಬುದ್ಧಿವಂತರಲ್ಲಿ ಶ್ರೇಷ್ಠರಾದ ಆತ್ರೇಯಋಷಿಗಳು ಬಹಳ ಸಂತುಷ್ಟರಾಗಿ ಸತ್ಯವಾದ ಸಿದ್ಧಾಂತವನ್ನು ಹೇಳಿದರು. ॥೪॥

ಈ ರೋಗಗಳ ಕಾಠಿನ್ಯವನ್ನು ಹೇಳುತ್ತಾರೆ.

**ಕಾಮಂ ಪ್ರಾಣಹರಾ ರೋಗಾ ಬಹವೋ ನ ತು ತೇ ತಥಾ ॥**
**ಯಥಾ ಶ್ವಾಸಶ್ಚ ಹಿಕ್ಕಾ ಚ ಪ್ರಾಣಾನಾಶು ನಿಕೃಂತತಃ** ॥೫॥

**ಅನ್ಯೈರುಪಸೃಷ್ಟಸ್ಯ ರೋಗೈರ್ಜಂತೋಃ ಪೃಥಗ್ವಿಧೈಃ ॥**
**ಅಂತೇ ಸಞ್ಜಾಯತೇ ಹಿಕ್ಕಾ ಶ್ವಾಸೋ ವಾ ತೀವ್ರವೇದನಃ** ॥೬॥

**ಕಫವಾತಾತ್ಮಕಾವೇತೌ ಪಿತ್ತಸ್ಥಾನಸಮುದ್ಭವೌ ॥**
**ಹೃದಯಸ್ಯ ರಸಾದೀನಾಂ ಧಾತೂನಾಞ್ಚೋಪಶೋಷಣೌ** ॥೭॥

**ತಸ್ಮಾತ್ ಸಾಧಾರಣಾವೇತೌ ಮತೌ ಮಮ ಸುದುರ್ಜಯೌ ॥**
**ಮಿಥ್ಯೋಪಚರಿತೌ ಕ್ರುದ್ಧೌ ಹತ ಆಶೀವಿಷಾವಿವ** ॥೮॥

**ಪೃಥಕ್ ಪಞ್ಚವಿಧಾವೇತೌ ನಿರ್ದಿಷ್ಟೌ ರೋಗಸಂಗ್ರಹೇ ॥**
**ತಯೋಃ ಶೃಣು ಸಮುತ್ಥಾನಂ ಲಿಙ್ಗಞ್ಚ ಸಭಿಷಗ್ ಜಿತಮ್** ॥೯॥

**ಅರ್ಥಃ**— ಜಗತ್ತಿನಲ್ಲಿ ಪ್ರಾಣವನ್ನು ತಕ್ಕೊಳ್ಳುವ ಅನೇಕ ರೋಗಗಳು ಇರುವವು. ಇದು ನಿಜ. ಆದರೆ ಆವು ಶ್ವಾಸ ಬಿಕ್ಕುಗಳಷ್ಟು ಶೀಘ್ರವಾಗಿ ಪ್ರಾಣಗಳನ್ನು ತಕ್ಕೊಳ್ಳುವದಿಲ್ಲ. ॥೫॥ ತರತರದ ರೋಗಗಳಿಂದ ಕೂಡಿದ ಮನುಷ್ಯನಿಗೂ ಕೂಡ ಕೊನೆಗೆ ತೀವ್ರವೇದನೆಯುಳ್ಳ ಬಿಕ್ಕು ಮತ್ತು ಶ್ವಾಸಗಳುಂಟಾಗುತ್ತವೆ. ॥೬॥ ಇವು ಪಿತ್ತಸ್ಥಾನದಲ್ಲಿ ಕಫವಾತಗಳಿಂದ ಉಂಟಾಗುತ್ತಿದ್ದು, ಹೃದಯ ಮತ್ತು ರಸಾದಿಧಾತುಗಳ ಶೋಷಣವನ್ನುಂಟು ಮಾಡುತ್ತವೆ. ॥೭॥ ಆ ಕಾರಣ ಇವು ಕಷ್ಟಸಾಧ್ಯಗಳೂ ಒಂದೇ ತರದ ಕಾರಣ ಮತ್ತು ಚಿಕಿತ್ಸೆಯುಳ್ಳವುಗಳೂ ಆಗಿವೆಯೆಂದು ನನ್ನ ಮತವಿದೆ. ತಪ್ಪು ಚಿಕಿತ್ಸೆಯಿಂದ ಇವು ಕುಪಿತವಾದ ಹಾವುಗಳಂತೆ ಕೊಲ್ಲುವವು. ॥೮॥ ಆದ್ದರಿಂದ ರೋಗಸಂಗ್ರಹ (ಸೂತ್ರಸ್ಥಾನದ ಅಷ್ಟೋದರೀಯ)ದಲ್ಲಿ ಹೇಳಿದ ಐದು ಪ್ರಕಾರದ ಬಿಕ್ಕು, ಐದು

ಪ್ರಕಾರದ ಶ್ವಾಸಗಳ ಕಾರಣ ಲಕ್ಷಣ ಮತ್ತು ಚಿಕಿತ್ಸೆಗಳನ್ನು ಹೇಳುತ್ತೇನೆ.
ಕೇಳಿರಿ. (೯)

ಕಾರಣಗಳನ್ನು ಹೇಳುತ್ತಾರೆ.

ರಜಸಾ ಧೂಮವಾತಾಭ್ಯಾಂ ಶೀತಸ್ಥಾನಾಂಬುಸೇವನಾತ್ ॥
ವ್ಯಾಯಾಮಾದ್ ಗ್ರಾಮ್ಯಧರ್ಮಾಧ್ವರುಕ್ಷಾನ್ನವಿಷಮಾಶನಾತ್
ಆಮಪ್ರದೋಷಾದಾನಾಹಾದ್ ರೌಕ್ಷ್ಯಾದತ್ಯಪತರ್ಪಣಾತ್ ॥
ಮರ್ಮಾಭಿಘಾತಾದ್ ದೌರ್ಬಲ್ಯಾದ್ ಬಂಧಾಚ್ಛುದ್ಧ್ಯತಿಯೋಗತಃ
ಅತೀಸಾರಜ್ವರಚ್ಛರ್ದಿಪ್ರತಿಶ್ಯಾಯಕ್ಷತಕ್ಷಯಾತ್ ॥
ರಕ್ತಪಿತ್ತಾದುದಾವರ್ತಾದ್ ವಿಷೂಚ್ಯಲಸಕಾದಪಿ ॥೧೨॥
ಪಾಂಡುರೋಗಾದ್ ವಿಷಾಚ್ಚೈವ ರೋಗಾವೇತೌ ಪ್ರರೋಹತಃ ॥
ನಿಷ್ಪಾವಮಾಷಪಿಣ್ಯಾಕ ತಿಲತೈಲನಿಷೇವಣಾತ್ ॥೧೩॥
ಪಿಷ್ಟಶಾಲೂಕವಿಷ್ಟಂಭಿವಿದಾಹಿಗುರುಭೋಜನಾತ್ ॥
ಜಲಜಾನೂಪಪಿಶಿತದಧ್ಯಾಮಕ್ಷೀರಭೋಜನಾತ್ ॥೧೪॥
ಅಭಿಷ್ಯಂದ್ಯುಪಚಾರಾಚ್ಚ ಶ್ಲೇಷ್ಮಲಾನಾಂಚ ಸೇವನಾತ್ ॥
ಕಂಠೋರಸೋಃ ಪ್ರತೀಘಾತಾದ್ ವಿಬಂಧೈಶ್ಚ ಪೃಥಗ್ವಿಧೈಃ ॥೧೫॥
ಮಾರುತಃ ಪ್ರಾಣವಾಹೀನಿ ಸ್ರೋತಾಂಸ್ಯಾವಿಶ್ಯ ಕುಪ್ಯತಿ ॥
ಉರಸ್ಥಃ ಕಫಮುದ್ಧೂಯ ಹಿಕ್ಕಾಶ್ವಾಸಾನ್ ಕರೋತ್ಯಥ ॥೧೬॥
ಘೋರಾನ್ ಪ್ರಾಣೋಪರೋಧಾಯ ಪ್ರಾಣಿನಾಂ ಪಞ್ಚ
ಪಞ್ಚ ಚ ॥೧೭॥

ಅರ್ಥ:— ಧೂಳಿ ಹೊಗೆ ಗಾಳಿ ಶೀತಸ್ಥಳ ಶೀತನೀರುಗಳ ಸೇವನೆ ಯಿಂದಲೂ, ವ್ಯಾಯಾಮ ಮೈಥುನ ನಡಿಯೋಣಗಳ ಅತಿರೇಕದಿಂದಲೂ ರುಕ್ಷಾನ್ನ ವಿಷಮಾಶನಗಳಿಂದಲೂ ॥೧೦॥ ಆಮದೋಷ, ಹೊಟ್ಟೆಯುಬ್ಬು, ರುಕ್ಷತೆ, ಉಪವಾಸ, ಮರ್ಮಸ್ಥಾನಕ್ಕೆ ಆಘಾತ, ದೌರ್ಬಲ್ಯ, ಮಲಬಂಧ ಗಳಿಂದ, ಮತ್ತು ಅತಿಶೋಧನಗಳಿಂದ ॥೧೧॥ ಅತಿಸಾರ, ಜ್ವರ, ವಾಂತಿ, ನೆಗಡಿ, ಕ್ಷತ ಮತ್ತು ಕ್ಷಯದಿಂದ, ರಕ್ತಪಿತ್ತ, ಉದಾವರ್ತ, ವಿಷೂಚಿಕೆ, ಅಲಸಕ, ॥೧೨॥ ಪಾಂಡುರೋಗ, ವಿಷಗಳಿಂದ ಈ ಎರಡೂ

ರೋಗಗಳು ಉಂಟಾಗುತ್ತವೆ. ಅದರಂತೆ ಅವರೀ(ಕಾಯಿ), ಉದ್ದು, ಹಿಂಡಿ ಎಳ್ಳೆಣ್ಣೆಗಳನ್ನು ತಿನ್ನುವದರಿಂದ ||೧೩|| ಹಿಟ್ಟಿನಪದಾರ್ಥ, ಕಮಲದ ಕಂದ, ಮಲಬಂಧಕ-ವಿದಾಹಿ-ಜಡದ್ರವ್ಯಗಳ ಊಟದಿಂದ, ನೀರಲ್ಲಿಯ ಅಥವಾ ಮಲೆನಾಡದಲ್ಲಿಯ ಪ್ರಾಣಿಗಳ ಮಾಂಸ, ಮೊಸರು, ಹಸಿ (ಕಾಸದ) ಹಾಲುಗಳನ್ನು ಸೇವಿಸುವದರಿಂದ ||೧೪|| ಅಭಿಸ್ಯಂದಿ ಉಪಚಾರದಿಂದ ಕಫಕಾರಕಗಳ ಸೇವನದಿಂದ, ಕುತ್ತಿಗೆ ಎದೆಗಳಿಗೆ ಆಘಾತವಾಗುವದರಿಂದ, ಅನೇಕ ತರದ ವಿಬಂಧಗಳಿಂದ ||೧೫|| ವಾತವು ಪ್ರಾಣವಹ ಸ್ರೋತಸ್ಸುಗಳನ್ನು ಸೇರಿ, ಎದೆಯಿಂದ ಕಫವನ್ನು ಮೇಲಕ್ಕೆ ಹಾರಿಸಿ ||೧೬|| ಪ್ರಾಣಿಗಳ ಪ್ರಾಣಗಳನ್ನು ತಕ್ಕೊಳ್ಳುವ ಭಯಂಕರವಾದ (ಮಹತೀ, ಗಂಭೀರಾ, ಯಮಲಾ, ಕ್ಷುದ್ರಾ, ಅನ್ನಜಾ, ಎಂಬ) ಐದು ಬಿಕ್ಕುಗಳನ್ನೂ (ಮಹಾಶ್ವಾಸ, ಊರ್ಧ್ವಶ್ವಾಸ, ಛಿನ್ನಶ್ವಾಸ, ತಮಕಶ್ವಾಸ, ಕ್ಷುದ್ರಶ್ವಾಸ, ಎಂಬ) ಐದು ಶ್ವಾಸಗಳನ್ನೂ ಉಂಟುಮಾಡುತ್ತದೆ. (೧೭)

ಅವುಗಳ ಪೂರ್ವರೂಪವನ್ನು ಹೇಳುತ್ತಾರೆ.

**ದ್ವಯೋಶ್ಚ ಪೂರ್ವರೂಪಾಣಿ ಶೃಣು ವಕ್ಷ್ಯಾಮ್ಯತಃ ಪರಮ್ ||೧೭||**
**ಕಂಠೋರಸೋರ್ಗುರುತ್ವಞ್ಚ ವದನಸ್ಯ ಕಷಾಯತಾ ||**
**ಹಿಕ್ಕಾನಾಂ ಪೂರ್ವರೂಪಾಣಿ ಕುಕ್ಷೇರಾಟೋಪ ಏವ ಚ ||೧೮||**
**ಆನಾಹಃ ಪಾರ್ಶ್ವಶೂಲಞ್ಚ ಪೀಡನಂ ಹೃದಯಸ್ಯ ಚ ||**
**ಪ್ರಾಣಸ್ಯ ಚ ವಿಲೋಮತ್ವಂ ಶ್ವಾಸಾನಾಂ ಪೂರ್ವಲಕ್ಷಣಮ್ ||೧೯||**

**ಅರ್ಥಃ**—ಇನ್ನುಮೇಲೆ ಅವುಗಳ ಪೂರ್ವರೂಪವನ್ನು ಹೇಳುತ್ತೇನೆ ಕೇಳಿರಿ. ||೧೭|| ಕಂಠ ಎದೆಗಳಲ್ಲಿ ಜಡತ್ವ ಬಾಯಿ ಕಹಿಯಾಗೋಣ, ಹೊಟ್ಟೆಯಲ್ಲಿ ಗುಡುಗುಡು ಶಬ್ದ, ಇವು ಬಿಕ್ಕಿನ ಪೂರ್ವರೂಪಗಳು. ||೧೮|| ಹೊಟ್ಟೆಯುಬ್ಬೋಣ, ಪಾರ್ಶ್ವಶೂಲ, ಎದೆ ನೋಯೋಣ, ಶ್ವಾಸವು ಸರಿಯಾಗಿ ಆಡದಿರೋಣ ಇವು ಶ್ವಾಸದ ಪೂರ್ವರೂಪಗಳು (೧೯)

ಬಿಕ್ಕಿನ ಸಂಪ್ರಾಪ್ತಿಯನ್ನು ಹೇಳುತ್ತಾರೆ.

**ಪ್ರಾಣೋದಕಾನ್ನವಾಹೀನಿ ಸ್ರೋತಾಂಸಿ ಸಕಫೋಽನಿಲಃ ||**
**ಹಿಕ್ಕಾಃ ಕರೋತಿ ಸಂರುಧ್ಯ ತಾಸಾಂ ಲಿಙ್ಗಂ ಪೃಥಕ್ ಶೃಣು ||೨೦||**

ಅರ್ಥ :— ಕಫಯುಕ್ತವಾದ ವಾತವು ಪ್ರಾಣವಹ, ಉದಕವಹ, ಅನ್ನವಹ ಸ್ರೋತಸ್ಸುಗಳನ್ನು ಸೇರಿ ಅವುಗಳನ್ನು ಪ್ರತಿಬಂಧಿಸಿ ಬಿಕ್ಕುಗಳನ್ನುಂಟುಮಾಡುತ್ತದೆ. ಅವುಗಳ ಬೇರೆ ಬೇರೆ ಲಕ್ಷಣಗಳನ್ನು ಕೇಳಿರಿ. (೨೦)

ಮಹಾಹಿಕ್ಕೆಯ ಲಕ್ಷಣವನ್ನು ಹೇಳುತ್ತಾರೆ.

**ಕ್ಷೀಣಮಾಂಸಬಲಪ್ರಾಣತೇಜಸಃ ಸಕಫೋಽನಿಲಃ ||**
**ಗೃಹೀತ್ವಾ ಸಹಸಾ ಕಂಠಮುಚ್ಚೈರ್ಘೋಷವತೀಂ ಭೃಶಮ್ ||೨೧||**

**ಕರೋತಿ ಸತತಂ ಹಿಕ್ಕಾಂ ದ್ವಿಸ್ತ್ರಿರೇಕಗುಣಾಂ ತಥಾ ||**
**ಪ್ರಾಣಸ್ರೋತಾಂಸಿ ಮರ್ಮಾಣಿ ಸಂಕ್ರುಧ್ಯೋಷ್ಮಾಣಮೇವ ಚ||೨೨||**

**ಸಂಜ್ಞಾಂ ಮುಷ್ಣಾತಿ ಗಾತ್ರೇಷು ಸ್ತಂಭಂ ಸಂಜನಯತ್ಯಪಿ ||**
**ಮಾರ್ಗಮಾಚ್ಛೃವಾನ್ನಪಾನಾನಾಂ ರುಣದ್ಧ್ಯುಪಹತಸ್ಮೃತೇಃ ||೨೩||**

**ಸಾಶ್ರು ವಿಪ್ಲುತನೇತ್ರಸ್ಯ ಸ್ತಬ್ಧಶಙ್ಖಚ್ಯುತಭ್ರುವಃ ||**
**ಸಕ್ತಜಲ್ಪಪ್ರಲಾಪಸ್ಯ ನಿರ್ವೃತಿಂ ನಾಧಿಗಚ್ಛತಃ ||೨೪||**

**ಮಹಾಶಬ್ದಾ ಮಹಾವೇಗಾ ಮಹಾಮೂಲಾ ಮಹಾಬಲಾ ||**
**ಮಹಾಹಿಕ್ಕೇತಿ ಸಾ ನೃಣಾಂ ಸದ್ಯಃ ಪ್ರಾಣಹರಾ ಮತಾ ||೨೫||**

**ಅರ್ಥ :**—ಮಾಂಸ, ಪ್ರಾಣವಾಯು ಮತ್ತು ಅಗ್ನಿಗಳ ಕ್ಷೀಣತೆಯನ್ನು ಹೊಂದಿದವನ ವಾತವು ಕಫವನ್ನು ಕೂಡಿಕೊಂಡು ಒಮ್ಮೆಲೇ ಕಂಠವನ್ನು ಹಿಡಿದು ಬಹಳ ದೊಡ್ಡ ಶಬ್ದವುಳ್ಳ ||೨೧|| ಒಮ್ಮೆಲೇ ಎರಡುಸಾರೆ ಅಥವಾ ಮೂರು ಸಾರೆ ಬರುವ ಬಿಕ್ಕನ್ನು ಯಾವಾಗಲೂ ಉಂಟುಮಾಡುತ್ತದೆ. ಪ್ರಾಣವಹ ಸ್ರೋತಸ್ಸುಗಳನ್ನೂ ಮರ್ಮಗಳನ್ನೂ ಪ್ರತಿಂಬಧಿಸಿ ಉಷ್ಣತೆ ಮತ್ತು ಎಚ್ಚರಿಕೆ ಕಳೆಯುತ್ತದೆ. ||೨೨|| ಶರೀರದಲ್ಲಿ ಸ್ತಬ್ಧತೆಯನ್ನೂ ಉಂಟುಮಾಡುತ್ತದೆ. ಅನ್ನಪಾನಗಳ ಮಾರ್ಗವನ್ನೂ ತಡೆಯುತ್ತದೆ. ಅವನ ಸ್ಮೃತಿಯು ತಪ್ಪುವದು. ||೨೩|| ನೀರಿನಿಂದ ಕಣ್ಣುಗಳು ತೋಯುವವು. ಶಂಖ ಪ್ರದೇಶವು ಸ್ತಬ್ಧವಾಗಿ ಹುಬ್ಬು ಇಳಿಯುವದು. ಮಾತು ಪ್ರಲಾಪಗಳು ತಟ್ಟಿಸುವವು. ಚೈನ ಬೀಳದು. ||೨೪|| ಇದರಲ್ಲಿ ಬಹಳಶಬ್ದ, ಬಹಳವೇಗ, ಬಹಳ ಶಕ್ತಿಗಳಿರುವವು. ಇದರ

ಮೂಲವು ಬಹಳ ಗುಂಬ ಇರುವದು. ಈ ಮಹಾಹಿಕ್ಕೆಯು ಪ್ರಾಣಿಗಳ ಪ್ರಾಣವನ್ನು ಕೂಡಲೇ ತಕ್ಕೊಳ್ಳುವದು. (೨೫)

ಗಂಭೀರ ಹಿಕ್ಕೆಯನ್ನು ಹೇಳುತ್ತಾರೆ.

**ಹಿಕ್ಕತೇ ಯಃ ಪ್ರವೃದ್ಧಂ ತು ಕೃಶೋ ದೀನಮನಾ ನರಃ ॥**
**ಜರ್ಜರೇಣೋರಸಾ ಕೃಚ್ಛ್ರಂ ಗಂಭೀರಮನುನಾದಯನ್ ॥೨೬॥**
**ಸಂಕ್ಷಿಪನ್ ಜೃಂಭಮಾಣಶ್ಚ ತಥಾಙ್ಗಾನಿ ಪ್ರಸಾರಯನ್ ॥**
**ಪಾರ್ಶ್ವೇ ಚೋಭೇ ಸಮಾಯಮ್ಯ ಕೂಜನ್‌ಸ್ತಂಭರುಗರ್ದಿತಃ ॥೨೭॥**
**ನಾಭೇಃ ಪಕ್ವಾಶಯಾದ್ವಾಪಿ ಹಿಕ್ಕಾ ಚಾಸ್ಯೋಪಜಾಯತೇ ॥**
**ಕ್ಷೋಭಯಂತೀ ಭೃಶಂ ದೇಹಂ ನಾಮಯಂತೀವ ತಾನ್ಯತಃ ॥೨೮॥**
**ರುಣದ್ಧ್ಯುಚ್ಛ್ವಾಸಮಾರ್ಗಂ ತು ಪ್ರನಷ್ಟಬಲಚೇತಸಃ ॥**
**ಗಂಭೀರಾ ನಾಮ ಸಾ ತಸ್ಯ ಹಿಕ್ಕಾ ಪ್ರಾಣಾಂತಿಕೀ ಮತಾ ॥೨೯॥**

**ಅರ್ಥ** :— ಇದರಲ್ಲಿ ಹೆಚ್ಚಾಗಿ ಬಿಕ್ಕುವನು. ರೋಗಿಯು ಕೃಶ ಮತ್ತು ದೀನನಾಗಿರುವನು. ಎದೆಯು ನೋಯುವದು. ಕಷ್ಟದಿಂದ ಗಂಭೀರವಾದ ಪ್ರತಿಧ್ವನಿಯಾಗುವದು. ॥೨೬॥ ಆಕಳಿಸುವನು. ಕೈಕಾಲುಗಳನ್ನು ಮೇಲಕ್ಕೆ ಎಳೆಯುವನು. ಚಾಚುವನು. ಎರಡೂ ಪಾರ್ಶ್ವಗಳನ್ನು ವಿಸ್ತರಿಸುವನು. ಶರೀರವು ಸೆಟೆಯುವದು; ನೋಯುವದು. ಅದರಿಂದ ದುಃಖಿತನಾದ ಅವನು ನರಳುವನು. ॥೨೭॥ ಚಡಪಡಿಸುವನು. ಇದು ದೇಹವನ್ನು ಮಣಿಸುತ್ತ ಬಹಳ ಪೀಡಿಸುತ್ತಿರುವದು. ಈ ಬಿಕ್ಕು ಹೊಕ್ಕಳ ಅಥವಾ ಪಕ್ವಾಶಯದಿಂದ ಉಂಟಾಗುತ್ತದೆ. ॥೨೮॥ ಇವನ ಬಲಜ್ಞಾನಗಳು ನಷ್ಟವಾಗುವವು. ಶ್ವಾಸಮಾರ್ಗದ ಪ್ರತಿಬಂಧವಾಗುವದು. ಇದಕ್ಕೆ 'ಗಂಭೀರಾ' ಎಂಬ ಹೆಸರು. ಇದು ಪ್ರಾಣನಾಶಕವಾಗಿದೆ. (೨೯)

'ವ್ಯಪೇತಾ' ಅಥವಾ 'ಯಮಲಾ' ಎಂಬ ಹಿಕ್ಕೆಯನ್ನು ಹೇಳುತ್ತಾರೆ.

**ವ್ಯಪೇತಾ ಜಾಯತೇ ಹಿಕ್ಕಾ ಯಾಽನ್ನಪಾನೇ ಚತುರ್ವಿಧೇ ॥**
**ಆಹಾರಪರಿಣಾಮಾಂತೇ ಭೂಯಶ್ಚ ಲಭತೇ ಬಲಮ್ ॥೩೦॥**

**ಪ್ರಲಾಪಚ್ಛರ್ದ್ಯತೀಸಾರತೃಷ್ಣಾರ್ತಸ್ಯ ವಿಚೇತಸಃ ॥**
**ಜೃಂಭಿಣೋ ವಿಪ್ಲುತಾಕ್ಷಸ್ಯ ಶುಷ್ಕಾಸ್ಯಸ್ಯ ವಿನಾಮಿನಃ ॥೩೧॥**
**ಪರ್ಯಾಧ್ಮಾತಸ್ಯ ಹಿಕ್ಕಾ ಯಾ ಜತ್ರುಮೂಲಾದಸಂತತಾ ॥**
**ಸಾ ವ್ಯಪೇತೇತಿ ವಿಜ್ಞೇಯಾ ಹಿಕ್ಕಾ ಪ್ರಾಣೋಪರೋಧಿನೀ ॥೩೨॥**

**ಅರ್ಥಃ**— ಇದು ನಾಲ್ಕು ವಿಧ (ಅಶಿತ, ಖಾದಿತ, ಲೀಢ, ಪೀತ)ದ ಅನ್ನಪಾನ ಮಾಡಲು ಉಂಟಾಗುವದು, ಮತ್ತು ಅನ್ನವು ಪಚನವಾಗಲು ಹೆಚ್ಚಾಗುವದು ॥೩೦॥ ಪ್ರಲಾಪ, ವಾಂತಿ, ಅತಿಸಾರ, ನೀರಡಿಕೆ, ಮೋಹ, ಆಕಳಿಕೆ, ಕಣ್ಣುಗಳಲ್ಲಿ ನೀರು, ಬಾಯಿ ಒಣಗೋಣ ಬಗ್ಗೋಣ ॥೩೧॥ ಹೊಟ್ಟೆಯುಬ್ಬೋಣ · ಈ ವಿಕಾರಗಳಿದ್ದು ಜತ್ರು (ಕಂಠ ಎದೆ ಗಳಸಂದು) ವಿನ ಮೂಲದಿಂದ ಬಿಟ್ಟು ಬಿಟ್ಟು ಉಂಟಾಗುತ್ತದೆ. ಆದಕ್ಕೆ 'ವ್ಯಪೇತಾ' (ಆಹಾರ ಪರಿಣಾಮದಲ್ಲಿ ಹೆಚ್ಚಾಗುವ) ಎಂಬ ಹೆಸರು. ಇದು ಪ್ರಾಣವನ್ನು ತಕ್ಕೊಳ್ಳುತ್ತದೆ. (ಇದು ಎರಡೆರಡಾಗಿ ಬರುವದರಿಂದ ಬೇರೆ ಗ್ರಂಥಕಾರರು 'ಯಮಲಾ' ಎಂದು ಕರೆಯುತ್ತಾರೆ.) (೩೨)

ಕ್ಷುದ್ರ ಹಿಕ್ಕೆಯನ್ನು ಹೇಳುತ್ತಾರೆ.

**ಕ್ಷುದ್ರವಾತೋ ಯದಾ ಕೋಷ್ಠಾದ್ವ್ಯಾಯಾಮಪರಿಘಟ್ಟಿತಃ ॥**
**ಕಂಠಂ ಪ್ರಪದ್ಯತೇ ಹಿಕ್ಕಾಂ ಕ್ಷುದ್ರಾಂ ಸಂಜನಯೇತ್ತದಾ ॥೩೩॥**
**ಅತಿದುಃಖಾ ನ ಸಾ ನೋರಃಶಿರೋಮರ್ಮಪ್ರಬಾಧಿನೀ ॥**
**ನ ಚ ಶ್ವಾಸಾನ್ನಪಾನಾನಾಂ ಮಾರ್ಗಮಾವೃತ್ಯ ತಿಷ್ಠತಿ ॥೩೪॥**
**ವೃದ್ಧಿಮಾಯಸ್ಯತೋ ಯಾತಿ ಭುಕ್ತಮಾತ್ರೇ ಚ ಮಾರ್ದವಮ್ ॥**
**ಯತಃ ಪ್ರವರ್ತತೇ ಪೂರ್ವಂ ತತ ಏವ ನಿವರ್ತತೇ ॥೩೫॥**
**ಹೃದಯಂ ಕ್ಲೋಮ ಕಂಠಞ್ಚ ತಾಲುಕಞ್ಚ ಸಮಾಶ್ರಿತಾ ॥**
**ಮೃದ್ವೀ ಸಾ ಕ್ಷುದ್ರಹಿಕ್ಕೇತಿ ನೃಣಾಂ ಸಾಧ್ಯಾ ಪ್ರಕೀರ್ತಿತಾ ॥೩೬॥**

**ಅರ್ಥಃ**— ವ್ಯಾಯಾಮದಿಂದ ಪೀಡಿತವಾದ ಕ್ಷುದ್ರವಾತವು ಕಂಠಕ್ಕೆ ಬಂದು ಕ್ಷುದ್ರವಾದ ಹಿಕ್ಕೆಯನ್ನು ಉಂಟುಮಾಡುತ್ತದೆ ॥೩೩॥ ಇದರಲ್ಲಿ ಬಹಳ ತ್ರಾಸವಾಗುವದಿಲ್ಲ. ಎದೆ ತಲೆ ಮರ್ಮಗಳ

ಪೀಡೆಯೂ ಇರುವದಿಲ್ಲ ಶ್ವಾಸ ಅನ್ನ ಪಾನಗಳ ಮಾರ್ಗದ ಪ್ರತಿಬಂಧವೂ ಇರುವದಿಲ್ಲ. ||೩೪|| ಆಯಾಸವಾಗಲು ಹೆಚ್ಚುವದು. ಊಟಮಾಡಿದಕೂಡಲೇ ಶಾಂತವಾಗುವದು. ಯಾತರಿಂದ ಉಂಟಾಗುವದೋ ಅದರಿಂದಲೇ ಶಾಂತವಾಗುವದು. (ಆಯಾಸದಿಂದ ಬಿಕ್ಕು ಉಂಟಾಗಲು ಆ ಮೇಲೆ ಮಾಡಿದ ಆಯಾಸ (ವ್ಯಾಯಾಮ)ದಿಂದ ಬಿಕ್ಕನ್ನುಂಟುಮಾಡಿದ ವಾತವು ನಾಶವಾಗಿ ಬಿಕ್ಕು ಹೋಗುವದು ಎಂಬ ಭಾವವು) ||೩೫|| ಹೃದಯ, ಕ್ಲೋಮ, ಕಂಠ. ಅಂಗಗಳಲ್ಲಿ ಮಾತ್ರ ಇರುವದು. ಮೃದುವಾಗಿರುವದು. ಇದು ಕ್ಷುದ್ರ ಹಿಕ್ಕೆಯು. ಇದು ಸಾಧ್ಯವಾಗಿದೆ. ||೩೬||

ಅನ್ನಜ ಹಿಕ್ಕೆಯನ್ನು ಹೇಳುತ್ತಾರೆ.

**ಸಹಸೈವಾತಿಸಂಭುಕ್ತೈಃ ಪಾನಾನ್ನೈಃ ಪೀಡಿತೋಽನಿಲಃ ||**
**ಊರ್ಧ್ವಗಂ ಪ್ರಪದ್ಯತೇ ಕೋಷ್ಠಾನ್ಮದ್ಯೈರ್ವಾತಿಮದಪ್ರದೈಃ ||೩೭||**
**ತಥಾತಿರೋಷಭಾಷ್ಯಾಧ್ವಹಾಸ್ಯಭಾರಾತಿವರ್ತನೈಃ ||**
**ವಾಯುಃ ಕೋಷ್ಠಂಗತೋ ಧಾವನ್ ಪಾನಭೋಜ್ಯಪ್ರಪೀಡಿತಃ ||೩೮||**
**ಪ್ರಕರೋತ್ಯನ್ನಜಾಂ ಹಿಕ್ಕಾಮುರಃಸ್ರೋತಃಸಮಾಶ್ರಿತಃ ||**
**ತಥಾಶನೈರ್ಮಂದಮಂದಂ ಕ್ಷವಂಶ್ಚಾಪಿ ಸ ಹಿಕ್ಕತೇ ||೩೯||**
**ನ ಮರ್ಮಬಾಧಾಜನನೀ ನೇಂದ್ರಿಯಾಣಾಂ ಪ್ರಬಾಧಿನೀ ||**
**ಹಿಕ್ಕಾ ಪೀತೇ ತಥಾ ಭುಕ್ತೇ ಶಮಂ ಯಾತಿ ತು ಸಾನ್ನಜಾ ||೪೦||**

**ಅರ್ಥ ಃ—** ಗಡಿಬಿಡಿಯಿಂದ ಬಹಳವಾಗಿ ಸೇವಿಸಿದ ಅನ್ನಪಾನಗಳಿಂದ ಪೀಡಿತವಾದ ವಾತವು ಕೋಷ್ಠದಿಂದ ಮೇಲಕ್ಕೆ ಬರುತ್ತದೆ. ಅದರಿಂದ ಅಥವಾ ಬಹಳ ಮದವನ್ನುಂಟುಮಾಡುವ ಮದ್ಯಗಳಿಂದ. ||೩೭|| ಅದರಂತೆ ಅತಿಯಾದ ಕ್ರೋಧ, ಭಾಷಣ, ಹಾದಿ ನಡಿಯೋಣ, ಈ ಕಾರಣಗಳಿಂದ, (ಮೊದಲೇ) ಅನ್ನ-ಪಾನಗಳಿಂದ ಪೀಡಿತವಾದ ಕೋಷ್ಠದಲ್ಲಿದ್ದ ವಾತವು ವೇಗದಿಂದ ||೩೮|| ಹೃದಯ ಸ್ರೋತಸ್ಸನ್ನು ಸೇರಿ ಅನ್ನಜ ಹಿಕ್ಕೆಯನ್ನು ಉಂಟುಮಾಡುತ್ತದೆ. ಅದರಿಂದ ಅವನು ಮೆಲ್ಲ-ಮೆಲ್ಲಗೆ ಸಾವಕಾಶವಾಗಿ ಶೀನುತ್ತ ಬಿಕ್ಕುವನು. ||೩೯|| ಇದು

ಮರ್ಮಗಳಿಗೆ ಅಥವಾ ಇಂದ್ರಿಯಗಳಿಗೆ ಪೀಡೆಯನ್ನುಂಟುಮಾಡದು. ಏನನ್ನಾದರೂ ತಿನ್ನಲು ಅಥವಾ ಕುಡಿಯಲು ಶಾಂತವಾಗುವದು. ಇದು 'ಅನ್ನಜ' ಹಿಕ್ಕೆಯು. (೪೦)

ಸಾಧ್ಯಾ-ಸಾಧ್ಯತೆಗಳನ್ನು ಹೇಳುತ್ತಾರೆ.

**ಅತಿಸಞ್ಚಿತದೋಷಸ್ಯ ಭಕ್ತಚ್ಛೇದಕೃಶಸ್ಯ ಚ ॥**
**ವ್ಯಾಧಿಭಿಃ ಕ್ಷೀಣದೇಹಸ್ಯ ವೃದ್ಧಸ್ಯಾತಿವ್ಯವಾಯಿನಃ ॥೪೧॥**

**ಆಸಾಂ ಯಾ ಸಾ ಸಮುತ್ಪನ್ನಾ ಹಿಕ್ಕಾ ಹಂತ್ಯಾಶು ಜೀವಿತಮ್ ॥**
**ಯಮಿಕಾ ಚ ಪ್ರಲಾಪಾರ್ತಿಮೋಹತೃಷ್ಣಾಸಮನ್ವಿತಾ ॥೪೨॥**

**ಅಕ್ಷೀಣಶ್ಚಾಪ್ಯದೀನಶ್ಚ ಸ್ಥಿರಧಾತ್ವಿಂದ್ರಿಯಶ್ಚ ಯಃ ॥**
**ತಸ್ಯ ಸಾಧಯಿತುಂ ಶಕ್ಯಾ ಯಮಿಕಾ ಹಂತ್ಯತೋಽನ್ಯಥಾ ॥೪೩॥**

**ಅರ್ಥ**:— ದೋಷಗಳು ಬಹಳವುಳ್ಳ, ಅನ್ನ ಹೋಗದ್ದರಿಂದ ಕೃಶನಾದ, ಬೇನೆಯಿಂದ ಕ್ಷೀಣನಾದ, ವೃದ್ಧನ, ಬಹಳ ಸ್ತ್ರೀಸಂಗ ಮಾಡುವ ॥೪೧॥ ಮನುಷ್ಯನಿಗೆ ಉಂಟಾದ ಬಿಕ್ಕು ಜೀವಿತವನ್ನು ತಕ್ಕೊಳ್ಳುವದು. ಅದರಂತೆ ಪ್ರಲಾಪ, ತ್ರಾಸ, ಮೋಹ, ನೀರಡಿಕೆಗಳಿಂದ ಕೂಡಿದ ಯಮಿಕೆಯು ಪ್ರಾಣವನ್ನು ತಕ್ಕೊಳ್ಳುವದು. ॥೪೨॥ ಕ್ಷೀಣತೆ ದುಃಖಗಳು ಇಲ್ಲದೆ ಧಾತು ಮತ್ತು ಇಂದ್ರಿಯಗಳು ಸರಿಯಾಗಿ ಇದ್ದವನ ಯಮಿಕೆಯು ಸಾಧ್ಯವು; ಇಲ್ಲವಾದರೆ ಅಸಾಧ್ಯವು. (೪೩)

ಶ್ವಾಸದ ಕಾರಣವನ್ನು ಹೇಳುತ್ತಾರೆ.

**ಯದಾ ಸ್ರೋತಾಂಸಿ ಸಂರುಧ್ಯ ಮಾರುತಃ ಕಫಪೂರ್ವಕಃ ॥**
**ವಿಷ್ವಗ್ವ್ರಜತಿ ಸಂರುದ್ಧಸ್ತದಾ ಶ್ವಾಸಾನ್ ಕರೋತಿ ಸಃ ॥೪೪॥**

**ಅರ್ಥ**:— ಕಫದಿಂದ ಕೂಡಿದ ವಾತವು ಪ್ರಾಣವಹ ಸ್ರೋತಸ್ಸುಗಳನ್ನು ಪ್ರತಿಬಂಧಿಸಿ ಅವುಗಳಿಂದ ತಡೆಯಲ್ಪಟ್ಟು ಎಲ್ಲ ಶರೀರವನ್ನು ವ್ಯಾಪಿಸುವದು. ಆಗ್ಗೆ ಶ್ವಾಸಗಳನ್ನುಂಟುಮಾಡುವದು (೪೪)

ಮಹಾಶ್ವಾಸದ ಲಕ್ಷಣವನ್ನು ಹೇಳುತ್ತಾರೆ.

ಉದ್ಧೂಯಮಾನವಾತೋ ಯಃ ಶಬ್ದವದ್ದುಃಖಿತೋ ನರಃ ॥
ಉಚ್ಚೈಃ ಶ್ವಸಿತಿ ಸಂರುದ್ಧೋ ಮತ್ತರ್ಷಭ ಇವಾನಿಶಮ್ ॥೪೫॥
ಪ್ರನಷ್ಟಜ್ಞಾನವಿಜ್ಞಾನಸ್ತಥಾ ವಿಭ್ರಾಂತಲೋಚನಃ ॥
ವಿವೃತಾಕ್ಷಾನನೋ ಬದ್ಧಮೂತ್ರವರ್ಚಾ ವಿಶೀರ್ಣವಾಕ್ ॥೪೬॥
ದೀನಃ ಪ್ರಶ್ವಸಿತಞ್ಚಾಸ್ಯ ದೂರಾದ್ವಿಜ್ಞಾಯತೇ ಭೃಶಮ್ ॥
ಮಹಾಶ್ವಾಸೋಪಸೃಷ್ಟಸ್ತು ಕ್ಷಿಪ್ರಮೇವ ವಿಪದ್ಯತೇ ॥೪೭॥

**ಅರ್ಥ :—** ಮಹಾಶ್ವಾಸದಲ್ಲಿ ಕಷ್ಟದಿಂದ ಸಪ್ಪಳವಾಗುವಂತೆ ಉಚ್ಛ್ವಾಸವು ಹೊರಡುವದು. ಪ್ರತಿಬಂಧಿಸಲ್ಪಟ್ಟ, ಮತ್ತವಾದ ಗೂಳಿಯಂತೆ ಯಾವಾಗಲೂ ಗಟ್ಟಿಯಾಗಿ ಶ್ವಾಸವನ್ನು ಬಿಡುವನು. ॥೪೫॥ ಜ್ಞಾನ-ವಿಜ್ಞಾನಗಳು ನಷ್ಟವಾಗುವವು. ಕಣ್ಣುಗಳನ್ನು ತಿರುಗಿಸುವನು. ಕಣ್ಣು-ಬಾಯಿಗಳು ತೆರೆದಿರುವವು. ಮಲ-ಮೂತ್ರಗಳ ಪ್ರತಿಬಂಧವಾಗುವದು. ಮಾತು ತಟ್ಟಿಸಿಬರುವದು. ॥೪೬॥ ಸಮಾಧಾನವಿರುವದಿಲ್ಲ. ಇವನು ಬಿಡುವ ಶ್ವಾಸವು ಬಹಳ ದೂರದಿಂದಲೇ ಗೊತ್ತಾಗುತ್ತದೆ. ಈ ಮಹಾ ಶ್ವಾಸವುಳ್ಳವನು ಕೂಡಲೇ ಮರಣವನ್ನು ಹೊಂದುವನು. (೪೭)

ಊರ್ಧ್ವ ಶ್ವಾಸವನ್ನು ಹೇಳುತ್ತಾರೆ.

ಊರ್ಧ್ವಂ ಶ್ವಸಿತಿ ಯೋ ದೀರ್ಘಂ ನ ಚ ಪ್ರತ್ಯಾಹರತ್ಯಧಃ ॥
ಶ್ಲೇಷ್ಮಾವೃತಮುಖಸ್ರೋತಾಃ ಕ್ರುದ್ಧಗಂಧವಹಾರ್ದಿತಃ ॥೪೮॥
ಊರ್ಧ್ವದೃಷ್ಟಿರ್ವಿಪಶ್ಯಂಸ್ತು ವಿಭ್ರಾಂತಾಕ್ಷ ಇತಸ್ತತಃ ॥
ಪ್ರಮುಹ್ಯನ್ ವೇದನಾರ್ತಶ್ಚ ಶುಷ್ಕಾಸ್ಯೋಽರತಿಪೀಡಿತಃ ॥೪೯॥
ಊರ್ಧ್ವಶ್ವಾಸೇ ಪ್ರಕುಪಿತೇ ಹ್ಯಧಃಶ್ವಾಸೋ ನಿರುಧ್ಯತೇ ॥
ಮುಹ್ಯತಸ್ತಾಮ್ಯತಶ್ಚೋರ್ಧ್ವಂ ಶ್ವಾಸಸ್ತಸ್ಯೈವ ಹಂತ್ಯಸೂನ್ ॥೫೦॥

**ಅರ್ಥ :—** ಊರ್ಧ್ವ ಶ್ವಾಸದಲ್ಲಿ, ದೀರ್ಘವಾದ ಶ್ವಾಸವನ್ನು ಬಿಡುವನು. ಆದರೆ ಹಾಗೆ ಕೆಳಗೆ ತಕ್ಕೊಳ್ಳುವದಿಲ್ಲ. ಮುಖ ಮತ್ತು

ಸ್ರೋತಸ್ಸುಗಳು ಕಫದಿಂದ ಮುಚ್ಚಿರುವವು. ವಾತ ಕೋಪವಿರುವದು. ||೪೮|| ಊರ್ಧ್ವದೃಷ್ಟಿಯಿಂದಲೇ ನೋಡುವನು. ಅತ್ತಿತ್ತ ಕಣ್ಣುಗಳನ್ನು ತಿರುಗಿಸುವನು. ಮೋಹ, ವೇದನೆಗಳಿರುವವು. ಬಾಯಿ ಒಣಗಿರುವದು. ಸಮಾಧಾನವಿರದು. ||೪೯|| ಊರ್ಧ್ವಶ್ವಾಸವು ಕುಪಿತವಾಗಿರುವದರಿಂದ ಅಧಃಶ್ವಾಸವು ಪ್ರತಿಬಂಧಿಸಲ್ಪಡುತ್ತದೆ. ಮೂರ್ಛೆ ಇರುವದು. ಚಡಪಡಿಸುವನು. ಈ ಊರ್ಧ್ವಶ್ವಾಸವು ರೋಗಿಯ ಪ್ರಾಣವನ್ನು ತಕ್ಕೊಳ್ಳುವದು. (೫೦)

ಛಿನ್ನಶ್ವಾಸವನ್ನು ಹೇಳುತ್ತಾರೆ.

ಯಸ್ತು ಶ್ವಸಿತಿ ವಿಚ್ಛಿನ್ನಂ ಸರ್ವಪ್ರಾಣೇನ ಪೀಡಿತಃ ||
ನ ವಾ ಶ್ವಸಿತಿ ದುಃಖಾರ್ತೋ ಮರ್ಮಚ್ಛೇದರುಗರ್ದಿತಃ ||೫೧||
ಆನಾಹಸ್ವೇದ ಮೂರ್ಛಾರ್ತೋ ದಹ್ಯಮಾನೇನ ಬಸ್ತಿನಾ ||
ವಿಪ್ಲುತಾಕ್ಷಃ ಪರಿಕ್ಷೀಣಃ ಶ್ವಸನ್ ರಕ್ತೈಕಲೋಚನಃ ||೫೨||
ವಿಚೇತಾಃ ಪರಿಶುಷ್ಕಾಸ್ಯೋ ವಿವರ್ಣಃ ಪ್ರಲಪನ್ ನರಃ ||
ಛಿನ್ನಶ್ವಾಸೇನ ವಿಚ್ಛಿನ್ನಃ ಸ ಶೀಘ್ರಂ ವಿಜಹಾತ್ಯಸೂನ್ ||೫೩||

**ಅರ್ಥ** :— ಛಿನ್ನಶ್ವಾಸದಲ್ಲಿ ತಡೆ-ತಡೆದು ತನ್ನ ಎಲ್ಲ ಶಕ್ತಿಯಿಂದ ಶ್ವಾಸಬಿಡುವನು. ಮರ್ಮದ ಛೇದವಾಗುವಂತೆ ವೇದನೆಯಾಗುವದು. ಆದ್ದರಿಂದ ಶ್ವಾಸವನ್ನು ಸರಿಯಾಗಿ ಬಿಡನು. ||೫೧|| ಹೊಟ್ಟೆಯುಬ್ಬ, ಬೆವರು, ಮೂರ್ಛೆ, ಬಸ್ತಿಗಳಲ್ಲಿ ದಾಹ, ಕಣ್ಣುಗಳಲ್ಲಿ ನೀರು, ಕಾರ್ಶ್ಯ, ಒಂದು ಕಣ್ಣಲ್ಲಿ ಕೆಂಪು ಬಣ್ಣವಿರುವದು. ||೫೨|| ಬಾಯಿ ಒಣಗುವದು. ಜ್ಞಾನವು ನಷ್ಟವಾಗುವದು. ಬಣ್ಣವು ಕೆಡುವದು. ಬಡಬಡಿಸುವನು. ಈ ಛಿನ್ನಶ್ವಾಸದಿಂದ ಪೀಡಿತನಾದವನು ತೀವ್ರ ಪ್ರಾಣವನ್ನು ಬಿಡುವನು. (೫೩)

ತಮಕಶ್ವಾಸವನ್ನು ಹೇಳುತ್ತಾರೆ.

ಪ್ರತಿಲೋಮಂ ಯದಾ ವಾಯುಃ ಸ್ರೋತಾಂಸಿ ಪ್ರತಿಪದ್ಯತೇ ||
ಗ್ರೀವಾಂ ಶಿರಶ್ಚ ಸಂಗೃಹ್ಯ ಶ್ಲೇಷ್ಮಾಣಂ ಸಮುದೀರ್ಯ ಚ ||೫೪||
ಕರೋತಿ ಪೀನಸಂ ತೇನ ರುದ್ಧೋ ಘುರ್ಘುರಕಂ ತಥಾ ||
ಅತೀವ ತೀವ್ರವೇಗಶ್ಚ ಶ್ವಾಸಂ ಪ್ರಾಣಪ್ರಪೀಡಕಮ್ ||೫೫||

ಪ್ರತಾಮ್ಯತಿ ಸ ವೇಗೇನ ಕಾಸತೇ ಸನ್ನಿರುಧ್ಯತೇ ||
ಪ್ರಮೋಹಂ ಕಾಸಮಾನಶ್ಚ ಸ ಗಚ್ಛತಿ ಮುಹುರ್ಮುಹುಃ ||೫೬||
ಶ್ಲೇಷ್ಮಣ್ಯಮುಚ್ಯಮಾನೇ ತು ಭೃಶಂ ಭವತಿ ದುಃಖಿತಃ ||
ತಸ್ಯೈವ ಚ ವಿಮೋಕ್ಷಾಂತೇ ಮುಹೂರ್ತಂ ಲಭತೇ ಸುಖಮ್ ||೫೭||
ತಥಾಸ್ಯೋದ್ಧ್ವಂಸತೇ ಕಂಠಃ ಕೃಚ್ಛ್ರಾಚ್ಛಕ್ನೋತಿ ಭಾಷಿತುಮ್ ||
ನ ಚಾಪಿ ಲಭತೇ ನಿದ್ರಾಂ ಶಯಾನಃ ಶ್ವಾಸಪೀಡಿತಃ ||೫೮||
ಪಾರ್ಶ್ವೇ ತಸ್ಯಾವಗೃಹ್ಣಾತಿ ಶಯಾನಸ್ಯ ಸಮೀರಣಃ ||
ಆಸೀನೋ ಲಭತೇ ಸೌಖ್ಯಮುಷ್ಣಂ ಚೈವಾಭಿನಂದತಿ ||೫೯||
ಉಚ್ಛ್ರಿತಾಕ್ಷೋ ಲಲಾಟೇನ ಸ್ವಿದ್ಯತಾ ಭೃಶಮರ್ತಿಮಾನ್ ||
ವಿಶುಷ್ಕಾಸ್ಯೋ ಮುಹುಃಶ್ವಾಸೋ ಮುಹುಶ್ಚೈವಾವಧಮ್ಯತೇ||೬೦||
ಮೇಘಾಂಬುಶೀತಪ್ರಾಗ್ವಾತೈಃ ಶ್ಲೇಷ್ಮಲೈಶ್ಚ ಪ್ರವರ್ದ್ಧತೇ ||
ಸ ಯಾಪ್ಯಸ್ತಮಕಃ ಶ್ವಾಸಃ ಸಾಧ್ಯೋ ವಾ ಸ್ಯಾನ್ನವೋತ್ಥಿತಃ ||೬೧||

**ಅರ್ಥ** :— ತಮಕಶ್ವಾಸದಲ್ಲಿ ವಾಯುವು ಪ್ರತಿಲೋಮವಾಗಿ ಪ್ರಾಣವಹಸ್ರೋತಸ್ಸುಗಳನ್ನು ಸೇರಿ, ಕುತ್ತಿಗೆ ತಲೆಗಳನ್ನು ಹಿಡಿದು, ಕಫವನ್ನು ಹೆಚ್ಚಿಸಿ ||೫೪|| ನೆಗಡಿಯನ್ನುಂಟುಮಾಡುತ್ತದೆ. ಆದರಿಂದ ಪ್ರತಿಬದ್ಧವಾಗಿ ಘುರ-ಘುರ ಶಬ್ದವುಳ್ಳ ತೀವ್ರ ವೇಗದ ದುಃಖದಾಯಕ ಶ್ವಾಸವನ್ನುಂಟುಮಾಡುತ್ತದೆ. ||೫೫|| ಆ ವೇಗದಿಂದ ಚಡಪಡಿಸುವನು, ಕೆಮ್ಮುವನು. ಕೆಮ್ಮಿಗೆ ಪ್ರತಿಬಂಧವಾಗುವದರಿಂದ ಆಗಾಗೆ ಮೂರ್ಛೆ ಬರುವದು ||೫೬|| ಕಫವು ಬಿಡದಿರಲು ಬಹಳ ತ್ರಾಸವಾಗುವದು. ಅದು ಬಿಡಲು ಒಂದು ಕ್ಷಣ ಸಮಾಧಾನವೆನಿಸುವದು ||೫೭|| ಕಂಠವು ನೋಯುವದು. ಮಾತಾಡಲು ಬಹಳ ತ್ರಾಸವಾಗುವದು. ಮಲಗಲು ಶ್ವಾಸವು ಹೆಚ್ಚಾಗಿ ನಿದ್ರೆಯೇ ಬಾರದು. ||೫೮|| ಮಲಗಲು ಎರಡೂ ಪಾರ್ಶ್ವಗಳು ವಾತದಿಂದ ಹಿಡಿದುಕೊಳ್ಳುವವು. ಕೂಡಲು ಸಮಾಧಾನವೆನಿಸುವದು. ಉಷ್ಣವು ಬೇಕಾಗುವದು. ||೫೯|| ಕಣ್ಣುಗಳು ಏರಗಟ್ಟುವವು. ಹಣೆಯು ಬಹಳ ಬೆವರುವದು. ಸಮಾಧಾನವಿರುವದಿಲ್ಲ, ಬಾಯಿ ಒಣಗುವದು. ಆಗಾಗ್ಗೆ ಶ್ವಾಸಬಿಡುವನು. ಆನೆಯ ಮೇಲೆ ಕೂತವನಂತೆ ಹಿಂದು ಮುಂದು ಅಗಳಾಡುತ್ತಾನೆ. ||೬೦||

ಇದು ರೋಗಗಳು ಬರಲು ಅಥವಾ ತಣ್ಣೀರು ಪೂರ್ವಗಾಳಿ ಮತ್ತು ಕಫ ಕಾರಕ ದ್ರವ್ಯಗಳಿಂದ ಹೆಚ್ಚುತ್ತದೆ. ಈ ತಮಕಶ್ವಾಸವು ಯಾಪ್ಯವಾಗಿದೆ. ಹೊಸದಾಗಿ ಆಗಿದ್ದರೆ ಮಾತ್ರ ಸಾಧ್ಯವು. (೬೧)

ಪ್ರತಮಕ ಸಂತಮಕ ಶ್ವಾಸಗಳನ್ನು ಹೇಳುತ್ತಾರೆ.

**ಜ್ವರಮೂರ್ಚ್ಛಾಪರೀತಸ್ಯ ವಿದ್ಯಾತ್ ಪ್ರತಮಕಂ ತು ತಮ್ ||**
**ಉದಾವರ್ತರಜೋಽಜೀರ್ಣಕ್ಲಿನ್ನಕಾಯನಿರೋಧಜಃ ||೬೨||**
**ತಮಸಾ ವರ್ಧತೇಽತ್ಯರ್ಥಂ ಶೀತೈಶ್ಚಾಶು ಪ್ರಶಾಮ್ಯತಿ ||**
**ಮಜ್ಜತಸ್ತಮಸೀವಾಸ್ಯ ವಿದ್ಯಾತ್ ಸಂತಮಕಂ ತು ತಮ್ ||೬೩||**

ಅರ್ಥ :— ಈ ಲಕ್ಷಣಗಳಲ್ಲಿಯೇ ಜ್ವರ-ಮೂರ್ಛೆಗಳಿದ್ದರೆ ಪ್ರತಮಕಶ್ವಾಸವೆಂದು ತಿಳಿಯಬೇಕು. ಉದಾವರ್ತ, ಧೂಳಿ, ಅಜೀರ್ಣ ಕ್ಲೇದ, ವೇಗನಿರೋಧ ಇವುಗಳಿಂದ ಉಂಟಾಗುತ್ತದೆ. ||೬೨|| ಇದು ಪ್ರತಮಕವೆಂದು ತಿಳಿಯಬೇಕು. ಇದು ಕತ್ತಲೆಯಿಂದ ಹೆಚ್ಚಾಗುತ್ತದೆ ಶೀತದಿಂದ ಕಡಿಮೆಯಾಗುತ್ತದೆ. ಇದರಲ್ಲಿ ತಾನು ಕತ್ತಲೆಯಲ್ಲಿ ಸೇರಿದಂತೆ ಅನಿಸುತ್ತದೆ. ಇದಕ್ಕೆ ಸಂತಮಕವೆಂದು ಹೆಸರು. (೬೩)

ಕ್ಷುದ್ರಶ್ವಾಸವನ್ನು ಹೇಳುತ್ತಾರೆ.

**ರುಕ್ಷಾಯಾಸೋದ್ಭವಃ ಕೋಷ್ಠೇ ಕ್ಷುದ್ರೋ ವಾತ ಉದೀರಯನ್ ||**
**ಕ್ಷುದ್ರಶ್ವಾಸೋ ನ ಸೋಽತ್ಯರ್ಥಂ ದುಃಖೇನಾಙ್ಗಪ್ರಬಾಧಕಃ ||೬೪||**
**ಹಿನಸ್ತಿ ನ ಸ ಗಾತ್ರಾಣಿ ನ ಚ ದುಃಖೋ ಯಥೇತರೇ ||**
**ನ ಚ ಭೋಜನಪಾನಾನಾಂ ನಿರುಣದ್ಧ್ಯುಚಿತಾಂ ಗತಿಮ್ ||೬೫||**
**ಇಂದ್ರಿಯಾಣಾಂ ವ್ಯಥಾಂ ನಾಪಿ ಕಾಞ್ಚಿದಾಪಾದಯೇದ್ರುಜಮ್ ||೬೬||**

**ಅರ್ಥ :—** ರುಕ್ಷಪದಾರ್ಥಗಳ ಸೇವನೆಯಿಂದ ಮತ್ತು ಆಯಾಸದಿಂದ, ಕೋಷ್ಠದಲ್ಲಿದ್ದ ಕ್ಷುದ್ರವಾತವು ಕುಪಿತವಾಗಿ ಕ್ಷುದ್ರಶ್ವಾಸವನ್ನುಂಟುಮಾಡುವದು. ಅದು ಶರೀರಕ್ಕೆ ವಿಶೇಷ ದುಃಖವನ್ನು ಕೊಡುವದಿಲ್ಲ ||೬೪|| ಬೇರೆ ಶ್ವಾಸಗಳಂತೆ ಇಂದ್ರಿಯಗಳನ್ನು ಪೀಡಿಸದು,

ದುಃಖವನ್ನೂ ಕೊಡದು. ಅನ್ನಪಾನಗಳ ಗತಿಯನ್ನೂ ತಡೆಯದು. ॥೬೫॥ ಇಂದ್ರಿಯಗಳ ಪೀಡೆಯನ್ನು ಅಥವಾ ಬೇರೆ ಯಾವ ತರದ ಬೇನೆಯನ್ನು ಮಾಡದು. (೬೫೩)

ಸಾಧ್ಯಾ-ಸಾಧ್ಯತೆಗಳನ್ನು ಹೇಳುತ್ತಾರೆ.

**ಸ ಸಾಧ್ಯ ಉಕ್ತೋ ಬಲಿನಃ ಸರ್ವೇ ಚಾವ್ಯಕ್ತಲಕ್ಷಣಾಃ ॥೬೬॥**
**ಇತಿ ಶ್ವಾಸಾಃ ಸಮುದ್ದಿಷ್ಟಾ ಹಿಕ್ಕಾಶ್ಚೈವ ಸ್ವಲಕ್ಷಣೈಃ ॥**
**ಏಷಾಂ ಪ್ರಾಣಹರಾ ವರ್ಜ್ಯಾ ಘೋರಾಸ್ತೇ ಹ್ಯಾಶುಕಾರಿಣಃ ॥೬೭॥**
**ಭೇಷಜೈಃ ಸಾಧ್ಯಯಾಪ್ಯಾಂಸ್ತು ಕ್ಷಿಪ್ರಂ ಭಿಷಗುಪಾಚರೇತ್ ॥**
**ಉಪೇಕ್ಷಿತಾ ದಹೇಯುರ್ಹಿ ಶುಷ್ಕಂ ಕಕ್ಷಮಿವಾನಲಃ ॥೬೮॥**

**ಅರ್ಥಃ—** ರೋಗಿಯು ಬಲಿಷ್ಠನಿದ್ದು, ಎಲ್ಲ ಲಕ್ಷಣಗಳು ಸೌಮ್ಯವಾಗಿದ್ದರೆ ಸಾಧ್ಯವಾಗಿವೆ. ॥೬೬॥ ಇಲ್ಲಿಯವರೆಗೆ ಬಿಕ್ಕು ಮತ್ತು ಶ್ವಾಸಗಳ ಲಕ್ಷಣಗಳನ್ನು ಹೇಳಿದೆವು. ಪ್ರಾಣನಾಶಕ, ಭಯಂಕರ, ಶೀಘ್ರಕಾರಿಯೆಂದು ಹೇಳಿದ ಶ್ವಾಸರೋಗಗಳನ್ನೂ ಬಿಡಬೇಕು. ॥೬೭॥ ಸಾಧ್ಯ ಮತ್ತು ಯಾಪ್ಯಗಳೆಂದು ಹೇಳಿದ ಶ್ವಾಸಗಳನ್ನು ವೈದ್ಯನು ಔಷಧಿಗಳಿಂದ ಶೀಘ್ರವಾಗಿ ಚಿಕಿತ್ಸಿಸಬೇಕು. ಏಕೆಂದರೆ ಇವು ಉಪೇಕ್ಷಿಸಲ್ಪಟ್ಟರೆ ಬೆಂಕಿಯು ಒಣಹುಲ್ಲನ್ನು ಸುಡುವಂತೆ ಶೀಘ್ರವಾಗಿ ರೋಗಿಯನ್ನು ಸುಡುವವು. (೬೮)

ಚಿಕಿತ್ಸೆಯನ್ನು ಹೇಳುತ್ತಾರೆ.

**ಕಾರಣಸ್ಥಾನಮೂಲೈಕ್ಯಾದೇಕಮೇವ ಚಿಕಿತ್ಸಿತಮ್ ॥**
**ದ್ವಯೋರಪಿ ಯಥಾದೃಷ್ಟಮೃಷಿಭಿಸ್ತನ್ನಿಬೋಧತ ॥೬೯॥**
**ಹಿಕ್ಕಾಶ್ವಾಸಾರ್ದಿತಂ ಸ್ನಿಗ್ಧೈರಾದೌ ಸ್ವೇದೈರುಪಾಚರೇತ್ ॥**
**ಆಕ್ತಂ ಲವಣತೈಲೇನ ನಾಡೀಪ್ರಸ್ತರ ಸಙ್ಕರೈಃ ॥೭೦॥**
**ತೈರಸ್ಯ ಗ್ರಥಿತಃ ಶ್ಲೇಷ್ಮಾ ಸ್ರೋತಃಸ್ವಪಿ ವಿಲೀಯತೇ ॥**
**ಖಾನಿ ಮಾರ್ದವಮಾಯಾಂತಿ ವಾತಶ್ಚಾಪ್ಯನುಲೋಮತಾಮ್ ॥೭೧॥**

ಯಥಾದ್ರಿಕುಂಜೇಷ್ವರ್ಕಾಂಶುತಪ್ತಂ ವಿಷ್ಯಂದತೇ ಹಿಮವತ್ ॥
ಶ್ಲೇಷ್ಮಾ ತಪ್ತಃ ಸ್ಥಿರೋ ದೇಹೇ ಸ್ವೇದೈರ್ವಿಷ್ಯಂದತೇ ತಥಾ ॥೭೨॥

ಸ್ವಿನ್ನಂ ಜ್ಞಾತ್ವಾ ತತಸ್ತೂರ್ಣಂ ಭೋಜಯೇತ್ ಸ್ನಿಗ್ಧಮೋದನಮ್ ॥
ಮತ್ಸ್ಯಾನಾಂ ಶೂಕರಾಣಾಂ ವಾ ರಸೈರ್ದಧ್ಯುತ್ತರೇಣ ವಾ ॥೭೩॥

ತತಃ ಶ್ಲೇಷ್ಮಣಿ ಸಂವೃದ್ಧೇ ವಮನಂ ಪಾಯಯೇತ್ ತು ತಮ್ ॥
ಪಿಪ್ಪಲೀಸೈಂಧವಕ್ಷೌದ್ರಯುಕ್ತಂ ವಾತಾವಿರೋಧಿ ಯತ್ ॥೭೪॥

**ನಿರ್ಹೃತೇ ಸುಖಮಾಪ್ನೋತಿ ಸಕಫೇ ದುಷ್ಟವಿಗ್ರಹೇ ॥**
**ಸ್ರೋತಃಸು ಚ ವಿಶುದ್ಧೇಷು ಚರತ್ಯವಿಹತೋಽನಿಲಃ ॥೭೫॥**

**ಅರ್ಥ :—** ಹಿಕ್ಕಾ ಮತ್ತು ಶ್ವಾಸಗಳ ಬಾಹ್ಯಕಾರಣ, ಸ್ಥಾನ, ಮತ್ತು ಮೂಲ ಕಾರಣಗಳಾದ ದೋಷಗಳು ಒಂದೇ ಆಗಿರುವದರಿಂದ ಅವುಗಳ ಚಿಕಿತ್ಸೆಯು ಒಂದೇ ಎಂದು ಋಷಿಗಳು ತಿಳಿದಿದ್ದಾರೆ. ಅದನ್ನು ಕೇಳಿರಿ. ॥೬೯॥ ಹಿಕ್ಕಾಶ್ವಾಸ ರೋಗಿಯನ್ನು ಮೊದಲು ಸ್ನಿಗ್ಧಮಾಡಿ ಸೈಂಧವಯುಕ್ತ ತೈಲವನ್ನು ಅವನ ಮೈಗೆ ತೊಡೆದು ನಾಡೀಸ್ವೇದ ಪ್ರಸ್ತರಸ್ವೇದ, ಸಂಕರಸ್ವೇದಗಳನ್ನು ಕೊಡಬೇಕು. ॥೭೦॥ ಅವುಗಳಿಂದ ಸ್ರೋತಸ್ಸುಗಳಲ್ಲಿ ಇದ್ದ ಗಟ್ಟಿಯಾದ ಕಫವು ಕೂಡ ಕರಗುವದು. ಇಂದ್ರಿಯಗಳು ಮೃದುವಾಗುವವು. ವಾತವು ಅನುಲೋಮನಹೊಂದುವದು. ॥೭೧॥ ಗಿಡಬಳ್ಳಿಗಳಿಂದ ಮುಚ್ಚಿದ ಪರ್ವತದ ಭಾಗದಲ್ಲಿದ್ದ ಬರ್ಫವು ಸೂರ್ಯನ ಕಿರಣಗಳಿಂದ ಕಾಯ್ದು ಕರಗುವಂತೆ ದೇಹದಲ್ಲಿದ್ದ ಗಟ್ಟಿಯಾದ ಕಫವು ಸ್ವೇದಗಳಿಂದ ಕಾಯ್ದು ಕರಗುತ್ತದೆ ॥೭೨॥ ಸ್ವೇದದ ಸಮ್ಯಗ್ಯೋಗವನ್ನು ಕಂಡು ಕೂಡಲೇ ಮೀನ ಅಥವಾ ಹಂದಿಯ ಮಾಂಸಗಳಿಂದ, ಅಥವಾ ಬಹಳ ಮೊಸರಿನಿಂದ ಸ್ನಿಗ್ಧವಾದ, ಅನ್ನವನ್ನು ಉಣ್ಣಿಸಬೇಕು. ॥೭೩॥ ಅದರಿಂದ ಕಫವು ಹೆಚ್ಚಾಗಲು ವಾತಕೋಪ ಮಾಡದ, ಪಿಪ್ಪಲಿ, ಸೈಂಧವ, ಜೇನು ಕೂಡಿದ ವಮನ ಔಷಧವನ್ನು ಕೊಡಬೇಕು. ॥೭೪॥ ಏಕೆಂದರೆ ಇದರಿಂದ ದುಷ್ಟವಾದ ಕಫವು ಹೊರಟುಹೋಗಲು ಸ್ರೋತಸ್ಸುಗಳು ಶುದ್ಧವಾಗಿ ವಾತವು ಪ್ರತಿಬಂಧವಿಲ್ಲದೆ ಸಂಚರಿಸುವದರಿಂದ ಅವನಿಗೆ ಸಮಾಧಾನವೆನಿಸುವದು. (೭೫)

ಧೂಮವರ್ತಿಗಳನ್ನು ಹೇಳುತ್ತಾರೆ.

ಲೀನಶ್ಚೇದ್ ದೋಷಶೇಷಃ ಸ್ಯಾತ್ ತಂ ಧೂಮೈರ್ನಿರ್ಹರೇದ್ ಬುಧಃ ||
ಹರಿದ್ರಾಂ ಯವಮೇರಂಡಮೂಲಂ ಲಾಕ್ಷಾಂ ಮನಃಶಿಲಾಮ್ ||೭೬||
ಸದೇವದಾರ್ವಲಂ ಮಾಂಸೀಂ ಪಿಷ್ಟ್ವಾ ವರ್ತಿಂ ಪ್ರಕಲ್ಪಯೇತ್ ||
ತಾಂ ಘೃತಾಕ್ತಾಂ ಪಿಬೇದ್ ಧೂಮಂ ಯವೈರ್ವಾ ಘೃತಸಂಯುತೈಃ ||೭೭||
ಮಧೂಚ್ಛಿಷ್ಟಂ ಸರ್ಜರಸಂ ಘೃತಂ ಮಲ್ಲಕಸಂಪುಟೇ ||
ಕೃತ್ವಾ ಧೂಮಂ ಪಿಬೇಚ್ಛೃಙ್ಗಂ ಬಾಲಂ ವಾ ಸ್ನಾಯು ವಾ ಗವಾಮ್ ||೭೮||
ಶ್ಯೋನಾಕವರ್ದ್ಧಮಾನಾನಾಂ ನಾಡೀಂ ಶುಷ್ಕಾಂ ಕುಶಸ್ಯ ಚ ||
ಪದ್ಮಕಂ ಗುಗ್ಗುಲುಂ ಲೋಧ್ರಂ ಶಲ್ಲಕೀಂ ವಾ ಘೃತಪ್ಲುತಾಮ್

**ಅರ್ಥ** :— (ಮೇಲಿನ ಉಪಾಯಗಳಿಂದ ಕಫವು ಹೋಗಿ) ಅದರ ಶೇಷವು ಒಳಗೆ ಗುಂಬಿಗೆ ಉಳಿದಿದ್ದರೆ ಅದನ್ನು ಧೂಮಗಳಿಂದ ಕಳೆಯಬೇಕು. ಅರಿಷಿಣ, ಜವೆ, ಔಡಲಬೇರು, ಅರಗು, ಮನಶೀಳ ||೭೬|| ದೇವದಾರು, ಹರಿತಾಳ, ಜಟಾಮಾಂಶಿ ಇವುಗಳ ಚೂರ್ಣದಿಂದ ಅಥವಾ ಜವೆಯ ಚೂರ್ಣಗಳಿಂದ ಬತ್ತಿಯನ್ನುಮಾಡಿ ತುಪ್ಪ ತೊಡೆದು ಅದರಿಂದ ಧೂಮಪಾನವನ್ನು ಮಾಡಬೇಕು. ||೭೭|| ಮೇಣ, ರಾಳ, ತುಪ್ಪಕೂಡಿಸಿ ಪರಿವಾಣದ ಸಂಪುಟದಲ್ಲಿ ಹಾಕಿ ಅದರ ಧೂಮವನ್ನು ಅಥವಾ ಆಕಳುಗಳ ಕೋಡುಗಳ ಅಥವಾ ಕೂದಲುಗಳ ಅಥವಾ ಸ್ನಾಯುಗಳ ಧೂಮವನ್ನು ಕುಡಿಯಬೇಕು. ||೭೮|| ಹೆಮ್ಮರ, ಔಡಲ ಅಥವಾ ದರ್ಭದ ಒಣಗಿಸಿದ ನಾಡಿಗೆ ಘೃತವನ್ನು ಹಚ್ಚಿ ಅಥವಾ ಪದ್ಮಕಾಷ್ಠ, ಗುಗ್ಗುಳ, ಲೋಧ, ಶಲ್ಲಕೀ (ಸರ್ಜಭೇದ) ಇವುಗಳ ಕಲ್ಕದಿಂದ ಬತ್ತಿಯನ್ನು ಮಾಡಿ ಒಣಗಿಸಿ ತುಪ್ಪವನ್ನು ಹಚ್ಚಿ ಧೂಮ ತಕ್ಕೊಳ್ಳಬೇಕು. (೭೯)

ಉಪದ್ರವಯುಕ್ತ ಈ ರೋಗಗಳ ಚಿಕಿತ್ಸೆಯನ್ನು ಹೇಳುತ್ತಾರೆ.

ಸ್ವರಕ್ಷೀಣಾತಿಸಾರಾಸೃಕ್ ಪಿತ್ತದಾಹಾನುಬಂಧಜಾನ್ ||
ಮಧುರಸ್ನಿಗ್ಧಶೀತಾದ್ಯೈರ್ಹಿಕ್ಕಾಶ್ವಾಸಾನುಪಾಚರೇತ್ ||೮೦||

**ಅರ್ಥ :—** ಸ್ವರಭಂಗ, ಅತಿಸಾರ, ರಕ್ತಪಿತ್ತ, ದಾಹಗಳಿಂದ ಕೂಡಿದ ಹಿಕ್ಕಾ ಶ್ವಾಸಗಳಿಗೆ ಮಧುರ ಸ್ನಿಗ್ಧ ಶೀತ ಉಪಚಾರಗಳನ್ನು ಮಾಡಬೇಕು. (೪೦)

ಸ್ವೇದಕ್ಕೆ ಅನರ್ಹರನ್ನು ಹೇಳುತ್ತಾರೆ.

**ನ ಸ್ವೇದ್ಯಾಃ ಪಿತ್ತದಾಹಾರ್ತಾ ರಕ್ತಸ್ವೇದಾತಿವರ್ತಿನಃ ॥**
**ಕ್ಷೀಣಧಾತುಬಲಾ ರುಕ್ಷಾ ಗರ್ಭಿಣ್ಯಶ್ಚಾಪಿ ಪಿತ್ತಲಾಃ ॥೪೧॥**
**ಕಾಮಂ ಕಂಠಮುರಃ ಕೋಷ್ಣೈಃ ಸ್ನೇಹಸೇಕೈಃ ಸಶರ್ಕರೈಃ ॥**
**ಉತ್ಕಾರಿಕೋಪನಾಹೈಶ್ಚ ಮೃದುಭಿಃ ಸ್ವೇದಯೇತ್ ಕ್ಷಣಮ್ ॥೪೨॥**
**ತಿಲೋಮಾಮಾಷಗೋಧೂಮಚೂರ್ಣೈರ್ವಾತಹರೈಃ ಸಹ ॥**
**ಸ್ನೇಹೈಶ್ಚೋತ್ಕಾರಿಕಾ ಸಾಮ್ಲೈಃ ಸಕ್ಷೀರೈರ್ವಾ ಕೃತಾ ಹಿತಾ ॥೪೩॥**

**ಅರ್ಥ :—** ಪಿತ್ತ, ದಾಹ, ರಕ್ತದೋಷ, ಬಹಳ ಬೆವರು ಉಳ್ಳ ರೋಗಿಗಳಿಗೂ ಧಾತು ಕ್ಷಯವುಳ್ಳ, ಅಶಕ್ತ, ರುಕ್ಷ, ಗರ್ಭಿಣಿ ಮತ್ತು ಬಹಳ ಪಿತ್ತವುಳ್ಳ ರೋಗಿಗಳಿಗೂ ಸ್ವೇದ ಕೊಡಬಾರದು. ॥೪೧॥ ಆದರೂ ಅವರ ಕುತ್ತಿಗೆ ಎದೆಗಳನ್ನು ಶರ್ಕರಾಯುಕ್ತ ಸ್ನೇಹಗಳ ಪರಿಷೇಕಗಳಿಂದಲೂ ರೊಟ್ಟಿಯಾಕಾರದ ಮೃದುವಾದ ಪೋಟೀಸುಗಳಿಂದಲೂ ಒಂದು ಕ್ಷಣಮಾತ್ರ ಕಾಸಬಹುದು. ॥೪೨॥ (ಅದಕ್ಕಾಗಿ) ವಾತನಾಶಕ ಎಳ್ಳು, ಅಗಸಿ, ಉದ್ದು, ಗೋಧಿ ಹಿಟ್ಟುಗಳಲ್ಲಿ ಸ್ನೇಹ ಅಮ್ಲಗಳನ್ನು ಹಾಕಿ ಮಾಡಿದ ಅಥವಾ ಹಾಲುಹಾಕಿ ಮಾಡಿದ ರೊಟ್ಟಿಯು ಒಳ್ಳೆಯದು. (೪೩)

**ನವಜ್ವರಾಮದೋಷೇಷು ರುಕ್ಷಂ ಸ್ವೇದಂ ವಿಲಙ್ಘನಮ್ ॥**
**ಸಮೀಕ್ಷ್ಯೋಲ್ಲೇಖನಂ ವಾಪಿ ಕಾರಯೇಲ್ಲವಣಾಂಬುನಾ ॥೪೪॥**
**ಅತಿಯೋಗೋದ್ಧತಂ ವಾತಂ ದೃಷ್ಟ್ವಾ ವಾತಹರೈರ್ಭಿಷಕ್ ॥**
**ರಸಾದ್ಯೈರ್ನಾತಿಶೀತೋಷ್ಣೈರಭ್ಯಙ್ಗೈಶ್ಚ ಶಮಂ ನಯೇತ್ ॥೪೫॥**
**ಉದಾವರ್ತೇ ತಥಾಧ್ಮಾನೇ ಮಾತುಲುಙ್ಗಾಮ್ಲವೇತಸೈಃ ॥**
**ಹಿಙ್ಗುಪೀಲುವಿಡೈಶ್ಚಾನ್ನಂ ಯುಕ್ತಂ ಸ್ಯಾದನುಲೋಮನಮ್ ॥೪೬॥**

**ಅರ್ಥ :—** ನವಜ್ವರದಲ್ಲಿ ಮತ್ತು ಆಮದೋಷಗಳಲ್ಲಿ ರುಕ್ಷವಾದ ಸ್ವೇದವನ್ನು ಲಂಘನವನ್ನೂ ಮಾಡಿಸಬೇಕು. ಅಥವಾ ಯೋಗ್ಯಕಂಡರೆ

ಉಪ್ಪು ನೀರಿನಿಂದ ವಮನ ಮಾಡಿಸಬೇಕು. ||೮೪|| ವಮನದ ಅತಿ ಯೋಗದಿಂದ ವಾತವು ಹೆಚ್ಚಾದರೆ ವಾತನಾಶಕವಾದ ಬಹಳ ಶೀತ ಅಥವಾ ಉಷ್ಣವಿಲ್ಲದ ಮಾಂಸರಸ ಮುಂತಾದವುಗಳಿಂದ ಮತ್ತು ಅಭ್ಯಂಗ ಗಳಿಂದ ಅದನ್ನು ಕಡಿಮೆಮಾಡಬೇಕು. ||೮೫|| ಉದಾವರ್ತ, ಹೊಟ್ಟೆ ಯುಬ್ಬುಗಳು ಇದ್ದರೆ ಮಾದಾಳ ಅಮ್ಲವೇತಸ ಇಂಗು ಪೀಲು (ಗೋವಿನ ಹಣ್ಣು), ಬಿಡಲವಣಗಳಿಂದ ಯುಕ್ತವಾದ ಅನ್ನವನ್ನು ಕೊಡಬೇಕು. ಅದು ಅನುಲೋಮನ ಮಾಡುವದು. (೮೬)

**ಈ ರೋಗಿಗಳ ಭೇದವನ್ನು ಹೇಳಿ ಅವರಿಗೆ ಮಾಡತಕ್ಕ ಭಿನ್ನ ಚಿಕಿತ್ಸೆಯನ್ನು ಹೇಳುತ್ತಾರೆ.**

**ಹಿಕ್ಕಾಶ್ವಾಸಾಮಯೀ ತ್ವೇಕೋ ಬಲವಾನ್ ದುರ್ಬಲೋಽಪರಃ ||**
**ಕಫಾಧಿಕಸ್ತಥೈವೈಕೋ ರುಕ್ಷೋ ಬಹ್ವನಿಲೋಽಪರಃ ||೮೭||**

**ಕಫಾಧಿಕೇ ಬಲಸ್ಥೇ ಚ ವಮನಂ ಸವಿರೇಚನಮ್ ||**
**ಕಾರ್ಯಂ ಪಥ್ಯಾಶಿನೇ ಧೂಮಲೇಹಾದಿಶಮನಂ ತತಃ ||೮೮||**

**ವಾತಿಕಾನ್ ದುರ್ಬಲಾನ್ವೃದ್ಧಾನ್ ಬಾಲಾಂಶ್ಚಾನಿಲಸೂದನೈಃ ||**
**ತರ್ಪಯೇದೇವ ಶಮನೈಃ ಸ್ನೇಹಯೂಷರಸಾದಿಭಿಃ ||೮೯||**

**ಅನುತ್ಕ್ಲಿಷ್ಟಕಫಾಸ್ವಿನ್ನದುರ್ಬಲಾನಾಂ ವಿಶೋಧನಾತ್ ||**
**ವಾಯುರ್ಲಬ್ಧಾಸ್ಪದೋ ಮರ್ಮ ಸಂಶೋಷ್ಯಾಶು ಹರೇದಸೂನ್**

**ದೃಢಾನ್ ಬಹುಕಫಾಂಸ್ತಸ್ಮಾದ್ ರಸೈರಾನೂಪವಾರಿಜೈಃ**
**ತೃಪ್ತಾನ್ ವಿಶೋಧಯೇತ್ ಸ್ವಿನ್ನಾನ್ ಬೃಂಹಯೇದಿತರಾನ್ ಭಿಷಕ್ ||೯೧||**

**ಅರ್ಥಃ**— ಹಿಕ್ಕಾಶ್ವಾಸ ರೋಗಿಗಳಲ್ಲಿ ಕೆಲವರು ಬಲಿಷ್ಠರು, ಕೆಲವರು ದುರ್ಬಲರು ಇರುವರು. ಅವರಲ್ಲಿಯೂ ಕೆಲವರಲ್ಲಿ ಕಫವು ಹೆಚ್ಚಿರುವದು. ಇನ್ನೊಬ್ಬರಲ್ಲಿ ರುಕ್ಷತೆ ಇದ್ದು ವಾತವು ಹೆಚ್ಚಿರುವದು. ||೮೭|| ಕಫವು ಹೆಚ್ಚಿದ್ದವರಿಗೂ ಬಲಿಷ್ಠರಿಗೂ ವಮನ ಮತ್ತು ವಿರೇಚನವನ್ನು ಕೊಡಬೇಕು. ಆ ಮೇಲೆ ಪಥ್ಯವನ್ನು ಮಾಡಿಸುತ್ತಾ ಧೂಮ ಲೇಹ ಮುಂತಾದ ಶಮನ ಔಷಧಗಳನ್ನು ಕೊಡಬೇಕು. ||೮೮|| ವಾತವು

ಹೆಚ್ಚು ಉಳ್ಳ ದುರ್ಬಲ, ವೃದ್ಧ, ಬಾಲ ರೋಗಿಗಳನ್ನು ವಾತನಾಶಕವಾದ ಸ್ನೇಹ, ಕಟ್ಟು, ಮಾಂಸರಸ ಮುಂತಾದ ಶಮನ ಔಷಧಗಳಿಂದ ಬೃಂಹಣ ಮಾಡಬೇಕು. ||೮೯|| ಕಫವು ಕೆರಳದೆ ಇದ್ದ, ಸ್ವೇದಕೊಡದ ಅಥವಾ ದುರ್ಬಲ ರೋಗಿಗಳಿಗೆ ಶೋಧನವನ್ನು ಕೊಟ್ಟರೆ ವಾತವು ಪ್ರಬಲವಾಗಿ ಮರ್ಮವನ್ನು ಒಣಗಿಸಿ ತೀವ್ರ ಪ್ರಾಣವನ್ನು ತಕ್ಕೊಳ್ಳುವದು. ||೯೦|| ಆದ್ದರಿಂದ ಕಫವು ಹೆಚ್ಚುಳ್ಳ ಬಲಿಷ್ಠ ರೋಗಿಗಳಿಗೆ ಆನೂಪ ಮತ್ತು ಜಲಚರಪ್ರಾಣಿಗಳ ಮಾಂಸದಿಂದ ತೃಪ್ತಿಗೊಳಿಸಿ (ಕಫವನ್ನು ಕೆರಳಿಸಿ) ಸ್ವೇದಕೊಟ್ಟು ಆ ಮೇಲೆ ಶೋಧನ ಕೊಡಬೇಕು. ಉಳಿದವರನ್ನು ಬೃಂಹಣ ಮಾಡಬೇಕು. (೯೧)

ಶಮನ ಬೃಂಹಣ ಔಷಧಗಳನ್ನು ಹೇಳುತ್ತಾರೆ.

ಶಿಖಿತಿತ್ತಿರಿದಕ್ಷಾದ್ಯಾ ಜಾಙ್ಗಲಾಶ್ಚ ಮೃಗಾ ದ್ವಿಜಾಃ ||
ದಶಮೂಲೀರಸೇ ಸಿದ್ಧಾಃ ಕೌಲತ್ಥೇ ವಾ ರಸೇ ಹಿತಾಃ ||೯೨||

ನಿದಿಗ್ಧಿಕಾಂ ಬಿಲ್ವಮಧ್ಯಂ ಕರ್ಕಟಾಖ್ಯಾಂ ದುರಾಲಭಾಮ್ ||
ತ್ರಿಕಂಟಕಂ ಗುಡೂಚೀಞ್ಚ ಕುಲತ್ಥಾಂಶ್ಚ ಸಚಿತ್ರಕಾನ್ ||೯೩||

ಜಲೇ ಪಕ್ತ್ವಾ ರಸಃ ಪೂತಃ ಪಿಪ್ಪಲೀಘೃತಭರ್ಜಿತಃ ||
ಸನಾಗರಃ ಸಲವಣಃ ಸ್ಯಾದ್ಯೂಷೋ ಭೋಜನೇ ಹಿತಃ ||೯೪||

ರಾಸ್ನಾಂ ಬಲಾಂ ಪಞ್ಚಮೂಲಂ ಹ್ರಸ್ವಂ ಮುದ್ಗಾನ್ ಸಚಿತ್ರಕಾನ್||
ಪಕ್ತ್ವಾಂಭಸಿ ರಸೇ ತಸ್ಮಿನ್ಯೂಷಃ ಸಾಧ್ಯಶ್ಚ ಪೂರ್ವವತ್ ||೯೫||

ಪಲ್ಲವಾನ್ಮಾತುಲುಙ್ಗಸ್ಯ ನಿಂಬಸ್ಯ ಕುಲಕಸ್ಯ ಚ ||
ಪಕ್ತ್ವಾ ಮುದ್ಗಾಂಶ್ಚ ಸವ್ಯೋಷಾನ್ ಕ್ಷಾರಯೂಷಂ
ವಿಪಾಚಯೇತ್ ||೯೬||

ದತ್ವಾ ಕ್ಷಾರಂ ಸಲವಣಂ ಶಿಗ್ರೂಣಿ ಮರಿಚಾನಿ ಚ ||
ಯುಕ್ತ್ಯಾ ಸಂಸಾಧಿತೋ ಯೂಷೋ ಹಿಕ್ಕಾಶ್ವಾಸವಿಕಾರಜಿತ್

ಕಾಸಮರ್ದಕಪತ್ರಾಣಾಂ ಯೂಷಃ ಶೋಭಾಞ್ಜನಸ್ಯ ಚ ||
ಶುಷ್ಕಮೂಲಕಯೂಷಶ್ಚ ಹಿಕ್ಕಾಶ್ವಾಸನಿಬರ್ಹಣಃ ||೯೭||
ಸದಧಿವ್ಯೋಷಸರ್ಪಿಷ್ಕೋ ಯೂಷೋ ವಾರ್ತಾಕಜೋ ಹಿತಃ||೯೮||

ಅರ್ಥ:— ದಶಮೂಲದ ಕಷಾಯದಲ್ಲಿ ಅಥವಾ ಹುರಳಿಯ ಕಷಾಯದಲ್ಲಿ ಸಿದ್ಧಮಾಡಿದ ನವಿಲು, ತಿತ್ತಿರಿ, ಕೋಳಿ ಮುಂತಾದ ಜಾಂಗಲ ದೇಶದ ಮೃಗಪ್ರಾಣಿಗಳ ಮಾಂಸವು ಹಿಕ್ಕಾಶ್ವಾಸರೋಗಿಗಳಿಗೆ ಹಿತಕರವಾಗಿದೆ. ||೯೨|| ನೆಲಗುಳ್ಳ, ಬಿಲ್ವಮಜ್ಜ, ಕಾಗದಶಿಂಗಿ, ನೆಲಹಿಂಗಳ ನೆಗ್ಗಿನ ಮುಳ್ಳು, ಅಮೃತಬಳ್ಳಿ, ಚಿತ್ರಕ ಇವುಗಳನ್ನು ||೯೩|| ಒಂದೊಂದು ತೊಲೆ ತಕ್ಕೊಂಡು ೬೪ ಪಟ್ಟು ನೀರಿನಲ್ಲಿ ಕುದಿಸಿ ಅರ್ಧ ಉಳಿಯಲು ಸೋಸಿ ಅದರಲ್ಲಿ ಹುರಳೀ ಬೇಳೆಗಳನ್ನು ಗಳೆ ಹಾಕಿ ಕುದಿಸಿ ಸೋಸಿ ಆ ಕಟ್ಟಿನಲ್ಲಿ ಹಿಪ್ಪಲಿ ಶುಂಠಿಗಳ ಚೂರ್ಣ ಮತ್ತು ಉಪ್ಪು ಹಾಕಿ ತುಪ್ಪದ ಒಗ್ಗರಣೆಕೊಟ್ಟು ಊಟದಲ್ಲಿ ಕೊಡಬೇಕು. ||೯೪|| ಇದರಂತೆ ರಾಸ್ನಾ ಬಲಾ, ಹ್ರಸ್ವಪಂಚಮೂಲ, ಹೆಸರು, ಚಿತ್ರಕ, ಇವುಗಳನ್ನು ನೀರಿನಲ್ಲಿ ಕುದಿಸಿ ಮೇಲಿನಂತೆಯೇ ಹಿಪ್ಪಲಿ ಶುಂಠಿ ಉಪ್ಪುಗಳ ಚೂರ್ಣವನ್ನು ಹಾಕಿ ತುಪ್ಪದ ಒಗ್ಗರಣೆ ಕೊಟ್ಟು ಕಟ್ಟನ್ನು ಸಿದ್ಧಮಾಡಬೇಕು. ||೯೫|| ಮಾದಾಳ ಬೇವು ಕಹಿ ಪಡವಲಗಳ ಎಲೆಗಳನ್ನು ಕುದಿಸಿ ಅದರಲ್ಲಿ ಹೆಸರು ಬೇಳೆ ತ್ರಿಕಟುಚೂರ್ಣಗಳನ್ನೂ ||೯೬|| ಜವಖಾರ ಸೈಂಧವ ನುಗ್ಗೀಕಾಯಿ ಮೆಣಸು ಇವುಗಳನ್ನೂ ಯೋಗ್ಯ ಪ್ರಮಾಣದಿಂದ ಕೂಡಿಸಿ ಮಾಡಿದ ಕ್ಷಾರಯೂಷವು ಬಿಕ್ಕು ಶ್ವಾಸಗಳನ್ನು ಕಳೆಯುವದು. ||೯೭|| ಇದರಂತೆ ಕಾಸಮರ್ದ (ಎಲೆವರಿಗೆ) ಎಲೆಗಳಿಂದ ಅಥವಾ ನುಗ್ಗೀ ಎಲೆಗಳಿಂದ ಅಥವಾ ಒಣಮೂಲಂಗಿಗಳಿಂದ ಮಾಡಿದ ಕಟ್ಟುಗಳೂ ಬಿಕ್ಕು ಶ್ವಾಸಗಳನ್ನು ಕಳೆಯುವವು. ||೯೮|| ಬದನೇಕಾಯಿ ಹೆಸರು ಮುಂತಾದವುಗಳನ್ನು ಕುದಿಸಿ ಅದರಲ್ಲಿ ಮೊಸರು, ತ್ರಿಕಟುಗಳನ್ನು ಹಾಕಿ ತುಪ್ಪದ ಒಗ್ಗರಣೆ ಕೊಟ್ಟು ಮಾಡಿದ ಕಟ್ಟೂ ಹಿತಕರವಾಗಿದೆ. (೯೮)

ಆಹಾರವನ್ನು ಹೇಳುತ್ತಾರೆ.

ಶಾಲಿಷಷ್ಟಿಕಗೋಧೂಮಯವಾನ್ನಾನ್ಯನವಾನಿ ಚ ||೯೯||
ಹಿಙ್ಗುಸೌವರ್ಚಲಾಜಾಜೀವಿಡಪೌಷ್ಕರಚಿತ್ರಕೈಃ ||
ಸಿದ್ಧಾ ಕರ್ಕಟಶೃಙ್ಗ್ಯಾ ಚ ಯವಾಗೂಃ ಶ್ವಾಸಹಿಕ್ಕಿನಾಮ್ ||೧೦೦||
ದಶಮೂಲೀಶಠೀರಾಸ್ನಾಪಿಪ್ಪಲೀಬಿಲ್ವಪೌಷ್ಕರೈಃ ||
ಶೃಙ್ಗೀತಾಮಲಕೀಭಾರ್ಗೀ ಗುಡೂಚೀನಾಗರರ್ದ್ಧಿಕಭಿಃ ||೧೦೧||

ಯವಾಗೂಂ ವಿಧಿನಾ ಸಿದ್ಧಾಂ ಕಷಾಯಂ ವಾ ಪಿಬೇನ್ನರಃ ॥
ಕಾಸಹೃದ್ಗ್ರಹಪಾರ್ಶ್ವಾರ್ತಿಹಿಕ್ಕಾಶ್ವಾಸಪ್ರಶಾಂತಯೇ ॥೧೦೨॥
ಪುಷ್ಕರಾಹ್ವಶಠೀವ್ಯೋಷಮಾತುಲುಙ್ಗಾಮ್ಲವೇತಸೈಃ ॥
ಯೋಜಯೇದನ್ನಪಾನಾನಿ ಸಸರ್ಪಿರ್ಬಿಡಹಿಙ್ಗುಭಿಃ ॥೧೦೩॥
ದಶಮೂಲಸ್ಯ ವಾ ಕ್ವಾಥಮಥವಾ ದೇವದಾರುಣಃ ॥
ತೃಷಿತೋ ಮದಿರಾಂ ವಾಪಿ ಹಿಕ್ಕಾಶ್ವಾಸೀ ಪಿಬೇನ್ನರಃ ॥೧೦೪॥

**ಅರ್ಥ :—** ಹಳೇಯದಾದ ಅಕ್ಕಿ, ಷಷ್ಟಿಕ ಅಕ್ಕಿ, ಗೋದಿ, ಜವೆಗಳ ಅನ್ನಗಳು ಹಿತಕರವು. ॥೯೯॥ ಇಂಗು, ಕಾಚಲವಣ, ಜೀರಿಗೆ, ಬಿಡಲವಣ, ಪುಷ್ಕರಮೂಲ, ಚಿತ್ರಕಮೂಲ, ಕಾಕಡಶಿಂಗಿ, ಇವುಗಳಿಂದ ಮಾಡಿದ ಪೇಯವು ಶ್ವಾಸಹಿಕ್ಕಾ ರೋಗಿಗಳಿಗೆ ಹಿತಕರವು. ॥೧೦೦॥ ದಶಮೂಲ, ಕಚೋರ, ರಾಸ್ನಾ, ಹಿಪ್ಪಲಿ, ಬಿಲ್ವ, ಪುಷ್ಕರಮೂಲ, ಕಾಕಡಶಿಂಪಿ, ನೆಲನೆಲ್ಲಿ; ಗಂಟುಬಾರಂಗಿ, ಅಮೃತಬಳ್ಳಿ, ಸುಂಠಿ, ಋದ್ಧಿ ॥೧೦೧॥ ಇವುಗಳಿಂದ ವಿಧಿಯಂತೆ ಮಾಡಿದ ಪೇಯವನ್ನಾಗಲೀ ಕಷಾಯವನ್ನಾಗಲೀ ಕುಡಿದರೆ ಕೆಮ್ಮು ಹೃದ್ಗ್ರಹ ಪಾರ್ಶ್ವಶೂಲ ಬಿಕ್ಕು ಶ್ವಾಸಗಳು ಹೋಗುವವು. ॥೧೦೨॥ ಪುಷ್ಕರಮೂಲ, ಕಚೋರ, ತ್ರಿಕಟು ಮಾದಾಳ, ಅಮ್ಲವೇತಸ, ಇವುಗಳ ಕಷಾಯದಲ್ಲಿ ಮಾಡಿದ ಅನ್ನಪಾನಗಳಲ್ಲಿ ತುಪ್ಪ ಬಿಡಲವಣ ಇಂಗುಗಳನ್ನು ಹಾಕಿ ಕೊಡಬೇಕು. ॥೧೦೩॥ ಹಿಕ್ಕಾಶ್ವಾಸ ರೋಗಿಯು, ನೀರಡಿಕೆಯಾದರೆ ದಶಮೂಲದ ಅಥವಾ ದೇವದ್ಸಾರದ ಕಷಾಯವನ್ನು ಅಥವಾ ಸುರೆಯನ್ನು ಕುಡಿಯಬೇಕು. (೧೦೪)

**ಔಷಧಗಳನ್ನು ಹೇಳುತ್ತಾರೆ.**

ಪಾಠಾಂ ಮಧುರಸಾಂ ರಾಸ್ನಾಂ ಸರಲಂ ದೇವದಾರು ಚ ॥
ಪ್ರಕ್ಷಾಲ್ಯ ಜರ್ಜರೀಕೃತ್ಯ ಸುರಾಮಂಡೇ ನಿಧಾಪಯೇತ್ ॥೧೦೫॥
ತಂ ಮಂದಲವಣಂ ಕೃತ್ವಾ ವೈದ್ಯಃ ಪ್ರಸೃತಸಮ್ಮಿತಮ್ ॥
ಪಾಯಯೇತ್ತು ತತೋ ಹಿಕ್ಕಾಶ್ವಾಸಶ್ಚೈವೋಪಶಾಮ್ಯತಿ ॥೧೦೬॥
ಹಿಂಗು ಸೌವರ್ಚಲಂ ಕೋಲಂ ಸಮಙ್ಗಾಂ ಪಿಪ್ಪಲೀಂ ಬಲಾಮ್ ॥
ಮಾತಲುಙ್ಗರಸೇ ಪಿಷ್ಟ್ವಾರನಾಲೇನ ವಾ ಪಿಬೇತ್ ॥೧೦೭॥

ಭಾರ್ಗೀ ನಾಗರಯೋಃ ಕಲ್ಕಂ ಮರಿಚಕ್ಷಾರಯೋಸ್ತಥಾ ||
ಪೀತದ್ರುಚಿತ್ರಕಾಸ್ಫೋತಾವಮಾರ್ಗಾಣಾಮಂಬುನಾ ಪಿಬೇತ್
ಶಿರೀಷಪುಷ್ಪಸ್ವರಸಃ ಸಪ್ತಪರ್ಣಸ್ಯ ವಾ ಪುನಃ
ಪಿಪ್ಪಲೀ ಮಧುಸಂಯುಕ್ತಾ ಕಫಪಿತ್ತಾನುಗೇ ಹಿತಾ ||೧೦೯||
ಮಧೂಲಿಕಾ ತುಗಾಕ್ಷೀರೀ ನಾಗರಂ ಪಿಪ್ಪಲೀ ತಥಾ ||
ಉತ್ಕಾರಿಕಾ ಘೃತೇ ಸಿದ್ಧಾ ಶ್ವಾಸೇ ಪಿತ್ತಾನುಬಂಧಜೇ ||೧೧೦||
ಶ್ವಾವಿಧಂ ಶಶಮಾಂಸಞ್ಚ ಶಲ್ಲಕಸ್ಯ ಚ ಶೋಣಿತಮ್ ||
ಪಿಪ್ಪಲೀಘೃತಸಿದ್ಧಾನಿ ಶ್ವಾಸೇ ವಾತಾನುಬಂಧಜೇ ||೧೧೧||
ಸುವರ್ಚಲಾರಸೋ ದುಗ್ಧಂ ಘೃತಂ ತ್ರಿಕಟುಕಾನ್ವಿತಮ್ ||
ಶಾಲ್ಯೋದನಸ್ಯಾನುಪಾನಂ ವಾತಪಿತ್ತಾನುಗೇ ಹಿತಮ್ ||೧೧೨||
ಮಧುಕಂ ಪಿಪ್ಪಲೀಮೂಲಂ ಗುಡೋ ಗೋಶಕೃತೋ ರಸಃ ||
ಕ್ಷೌದ್ರಂ ಘೃತಂ ಶ್ವಾಸಕಾಸಹಿಕ್ಕಾಭಿಷ್ಯಂದಿನಾಂ ಹಿತಮ್ ||೧೧೩||
ಖರಾಶ್ವೋಷ್ಟ್ರವರಾಹಾಣಾಂ ಮೇಷಸ್ಯ ಚ ಗಜಸ್ಯ ಚ ||
ಶಕೃದ್ರಸಂ ಬಹುಕಫೇಷ್ವೇಕೈಕಂ ಮಧುನಾ ಪಿಬೇತ್ ||೧೧೪||
ಕ್ಷಾರಂ ವಾಪ್ಯಶ್ವಗಂಧಾಯಾ ಲಿಹ್ಯಾನ್ನಾ ಕ್ಷೌದ್ರಸರ್ಪಿಷಾ ||
ಮಯೂರಪಾದನಾಲಂ ವಾ ಶಲಲಂ ಶಲ್ಲಕಸ್ಯ ಚ ||೧೧೫||
ಶ್ವಾವಿಧ್ರೋಹಕಚಾಷಾಣಾಂ ಲೋಮಾನಿ ಕುರರಸ್ಯ ಚ ||
ಏಕದ್ವಿಶಫಶೃಙ್ಗಾಣಿ ಚರ್ಮಾಸ್ಥೀನಿ ಖುರಾಂಸ್ತಥಾ ||೧೧೬||
ಸಮಸ್ತಾನ್ಯೇಕಶೋ ವಾಪಿ ದಗ್ಧ್ವಾ ಕ್ಷೌದ್ರಘೃತಾನ್ವಿತಮ್ ||
ಚೂರ್ಣಂ ಲಿಹನ್ ಜಯೇತ್ಕಾಸಂ ಹಿಕ್ಕಾಂ ಶ್ವಾಸಞ್ಚ ದಾರುಣಮ್
ಏತೇ ಹಿ ಕಫಸಂರುದ್ಧಗತಿಪ್ರಾಣಪ್ರಕೋಪಜಾಃ ||
ತಸ್ಮಾತ್ತನ್ಮಾರ್ಗಶುದ್ಧ್ಯರ್ಥಂ ದೇಯಾ ಲೇಹಾ ನ ನಿಷ್ಕಫೇ ೧೧೮||
ಕಾಸಿನೇ ಛರ್ದನಂ ದದ್ಯಾತ್ ಸ್ವರಭೇದೇ ಚ ಬುದ್ಧಿಮಾನ್ ||
ವಾತಶ್ಲೇಷ್ಮಹರೈರ್ಯುಕ್ತಂ ತಮಕೇ ತು ವಿರೇಚನಮ್ ||೧೧೯||
ಉದೀರ್ಯತೇ ಭೃಶತರಂ ಮಾರ್ಗರೋಧಾದ್ವಹಜ್ಜಲಮ್ ||
ಯಥಾ ತಥಾನಿಲಸ್ತಸ್ಯ ಮಾರ್ಗಂ ನಿತ್ಯಂ ವಿಶೋಧಯೇತ್ ||೧೨೦||

**ಅರ್ಥ :—** ಅಗಳಸುಂಠಿ, ಮಧುರಸಾ (ಹೆಗ್ಗೊರಿಟಿಗೆ) ರಾಸ್ನಾ, ಸರಲ, (ದೇವದಾರುಜಾತಿ), ದೇವದಾರು ಇವುಗಳನ್ನು ನೀರಿನಲ್ಲಿ ತೊಳೆದು ಜಜ್ಜಿ ನಾಲ್ಕುಪಾಲು ಸುರಾಮಂಡದಲ್ಲಿ ಹಾಕಿ ಇಡಬೇಕು. ||೧೦೫|| ವೈದ್ಯನು ಅದನ್ನು ೧೬ ತೊಲಿ ತಕ್ಕೊಂಡು ಸ್ವಲ್ಪ ಉಪ್ಪುಹಾಕಿ ಕುಡಿಸಬೇಕು. ಅದರಿಂದ ಬಿಕ್ಕು ದಮ್ಮುಗಳು ಹೋಗುವವು ||೧೦೬|| ಇಂಗು ಕಾಚಲವಣ, ಬೋರೆ, ಸಮಂಗಾ (ಮಂಜಿಷ್ಠಾ) ಹಿಪ್ಪಲಿ, ಮುದ್ರೆ ಇವುಗಳನ್ನು ಮಾದಾಳದ ರಸದಲ್ಲಿ ಅರೆದು ಗಂಜಿಯೊಡನೆ ಕುಡಿಯಬೇಕು. ||೧೦೭|| ಭಾರಂಗಮೂಳ, ಸುಂಠಿಗಳ ಚೂರ್ಣವನ್ನು ಅಥವಾ ಮೆಣಸು ಜವಕ್ಷಾರಗಳ ಚೂರ್ಣವನ್ನು ಮರ ಅರಿಷಿಣ, ಚಿತ್ರಕ ಆಸ್ಫೋತೆ (ಉತ್ತರಾಣಿಭೇದ), ಮೂರ್ವಾ (ಹೆಗ್ಗೊರಟಿಗೆ) ಇವುಗಳ ಕಷಾಯದೊಡನೆ ಕುಡಿಯಬೇಕು. ||೧೦೮|| ಕಫ ಪಿತ್ತಯುಕ್ತ ಹಿಕ್ಕಾಶ್ವಾಸಗಳಲ್ಲಿ ಶಿರೀಷಪುಷ್ಪ ಅಥವಾ ಸಪ್ತಪರ್ಣದ ಸ್ವರಸದಲ್ಲಿ ಹಿಪ್ಪಲೀ ಚೂರ್ಣ ಜೇನು ಹಾಕಿ ಕೊಡಬೇಕು. ಇವು ಹಿತಕರವಾಗಿವೆ. ||೧೦೯|| ಪಿತ್ತಯುಕ್ತಶ್ವಾಸದಲ್ಲಿ ಗೋಧಿಯ ತವಡು, ವಂಶಲೋಚನ; ಹಿಪ್ಪಲಿ ಹಾಕಿ ತುಪ್ಪದಲ್ಲಿ ಮಾಡಿದ ರೊಟ್ಟಿಯು ಹಿತಕರವು. ||೧೧೦|| ವಾತಯುಕ್ತ ಶ್ವಾಸದಲ್ಲಿ ಶ್ವಾವಿತ್ (ದೊಡ್ಡಶಲ್ಯಕ) ಮತ್ತು ಮೊಲದ ಮಾಂಸ, ಸಣ್ಣ ಮುಳ್ಳಹಂದಿಯ ರಕ್ತ ಇವುಗಳನ್ನು ಹಿಪ್ಪಲಿಚೂರ್ಣ, ತುಪ್ಪಹಾಕಿ ಕುದಿಸಿ ಕೊಡಬೇಕು. ||೧೧೧|| ವಾತಪಿತ್ತಾನುಬಂಧವುಳ್ಳ ಶ್ವಾಸದಲ್ಲಿ ಸುವರ್ಚಲಾ (ಸೂರ್ಯಭಕ್ತಾ) ರಸದಲ್ಲಿ ಹಾಲು, ತುಪ್ಪ ತ್ರಿಕಟುಗಳ ಚೂರ್ಣವನ್ನು ಹಾಕಿ ಅದನ್ನು ಅಕ್ಕಿಯ ಬೋನವನ್ನುಂಡನಂತರ ಕೊಡಬೇಕು. ||೧೧೨|| ಕೆಮ್ಮು ದಮ್ಮು ಬಿಕ್ಕು ಕಫಗಳುಳ್ಳ ರೋಗಿಗಳಿಗೆ ಜೇಷ್ಠಮಧು, ಗೋದಿ, ಬೆಲ್ಲ, ಗೋಮಯದ ರಸ, ಜೇನು ತುಪ್ಪಗಳನ್ನು ಕೂಡಿಸಿ ಕೊಟ್ಟರೆ ಹಿತವಾಗುವದು. ||೧೧೩|| ಬಹಳ ಕಫವುಳ್ಳ ಶ್ವಾಸಗಳಲ್ಲಿ ಕತ್ತೆಯ ಅಥವಾ ಕುದುರೆಯ ಅಥವಾ ಒಂಟೆಯ ಅಥವಾ ಹಂದಿಯ ಅಥವಾ ಆಡಿನ ಅಥವಾ ಆನೆಯ ಮಲದ ರಸವನ್ನು ಜೇನಿನೊಡನೆ ಕುಡಿಯಬೇಕು. ||೧೧೪|| ಅಥವಾ ಹಿರೇಮದ್ದಿನ ಕ್ಷಾರವನ್ನು ಅಥವಾ ಮಯೂರಪಾದದ ನಲಿಕೆಯನ್ನು ಅಥವಾ ಸಣ್ಣಮುಳ್ಳುಹಂದಿಯ ಮುಳ್ಳನ್ನು ಸುಟ್ಟು ಅದರ ಕ್ಷಾರವನ್ನು ತುಪ್ಪ ಜೇನಿನೊಡನೆ ನೆಕ್ಕಿಸಬೇಕು. || ೧೧೫ || ದೊಡ್ಡಮುಳ್ಳಹಂದಿ

ರೋಹಕ (ಪಕ್ಷಿಭೇದ), ಚಾಷ (ಹಂಗನಹಕ್ಕಿ), ಕುರರ (ಮತ್ಸ್ಯ ಭಕ್ಷಕ ಪಕ್ಷಿ) ಇವುಗಳ ಕೂದಲುಗಳನ್ನು, ಒಂದು ಅಥವಾ ಎರಡು ಖುರಗಳುಳ್ಳ ಪ್ರಾಣಿಗಳ ಕೋಡು ತೊಗಲು ಎಲಬು ಖುರಗಳಲ್ಲಿ ||೧೧೬|| ಒಂದೊಂದನ್ನು ಅಥವಾ ಎಲ್ಲವನ್ನು ಸುಟ್ಟು ಚೂರ್ಣಮಾಡಿ ಅದನ್ನು ತುಪ್ಪ ಜೇನಿನೊಡನೆ ಕಲಿಸಿ ನೆಕ್ಕಿದರೆ ಭಯಂಕರವಾದ ಕೆಮ್ಮು ದಮ್ಮು ಬಿಕ್ಕುಗಳನ್ನು ಕಳೆಯುವದು. ||೧೧೭|| ಈ ಲೇಹಗಳು ಕಫ ದಿಂದ ತಡೆಯಲ್ಪಟ್ಟ ಪ್ರಾಣವಾಯುವಿನ ಪ್ರಕೋಪವನ್ನು ಕಳೆಯುವದ ರಿಂದ ಮಾರ್ಗ ಶುದ್ಧಿಯಾಗಬೇಕಿದ್ದರೆ ಮಾತ್ರ ಕೊಡಬೇಕೇ ಹೊರತು ಕಫವಿಲ್ಲದಿದ್ದರೆ ಕೊಡಬಾರದು. ||೧೧೮|| ಶ್ವಾಸರೋಗಿಯ ಕೆಮ್ಮಿಗೆ ವಮನವನ್ನೂ, ಸ್ವರಭೇದಕ್ಕೆ ಮತ್ತು ತಮಕಶ್ವಾಸಕ್ಕೆ ವಾತಕಫ ನಾಶಕ ದ್ರವ್ಯಗಳಿಂದ ಮಾಡಿದ ವಿರೇಚನವನ್ನೂ ಕೊಡಬೇಕು. ||೧೧೯|| ಹರಿ ಯುವ ನೀರು, ಹಾದಿಯಲ್ಲಿ ಪ್ರತಿಬಂಧವಾಗಲು ಹೆಚ್ಚಾಗುವಂತೆ ವಾತವು ಪ್ರತಿಬದ್ಧವಾಗಲು ಹೆಚ್ಚಾಗುವದು. ಅದ್ದರಿಂದ ಅದರ ಮಾರ್ಗವನ್ನು ದಿನಾಲು ಸ್ವಚ್ಛಮಾಡಬೇಕು. (೧೨೦)

ಶಠ್ಯಾದಿ ಚೂರ್ಣವನ್ನು ಹೇಳುತ್ತಾರೆ.

**ಶಠೀಗ್ರಂಥಿಕಜೀವಂತೀತ್ವಜ್ಮುಸ್ತಂ ಪುಷ್ಕರಾಹ್ವಯಮ್ ||**
**ಸುರಸಂ ತಾಮಲಕ್ಯೇಲಾ ಪಿಪ್ಪಲ್ಯಗುರು ನಾಗರಮ್ ||೧೨೧||**
**ಬಾಲಕಞ್ಚ ಸಮಂ ಚೂರ್ಣಂ ಕೃತ್ವಾಷ್ಟಗುಣಶರ್ಕರಮ್ ||**
**ಸರ್ವಥಾ ತಮಕೇ ಶ್ವಾಸೇ ಹಿಕ್ಕಾಯಾಞ್ಚ ಪ್ರಯೋಜಯೇತ್ ||೧೨೨||**

**ಅರ್ಥ:**— ಕಚೋರ, ಮೋಡಿ, ಶೀಹಾಲೆ ದಾಲಚಿನ್ನಿ, ಜೇಕು, ಪುಷ್ಕರಮೂಲ, ತುಳಸಿ, ನೆಲನೆಲ್ಲಿ, ಯಾಲಕ್ಕಿ, ಹಿಪ್ಪಲಿ ಅಗುರು, ಶುಂಠಿ ||೧೨೧|| ಬಾಳದಬೇರು ಇವುಗಳ ಚೂರ್ಣವನ್ನು ಸಮನಾಗಿ ತಕ್ಕೊಂಡು ಅದರಲ್ಲಿ ಎಂಟುಪಾಲು ಸಕ್ಕರೆಯನ್ನು ಕೂಡಿಸಿ ತಮಕಶ್ವಾಸ ಮತ್ತು ಬಿಕ್ಕುಗಳಲ್ಲಿ ಉಪಯೋಗಿಸಬೇಕು. (೧೨೨)

ಮುಕ್ತಾದಿಚೂರ್ಣವನ್ನು ಹೇಳುತ್ತಾರೆ.

**ಮುಕ್ತಾಪ್ರವಾಲವೈದೂರ್ಯಂ ಶಙ್ಖಃ ಸ್ಫಟಿಕಮಞ್ಜನಮ್ ||**

ಸಸಾರಕಾಜಗಂಧಾರ್ಕಸೂಕ್ಷ್ಮೈಲಾಲವಣದ್ವಯಮ್ ||೧೨೩||
ತಾಮ್ರಾಯೋರಜಸೀ ರೂಪ್ಯಂ ಸೌಗಂಧಿಕಕಶೇರುಕಮ್ ||
ಜಾತೀಫಲಂ ಶಣಫಲಾನ್ಯಪಾಮಾರ್ಗಸ್ಯ ತಂಡುಲಾಃ ||೧೨೪||
ಏಷಾಂ ಪಾಣಿತಲಂ ಚೂರ್ಣಂ ತುಲ್ಯಾನಾಂ ಕ್ಷಾದ್ರಸರ್ಪಿಷಾ ||
ಹಿಕ್ಕಾಂ ಶ್ವಾಸಞ್ಚ ಕಾಸಞ್ಚ ಲೀಢಮಾಶು ನಿಯಚ್ಛತಿ ||೧೨೫||
ಅಞ್ಜನಾತ್ ತಿಮಿರಂ ಕಾಚಂ ನೀಲಿಕಾಂ ಪಿಷ್ಟಕಂ ತಮಃ ||
ಪಿಲ್ಲಂ ಕಂಡೂಮಭಿಷ್ಯಂದಮರ್ಮ ಚೈವ ಪ್ರಣಾಶಯೇತ್ ||೧೨೬||

**ಅರ್ಥ :—** ಮುತ್ತು, ಹವಳ, ವೈಡೂರ್ಯ, ಶಂಖ, ಸ್ಫಟಿಕ, ಇವುಗಳ ಮತ್ತು ಅಂಜನದ ಭಸ್ಮ ಗಟ್ಟಿಕಾಚ, ಶುದ್ಧ ಗಂಧಕ, ಎಕ್ಕೇಬೇರಿನ ತೊಗಟೆ, ಸಣ್ಣ ಯಾಲಕ್ಕಿ, ಸೈಂಧವ ಮತ್ತು ಕಾಚಲವಣಗಳ ಚೂರ್ಣ ||೧೨೩|| ತಾಮ್ರಭಸ್ಮ, ಲೋಹಭಸ್ಮ, ರೌಪ್ಯಭಸ್ಮ, ಕಲ್ಹಾರ ಪುಷ್ಪ, ಕಶೇರುಕ (ಕೊತ್ತೀಗಡ್ಡೆ) ಜಾಜೀಕಾಯಿ ಶಣ (ಸಣಬು ಬೀಜ) ಉತ್ತರಾಣಿ ಅಕ್ಕಿ ||೧೨೪|| ಇವೆಲ್ಲವುಗಳ ಚೂರ್ಣವನ್ನು ಸಮನಾಗಿ ಕೂಡಿಸಿ ೧ ತೊಲಿಯಷ್ಟು, ತುಪ್ಪ ಜೇನಿನೊಡನೆ ನೆಕ್ಕಿದರೆ ಬಿಕ್ಕು ದಮ್ಮು ಕೆಮ್ಮುಗಳನ್ನು ತೀವ್ರವಾಗಿ ಕಳೆಯುವದು. ||೧೨೫|| ಇದರ ಅಂಜನವನ್ನು ಮಾಡಿದರೆ ತಿಮಿರ, ಕಾಚ, ನೀಲಿಕೆ, ಪಿಷ್ಟಕ, ತಮಸ್ಸು, ಪಿಲ್ಲ, ಕಂಡೂ, ಅಭಿಷ್ಯಂದ, ಅರ್ಮಗಳೆಂಬ ಕಣ್ಣುರೋಗಗಳನ್ನು ಕಳೆಯುವದು. (೧೨೬)

ಶಠೀಪುಷ್ಕರಮೂಲಾನಾಂ ಚೂರ್ಣಮಾಮಲಕಸ್ಯ ಚ ||
ಮಧುನಾ ಸಂಯುತಂ ಲೇಹ್ಯಂ ಚೂರ್ಣಂ ವಾ ಕಾಲಲೋಹಜಮ್

**ಅರ್ಥ :—** ಹಿಕ್ಕಾ ರೋಗದಲ್ಲಿ ಕಚೋರ, ಪುಷ್ಕರಮೂಲಗಳ ಚೂರ್ಣವನ್ನು ಅಥವಾ ನೆಲ್ಲೀ ಚೂರ್ಣವನ್ನು ಅಥವಾ ತೀಕ್ಷ್ಣ ಲೋಹ ಭಸ್ಮವನ್ನು ಜೇನಿನೊಡನೆ ನೆಕ್ಕಬೇಕು. (೧೨೭)

**ಹಿಕ್ಕಾ ರೋಗದ ನಸ್ಯಗಳನ್ನು ಹೇಳುತ್ತಾರೆ,**

ಸಶರ್ಕರಾಂ ತಾಮಲಕೀಂ ದ್ರಾಕ್ಷಾಂ ಗೋಃಶ್ಕಶಕೃದ್ರಸಮ್ ||
ತುಲ್ಯಂ ಗುಡಂ ನಾಗರಞ್ಚ ಪ್ರಾಶಯೇನ್ನಾವಯೇತ್ ತಥಾ ||೧೨೮||

ಲಶುನಸ್ಯ ಪಲಾಂಡೋರ್ವಾ ಮೂಲಂ ಗೃಞ್ಜನಕಸ್ಯ ಚ ||
ನಾವಯೇಚ್ಚಂದನಂ ವಾಪಿ ನಾರೀಕ್ಷೀರೇಣ ಸಂಯುತಮ್ ||೧೨೯||
ಸುಖೋಷ್ಣಂ ಘೃತಮಂಡಂ ವಾ ಸೈಂಧವೇನಾವಚೂರ್ಣಿತಮ್ ||
ನಾವಯೇನ್ಮಕ್ಷಿಕಾವಿಷ್ಟಾಮಲಕ್ತಕರಸೇನ ವಾ ||೧೩೦||
ನಾರೀಕ್ಷೀರೇಣ ವಾ ಸಿದ್ಧಂ ಸರ್ಪಿರ್ಮಧುರಕೈರಪಿ ||
ನಸ್ತೋ ನಿಷಿಕ್ತಂ ಪೀತಂ ವಾ ಸದ್ಯೋ ಹಿಕ್ಕಾಂ ನಿಯಚ್ಛತಿ ||೧೩೧||
ಸಕೃದುಷ್ಣಂ ಸಕೃಚ್ಛೀತಂ ವ್ಯತ್ಯಾಸಾದ್ಧಿಕ್ಕಿನಾಂ ಪಯಃ ||
ಪಾನೇ ನಸ್ತಃ ಕ್ರಿಯಾಯಾಂ ವಾ ಶರ್ಕರಾಮಧುಸಂಯುತಮ್

**ಅರ್ಥ**:— ಹಿಕ್ಕಾಶ್ವಾಸರೋಗಿಗೆ ಸಕ್ಕರೆ, ನೆಲನೆಲ್ಲಿಚೂರ್ಣ, ದ್ರಾಕ್ಷೆಚೂರ್ಣ, ಅರಗ ಮತ್ತು ಕಾಮದೆಯ ಮೇಲಿನ ರಸ, ಬೆಲ್ಲ, ಸುಂಠಿ ಚೂರ್ಣ ಸಮವಾಗಿ ತಕ್ಕೊಂಡು ಕುಡಿಯಬೇಕು. ಮತ್ತು ನಸ್ಯ ಮಾಡಬೇಕು ||೧೨೮|| ಬೆಳ್ಳುಳ್ಳಿಯು ಅಥವಾ ಉಳ್ಳೇಗಡ್ಡೆಯು ಅಥವಾ ಗಜ್ಜರಿಯ ಬೇರನ್ನು, ಅಥವಾ ಚಂದನವನ್ನು ಸ್ತ್ರೀಯ ಹಾಲಲ್ಲಿ ತೇದು ನಸ್ಯ ಮಾಡಬೇಕು. ||೧೨೯|| ಅಥವಾ ಬೆಚ್ಚಗಿನ ತುಪ್ಪದ ಕೆನೆಯಲ್ಲಿ ಸೈಂಧವವನ್ನು ಕೂಡಿಸಿ ಅಥವಾ ಅರಗಿನ ರಸದೊಡನೆ ಅಥವಾ ಸ್ತ್ರೀಯ ಹಾಲಿನೊಡನೆ ನೊಣದ ಮಲವನ್ನು ಮೂಗಿನಲ್ಲಿ ಹಾಕಬೇಕು. ||೧೩೦|| ಮಧುರೌಷಧಗಳಿಂದ ಸಿದ್ಧಮಾಡಿದ ಘೃತವನ್ನು ಮೂಗಿನಲ್ಲಿ ಹಾಕಬೇಕು. ಅಥವಾ ಮೂಗಿನಿಂದ ಕುಡಿಯಬೇಕು. ಇವು ಕೂಡಲೇ ಬಿಕ್ಕನ್ನು ಕಳೆಯುವವು. ||೧೩೧|| ಬಿಕ್ಕು ರೋಗಿಗಳಿಗೆ ಸಕ್ಕರೆ ಜೇನುಗಳನ್ನು ಹಾಕಿದ ಹಾಲನ್ನು ಒಮ್ಮೆ ಬಿಸಿಮಾಡಿ ಒಮ್ಮೆ ತಣ್ಣಗೆಮಾಡಿ ಹೀಗೆ ವ್ಯತ್ಯಾಸದಿಂದ ಕುಡಿಸಬೇಕು. ಅಥವಾ ಮೂಗಿನಲ್ಲಿ ಹಾಕಬೇಕು (೧೩೨)

ಅಧೋಭಾಗೇ ಘೃತಂ ಸಿದ್ಧಂ ಸದ್ಯೋ ಹಿಕ್ಕಾಂ ನಿಯಚ್ಛತಿ ||
ಪಿಪ್ಪಲೀ ಮಧುಸಂಯುಕ್ತಾ ರಸೌ ಧಾತ್ರೀಕಪಿತ್ಥಯೋಃ ||೧೩೩||
ಲಾಕ್ಷಾಲಾಜಮಧುದ್ರಾಕ್ಷಾ ಪಿಪ್ಪಲ್ಯಶ್ಚಶಕೃದ್ರಸಮ್ ||
ಲಿಹ್ಯಾತ್ ಕೋಲಮಧುದ್ರಾಕ್ಷಾ ಪಿಪ್ಪಲೀನಾಗರಾಣಿ ವಾ ||೧೩೪||
ಶೀತಾಂಬುಸೇಕಃ ಸಹಸಾ ತ್ರಾಸೋ ವಿಸ್ಮಾಪನಂ ಭಯಮ್ ||
ಕ್ರೋಧಹರ್ಷಪ್ರಿಯೋದ್ವೇಗಾ ಹಿಕ್ಕಾಪ್ರಚ್ಯವನಾ ಮತಾಃ ||೧೩೫||

ಹಿಕ್ಕಾಶ್ವಾಸವಿಕಾರಾಣಾಂ ನಿದಾನಂ ಯತ್ಪ್ರಕೀರ್ತಿತಮ್ ॥
ವರ್ಜ್ಯಮಾರೋಗ್ಯಕಾಮೈಸ್ತದ್ಧಿಕ್ಕಾಶ್ವಾಸವಿಕಾರಿಭಿಃ ॥೧೩೬॥

**ಅರ್ಥ:**— ವಿರೇಚನ ದ್ರವ್ಯಗಳ ಕಲ್ಕಹಾಕಿ ಆ ಹಾಲು ನೀರಿನಲ್ಲಿ ಸಿದ್ಧಮಾಡಿದ ಘೃತವು ಕೂಡಲೇ ಬಿಕ್ಕನ್ನು ಕಳೆಯುವದು. ಹಿಪ್ಪಲೀ ಚೂರ್ಣ ಕೂಡಿಸಿದ ನೆಲ್ಲೀರಸ ಅಥವಾ ಬೇವಲಕಾಯಿ ತಿರುಳನ್ನು ಜೇನಿನೊಡನೆ ॥೧೩೩॥ ಅಥವಾ ಆರಗು, ಛತ್ರಪರಳು, ದ್ರಾಕ್ಷೆ, ಹಿಪ್ಪಲಿ ಚೂರ್ಣ, ಕುದುರೆಯ ಮಲದ ರಸವನ್ನು ಜೇನಿನೊಡನೆ ಅಥವಾ ಜೋರಿ, ದ್ರಾಕ್ಷೆ, ಹಿಪ್ಪಲಿ, ಸುಂಠಿಗಳ ಚೂರ್ಣವನ್ನು ಜೇನಿನೊಡನೆ ನೆಕ್ಕಬೇಕು. ॥೧೩೪॥ ತಿಳಿಯದಂತೆ ಒಮ್ಮೆಲೇ ತಣ್ಣೀರು ಸುರುವೋಣ, ದುಃಖದ ಸಂಗತಿ ಹೇಳೋಣ, ಅಂಜಿಸೋಣ, ಆಶ್ಚರ್ಯ ಪಡಿಸೋಣ, ಸಿಟ್ಟು ಆನಂದ ಪ್ರೇಮ ಉದ್ವೇಗ ಇವೆಲ್ಲ ಬಿಕ್ಕನ್ನು ಕಳೆಯುವವು. ॥೧೩೫॥ ಹಿಕ್ಕಾಶ್ವಾಸರೋಗಿಗಳು ಆರೋಗ್ಯವನ್ನು ಬಯಸುತ್ತಿದ್ದರೆ ಅವುಗಳ ಮೂಲಕಾರಣವನ್ನು ಬಿಡಬೇಕು. (೧೩೬)

ಘೃತಗಳನ್ನು ಹೇಳುತ್ತಾರೆ.

ಶುಷ್ಕಕ್ಷೀಣಕಫೋರಸ್ಕಾ ಹಿಕ್ಕಾಶ್ವಾಸಾನುಬಂಧಿನಃ ॥
ಯೇ ಪ್ರಕೃತ್ಯಾ ರುಕ್ಷದೇಹಾಃ ಸರ್ಪಿರ್ಭಿಸ್ತಾನುಪಾಚರೇತ್ ॥೧೩೭॥

(ಅ) ದಶಮೂಲಾದಿ ಘೃತ.

ದಶಮೂಲರಸೇ ಸರ್ಪಿರ್ದಧಿಮಂಡೇನ ಸಾಧಯೇತ್ ॥
ಕೃಷ್ಣಾಸೌವರ್ಚಲಕ್ಷಾರ ವಯಃಸ್ಥಾಹಿಂಗುಚೋರಕೈಃ ॥೧೩೮॥
ಕಾಯಸ್ಥಯಾ ಚ ಸಂಸಿದ್ಧಂ ಹಿಕ್ಕಾಶ್ವಾಸೌ ನಿಯಚ್ಛತಿ ॥

(ಆ) ತೇಜೋವತ್ಯಾದಿ ಘೃತ.

ತೇಜೋವತ್ಯಭಯಾ ಕುಷ್ಠಂ ಪಿಪ್ಪಲೀ ಕಟುರೋಹಿಣೀ ॥೧೩೯॥
ಭೂತೀಕಂ ಪೌಷ್ಕರಂ ಮೂಲಂ ಪಲಾಶಂ ಚಿತ್ರಕಂ ಶಠೀ ॥
ಸೌವರ್ಚಲಂ ತಾಮಲಕೀ ಸೈಂಧವಂ ಬಿಲ್ವಪೇಶಿಕಾಮ್ ॥೧೪೦॥
ತಾಲೀಸಪತ್ರಂ ಜೀವಂತೀ ವಚಾ ತ್ವೈರಕ್ಷಸಮ್ಮಿತೈಃ ॥

ಹಿಜ್ಗುಸಾದ್ಯೈರ್ಘೃತಪ್ರಸ್ಥಂ ಪಚೇತ್ ತೋಯೇ ಚತುರ್ಗುಣೇ ||೧೪೧||
ಏತದ್ ಯಥಾಬಲಂ ಪೀತ್ವಾ ಹಿಕ್ಕಾಶ್ವಾಸೌ ಜಯೇನ್ನರಃ |
ಶೋಥಾನಿಲಾರ್ಶೋಗ್ರಹಣೀಹೃತ್ಪಾರ್ಶ್ವರುಜ ಏವ ಚ ||೧೪೨||

(ಅ) ಮನಃಶಿಲಾದಿ ಘೃತ.

ಮನಃಶಿಲಾಶರ್ಜರಸಲಾಕ್ಷಾರಜನಿಪದ್ಮಕೈಃ ||
ಮಂಜಿಷ್ಠೈಲೈಶ್ಚ ಕರ್ಷಾಂಶೈಃ ಪ್ರಸ್ಥಃ ಸಿದ್ಧೋ ಘೃತಾದ್ಧಿತಃ ||೧೪೩||
ಜೀವನೀಯೋಪಸಿದ್ಧಂ ವಾ ಸಕ್ಷಾದ್ರಂ ಲೇಹಯೇದ್ ಘೃತಮ್
ಮಾಸಾಘೃತಂ ದಾಧಿಕಂ ವಾ ಪಿಬೇತ್ ತ್ರ್ಯೂಷಣಮೇವ ಚ ೧೪೪

**ಅರ್ಥ** :— ಯಾರ ಎದೆಯಲ್ಲಿಯು ಕಫವು ಶುಷ್ಕ ಮತ್ತು ಕ್ಷೀಣವಾಗಿದೆಯೋ ಅಂಥ ಸ್ವಾಭಾವಿಕವಾಗಿಯೇ ರುಕ್ಷದೇಹವುಳ್ಳ, ಬಹು ದಿವಸದಿಂದ ಬಿಕ್ಕು ಶ್ವಾಸಗಳುಳ್ಳ ರೋಗಿಗಳನ್ನು ಸಿದ್ಧ ಘೃತಗಳಿಂದ ಉಪಚರಿಸಬೇಕು. (೧೩೭)

ದಶಮೂಲಾದಿ ಘೃತವನ್ನು ಹೇಳುತ್ತಾರೆ

ದಶಮೂಲದ ರಸ ತುಪ್ಪದ ೨ ಪಾಲು, ಮೊಸರು ೨ ಪಾಲು, ಹಿಪ್ಪಲಿ ಕಾಚಲವಣ ಜವಖಾರ ವಯಸ್ಥಾ (ನೆಲ್ಲಿ) ಇಂಗು ಪಾರಸೀ ಅಜವಾನ ಮತ್ತು ಕಾಯಸ್ಥಾ (ಕ್ಷೀರಕಾಕೋಲಿ), ಇವುಗಳ ಚೂರ್ಣಹಾಕಿ ಮಾಡಿದ ಘೃತವು ಬಿಕ್ಕು ಶ್ವಾಸಗಳನ್ನು ಕಳೆಯುವದು. (೧೩೮)

ತೇಜೋವತ್ಯಾದಿ ಘೃತವನ್ನು ಹೇಳುತ್ತಾರೆ.

ಚವಕ, ಅಣಲೆ, ಕೋಷ್ಠ ಪಿಪ್ಪಲಿ ಕಟುಕರೋಣಿ ||೧೩೯|| ಅಜವಾನ, ಪುಷ್ಕರಮೂಲ, ಮುತ್ತಲು, ಚಿತ್ರಕ, ಕಚೋರಿ, ಕಾಚಲವಣ ನೆಲನೆಲ್ಲಿ, ಸೈಂಧವ, ಬಿಲ್ವದ ತಿಳಲು ||೧೪೦|| ತಾಲೀಸಪತ್ರ, ಜೀವಂತೀ, ಬಜೆ, ಇವುಗಳ ಚೂರ್ಣವನ್ನು ೧-೧ ತೊಲಿ, ಇಂಗು ½ ತೊಲಿ ತುಪ್ಪ ೧೨೮ ತೊಲಿ ಹಾಕಿ ಅದರ ೪ ಪಾಲು ನೀರಿನಲ್ಲಿ ಅದನ್ನು ಸಿದ್ಧ ಮಾಡಬೇಕು. ||೧೪೧|| ಇದನ್ನು ಯಥಾಶಕ್ತಿ ಕುಡಿದರೆ ಬಿಕ್ಕು,

ಶ್ವಾಸ, ಬಾವು, ವಾತ, ಮೂಲವ್ಯಾಧಿ, ಸಂಗ್ರಹಣಿ, ಹೃದಯಶೂಲ, ಪಾರ್ಶ್ವಶೂಲಗಳು ನಾಶವಾಗುವವು. (೧೪೨)

**ಮನಃಶಿಲಾದಿ ಘೃತವನ್ನು ಹೇಳುತ್ತಾರೆ.**

ಮನಶಿಲೆ, ರಾಳ, ಅರಗು, ಅರಿಷಿಣ, ಪದ್ಮಕಾಷ್ಠ, ಮಂಜಿಷ್ಠೆ, ಯಾಲಕ್ಕಿ ಇವುಗಳನ್ನು ೧-೧ ತೊಲಿ, ತುಪ್ಪ ೧೨೮ ತೊಲಿ ಅದರ ೪ ಪಾಲು ನೀರು ಹಾಕಿ ಸಿದ್ಧಮಾಡಿದ ಘೃತವು ಬಿಕ್ಕು ಶ್ವಾಸಗಳಿಗೆ ಹಿತಕರವಾಗಿದೆ. (೧೪೩

**ಜೀವನೀಯ ಘೃತವನ್ನು ಹೇಳುತ್ತಾರೆ.**

ಅಥವಾ ಜೀವನೀಯ ೧೦ ಔಷಧಗಳ ಕಲ್ಕಗಳಿಂದ ೪ ಪಾಲು ನೀರಿನಲ್ಲಿ ಸಿದ್ಧಮಾಡಿದ ಘೃತವನ್ನು ಜೇನಿನೊಡನೆ ನೆಕ್ಕಬೇಕು. ಅಥವಾ ವಾಸಾಘೃತವನ್ನಾಗಲೀ ದಾಧಿಕ ಘೃತವನ್ನಾಗಲೀ ತ್ರ್ಯೂಷಣ (ಕಾಸಚಿಕಿತ್ಸಿತದಲ್ಲಿ ಹೇಳಿದ) ಘೃತವನ್ನಾಗಲೀ ಕುಡಿಯಬೇಕು. (೧೪೪)

**ಹಿಕ್ಕಾ ಶ್ವಾಸಗಳ ಚಿಕಿತ್ಸಾ ಶಕ್ಯವನ್ನು ಹೇಳುತ್ತಾರೆ.**

**ಯತ್ಕಿಂಚಿತ್ ಕಫವಾತಘ್ನಮುಷ್ಣಂ ವಾತಾನುಲೋಮನಮ್ ||**
**ಭೇಷಜಂ ಪಾನಮನ್ನಂ ವಾ ಹಿಕ್ಕಾಶ್ವಾಸೇಷು ತದ್ಧಿತಮ್ ||೧೪೫||**
**ವಾತಕೃದ್ವಾ ಕಫಹರಂ ಕಫಕೃದ್ವಾನಿಲಾಪಹಮ್ ||**
**ಕಾರ್ಯಂ ನೈಕಾಂತಿಕಂ ತಾಭ್ಯಾಂ ಪ್ರಾಯಃ ಶ್ರೇಯೋಽನಿಲಾಪಹಮ್ ||೧೪೬||**

**ಸರ್ವೇಷಾಂ ಬೃಂಹಣೇ ಹ್ಯಲ್ಪಃ ಶಕ್ಯಶ್ಚ ಪ್ರಾಯಶೋ ಭವೇತ್ ||**
**ನಾವಶ್ಯಂ ಶಮನೇಽಪಾಯೋ ಭೃಶೋಽಶಕ್ಯಶ್ಚ ಕರ್ಷಣೇ ||೧೪೭||**

**ತಸ್ಮಾಚ್ಛುದ್ಧಾನಶುದ್ಧಾಂಶ್ಚ ಶಮನೈರ್ಬೃಂಹಣೈರಪಿ ||**
**ಹಿಕ್ಕಾಶ್ವಾಸಾರ್ದಿತಾನ್ ಜಂತೂನ್ ಪ್ರಾಯಶಃ ಸಮುಪಾಚರೇತ್**

**ಅರ್ಥ :—** ಕಫವಾತಗಳ ನಾಶಕ, ಉಷ್ಣ ಮತ್ತು ವಾತಾನುಲೋಮನಮಾಡುವ ಔಷಧ, ಅನ್ನ ಪಾನಗಳೆಲ್ಲ ಬಿಕ್ಕು ಶ್ವಾಸ ರೋಗ

ಗಳಲ್ಲಿ ಹಿತಕರವು. ||೧೪೫|| ಯಾವದು ವಾತವನ್ನುಂಟುಮಾಡುತ್ತದೆ, ಆದರೆ ಕಫವನ್ನು ಕಳೆಯುವದು, ಅಥವಾ ಯಾವದು ಕಫವನ್ನುಂಟು ಮಾಡುತ್ತದೆ ವಾತವನ್ನು ಕಳೆಯುವದು ಇಂಥವು ಯೋಗ್ಯವಲ್ಲ. ಅವುಗಳಿಗಿಂತ ಕೇವಲ ವಾತನಾಶಕವಾದ ಅನ್ನಪಾನಗಳು ಹೆಚ್ಚು ಉಪ ಯುಕ್ತವಾಗುತ್ತವೆ. ||೧೪೬|| ಬೃಂಹಣ ಉಪಚಾರವನ್ನು ಮಾಡಲು ಎಲ್ಲ ರೋಗಗಳಲ್ಲಿ ಕದಾಚಿತ್, ಆದರೆ ಸ್ವಲ್ಪೇ ಅಪಾಯವು ಆಗುವದು. ಮತ್ತು ಅದು ಸಾಧ್ಯವಾಗಿರುವದು. ಶಮನ ಉಪಚಾರದಲ್ಲಿ ಅಪಾಯವು ಆಗುವದೇ ಇಲ್ಲ. ಆದರೆ ಕರ್ಷಣ ಉಪಚಾರದಲ್ಲಿ ಅದು ಬಹಳ ಮತ್ತು ಅಸಾಧ್ಯವಾಗಿರುತ್ತದೆ. ||೧೪೭|| ಆದ್ದರಿಂದ ಬಿಕ್ಕು ಶ್ವಾಸಗಳು ಶುದ್ಧವೇ ಇರಲಿ ಅಶುದ್ಧವೇ ಇರಲಿ ಅವುಗಳಿಗೆ ಶಮನ ಮತ್ತು ಬೃಂಹಣ ಉಪ ಚಾರಗಳನ್ನೇ ಹೆಚ್ಚಾಗಿ ಮಾಡಬೇಕು. (೧೪೮)

**|| ತತ್ರ ಶ್ಲೋಕಃ ||**

**ದುರ್ಜಯತ್ವೇ ಸಮುತ್ಪತ್ತೌ ಕ್ರಿಯೈಕತ್ವೇ ಚ ಕಾರಣಮ್ ||**
**ಲಿಂಗಂ ಪಥ್ಯಂ ಚ ಹಿಕ್ಕಾನಾಂ ಶ್ವಾಸಾನಾಂ ಚೇಹದರ್ಶಿತಮ್||೧೪೯||**

**ಅರ್ಥ :—** ಬಿಕ್ಕು ಶ್ವಾಸಗಳ ಅಸಾಧ್ಯತ್ವದಲ್ಲಿ (ಶ್ಲೋಕ ೭-೮) ಮತ್ತು ಅವುಗಳ ಉತ್ಪತ್ತಿಯಲ್ಲಿ (ಶ್ಲೋ. ೧೦-೧೬) ಮತ್ತು ಎರ ಡಕ್ಕೂ ಒಂದೇ ಚಿಕಿತ್ಸೆಯೇ, ಎಂಬುದರಲ್ಲಿ ಕಾರಣವನ್ನು (ಶ್ಲೋ. ೬೯) ಅವುಗಳ ಲಕ್ಷಣವನ್ನೂ ಪಥ್ಯವನ್ನೂ ಇಲ್ಲಿ ಹೇಳಿದರು. (೧೪೯)

**ಇತ್ಯಗ್ನಿವೇಶಕೃತೇ ತಂತ್ರೇ ದೃಢಬಲಪ್ರತಿಸಂಸ್ಕೃತೇ ಚಿಕಿತ್ಸಿತಸ್ಥಾನೇ ಹಿಕ್ಕಾಶ್ವಾಸಚಿಕಿತ್ಸಿತಂ ನಾಮ ಸಪ್ತದಶೋಽಧ್ಯಾಯ ||೧೭||**

ಈ ಪ್ರಕಾರ ಅಗ್ನಿವೇಶರಿಂದ ರಚಿಸಲ್ಪಟ್ಟ ದೃಢಬಲರಿಂದ ಸಂಸ್ಕಾರ ಪಡೆದ ಚರಕ-ಸಂಹಿತೆಯ ಚಿಕಿತ್ಸಾಸ್ಥಾನದಲ್ಲಿ "**ಹಿಕ್ಕಾಶ್ವಾಸ-ಚಿಕಿತ್ಸೆ**" ಎಂಬ ಹದಿನೇಳನೆಯ ಅಧ್ಯಾಯವು ಮುಗಿದುದು. (೧೭)

**ಶ್ರೀಮದಾದ್ಯ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅಂತಾಚಾರ್ಯ ರಿಂದ ರಚಿತವಾದ ಚರಕ 'ಚಿಕಿತ್ಸಾ ಬೋಧಿನಿ' ಎಂಬ ಚರಕಸಂಹಿತೆಯ ಟಿಪ್ಪ ಣಿಯಲ್ಲಿ 'ಹಿಕ್ಕಾಶ್ವಾಸ-ಚಿಕಿತ್ಸೆ' ಎಂಬ ಹದಿನೇಳನೆಯ ಅಧ್ಯಾಯವು ಮುಗಿದುದು. (೧೭)**

# ಹದಿನೆಂಟನೆಯ ಅಧ್ಯಾಯವು.

## ( ಕಾಸ-ಚಿಕಿತ್ಸೆ )

ಬಿಕ್ಕು-ಶ್ವಾಸ ಕಾಸಗಳ ಚಿಕಿತ್ಸೆಯು ಸ್ವಲ್ಪ ಹೆಚ್ಚು-ಕಡಿಮೆಯಾಗಿ ಅದೇ ಆಗಿದ್ದರಿಂದಲೂ ಅವು ಒಂದರಿಂದೊಂದು ಉಂಟಾಗುವದರಿಂದಲೂ ಬಿಕ್ಕು ಶ್ವಾಸಗಳ ಚಿಕಿತ್ಸೆಯನಂತರ ಕಾಸ-ಚಿಕಿತ್ಸೆಯನ್ನು ಹೇಳುತ್ತಾರೆ :—

**ಅಥಾತಃ ಕಾಸಚಿಕಿತ್ಸಿತಂ ವ್ಯಾಖ್ಯಾಸ್ಯಾಮಃ**

**ಅರ್ಥ :—** ಇನ್ನು ಮೇಲೆ ಕಾಸ-ಚಿಕಿತ್ಸೆಯನ್ನು ಹೇಳುವೆವು.

**ಇತಿ ಹ ಸ್ಮಾಹ ಭಗವಾನಾತ್ರೇಯಃ** ||೧||

**ಅರ್ಥ :—** ಪೂಜ್ಯರಾದ ಆತ್ರೇಯ ಋಷಿಗಳು ಹೀಗೆ ಹೇಳಿದರು ||೧||

**ತಪಸಾ ತೇಜಸಾ ಧೃತ್ಯಾ ಧಿಯಾ ಚ ಪರಯಾನ್ವಿತಃ ||**
**ಆತ್ರೇಯಃ ಕಾಸಶಾಂತ್ಯರ್ಥಮಿದಮಾಹ ಚಿಕಿತ್ಸಿತಮ್** ||೨||

**ಅರ್ಥ :—** ಶ್ರೇಷ್ಠವಾದ ತಪ, ತೇಜ ಇಂದ್ರಿಯನಿಗ್ರಹ, ಬುದ್ಧಿ ಗಳುಳ್ಳ ಆತ್ರೇಯ ಋಷಿಗಳು ಕಾಸದ ಶಾಂತಿಗಾಗಿ ಈ ಚಿಕಿತ್ಸೆಯನ್ನು ಹೇಳಿದ್ದಾರೆ. (೨)

ಕಾಸದ ಸಂಖ್ಯೆ ಮತ್ತು ಅದರ ಅನುಪೇಕ್ಷಣೀಯತ್ವವನ್ನು ಹೇಳುತ್ತಾರೆ.

**ವಾತಾದಿಜಾಸ್ತ್ರಯೋ ಯೇ ಚ ಕ್ಷತಜಃ ಕ್ಷಯಜಸ್ತಥಾ ||**
**ಪಂಚೈತೇ ಸ್ಯುರ್ನೃಣಾಂ ಕಾಸಾ ವರ್ಧಮಾನಾಃ ಕ್ಷಯಪ್ರದಾಃ** ||೩||

**ಅರ್ಥ :—** ಕೆಮ್ಮು ವಾತಜ, ಪಿತ್ತಜ, ಕಫಜ, ಉರಃಕ್ಷತಜ, ಕ್ಷಯಜ ಎಂದು ಐದು ಪ್ರಕಾರದ್ದಿರುತ್ತದೆ. ಇವು ಹೆಚ್ಚಾದರೆ ಜನರಿಗೆ ರಾಜಯಕ್ಷ್ಮವನ್ನುಂಟುಮಾಡುತ್ತವೆ. (೩)

ಪೂರ್ವ ರೂಪವನ್ನು ಹೇಳುತ್ತಾರೆ.

**ಪೂರ್ವರೂಪಂ ಭವೇತ್ತೇಷಾಂ ಶೂಕಪೂರ್ಣಗಲಾಸ್ಯತಾ ॥**
**ಕಂಠೇ ಕಂಡೂಶ್ಚ ಭೋಜ್ಯಾನಾಮವರೋಧಶ್ಚ ಜಾಯತೇ ॥೪॥**

**ಅರ್ಥ:**— ಕುತ್ತಿಗೆ ಬಾಯಿಗಳಲ್ಲಿ ಮುಳ್ಳುತುಂಬಿದಂತೆ ಆಗೋಣ, ಕಂಠದಲ್ಲಿ ತುರಿಸೋಣ, ಊಟಕ್ಕೆ ಪ್ರತಿಬಂಧವಾಗೋಣ ಇವು ಕಾಸ ರೋಗದ ಪೂರ್ವರೂಪಗಳು. (೪)

ಸಂಪ್ರಾಪ್ತಿ ಮತ್ತು ಕಾಸಶಬ್ದದ ನಿರುಕ್ತಿಯನ್ನು ಹೇಳುತ್ತಾರೆ.

**ಅಧಃ ಪ್ರತಿಹತೋ ವಾಯುರೂರ್ಧ್ವ್ವಸ್ರೋತಃಸಮಾಶ್ರಿತಃ ॥**
**ಉದಾನಭಾವಮಾಪನ್ನಃ ಕಂಠೇ ಸಕ್ತಸ್ತಥೋರಸಿ ॥೫॥**
**ಆವಿಶ್ಯ ಶಿರಸಃ ಖಾನಿ ಸರ್ವಾಣಿ ಪ್ರತಿಪೂರಯನ್ ॥**
**ಅಭಂಜನ್ನಾಕ್ಷಿಪನ್ ದೇಹಂ ಹನುಮನ್ಯೇ ತಥಾಕ್ಷಿಣೀ ॥೬॥**
**ನೇತ್ರೇ ಪೃಷ್ಠಮುರಃ ಪಾರ್ಶ್ವೇ ನಿರ್ಭುಜ್ಯ ಸ್ತಂಭಯಂಸ್ತತಃ ॥**
**ಶುಷ್ಕೋ ವಾ ಸಕಫೋಽಪಿ ವಾ ಕಾಸನಾತ್ಕಾಸ ಉಚ್ಯತೇ ॥೭॥**
**ಪ್ರತಿಘಾತವಿಶೇಷೇಣ ತಸ್ಯ ವಾಯೋಃ ಸರಂಹಸಃ ॥**
**ವೇದನಾಶಬ್ದವೈಶೇಷ್ಯಂ ಕಾಸಾನಾಮುಪಜಾಯತೇ ॥೮॥**

**ಅರ್ಥ:**— (ಯಾವದೇ ಕಾರಣದಿಂದ) ಕೆಳಗೆ ಪ್ರತಿಬಂಧಿಸಲ್ಪಟ್ಟ ವಾತವು ಮೇಲಿನ ಸ್ರೋತಸ್ಸುಗಳನ್ನು ಸೇರಿ, ಉದಾನವಾಯುವಾಗಿ ಪರಿಣಮಿಸಿ ಕಂಠ ಎದೆಗಳಲ್ಲಿ ಇದ್ದುಕೊಂಡು ॥೫॥ ತಲೆಯಲ್ಲಿಯ ಎಲ್ಲ ಛಿದ್ರ (ಬಾಯಿ, ಮೂಗು, ಕಿವಿ, ಕಣ್ಣು) ಗಳಲ್ಲಿ ಸೇರಿ ಅವನ್ನು ತುಂಬಿ ದೇಹವನ್ನು ಮುರಿಯುತ್ತ, ಮಣಿಸುತ್ತ ಅದರಂತೆ ಗದ್ದ ಹೆಡಕು ಕಣ್ಣು ॥೬॥ ಮತ್ತು ಕಣ್ಣಿನ ಮೇಲ್ಭಾಗ, ಎದೆ, ಪಾರ್ಶ್ವಗಳನ್ನು ಮಣಿಸುತ್ತ ಸೆಟಸುತ್ತದೆ. ಕಫಯುಕ್ತ ಅಥವಾ ಕಫರಹಿತ ಇದ್ದರೂ ಕೆಟ್ಟ ಧ್ವನಿಯನ್ನು ಉಂಟುಮಾಡುವದರಿಂದ (ಕಾಸನಾತ್) ಕಾಸ ಎಂದು ಕರೆಯಲ್ಪಡುತ್ತದೆ ॥೭॥ ವೇಗದಿಂದ ಬರುವ ವಾತಕ್ಕೆ ಆಗುವ ಬೇರೆ ಬೇರೆ ತರದ ಪ್ರತಿಬಂಧಗಳಿಂದ ಕೆಮ್ಮುಗಳಲ್ಲಿ ಬೇರೆ ಬೇರೆ ತರದ ವೇದನೆ ಮತ್ತು ಶಬ್ದಗಳು ಉಂಟಾಗುತ್ತವೆ. (೮)

ವಾತಕಾಸದ ನಿದಾನವನ್ನು ಹೇಳುತ್ತಾರೆ.

**ರೂಕ್ಷಶೀತಕಷಾಯಾಲ್ಪ ಪ್ರಮಿತಾನಶನಂ ಸ್ತ್ರಿಯಃ ॥**
**ವೇಗಧಾರಣಮಾಯಾಸೋ ವಾತಕಾಸಪ್ರವರ್ತಕಾಃ ॥೯॥**

**ಅರ್ಥಃ—** ರೂಕ್ಷ, ಶೀತ, ಒಗರು, ಅತಿಅಲ್ಪ ಆಹಾರಸೇವನ, ಲಂಘನ, ಸ್ತ್ರೀಸಂಗ, ವೇಗಧಾರಣ, ಶ್ರಮ ಇವು ವಾತಕಾಸದ ಕಾರಣಾಗಳು. (೯)

ವಾತಕಾಸದ ಲಕ್ಷಣವನ್ನು ಹೇಳುತ್ತಾರೆ.

**ಹೃತ್ಪಾರ್ಶ್ವೋರಃಶಿರಃಶೂಲ ಸ್ವರಭೇದಕರೋ ಭೃಶಮ್ ॥**
**ಶುಷ್ಕೋರಃಕಂಠವಕ್ತ್ರಸ್ಯ ಹೃಷ್ಟಲೋಮ್ನಃ ಪ್ರತಾಮ್ಯತಃ ॥೧೦॥**
**ನಿರ್ಘೋಷದೈನ್ಯಸ್ತನನದೌರ್ಬಲ್ಯಕ್ಷಯಮೋಹಕೃತ್ ॥**
**ಶುಷ್ಕಃ ಕಾಸಃ ಕಫಂ ಶುಷ್ಕಂ ಕೃಚ್ಛ್ರಾನ್ಮುಕ್ತ್ವಾಲ್ಪತಾಂ ವ್ರಜೇತ್ ॥೧೧॥**
**ಸ್ನಿಗ್ಧಾಮ್ಲಲವಣೋಷ್ಣೈಶ್ಚ ಭುಕ್ತಪೀತೈಃ ಪ್ರಶಾಮ್ಯತಿ ॥**
**ಊರ್ಧ್ವವಾತಸ್ಯ ಜೀರ್ಣೇಽನ್ನೇ ವೇಗವಾನ್ಮಾರುತೋ ಭವೇತ್ ॥೧೨॥**

**ಅರ್ಥಃ—**ವಾತಕಾಸದಲ್ಲಿ ಹೃದಯ, ಪಾರ್ಶ್ವ, ಎದೆ ತಲೆಗಳಲ್ಲಿ ಬಹಳ ಶೂಲ, ಸ್ವರಭೇದಗಳಿರುವವು. ಎದೆಕಂಠಮುಖಗಳು, ಒಣಗುವವು. ರೋಮಾಂಚಗಳೇಳುವವು. ಗ್ಲಾನಿ, ॥೧೦॥ ಕೆಮ್ಮುವಾಗ್ಗೆ ದೊಡ್ಡ ಶಬ್ದ, ದೈನ್ಯ, ಮೋರೆ ಒಣಗೋಣ, ದೌರ್ಬಲ್ಯ, ಕ್ಷೋಭ ಮೋಹಗಳಿರುವವು ಕೆಮ್ಮು ಒಣಾಗಿದ್ದು ಅದು ಒಣ ಕಫವನ್ನು ಒಳ್ಳೇ ಕಷ್ಟದಿಂದ ಹೊರಗೆ ಒಗೆದು ಕಡಿಮೆ ಆಗುವದು ॥೧೧॥ ಸ್ನಿಗ್ಧ, ಅಮ್ಲ, ಲವಣ, ಉಷ್ಣವಾದ ಅನ್ನಪಾನಗಳಿಂದ ಶಾಂತವಾಗುತ್ತದೆ. ಅನ್ನವು ಜೀರ್ಣವಾಗಲು ವಾತವು ಊರ್ಧ್ವವಾಗಿ ಬಲಿಷ್ಠವಾಗುತ್ತದೆ. (೧೨)

ಪಿತ್ತಕಾಸದ ಕಾರಣಾ ಲಕ್ಷಣಗಳನ್ನು ಹೇಳುತ್ತಾರೆ.

**ಕಟುಕೋಷ್ಣವಿದಾಹ್ಯಮ್ಲ ಕ್ಷಾರಾಣಾಮತಿಸೇವನಮ್ ॥**
**ಪಿತ್ತಕಾಸಕರಂ ಕ್ರೋಧಃ ಸಂತಾಪಶ್ಚಾಗ್ನಿಸೂರ್ಯಜಃ ॥೧೩॥**

ಶೀತನಿಷ್ಠೀವನಾಕ್ಷತ್ವಂ ತಿಕ್ತಾಸ್ಯತ್ವಂ ಸ್ವರಾಮಯಃ ||
ಉರೋಧೂಮಾಯನಂ ತೃಷ್ಣಾ ದಾಹಮೋಹಾರುಚಿಭ್ರಮಾಃ ||೧೪||
ಪ್ರತತಂ ಕಾಸಮಾನಶ್ಚ ಜ್ಯೋತೀಂಷೀವ ಚ ಪಶ್ಯತಿ ||
ಶ್ಲೇಷ್ಮಾಣಂ ಪಿತ್ತಸಂಸೃಷ್ಟಂ ನಿಷ್ಠೀವತಿ ಚ ಪೈತ್ತಿಕೇ ||೧೫

**ಅರ್ಥಃ**— ಖಾರ, ಉಷ್ಣ, ವಿದಾಹಿ, ಹುಳಿ ಕ್ಷಾರಪದಾರ್ಥಗಳನ್ನು ಬಹಳ ತಿನ್ನುವದರಿಂದಲೂ ಸಿಟ್ಟಿನಿಂದಲೂ ಬೆಂಕಿ ಬಿಸಲುಗಳ ಕಾವಿನಿಂದಲೂ ಪಿತ್ತಕಾಸವುಂಟಾಗುತ್ತದೆ ||೧೩|| ಪಿತ್ತಕಾಸದಲ್ಲಿ ಕಣ್ಣುಗಳುಗಳು ಹಳದಿ, ಬಾಯಿ ಕಹಿ, ಸ್ವರಭಂಗ, ಎದೆಯಿಂದ ಹೊಗೆ ಹೊರಟಂತೆ ಆಗೋಣ, ನೀರಡಿಕೆ, ದಾಹ, ಮೋಹ, ಅರುಚಿ, ಭ್ರಮೆಗಳುಂಟಾಗುವವು. ||೧೪|| ಒಂದೇಸವನೆ ಕೆಮ್ಮುವಾಗ್ಗೆ ಕಣ್ಣುಮುಂದೆ ಪ್ರಕಾಶವು ಕಾಣುವದು. ಪಿತ್ತಯುಕ್ತವಾದ ಕಫವನ್ನು ಉಗುಳುವನು||೧೫||

**ಕಫಕಾಸದ ಕಾರಣಗಳನ್ನು ಹೇಳುತ್ತಾರೆ.**

ಗುರ್ವಭಿಷ್ಯಂದಿಮಧುರಸ್ನಿಗ್ಧಸ್ವಪ್ನಾವಿಚೇಷ್ಟನೈಃ ||
ವೃದ್ಧಃ ಶ್ಲೇಷ್ಮಾನಿಲಂ ರುಧ್ವಾ ಕಫಕಾಸಮುದೀರಯೇತ್ ||೧೬||
ಮಂದಾಗ್ನಿತ್ವಾರುಚಿಚ್ಛರ್ದಿಪೀನಸೋತ್ಕ್ಲೇಶಗೌರವೈಃ ||
ಲೋಮಹರ್ಷಾಸ್ಯಮಾಧುರ್ಯಕ್ಲೇದಸಂಸದನೈರ್ಯುತಮ್ ||೧೭||
ಬಹುಲಂ ಮಧುರಂ ಸ್ನಿಗ್ಧಂ ಘನಂ ಷ್ಠೀವೇತ್ ಕಫಂ ತಥಾ ||
ಕಾಸಮಾನೋ ಹ್ಯರುಗ್ ವಕ್ಷಃ ಸಂಪೂರ್ಣಮಿವ ಮನ್ಯತೇ ||೧೮||

**ಅರ್ಥಃ**— ಜಡ, ಅಭಿಷ್ಯಂದಿ, ಮಧುರ, ಸ್ನಿಗ್ಧ ಪದಾರ್ಥಗಳನ್ನು ತಿನ್ನುವದರಿಂದ, ಬಹಳ ಮಲಗುವದರಿಂದ, ತಿರುಗಾಡದಿರುವದರಿಂದ ಹೆಚ್ಚಾದ ಕಫವು ವಾತವನ್ನು ತಡೆದು ಕಫಕಾಸವನ್ನುಂಟುಮಾಡುತ್ತದೆ. ||೧೬|| ಅದರಲ್ಲಿ ಅಗ್ನಿಮಾಂದ್ಯ, ಅರುಚಿ, ವಾಂತಿ, ನೆಗಡಿ, ಓಕರಿಕೆ, ಜಡತ್ವ, ರೋಮಾಂಚ, ದೌರ್ಬಲ್ಯಗಳಿರುವವು. ಬಾಯಿ ಸವಿ ಮತ್ತು ಅಂಟು ಆಗುವದು. ||೧೭|| ಮಧುರ, ಸ್ನಿಗ್ಧ, ಗಟ್ಟಿಯಾದ ಬಹಳ ಕಫವನ್ನುಗುಳುವನು. ಎದೆಯು ತುಂಬಿದಂತೆ ಇದ್ದು ಕೆಮ್ಮುವಾಗ್ಗೆ ನೋಯುವದಿಲ್ಲ. (೧೮)

ಕ್ಷತಕಾಸದ ಕಾರಣ ಲಕ್ಷಣಗಳನ್ನು ಹೇಳುತ್ತಾರೆ.

ಅತಿವ್ಯವಾಯಭಾರಾಧ್ವಯುದ್ಧಾಶ್ವಗಜನಿಗ್ರಹೈಃ ||
ರೂಕ್ಷಸ್ಯೋರಃಕ್ಷತಂ ವಾಯುರ್ಗೃಹೀತ್ವಾ ಕಾಸಮಾವಹೇತ್ ||೧೯||
ಸ ಪೂರ್ವಂ ಕಾಸತೇ ಶುಷ್ಕಂ ತತಃ ಷ್ಠೀವೇತ್ ಸಶೋಣಿತಮ್ ||
ಕಂಠೇನ ರುಜತಾತ್ಯರ್ಥಂ ವಿರುಗ್ಣೇನೇವ ಚೋರಸಾ ||೨೦||
ಸೂಚೀಭಿರಿವ ತೀಕ್ಷ್ಣಾಭಿಸ್ತುದ್ಯಮಾನೇನ ಶೂಲಿನಾ ||
ದುಃಖಸ್ಪರ್ಶೇನ ಶೂಲೇನ ಭೇದಪೀಡಾಭಿತಾಪಿನಾ ||೨೧||
ಪರ್ವಭೇದಜ್ವರಶ್ವಾಸ ತೃಷ್ಣಾವೈಸ್ವರ್ಯಪೀಡಿತಃ ||
ಪಾರಾವತ ಇವಾಕೂಜನ್ ಕಾಸವೇಗಾತ್ ಕ್ಷತೋದ್ಭವಾತ್ ||೨೨||

ಅರ್ಥ—ರೂಕ್ಷ ಮನುಷ್ಯನು ಅತಿಯಾದ ಮೈಥುನ ಭಾರಹೊರೋಣ ಓಡಿ ನಡಿಯೋಣ, ಕುಸ್ತಿ ಹಿಡಿಯೋಣ ಇವುಗಳಿಂದ ಮತ್ತು ಕುದುರೆ ಆನೆಗಳನ್ನು ತಡೆಯುವದರಿಂದ ಎದೆಯಲ್ಲಿ ಉಂಟಾದ ಕ್ಷತದಲ್ಲಿ ವಾಯುವು ಸೇರಿ ಕೆಮ್ಮನ್ನುಂಟುಮಾಡುತ್ತದೆ. ||೧೯|| ಮೊದಲು ಒಣ ಕೆಮ್ಮು ಬರುವದು ಆ ಮೇಲೆ ರಕ್ತಕೂಡಿದ ಕಫವನ್ನು ಕಾರುವನು. ಕಂಠ ಎದೆಗಳು ನೋಯುವವು ||೨೦|| ತೀಕ್ಷ್ಣವಾದ ಸೂಜಿಗಳನ್ನು ಚುಚ್ಚಿದಂತೆ ಶೂಲವಾಗುವದು. ಎದೆಗೆ ಕೈ ಹಚ್ಚಗೊಡುವದಿಲ್ಲ. ಎದೆಯು ಸೀಳಿದಂತೆ,, ಸುಡುವಂತೆ ವೇದನೆಯಾಗುವದು. ||೨೧|| ಸಂಧಿಗಳು ನೋಯುವವು. ಜ್ವರ, ಶ್ವಾಸ, ನೀರಡಿಕೆ ಸ್ವರಭಂಗಗಳುಂಟಾಗುವವು ಕ್ಷತದಿಂದುಂಟಾದ ಈ ಕೆಮ್ಮಿನ ವೇಗದಿಂದ ರೋಗಿಯು ಪಾರಿವಾಳದಂತೆ ಕೂಗುವನು. (೨೨)

ಕ್ಷಯಕಾಸದ ಕಾರಣಲಕ್ಷಣಗಳನ್ನು ಹೇಳುತ್ತಾರೆ.

ವಿಷಮಾಸಾತ್ಮ್ಯಭೋಜ್ಯಾತಿವ್ಯವಾಯಾದ್ವೇಗನಿಗ್ರಹಾತ್ ||
ಘೃಣಿನಾಂ ಶೋಚತಾಂ ನೃಣಾಂ ವ್ಯಾಪನ್ನೇಽಗ್ನೌ ತ್ರಯೋ ಮಲಾಃ
ಕುಪಿತಾಃ ಕ್ಷಯಜಂ ಕಾಸಂ ಕುರ್ಯುರ್ದೇಹಕ್ಷಯಪ್ರದಮ್
ದುರ್ಗಂಧಂ ಹರಿತಂ ರಕ್ತಂ ಷ್ಠೀವೇತ್ ಪೂಯೋಪಮಂ ಕಫಮ್

ಕಾಸಮಾನಶ್ಚ ಹೃದಯಂ ಸ್ಥಾನಭ್ರಷ್ಟಂ ಸ ಮನ್ಯತೇ ||
ಅಕಸ್ಮಾದುಷ್ಣಶೀತಾರ್ತೋ ಬಹ್ವಾಶೀ ದುರ್ಬಲಃ ಕೃಶಃ ||೨೫||
ಪ್ರಸನ್ನಸ್ನಿಗ್ಧವದನಃ ಶ್ರೀಮದ್ದರ್ಶನಲೋಚನಃ ||
ಪಾಣಿಪಾದತಲಾ ಶ್ಲಕ್ಷ್ಣೌ ಘೃಣಾವಾನಭ್ಯಸೂಯಕಃ ||೨೬||
ಜ್ವರೋ ಮಿಶ್ರಾಕೃತಿಸ್ತಸ್ಯ ಪಾರ್ಶ್ವರುಕ್ ಪೀನಸೋಽರುಚಿಃ ||
ಭಿನ್ನಸಂಘಾತವರ್ಚಸ್ತ್ವಂ ಸ್ವರಭೇದೋಽನಿಮಿತ್ತತಃ ||೨೭||
ಇತ್ಯೇಷ ಕ್ಷಯಜಃ ಕಾಸಃ ಕ್ಷೀಣಾನಾಂ ದೇಹನಾಶನಃ ||೨೭½||

**ಅರ್ಥ :—** ವಿಷಮ ಅಸಾತ್ಮ್ಯ ಆಹಾರಗಳಿಂದ, ಅತಿವ್ಯವಾಯ ದಿಂದ, ವೇಗನಿಗ್ರಹದಿಂದ, ಅತಿಶಯ ದಯಾ ಶೋಕಗಳಿಂದ ಅಗ್ನಿಯು ಮಂದವಾಗಿ ಮೂರೂ ದೋಷಗಳು ||೨೪|| ಕುಪಿತವಾಗಿ ದೇಹನಾಶ ಮಾಡುವ ಕ್ಷಯಕಾಸವನ್ನುಂಟುಮಾಡುವವು. ಹಸುರು, ಕೆಂಪು, ಕೀವಿ ನಂತೆ ಇದ್ದ ದುರ್ಗಂಧವಾದ ಕಫವನ್ನು ಉಗಳುವನು. ||೨೪|| ಕೆಮ್ಮು ವಾಗ್ಗೆ ಎದೆಯು ತನ್ನ ಸ್ಥಳವನ್ನು ಬಿಟ್ಟಂತೆ ಅನಿಸುವದು. ಕಾರಣವಿ ಲ್ಲದೆ ಒಮ್ಮೆ ಉಷ್ಣ, ಒಮ್ಮೆ ಶೀತದ ಪೀಡೆಯಾಗುವದು. ಊಟವು ಬಹಳ ಹೋಗುವದು. ಅಶಕ್ತಿ ಕೃಶತ್ವಗಳುಂಟಾಗುವವು. ||೨೫|| ಮೋರೆಯು ಸುಂದರ ಸ್ನಿಗ್ಧ ಕಾಣುವದು. ಕಣ್ಣುಗಳು ಹೊಳೆಯುವವು. ಅಂಗಾಲು ಅಂಗೈಗಳು ಮಿಂಚುವವು. ದಯೆ ಅಸೂಯೆಗಳುಂಟಾಗು ವವು. ||೨೬|| ೨-೩ ದೋಷಗಳಿಂದ ಕೂಡಿದ ಜ್ವರ ಬರುವದು. ಪಾರ್ಶ್ವ ಶೂಲಿ, ನೆಗಡಿ, ಅರುಚಿಗಳುಂಟಾಗುವವು. ಮಲವು ತೆಳ್ಳಗೆ ಬೀಳು ವದು. ಕಾರಣವಿಲ್ಲದೆ ದನಿಯು ಒಡೆಯುವದು. ||೨೭|| ಇದು ಕ್ಷಯ ಕಾಸವು. ಕ್ಷೀಣ ರೋಗಿಗಳನ್ನು ಕೊಲ್ಲುವದು, (೨೭½)

ಸಾಧ್ಯಾ-ಸಾಧ್ಯತೆಗಳನ್ನು ಹೇಳುತ್ತಾರೆ.

ಸಾಧ್ಯೋ ಬಲವತಾಂ ವಾ ಸ್ಯಾದ್ ಯಾಪ್ಯಸ್ತ್ವೇವಂ ಕ್ಷತೋತ್ಥಿತಃ ೨೮
ನವೌ ಕದಾಚಿತ್ ಸಿಧ್ಯೇತಾಮೇತೌ ಪಾದಗುಣಾನ್ವಿತೌ ||
ಸ್ಥವಿರಾಣಾಂ ಜರಾಕಾಸಃ ಸರ್ವೋ ಯಾಪ್ಯಃ ಪ್ರಕೀರ್ತಿತಃ ||೨೯||
ತ್ರೀನ್ ಪೂರ್ವಾನ್ ಸಾಧಯೇತ್ ಸಾಧ್ಯಾನ್ ಪಥ್ಯೈರ್ಯಾಪ್ಯಾಂಸ್ತು
ಯಾಪಯೇತ್ ||೨೯½||

**ಅರ್ಥ:**—ರೋಗಿಯು ಬಲಿಷ್ಠನಿದ್ದರೆ ಈ ಕ್ಷಯಕಾಸವು ಸಾಧ್ಯವೂ ಆಗಬಹುದು. ಕ್ಷತಕಾಸವು ಯಾಪ್ಯವಾಗಿದೆ. ||೨೮|| ಕ್ಷಯಕಾಸ ಕ್ಷತಕಾಸಗಳು ಹೊಸವು ಇದ್ದು, ವೈದ್ಯ ರೋಗಿ ಪರಿಚಾರಕ ಔಷಧಗಳು ಸರಿಯಾಗಿ ಇದ್ದರೆ, ಕದಾಚಿತ್ ಸಾಧ್ಯವೂ ಆಗಬಹುದು. ವೃದ್ಧರ ಎಲ್ಲ ತರದ ಜರಾ ಕಾಸವು ಯಾಪ್ಯವಾಗಿದೆ ||೨೯|| ಮೊದಲಿನ ಮೂರು ಸಾಧ್ಯವಾದ ಕಾಸಗಳನ್ನು ಚಿಕಿತ್ಸಿಸಬೇಕು. ಯಾಪ್ಯವಾದವುಗಳನ್ನು ಪಥ್ಯದಿಂದ ಜೀವಿಸುಗೊಡುವಂತೆ ಮಾಡಬೇಕು. (೨೯)

ಚಿಕಿತ್ಸಾ ತತ್ವವನ್ನು ಹೇಳುತ್ತಾರೆ.

**ಚಿಕಿತ್ಸಿತಮತ ಊರ್ಧ್ವಂ ಹಿ ಶೃಣು ಕಾಸನಿಬರ್ಹಣೀಮ್ ||೩೦||**
**ರುಕ್ಷಸ್ಯಾನಿಲಜಂ ಕಾಸಮಾದೌ ಸ್ನೇಹೈರುಪಾಚರೇತ್ ||**
**ಸರ್ಪಿರ್ಭಿರ್ಬಸ್ತಿಭಿಃ ಪೇಯಾಕ್ಷೀರಯೂಷರಸಾದಿಭಿಃ ||೩೧||**
**ವಾತಘ್ನಸಿದ್ಧೈಃ ಸ್ನೇಹಾದ್ಯೈರ್ಧೂಮೈರ್ಲೇಹೈಶ್ಚ ಯುಕ್ತಿತಃ ||**
**ಅಭ್ಯಂಗೈಃ ಪರಿಷೇಕೈಶ್ಚ ಸ್ನಿಗ್ಧೈಃ ಸ್ವೇದೈಶ್ಚ ಬುದ್ಧಿಮಾನ್ ||೩೨||**
**ಬಸ್ತಿಭಿರ್ಬದ್ಧವಿಡ್ವಾತಂ ಶುಷ್ಕೋರ್ಧ್ವಂ ಚೌರ್ಧ್ವಭಕ್ತಿಕೈಃ ||**
**ಘೃತೈಃ ಸಪಿತ್ತಂ ಸಕಫಂ ಜಯೇತ್ಸ್ನೇಹವಿರೇಚನೈಃ ||೩೩||**

**ಅರ್ಥ:**— ಇನ್ನು ಮೇಲೆ ಕಾಸನಾಶಕವಾದ ಚಿಕಿತ್ಸೆಯನ್ನು ಹೇಳುತ್ತೇವೆ, ಕೇಳಿರಿ. ||೩೦|| ಜಾಣನಾದ ವೈದ್ಯನು ರುಕ್ಷರೋಗಿಗೆ ಉಂಟಾದ ವಾತಕಾಸಕ್ಕೆ ಮೊದಲು ಸ್ನೇಹೋಪಚಾರ ಮಾಡಬೇಕು. ಅದಕ್ಕಾಗಿ ಘೃತಗಳನ್ನು ಬಸ್ತಿಗಳನ್ನು ಪೇಯ, ಹಾಲು, ಕಟ್ಟು, ಮಾಂಸರಸ ಮುಂತಾದವುಗಳನ್ನೂ ||೩೧|| ವಾತನಾಶಕವಾದ ಔಷಧಗಳಿಂದ ಸಿದ್ಧವಾದ ಸ್ನೇಹ, ಧೂಮ, ಲೇಹ, ಅಭ್ಯಂಗ, ಪರಿಷೇಕಗಳನ್ನೂ ಸ್ನಿಗ್ಧವಾದ ಸ್ವೇದಗಳನ್ನೂ ಯೋಗ್ಯರೀತಿಯಿಂದ ಕೊಡಬೇಕು. ||೩೨|| ಮಲವಾತಗಳ ಅನುಲೋಮವಿಲ್ಲದಿದ್ದರೆ ಬಸ್ತಿಗಳನ್ನೂ ಮಲವು ಗಟ್ಟಿಯಿದ್ದು ವಾತವು ಊರ್ಧ್ವವಿದ್ದರೆ ಊಟದ ನಂತರ ಘೃತಪಾನವನ್ನೂ ಮಾಡಿಸಬೇಕು. ಪಿತ್ತ ಅಥವಾ ಕಫಯುಕ್ತ ವಾತಕಾಸಗಳಿಗೆ ಸ್ನೇಹವಿರೇಚನ ಕೊಡಬೇಕು. (೩೩)

ಕಂಟಕಾರೀ ಘೃತವನ್ನು ಹೇಳುತ್ತಾರೆ.

**ಕಂಟಕಾರೀಗುಡೂಚೀಭ್ಯಾಂ ಪೃಥಕ್ ತ್ರಿಂಶತ್ಪಲಾದ್ರಸೇ ||**
**ಪ್ರಸ್ಥಃ ಸಿದ್ಧೋ ಘೃತಾದ್ ವಾತಕಾಸನುದ್ ವನ್ಹಿದೀಪನಃ ||೩೪||**

**ಅರ್ಥ** :— ನೆಲಗುಳ್ಳದ ಬೇರು ೧೨೦ ತೊಲೆ, ಅಮೃತಬಳ್ಳಿ ೧೨೦ ತೊಲೆ, ಇವುಗಳ ಕಷಾಯದಲ್ಲಿ ೮ ಪಾಲು ನೀರು ಹಾಕಿ ¼ ಉಳಿಯಲು ಅದರಲ್ಲಿ ೧೨೮ ತೊಲೆ ಘೃತವನ್ನು ಸಿದ್ಧಪಡಿಸಬೇಕು. ಇದು ವಾತಕಾಸ ನಾಶಕವೂ ಅಗ್ನಿದೀಪಕವೂ ಆಗಿದೆ (೩೪)

ಪಿಪ್ಪಲ್ಯಾದಿ ಘೃತವನ್ನು ಹೇಳುತ್ತಾರೆ.

**ಪಿಪ್ಪಲೀಪಿಪ್ಪಲೀಮೂಲಚವ್ಯಚಿತ್ರಕನಾಗರೈಃ ||**
**ಧಾನ್ಯಪಾಠಾವಚಾರಾಸ್ನಾಯಷ್ಟ್ಯಾಹ್ವಕ್ಷಾರಹಿಂಗುಭಿಃ ||೩೫||**
**ಕೋಲಮಾತ್ರೈರ್ಘೃತಪ್ರಸ್ಥಾದ್ ದಶಮೂಲೀರಸಾಢಕೇ ||**
**ಸಿದ್ಧಾಚ್ಚತುರ್ಥಿಕಾಂ ಪೀತ್ವಾ ಪೇಯಾಂ ಮಂಡಂ ಪಿಬೇದನು ||೩೬||**
**ತಚ್ ಶ್ವಾಸಕಾಸಹೃತ್ಪಾರ್ಶ್ವಗ್ರಹಣೀದೋಷಗುಲ್ಮನುತ್ ||**
**ಪಿಪ್ಪಲ್ಯಾದ್ಯಂ ಘೃತಂ ಚೈತದಾತ್ರೇಯೇಣ ಪ್ರಕೀರ್ತಿತಮ್ ||೩೭||**

**ಅರ್ಥ** :— ಪಿಪ್ಪಲಿ, ಮೋಡಿ, ಚವಕ, ಚಿತ್ರಕ, ಸುಂಠಿ, ಹಸೀಜ ಅಗಳಸುಂಠಿ, ಬಜೆ, ರಾಸ್ನಾ, ಜ್ಯೇಷ್ಠಮಧು, ಜವಖಾರ, ಇಂಗು, ಇವುಗಳ ||೩೫|| ಕಲ್ಕವನ್ನು ಅರ್ಧ-ಅರ್ಧ ತೊಲೆ ತಕ್ಕೊಂಡು ಹಾಕಿ ೫೧೨ ತೊಲೆ ದಶಮೂಲದ ಕಷಾಯದಲ್ಲಿ ೧೨೮ ತೊಲೆ ತುಪ್ಪವನ್ನು ಸಿದ್ಧಮಾಡಬೇಕು. ಅದನ್ನು ೪ ತೊಲೆ ಕುಡಿದು ಮೇಲೆ ಪೇಯ ಅಥವಾ ಮಂಡವನ್ನು ಕುಡಿಯಬೇಕು. ||೩೬|| ಅದು ದಮ್ಮು, ಕೆಮ್ಮು, ಹೃದ್ರೋಗ, ಪಾರ್ಶ್ವಶೂಲ, ಸಂಗ್ರಹಣಿ, ಗುಲ್ಮಗಳನ್ನು ಕಳೆಯುವದು. ಈ ಪಿಪ್ಪಲ್ಯಾದಿ ಘೃತವನ್ನು ಆತ್ರೇಯರು ಹೇಳಿದ್ದಾರೆ. (೩೭)

ತ್ರ್ಯೂಷಣಾದಿ ಘೃತವನ್ನು ಹೇಳುತ್ತಾರೆ.

**ತ್ರ್ಯೂಷಣತ್ರಿಫಲಾದ್ರಾಕ್ಷಾಕಾಶ್ಮರ್ಯಾಣಿ ಪರೂಷಕಮ್ ||**
**ದ್ವೇ ಪಾಠೇ ದೇವದಾರ್ವೃದ್ಧಿಂ ಸ್ವಗುಪ್ತಾಂ ಚಿತ್ರಕಂ ಶಠೀಮ್ ||೩೮||**

ವ್ಯಾಘ್ರೀಂ ತಾಮಲಕೀಂ ಮೇದಾಂ ಕಾಕನಾಸಾಂ ಶತಾವರೀಮ್ ||
ತ್ರಿಕಂಟಕಂ ವಿದಾರೀಂ ಚ ಪಿಷ್ಟ್ವಾ ಕರ್ಷಸಮಾನ್ ಘೃತಾತ್ ||೩೯||
ಪ್ರಸ್ಥಂ ಚತುರ್ಗುಣಕ್ಷೀರೇ ಸಿದ್ಧಂ ಕಾಸಹರಂ ಪಿಬೇತ್ ||
ಜ್ವರಗುಲ್ಮಾರುಚಿಪ್ಲೀಹಶಿರೋಹೃತ್ಪಾರ್ಶ್ವಶೂಲನುತ್ ||೪೦||
ಕಾಮಲಾರ್ಶೋಽನಿಲಾಷ್ಠೀಲಾ ಕ್ಷತಶೋಷಕ್ಷಯಾಪಹಮ್ ||
ತ್ರ್ಯೂಷಣಂ ನಾಮ ವಿಖ್ಯಾತಂ ಘೃತಮೇತದನುತ್ತಮಮ್ ||೪೧||

**ಅರ್ಥ**:— ತ್ರಿಕಟು, ತ್ರಿಫಳೆ, ದ್ರಾಕ್ಷೆ, ಶಿವನಿಂಬೆಫಲ, ಪರೂಷಕ (ದಡಸಲ ಹಣ್ಣು) ಸಣ್ಣ ಮತ್ತು ದೊಡ್ಡ ಅಗಳಸುಂಠಿ, ದೇವದಾರು, ಪುದಿ, ನಸುಗುನ್ನಿ ಬೀಜ, ಚಿತ್ರಕ, ಕಚೋರಿ ||೩೮|| ನೆಲಗುಳ್ಳ, ನೆಲನೆಲ್ಲಿ, ಮೇದೆ, ಕಾಕನಾಸಾ, ಶತಾವರೀ, ನೆಗ್ಗಿಲು, ನೆಲಗುಂಬಳ ಇವುಗಳ ಕಲ್ಕವನ್ನು ೧-೧ ತೊಲಿ ತಕ್ಕೊಂಡು ||೩೯|| ೪ ಪಾಲು ಹಾಲಿನಲ್ಲಿ ೧೨೮ ತೊಲಿ ತುಪ್ಪವನ್ನು ಸಿದ್ಧಮಾಡಿ ಕುಡಿಯಬೇಕು. ಇದು ಕೆಮ್ಮು, ಜ್ವರ, ಗುಲ್ಮ, ಅರುಚಿ, ಪ್ಲೀಹ, ತಲೆಶೂಲಿ, ಹೃದಯಶೂಲಿ ಪಾರ್ಶ್ವಶೂಲಿ ||೪೦|| ಕಾಮಣಿ, ಮೂಲವ್ಯಾಧಿ, ವಾತಾಷ್ಠೀಲ, ಕ್ಷತ, ಶೋಷ, ಕ್ಷಯಗಳನ್ನು ಕಳೆಯುವದು. ಈ ಅತ್ಯುತ್ತಮವಾದ ಘೃತವು ತ್ರ್ಯೂಷಣ ಎಂಬ ಹೆಸರಿನಿಂದ ಪ್ರಸಿದ್ಧವಿದೆ. (೪೧)

ರಾಸ್ನಾಘೃತವನ್ನು ಹೇಳುತ್ತಾರೆ.

ದ್ರೋಣೇಽಪಾಂ ಸಾಧಯೇದ್ ರಾಸ್ನಾಂ ದಶಮೂಲಂ ಶತಾವರೀಮ್
ಪಲಿಕಾನ್ ಮಾಣಿಕಾಂಶಾಂಸ್ತ್ರೀನ್ ಕುಲತ್ಥಾನ್ ಬದರಾನ್ ಯವಾನ್ ||೪೨||
ತುಲಾರ್ಧಂ ಜಾಜಮಾಂಸಸ್ಯ ಪಾದಶೇಷೇಣ ತೇನ ಚ ||
ಘೃತಾಢಕಂ ಸಮಕ್ಷೀರಂ ಜೀವನೀಯೈಃ ಪಲೋನ್ಮಿತೈಃ ||೪೩||
ಸಿದ್ಧಂತದ್ ದಶಭಿಃ ಕಲ್ಕೈರ್ನಸ್ಯಪಾನಾನುವಾಸನೈಃ ||
ಸಮೀಕ್ಷ್ಯ ವಾತರೋಗೇಷು ಯಥಾವಸ್ಥಂ ಪ್ರಯೋಜಯೇತ್ ೪೪
ಪಞ್ಚ ಕಾಸಾನ್ ಶಿರಃಕಂಪಂ ಶೂಲಂ ವಂಕ್ಷಣಯೋನಿಜಮ್ ||
ಸರ್ವಾಂಗೈಕಾಂಗರೋಗಾಂಶ್ಚ ಸಪ್ಲೀಹೋರ್ಧ್ವಾನಿಲಾಞ್ಜಯೇತ್ ||೪೫||

**ಅರ್ಥ :—** ಎರಡು ದ್ರೋಣ ನೀರಿನಲ್ಲಿ ರಾಸ್ನಾ, ದಶಮೂಲ, ಶತಾವರೀ, ಇವುಗಳನ್ನು ೪-೪ ತೊಲಿ, ಹುರುಳಿ ಬೋರಿ, ಜವೆಗಳನ್ನು ೩೨-೩೨ ತೊಲಿ, ॥೪೨॥ ಕುರಿಯ ಮಾಂಸ ೨೦೦ ತೊಲಿ ಹಾಕಿ ಕುದಿಸಿ ೧/೪ ಉಳಿಯಲು, ಅದರಲ್ಲಿ ಅಷ್ಟೇ ಹಾಲು ಮತ್ತು ಹತ್ತು ಜೀವನೀಯ ಔಷಧಗಳ ಕಲ್ಕಗಳನ್ನು ೪-೪ ತೊಲಿ ಹಾಲಿ ೫೧೨ ತೊಲಿ ಘೃತವನ್ನು ಸಿದ್ಧಪಡಿಸಬೇಕು. ||೪೩|| ಇದನ್ನು ವಾತರೋಗಗಳಲ್ಲಿ ಅವಸ್ಥೆಯನ್ನು ನೋಡಿ ನಸ್ಯ, ಪಾನ, ಅನುವಾಸನರೂಪಗಳಿಂದ ಉಪಯೋಗಿಸಬೇಕು. ||೪೪|| ಇದು ಐದೂ ಕೆಮ್ಮುಗಳನ್ನು ಶಿರಃಕಂಪವನ್ನೂ ಗೆಜ್ಜೆಯೋನಿಗಳಲ್ಲಿಯ ಶೂಲಗಳನ್ನೂ ಸರ್ವಾಂಗ, ಏಕಾಂಗ ರೋಗಗಳನ್ನೂ ಪ್ಲೀಹ ಊರ್ಧ್ವವಾತಗಳನ್ನೂ ಕಳೆಯುತ್ತದೆ (೪೫)

ವಿಡಂಗಂ ನಾಗರಂ ರಾಸ್ನಾ ಪಿಪ್ಪಲೀಹಿಂಗು ಸೈಂಧವಮ್ ॥
ಭಾರ್ಗೀ ಕ್ಷಾರಶ್ಚ ತಚ್ಚೂರ್ಣಂ ಪಿಬೇದ್‌ವಾ ಘೃತಮಾತ್ರಯಾ॥೪೬
ಸಕಫೇಽನಿಲಜೇ ಕಾಸೇ ಶ್ವಾಸೇ ಹಿಕ್ಕಾಹತಾಗ್ನಿಷು ॥
ದ್ವೌ ಕ್ಷಾರೌ ಪಞ್ಚ ಕೋಲಾನಿ ಪಞ್ಚೈವ ಲವಣಾನಿ ಚ ||೪೭||
ಶಠೀನಾಗರಕೋದೀಚ್ಯಕಲ್ಕಂ ವಾ ವಸ್ತ್ರಗಾಲಿತಮ್ ||
ಪಾಯಯೇತ್‌ತದ್‌ಘೃತೋನ್ಮಿಶ್ರಂ ವಾತಕಾಸನಿಬರ್ಹಣಮ್॥೪೮||
ದುರಾಲಭಾಂ ಶೃಂಗವೇರಂ ಶಠೀಂ ದ್ರಾಕ್ಷಾಂ ಸಿತೋಪಲಾಮ್ ||
ಲಿಹ್ಯಾತ್‌ಕರ್ಕಟಶೃಂಗೀಂ ಚ ಕಾಸೇ ತೈಲೇನ ವಾತಜೇ ||೪೯||
ದುಃಸ್ಪರ್ಶಾಂ ಪಿಪ್ಪಲೀಂ ಮುಸ್ತಾಂ ಭಾರ್ಗೀಂ ಕರ್ಕಟಕಂ ಶಠೀಮ್||
ಪುರಾಣಗುಡತೈಲಾಭ್ಯಾಂ ಚೂರ್ಣಿತಾ ವಾಪಿ ಲೇಹಯೇತ್ ||೫೦||
ವಿಡಂಗಾನ್‌ಸೈಂಧವಂ ಕುಷ್ಠಂ ವ್ಯೋಷಂ ಹಿಂಗು ಮನಃಶಿಲಾಮ್||
ಹಿಕ್ಕಾಶ್ವಾಸೇ ಚ ಕಾಸೇ ಚ ಲಿಹ್ಯಾತ್ ಕ್ಷೌದ್ರಘೃತಪ್ಲುತಾನ್ ||೫೧||

**ಅರ್ಥ :—** ವಾವಡಿಂಗ, ಸುಂಠಿ, ರಾಸ್ನಾ, ಹಿಪ್ಪಲಿ. ಇಂಗು, ಸೈಂಧವ, ಭಾರಂಗಮೂಳ, ಜವಖಾರ ಇವುಗಳ ಚೂರ್ಣವನ್ನು ೪ ಪಾಲು ತುಪ್ಪ ಹಾಕಿ ನೆಕ್ಕಬೇಕು. ||೪೬|| ಇದು ಕಫಯುಕ್ತ ವಾತ ಕಾಸವನ್ನು ಶ್ವಾಸ, ಬಿಕ್ಕು, ಅಗ್ನಿಮಾಂದ್ಯಗಳನ್ನು ಕಳೆಯುವದು. ಇವ

ಕ್ಷಾರ ಸಜ್ಜೀಕ್ಷಾರ, ಹಿಪ್ಪಲಿ, ಮೋಡಿ, ಚವಕ, ಚಿತ್ರಕ, ಸುಂಠಿ, ಪಂಚ ಲವಣ, ॥೪೭॥ ಕಚೋರೆ, ಸುಂಠಿ, ಬಾಳದಬೇರು, ಇವುಗಳ ಚೂರ್ಣ ವನ್ನು ಅರಿವೆಯಲ್ಲಿ ಸೋಸಿ, ತುಪ್ಪ ಕಲಿಸಿ ಕೊಟ್ಟರೆ ವಾತಕಾಸವನ್ನು ಕಳೆಯುವದು. ॥೪೮॥ ಇದರಂತೆ ವಾತಕಾಸದಲ್ಲಿ ನೆಲಇಂಗಳ, ಸುಂಠಿ ಕಚೋರೆ, ದ್ರಾಕ್ಷೆ, ಕಲ್ಲುಸಕ್ಕರೆ, ಕಾಕಡಶಿಂಗಿ, ಇವುಗಳ ಚೂರ್ಣ ವನ್ನು ತೈಲದೊಡನೆ ನೆಕ್ಕಬೇಕು. ॥೪೯॥ ನೆಲಇಂಗಳ, ಹಿಪ್ಪಲಿ ಜೇಕು, ಗಂಟುಭಾರಂಗಿ, ಕಾಕಡಶಿಂಗಿ, ಕಚೋರೆ, ಇವುಗಳ ಚೂರ್ಣ ವನ್ನು ಹಳೇಬೆಲ್ಲ ಮತ್ತು ತೈಲದೊಡನೆ, ನೆಕ್ಕಬೇಕು. ॥೫೦॥ ವಾವ ಡಿಂಗ, ಸೈಂಧವ, ಕೋಷ್ಠ, ತ್ರಿಕಟು, ಇಂಗು, ಮನಶಿಳೆ, ಇವುಗಳ ಚೂರ್ಣವನ್ನು ತುಪ್ಪ ಮತ್ತು ಜೇನಿನೊಡನೆ ನೆಕ್ಕಬೇಕು. ಇದು ಬಿಕ್ಕು ಕೆಮ್ಮು ದಮ್ಮುಗಳನ್ನು ಕಳೆಯುವದು. (೫೧)

ಚಿತ್ರಕಾದಿ ಲೇಹವನ್ನು ಹೇಳುತ್ತಾರೆ.

**ಚಿತ್ರಕಂ ಪಿಪ್ಪಲೀಮೂಲಂ ವ್ಯೋಷಂ ಮುಸ್ತಂ ದುರಾಲಭಾಮ್ ॥**
**ಶಠೀಂ ಪುಷ್ಕರಮೂಲಂ ಚ ಶ್ರೇಯಸೀಂ ಸುರಸಾಂ ವಚಾಮ್ ॥೫೨॥**
**ಭಾರ್ಗೀಂ ಛಿನ್ನರುಹಾಂ ರಾಸ್ನಾಂ ಕರ್ಕಟಾಹ್ವಾಂ ಚ ಕಾರ್ಷಿಕಾನ್**
**ಕಲ್ಕಾನ್ನಿದಿಗ್ಧ್ಯರ್ಧತುಲಾಂ ನಿಃಕ್ವಾಥ್ಯ ಪಲವಿಂಶತಿಮ್ ॥೫೩॥**
**ಮತ್ಸ್ಯಂಡಿಕಾಸ್ತತ್ರ ದತ್ವಾ ಸರ್ಪಿಷಃ ಕುಡವಂ ಪಚೇತ್ ॥**
**ಸಿದ್ಧಂ ಶೀತಂ ಪೃಥಕ್ ಕ್ಷೌದ್ರಪಿಪ್ಪಲೀಕುಡವಾನ್ವಿತಮ್ ॥೫೪॥**
**ಚತುಃಪಲಂ ತುಗಾಕ್ಷೀರ್ಯಾಶ್ಚೂರ್ಣಿತಂ ತತ್ರ ದಾಪಯೇತ್ ॥**
**ಲೇಹಯೇತ್ಕಾಸಹೃದ್ರೋಗಶ್ವಾಸಗುಲ್ಮನಿವಾರಣಮ್ ॥೫೫॥**

**ಅರ್ಥ:—** ಚಿತ್ರಕ, ಮೋಡಿ, ತ್ರಿಕಟು, ಜೇಕು, ನೆಲಇಂಗಳ, ಕಚೋರೆ, ಪುಷ್ಕರಮೂಲ, ಶ್ರೇಯಸೀ (ಗಜಹಿಪ್ಪಲಿ) ತುಳಸಿ, ಬಜೆ, ॥೫೨॥ ಗಂಟುಭಾರಂಗಿ, ಅಮೃತಬಳ್ಳಿ, ರಾಸ್ನೆ, ಕಾಕಡಶಿಂಗಿ, ಇವು ಗಳ ಚೂರ್ಣವನ್ನು ಒಂದೊಂದು ತೊಲಿ ತಕ್ಕೊಂಡು ಅವನ್ನು, ೨೦೦ ತೊಲಿ ನೆಲಗುಳ್ಳದ ಜೇರಿನಲ್ಲಿ ೮ ಪಾಲು ನೀರು ಹಾಕಿ ಕುದಿಸಿ ¼ ಅಂದರೆ ೪೦೦ ತೊಲಿ ಉಳಿದ ಕಷಾಯದಲ್ಲಿ ಹಾಕಿ, ಅದರಂತೆ ಕಲ್ಲುಸಕ್ಕರೆ

೮೦ ತೊಲಿ ||೫೩|| ಘೃತ ೩೨ ತೊಲಿ ಹಾಕಿ ಕುದಿಸಬೇಕು. ಸಿದ್ಧವಾಗಲು ತಣ್ಣಗೆ ಮಾಡಿ ಜೇನು ೩೨ ತೊಲಿ, ಹಿಪ್ಪಲಿ ೧೬ ತೊಲಿ ||೫೪|| ವಂಶಲೋಚನ ಚೂರ್ಣ ೧೬ ತೊಲಿ ಹಾಕಬೇಕು. ಇದನ್ನು ನೆಕ್ಕಲು ಕೆಮ್ಮು, ಹೃದ್ರೋಗ, ಶ್ವಾಸ, ಗುಲ್ಮಗಳು ಹೋಗುವವು. (೫೫)

ಅಗಸ್ತ್ಯ ಹರೀತಕಿಯನ್ನು ಹೇಳುತ್ತಾರೆ.

**ದಶಮೂಲೀಂ ಸ್ವಯಂಗುಪ್ತಾಂ ಶಂಖಪುಷ್ಪೀಂ ಶಠೀಂ ಬಲಾಮ್ ||**
**ಹಸ್ತಿಪಿಪ್ಪಲ್ಯಪಾಮಾರ್ಗಪಿಪ್ಪಲೀಮೂಲಚಿತ್ರಕಾನ್ ||೫೬||**

**ಭಾರ್ಗೀಂ ಪುಷ್ಕರಮೂಲಂ ಚ ದ್ವಿಪಲಾಂಶಂ ಯವಾಢಕಮ್ ||**
**ಹರೀತಕೀಶತಂ ಭದ್ರಂ ಜಲಪಂಚಾಢಕೇ ಪಚೇತ್ ||೫೭||**

**ಯವೈಃ ಸ್ವಿನ್ನೈಃ ಕಷಾಯಂ ತಂ ಪೂತಂ ತಚ್ಚಾಭಯಾಶತಮ್ ||**
**ಪಚೇದ್‌ಗುಡತುಲಾಂ ದತ್ವಾ ಕುಡವಂ ಚ ಪೃಥಗ್‌ಘೃತಾತ್ ||೫೮||**

**ತೈಲಾತ್‌ಸಪಿಪ್ಪಲೀಚೂರ್ಣಾತ್ ಸಿದ್ಧಶೀತೇ ಚ ಮಾಕ್ಷಿಕಾತ್ ||**
**ಲಿಹ್ಯಾದ್ ದ್ವೇ ಚಾಭಯೇ ನಿತ್ಯಮತಃ ಖಾದೇದ್‌ರಸಾಯನಾತ್ ||೫೯**

**ತದ್‌ವಲೀಪಲಿತಂ ಹನ್ಯಾದ್‌ವರ್ಣಾಯುರ್ಬಲವರ್ಧನಮ್ ||**
**ಪಞ್ಚ ಕಾಸಾನ್ ಕ್ಷಯಂ ಶ್ವಾಸಂ ಹಿಕ್ಕಾಞ್ಚ ವಿಷಮಜ್ವರಾನ್ ||೬೦||**

**ಹನ್ಯಾತ್‌ತಥಾರ್ಶೋಗ್ರಹಣೀಹೃದ್ರೋಗಾರುಚಿಪೀನಸಾನ್ ||**
**ಅಗಸ್ತ್ಯವಿಹಿತಂ ಧನ್ಯಮಿದಂ ಶ್ರೇಷ್ಠಂ ರಸಾಯನಮ್ ||೬೧||**

**ಅರ್ಥ:—** ದಶಮೂಲಿ, ನಸುಗುನ್ನಿ ಬೀಜ, ಶಂಖಪುಷ್ಪಿ, ಕಚೋರಿ, ಹಳ್ಳಂಗಡ್ಲೆಬೇರು, ಗಜಹಿಪ್ಪಲಿ, ||೬೧|| ಉತ್ತರಾಣಿ, ಮೋಡಿ, ಚಿತ್ರಕ, ||೫೬|| ಗಂಟುಭಾರಂಗಿ, ಪುಷ್ಕರಮೂಲ, ಇವುಗಳನ್ನು ೮-೮ ತೊಲಿ, ಜವೆ ೨೫೬ ತೊಲಿ, ಉತ್ತಮ ಅಳಲೇಕಾಯಿಗಳನ್ನು ೧೦೦, ಇವುಗಳನ್ನು ಅರಿವೆಯಲ್ಲಿ ಕಟ್ಟಿ ೨೫೬೦ ತೊಲಿ ನೀರಿನಲ್ಲಿ ಹಾಕಿ ಕುದಿಸಬೇಕು. ||೫೭|| ಜವೆಗಳು ಚನ್ನಾಗಿ ಬೇಯಲು ಅದನ್ನು ಸೋಸಿ ಅದರಲ್ಲಿಯ ಅಳಲೇಕಾಯಿಗಳನ್ನು ತಕ್ಕೊಂಡು ಬೀಜತೆಗೆದು ಅವನ್ನು ೩೨-೩೨ ತೊಲಿ ತುಪ್ಪ ಎಣ್ಣೆಗಳಲ್ಲಿ ಕರಿದು ||೫೮|| ಅವನ್ನೂ ಮತ್ತು ೪೦೦ ತೊಲಿ ಬೆಲ್ಲವನ್ನೂ ೧೬ ತೊಲಿ ಹಿಪ್ಪಲಿ ಚೂರ್ಣವನ್ನೂ ಹಾಕಿ

ಕುದಿಸಬೇಕು. ಸಿದ್ಧವಾಗಲು ಇಳಿಸಿ ಆರಿದನಂತರ ೩೨ ತೊಲಿ ಜೇನು ಹಾಕಿ ಇಟ್ಟು ದಿನಾಲು ಈ ರಸಾಯನದೊಳಗಿಂದ ೨ ಅಳ್ಳೇಕಾಯಿ ಗಳನ್ನು ತಿನ್ನಬೇಕು ॥೫೯॥ ಇದು ವೈತೊಗಲು ಮಡಿಕೆ ಬೀಳೋಣ ತಲೆಬೆಳ್ಳಗಾಗೋಣ ಐದೂತರದ ಕೆಮ್ಮು ಕ್ಷಯ, ಶ್ವಾಸ, ಬಿಕ್ಕು ವಿಷ ಮಜ್ವರ ॥೬೦॥ ಮೂಲವ್ಯಾಧಿ ಸಂಗ್ರಹಣಿ ಹೃದ್ರೋಗ ಅರುಚಿ ಪೀನ ಸಗಳನ್ನು ಕಳೆದು ಬಣ್ಣ ಆಯುಷ್ಯ ಶಕ್ತಿಗಳನ್ನು ಬೆಳಿಸುವದು ಇದು ಅಗಸ್ತ್ಯ ಋಷಿಗಳಿಂದ ಮಾಡಿದಂಥ ಶ್ರೇಷ್ಠ ರಸಾಯನವಾಗಿದೆ. (೬೧)

**ಸೈಂಧವಂ ಪಿಪ್ಪಲೀಂ ಭಾರ್ಗೀಂ ಶೃಂಗವೇರಂ ದುರಾಲಭಾಮ್॥**
**ದಾಡಿಮಾಮ್ಲೇನ ಕೋಷ್ಣೇನ ಭಾರ್ಗೀನಾಗರಮಂಬುನಾ ॥೬೨॥**
**ಪಿಬೇತ್ ಖದಿರಸಾರಂ ವಾ ಮದಿರಾದಧಿಮಸ್ತುಭಿಃ**
**ಅಥವಾ ಪಿಪ್ಪಲೀಕಲ್ಕಂ ಘೃತಭೃಷ್ಟಂ ಸಸೈಂಧವಮ್ ॥೬೩॥**

**ಅರ್ಥ**:— ಸೈಂಧವ, ಹಿಪ್ಪಲಿ, ಗಂಟುಭಾರಂಗಿ, ಸುಂಠಿ, ನೆಲ ಇಂಗಳ ಇವುಗಳ ಚೂರ್ಣವನ್ನು ಡಾಳಿಂಬದ ಹುಳಿ ರಸದೊಡನೆ ಕುಡಿಯಬೇಕು. ಅಥವಾ ಗಂಟುಭಾರಂಗಿ ಸುಂಠಿಚೂರ್ಣವನ್ನು ಬಿಸಿ ನೀರಿನೊಡನೆ ಕುಡಿಯಬೇಕು ॥೬೨॥ ಅಥವಾ ಖದಿರಸಾರ ಚೂರ್ಣ ವನ್ನು ಸುರೆ, ಮೊಸರಿನ ಮೇಲಿನ ನೀರಿನಿಂದ ಕುಡಿಯಬೇಕು. ಅಥವಾ ಹಿಪ್ಪಲೀಚೂರ್ಣವನ್ನು ಸೈಂಧವದೊಡನೆ ತುಪ್ಪದಲ್ಲಿ ಕರೆದು ತಿನ್ನ ಬೇಕು. (೬೩)

**ಧೂಮಪಾನಗಳನ್ನು ಅವುಗಳ ವಿಧಿಯನ್ನು ಹೇಳುತ್ತಾರೆ.**

**ಶಿರಸಃ ಪೀಡನೇ ಸ್ರಾವೇ ನಾಸಾಯಾ ಹೃದಿ ತಾಮ್ಯತಿ ॥**
**ಕಾಸಪ್ರತಿಶ್ಯಾಯವತಾಂ ಧೂಮಂ ವೈದ್ಯಃ ಪ್ರಯೋಜಯೇತ್॥೬೪॥**
**ದಶಾಂಗುಲೋನ್ಮಿತಾಂ ನಾಡೀಮಥವಾಷ್ಟಾಂಗುಲೋನ್ಮಿತಾಮ್॥**
**ಶರಾವಸಂಪುಟೇ ಛಿದ್ರೇ ಕೃತ್ವಾ ಜಿಹ್ಮಾಂ ವಿಚಕ್ಷಣಃ ॥೬೫॥**
**ಮುಖೇನ ವೈರೇಚನಿಕಂ ಕಾಸವಾನ್ ಧೂಮಮಾಪಿಬೇತ್॥**
**ತಮುರಃ ಕೇವಲಂ ಪ್ರಾಪ್ತಂ ಮುಖೇನೈವೋದ್ವಮೇತ್ ಪುನಃ॥೬೬॥**
**ಸ ಹ್ಯಸ್ಯ ತೈಕ್ಷ್ಣ್ಯಾದ್ ವಿಚ್ಛೇದ್ಯ ಶ್ಲೇಷ್ಮಾಣಮುರಸಿ ಸ್ಥಿತಮ್**
**ನಿಷ್ಕೃಷ್ಯ ಶಮಯೇತ್ ಕಾಸಂ ವಾತಶ್ಲೇಷ್ಮಸಮುದ್ಭವಮ್ ॥೬೭॥**

ಮನಃಶಿಲಾಲಮಧುಕಮಾಂಸೀಮುಸ್ತೇಙ್ಗುದೈಃ ಪಿಬೇತ್ ||
ಧೂಮಂ ತಸ್ಯಾನು ಚ ಪಯಃ ಕದುಷ್ಣಂ ಸಗುಡಂ ಪಿಬೇತ್ ||೧೮||

ವಿಷ ಕಾಸಾನ್ ಪೃಥಗ್ ದೋಷಸನ್ನಿಪಾತಸಮುದ್ಭವಾನ್ ||
ಧೂಮೋ ಹನ್ಯಾದಸಂಸಿದ್ಧಾನನ್ಯೈರ್ಯೋಗಶತೈರಪಿ ||೧೯||

ಪ್ರಪೌಂಡರೀಕಂ ಮಧುಕಂ ಸಹಾಜಙ್ಗೇಷ್ವಾಂ ಮನಃಶಿಲಾಮ್ ||
ಮರಿಚಂ ಪಿಪ್ಪಲೀಂ ದ್ರಾಕ್ಷಾಮೇಲಾಂ ಸುರಸಮಞ್ಜರೀಮ್ ||೨೦||

ಕೃತ್ವಾ ವರ್ತಿಂ ಪಿಬೇದ್ ಧೂಮಂ ಕ್ಷೌಮಚೇಲಾನುವರ್ತಿತಾಮ್ ||
ಘೃತಾಕ್ತಾಮನು ಚ ಕ್ಷೀರಂ ಗುಡೋದಕಮಥಾಪಿ ವಾ ||೨೧||

ಮನಃಶಿಲೈಲಾಮರಿಚಕ್ಷಾರಾಞ್ಜನಕುಟನ್ನಟೈಃ ||
ವಂಶಲೋಚನಸೇವ್ಯಾಲಕ್ಷೌಮಲಕ್ತಕರೋಹಿಷೈಃ ||೨೨||

ಪೂರ್ವಕಲ್ಪೇನ ಧೂಮೋಽಯಂ ಸಾನುಪಾನೋ ವಿಧೀಯತೇ ||
ಮನಃಶಿಲಾಲೇ ತ್ವಕ್ ಚೈವ ಪಿಪ್ಪಲೀನಾಗರೈಃ ಸಹ ||೨೩||

ತೃಗ್ಯೈಙ್ಗುದೀಬೃಹತ್ಯಾ ಚ ತಾಲಮೂಲೀ ಮನಃಶಿಲಾ ||
ಕರ್ಪಾಸಾಸ್ಥ್ಯಶ್ವಗಂಧಾ ಚ ಧೂಮಃ ಕಾಸವಿನಾಶನಃ ||೨೪||

**ಅರ್ಥ** :— ತಲೆಶೂಲೆ, ಮೂಗಿನಿಂದ ಸ್ರಾವ ಎದೆಯಲ್ಲಿ ನೋವು ಕೆಮ್ಮು ನೆಗಡಿಗಳು ಇದ್ದವರಿಗೆ ವೈದ್ಯನು ಧೂಮವನ್ನು ಕೊಡಬೇಕು. ||೧೪|| ೧೦ ಅಂಗುಲ ಅಥವಾ ೮ ಅಂಗುಲ ಉದ್ದವಾದ ಡೊಂಕುಮಾಡಿದ ನಲಿಕೆಯನ್ನು ಶರಾವಸಂಪುಟದ ಛಿದ್ರದಲ್ಲಿ ಕೂಡಿಸಿ ಆ ಶರಾವಸಂಪುಟದಲ್ಲಿ ಕೆಮ್ಮಿನ ಔಷಧಗಳನ್ನು ಹಾಕಿ ||೧೫|| ಜಾಣನಾದ ಕೆಮ್ಮುವವನು ಶಿರೋವಿರೇಚನಮಾಡುವ ಧೂಮವನ್ನು ಬಾಯಿಂದ ಕುಡಿಯಬೇಕು. ಅದು ಎದೆಯಲ್ಲಿ ಬರಲು ಬಾಯಿಂದಲೇ ಬಿಡಬೇಕು. ||೧೬|| ಈ ಧೂಮವು ತನ್ನ ತೀಕ್ಷ್ಣತೆಯಿಂದ ಎದೆಯಲ್ಲಿ ಇದ್ದ ಕಫವನ್ನು ಹೊರಗೆ ಎಳೆದು ವಾತಕಫಗಳಿಂದುಂಟಾದ ಕೆಮ್ಮನ್ನು ಕಳೆಯುವದು. ||೧೭|| ಮನಶೀಲ, ಹರಿತಾಲ, ಜ್ಯೇಷ್ಠಮಧು, ಜಟಾಮಾಂಶಿ, ಜೇಕು, ಇಂಗಳ ಬೀಜ, ಇವುಗಳಿಂದ ಮಾಡಿದ ಧೂಮವನ್ನು ಮೇಲಿನಂತೆ ಕುಡಿಯಬೇಕು. ಆನಂತರ ಬೆಲ್ಲ ಹಾಕಿದ ಬೆಚ್ಚಗಿನ ಹಾಲನ್ನು ಕುಡಿಯಬೇಕು. ||೧೮|| ಈ ಧೂಮವು ಬೇರೆ ನೂರಾರು

ಔಷಧಗಳಿಂದ ಹೋಗದ ದ್ವಂದ್ವಜ, ಸನ್ನಿಪಾತಜ, ಕೆಮ್ಮುಗಳನ್ನು ಕಳೆಯುವದು. ॥ ೬೯ ॥ ಪುಂಡರೀಕಕಾಷ್ಠ, ಜೇಷ್ಠಮಧು, ಗಜಗು, ಮನಶಿಳ್ ಮೆಣಸು, ಹಿಪ್ಪಲಿ, ದ್ರಾಕ್ಷೆ, ಯಾಲಕ್ಕಿ, ತುಳಸಿಯತೆನೆ ಇವುಗಳ ಕಲ್ಕವನ್ನು ॥ ೭೦ ॥ ನಾರವಸ್ತ್ರಕ್ಕೆ ತೊಡೆದು, ಸುತ್ತಿ ಬತ್ತಿಯಂತೆಮಾಡಿ, ತುಪ್ಪ ಹಚ್ಚಿ, ಕುಡಿಯಬೇಕು. ಆ ಮೇಲೆ ಹಾಲನ್ನು ಅಥವಾ ಬೆಲ್ಲದನೀರನ್ನು ಕುಡಿಯಬೇಕು. ॥ ೭೧ ॥ ಮನಶಿಳ, ದೊಡ್ಡ-ಯಾಲಕ್ಕಿ, ಮೆಣಸು, ಜವಖಾರ, ಅಂಜನ, ಭದ್ರಮುಸ್ತೆ, ವಂಶಲೋಚನ, ಬಾಳದಬೇರು, ಹರಿತಾಳ, ಅಗಸಿ, ಅರಗು, ಗಂಧತೃಣ, ॥ ೭೨ ॥ ಇವುಗಳ ಕಲ್ಕವನ್ನು ಅದರಂತೆ ಮನಶಿಳ, ಹರಿತಾಲ, ಹಿಪ್ಪಲಿ, ಸುಂಠಿ, ಇವುಗಳ ಕಲ್ಕವನ್ನು ನಾರವಸ್ತ್ರಕ್ಕೆ ತೊಡೆದುಮಾಡಿದ ಧೂಮಗಳನ್ನು ಕುಡಿದು ಮೇಲೆಹೇಳಿದ ಅನುಪಾನಗಳನ್ನು ಸೇವಿಸಬೇಕು ॥ ೭೩ ॥ ಇಂಗಳತೋಟಿ, ನೆಲಗುಳ್ಳ, ಹೆಬ್ಬಗುಳ್ಳಗಳಬೇರು, ನೆಲತಾಳೆಗಡ್ಡಿ, (ಮುಸಳಿ,) ಮನಶಿಳ, ಹತ್ತಿಕಾಳು, ಅಶ್ವಗಂಧೆ, ಇವುಗಳ ಕಲ್ಕವನ್ನು ನಾರವಸ್ತ್ರಕ್ಕೆ ಸುತ್ತಿ ಬತ್ತಿಮಾಡಿ ತುಪ್ಪ ಹಚ್ಚಿ ಸೇದಲು ಕೆಮ್ಮು ಹೋಗುವದು ॥೭೪॥

ವಾತಕಾಸದ ಪಥ್ಯವನ್ನು ಹೇಳುತ್ತಾರೆ—

ಗ್ರಾಮ್ಯಾನೂಪೌದಕೈಃ ಶಾಲಿಯವಗೋಧೂಮಷಷ್ಟಿಕಾನ್ ॥
ರಸೈರ್ಮಾಷಾತ್ಮಗುಪ್ತಾನಾಂ ಯೂಷೈರ್ವಾ ಭೋಜಯೇದ್ಧಿತಾನ್ ॥೭೫॥

ಯಮಾನೀಪಿಪ್ಪಲೀಬಿಲ್ವಶಠೀ ಚಿತ್ರಕಪುಷ್ಕರೈಃ ॥
ರಾಸ್ನಾಜಾಜೀಪೃಥಕ್‌ಪರ್ಣೀಪಲಾಶವಿಶ್ವಭೇಷಜೈಃ ॥೭೬॥

ಸಿದ್ಧಾಂ ಸ್ನಿಗ್ಧಾಮ್ಲಲವಣಾಂ ಪೇಯಾಮನಿಲಜೆ ಪಿಬೇತ್ ॥
ಕಟೀಹೃತ್ಪಾರ್ಶ್ವಕೋಷ್ಠಾರ್ತಿಶ್ವಾಸಹಿಕ್ಕಾಪ್ರಣಾಶಿನೀಮ್ ॥೭೭॥

ದಶಮೂಲೀರಸೇ ತದ್ವತ್ ಪಞ್ಚಕೋಲಗುಡಾನ್ವಿತಾಮ್ ॥
ಸಿದ್ಧಾಂ ದದ್ಯಾತ್‌ಸಮತಿಲಾಂ ಕ್ಷೀರೇ ವಾಪಿ ಸಸೈಂಧವಾಮ್ ॥೭೮॥

ಮಾತ್ಸ್ಯಕೌಕ್ಕುಟವಾರಾಹೈರಾಮಿಷೈರ್ವಾ ಘೃತಾನ್ವಿತಾಮ್ ॥
ಸಸೈಂಧವಾಂ ಪಾಯಯೇತ ಯವಾಗೂಂ ವಾತಕಾಸಿನಮ್ ॥೭೯॥

ವಾಸ್ತೂಕೋ ವಾಯಸೀಶಾಕಂ ಮೂಲಕಂ ಸುನಿಷಣ್ಣಕಮ್ ॥
ಸ್ನೇಹಾಸ್ತೈಲಾದಯೋ ಭಕ್ಷ್ಯಾಃ ಕ್ಷೀರೇಕ್ಷುರಸಗೌಡಿಕಾಃ ॥೮೦॥

**ದಧ್ಯಾರನಾಲಾಮ್ಲಫಲಂ ಪ್ರಸನ್ನಾಪಾನಮೇವ ಚ ||**
**ಶಸ್ಯಂತೇ ವಾತಕಾಸೇಷು ಸ್ವಾದ್ವಮ್ಲಲವಣಾನ ಚ ||೩೧||**

**ಅರ್ಥ:—** ಗ್ರಾಮ, ಮಲೆನಾಡಗಳಲ್ಲಿರುವ ಮತ್ತು ಜಲಚರ ಪ್ರಾಣಿಗಳ ಮಾಂಸರಸದಿಂದ ಅಥವಾ ಉಪ್ಪು–ನಸುಗುನ್ನಿಬೀಜಗಳ ಕಟ್ಟುಗಳಿಂದ ಅಕ್ಕಿ, ಜವೆಗೋದಿ, ಷಷ್ಠಿಕ ಅಕ್ಕಿಗಳ ಅನ್ನವನ್ನು ಅವರಿಗೆ ತಿನ್ನಿಸಬೇಕು. ||೭೫|| ವಾತಕಾಸದಲ್ಲಿ ಅಜವಾನ, ಹಿಪ್ಪಲಿ, ಬಿಲ್ವ, ಕಚೋರೆ, ಚಿತ್ರಕ, ಪುಷ್ಕರಮೂಲ, ರಾಸ್ನೆ, ಜೀರಿಗೆ, ಮೂರೆಲೆಹೊನ್ನೆ, ಮುತ್ತಲು, ಸುಂಠಿಗಳಿಂದ ||೭೬|| ಸಿದ್ಧಮಾಡಿದ, ಸ್ನೇಹ, ಹುಳಿ, ಉಪ್ಪುಗಳನ್ನು ಹಾಕಿದ, ಪೇಯವನ್ನು ಕುಡಿಯಬೇಕು. ಇದು ಟೊಂಕ, ಹೃದಯ, ಪಾರ್ಶ್ವ ಕೋಷ್ಠಗಳಲ್ಲಿರುವ ಶೂಲಗಳನ್ನು ಶ್ವಾಸ ಬಿಕ್ಕುಗಳನ್ನು ಕಳೆಯುವದು. ||೭೭|| ಅದರಂತೆ ದಶಮೂಲ ಕಷಾಯದಲ್ಲಿ ಮಾಡಿದ ಹಿಪ್ಪಲಿ, ಮೋಡಿ, ಚವಕ, ಚಿತ್ರಕ, ಸುಂಠಿ, ಬೆಲ್ಲ, ಕೂಡಿಸಿದ ಪೇಯವನ್ನು ಅಥವಾ ಅಕ್ಕಿಯಸಮ ಎಳ್ಳುಹಾಕಿ ಹಾಲಿನಲ್ಲಿ ಮಾಡಿದ ಸೈಂಧವ ಕೂಡಿಸಿದ ಪೇಯವನ್ನೂ ಕೊಡಬೇಕು. ||೭೮|| ಇದರಂತೆಯೇ ವಾತಕಾಸವುಳ್ಳವರಿಗೆ ಮೀನು, ಕೋಳಿ, ಹಂದಿಗಳ ಮಾಂಸದಿಂದ ಮಾಡಿದ ಪೇಯದಲ್ಲಿ ತುಪ್ಪ ಮತ್ತು ಸೈಂಧವಗಳನ್ನು ಹಾಕಿ ಕುಡಿಸಬೇಕು. ||೭೯|| ಚಕ್ರೋತಿಪಲ್ಲೆ, ವಾಯಸೀಶಾಕ, (ಎಲಬುಸಂಧಿ), ಮೂಲಂಗಿ ಪಾಂಡವಹರಿವೆ, ಈ ಪಲ್ಲೆಗಳೂ ಎಣ್ಣೆ ಮುಂತಾದ ಸ್ನೇಹಗಳೂ ಹಾಲು, ಕಬ್ಬಿನರಸ, ಬೆಲ್ಲದ ಮದ್ಯ ||೮೦|| ಮೊಸರು, ಗಂಜಿ, ಹುಳಿಹಣ್ಣುಗಳು, ಶೆರೆಯ ಮೇಲಿನ ತಿಳಿಭಾಂಗ ಮಧುರ ಹುಳಿ ಉಪ್ಪು ರಸಗಳು ವಾತಕಾಸದಲ್ಲಿ ಪ್ರಶಸ್ತವಾಗಿವೆ.

**ಪಿತ್ತಕಾಸದ ಚಿಕಿತ್ಸೆಯನ್ನು ಹೇಳುತ್ತಾರೆ—**

**ಪಿತ್ತಕಾಸೇ ತು ಸಕಫೇ ವಮನಂ ಸರ್ಪಿಷೈವ ಚ ||**
**ತಥಾಮದನಕಾಶ್ಮರ್ಯಮಧುಕಕ್ವಥಿತೈರ್ಜಲೈಃ ||೮೨||**

**ಯಷ್ಟ್ಯಾಹ್ವಫಲಕಲ್ಕೈರ್ವಾ ವಿದಾರೀಕ್ಷುರಸಾಯುತೈಃ ||**
**ಹೃತದೋಷಸ್ತತಃ ಶೀತಂ ಮಧುರಞ್ಚ ಭಜೇತ್‌ಕ್ರಮುವಮ್ ||೮೩||**

**ಪೈತ್ತೇ ಕಾಸೇ ತನುಕಫೇ ತ್ರಿವೃತಾಂ ಮಧುರೈರ್ಯುತಾಮ್ ||**
**ದದ್ಯಾದ್‌ಘನಕಫೇ ತಿಕ್ತೈರ್ವಿರೇಕಾರ್ಥಂ ಯುತಾಂ ಭಿಷಕ್ ||೮೪||**

ಸ್ನಿಗ್ಧಶೀತಂ ತನುಕಫೇ ರುಕ್ಷಶೀತಂ ಘನೇ ಕಫೇ ||
ಕ್ರಮಃ ಕಾರ್ಯಃ ಪರಂ ಭೋಜ್ಯೈಃ ಸ್ನೇಹೈರ್ಲೇಹೈಶ್ಚ ಶಸ್ಯತೇ||೮೫||

ಶೃಙ್ಗಾಟಕಂ ಪದ್ಮಬೀಜಂ ನೀಲೀ ಸಾರಾಣಿ ಪಿಪ್ಪಲೀ ||
ಪಿಪ್ಪಲೀ ಮುಸ್ತಯಷ್ಟ್ಯಾಹ್ವದ್ರಾಕ್ಷಾಮೂರ್ವಾ ಮಹೌಷಧಮ್||೮೬||

ಲಾಜಾಮೃತಫಲಂ ದ್ರಾಕ್ಷಾ ತ್ವಕ್ ಕ್ಷೀರೀ ಪಿಪ್ಪಲೀ ಸಿತಾ ||
ಪಿಪ್ಪಲೀ ಪದ್ಮಕಂ ದ್ರಾಕ್ಷಾ ಬೃಹತ್ಯಾಶ್ಚ ಫಲಾದ್ ರಸಃ ||೮೭||

ಖರ್ಜೂರಂ ಪಿಪ್ಪಲೀ ವಾಂಶೀ ಶ್ವದಂಷ್ಟ್ರಾ ಚೇತಿ ಪಞ್ಚತೇ ||
ಘೃತಕ್ಷೌದ್ರಯುತಾ ಲೇಹಾಃ ಶ್ಲೋಕಾರ್ದ್ಧೈಃ ಪಿತ್ತಕಾಸಿನಾಮ್ ||೮೮||

ಶರ್ಕರಾ ಚಂದನಂ ದ್ರಾಕ್ಷಾ ಮಧುಧಾತ್ರೀಫಲೋತ್ಪಲೈಃ ||
ಪೈತ್ತೇ ಸಮುಸ್ತಮರಿಚಃ ಸಕಫೇ ಸಘೃತೋಽನಿಲೇ ||೮೯||

ಮೃದ್ವೀಕಾರ್ಧಶತಂ ತ್ರಿಂಶತ್ ಪಿಪ್ಪಲೀಃ ಶರ್ಕರಾಪಲಮ್ ||
ಲೇಹಯೇನ್ಮಧುನಾ ಗೋರ್ವಾ ಕ್ಷೀರೇ ಪಕ್ತ್ವಾ ಶಕೃದ್ರಸಾನ್ ||೯೦||

ತ್ವಗೇಲಾವ್ಯೋಷಮೃದ್ವೀಕಾ ಪಿಪ್ಪಲೀಮೂಲಪೌಷ್ಕರೈಃ ||
ಲಾಜಮುಸ್ತಶಠೀರಾಸ್ನಾಧಾತ್ರೀಫಲಬಿಭೀತಕೈಃ ||೯೧||

ಶರ್ಕರಾಕ್ಷೌದ್ರಸರ್ಪಿರ್ಭಿರ್ಲೇಹಃ ಕಾಸವಿನಾಶನಃ ||
ಶ್ವಾಸಂ ಹಿಕ್ಕಾಂ ಕ್ಷಯಞ್ಚೈವ ಹೃದ್ರೋಗಞ್ಚ ವಿನಾಶಯೇತ್||೯೨||

ಪಿಪ್ಪಲ್ಯಾಮಲಕಂ ಲಾಜಾಂ ಲಾಕ್ಷಾಂ ದ್ರಾಕ್ಷಾಂ ಸಿತೋಪಲಾಮ್||
ಕ್ಷೀರೇ ಪಕ್ತ್ವಾ ಘನಂ ಶೀತಂ ಲಿಹ್ಯಾತ್ ಕ್ಷೌದ್ರಾಷ್ಟಭಾಗಿಕಮ್ ||೯೩||

ವಿದಾರೀಕ್ಷುಮೃಣಾಲಾನಾಂ ರಸಾನ್ ಕ್ಷೀರಂ ಸಿತೋಪಲಾಮ್ ||
ಪಿಬೇದ್ವಾ ಮಧುರಸಂಯುಕ್ತಂ ಪಿತ್ತಕಾಸಹರಮ್ ಪರಮ್ ||೯೪||

ಮಧುರೈರ್ಜಾಂಗಲರಸೈಃ ಶ್ಯಾಮಾಕಯವಕೋದ್ರವಾಃ ||
ಮುದ್ಗಾದಿಯೂಷೈಃ ಶಾಕೈರ್ವಾ ತಿಕ್ತಕೈರ್ಮಾತ್ರಯಾ ಹಿತಾಃ ||೯೫||

ಘನಶ್ಲೇಷ್ಮಣಿ ಲೇಹಾಸ್ತು ತಿಕ್ತಾ ಮಧುರಸಂಯುತಾಃ ||
ಶಾಲಯಃ ಸ್ಯುಸ್ತನುಕಫೇ ಷಷ್ಟಿಕಾಶ್ಚ ರಸಾದಿಭಿಃ ||೯೬||

ಶರ್ಕರಾಂಭೋಽನುಪಾನಾರ್ಥಂದ್ರಾಕ್ಷೇಕ್ಷೂಣಾಂ ರಸಾನ್ ಪಯಃ ||
ಸರ್ವಞ್ಚ ಮಧುರಂ ಶೀತಮವಿದಾಹಿ ಪ್ರಶಸ್ಯತೇ ||೯೭||

ಕಾಕೋಲೀಬೃಹತೀಮೇದಾ ಯುಗ್ಮೈಃ ಸವೃಷನಾಗರೈಃ ||
ಪಿತ್ತಕಾಸೇ ರಸಕ್ಷೀರ ಯೂಷಾಂಶ್ಚಾಪ್ಯುಪಕಲ್ಪಯೇತ್ ||೯೮||

ಶರಾದಿಪಞ್ಚಮೂಲಸ್ಯ ಪಿಪ್ಪಲೀದ್ರಾಕ್ಷಯೋಸ್ತಥಾ ||
ಕಷಾಯೇಣ ಶೃತಂ ಕ್ಷೀರಂ ಪಿಬೇತ್ ಸಮಧುಶರ್ಕರಮ್ ||೯೯||

ಸಿತಾಸ್ಥಿರಾಪೃಶ್ನಿಪರ್ಣೀಶ್ರಾವಣೀಬೃಹತೀಯುಗೈಃ ||
ವೀರರ್ಷಭಕಕಾಕೋಲೀತಾಮಲಕ್ಯೃದ್ಧಿಜೀವಿಕೈಃ ||೧೦೦||

ಶೃತಂ ಕ್ಷೀರಂ ಪಿಬೇತ್ ಕಾಸೀ ಜ್ವರೀ ದಾಹೀ ಕ್ಷತಕ್ಷಯೀ ||
ತಜ್ಜಂ ವಾ ಸಾಧಯೇತ್ಸರ್ಪಿಃ ಸಕ್ಷೀರೇಕ್ಷುರಸಂ ಭಿಷಕ್ ||೧೦೧||

ಜೀವಕಾದ್ಯೈರ್ಮಧುರಕೈಃ ಫಲೈಶ್ಚಾಭಿಷುಕಾದಿಭಿಃ ||
ಕಲ್ಕೈಸ್ತ್ರಿಕಾರ್ಷಿಕೈಃ ಸಿದ್ಧೇ ಘೃತೇ ಶೀತೇ ಪ್ರದಾಪಯೇತ್ ||೧೦೨||

ಶರ್ಕರಾಪಿಪ್ಪಲೀಚೂರ್ಣಂ ತ್ವಕ್ ಕ್ಷೀರ್ಯೋ ಮರಿಚಸ್ಯ ಚ ||
ಶೃಙ್ಗಾಟಕಸ್ಯ ಚಾವಾಪ್ಯ ಕ್ಷುದ್ರಗರ್ಭಾನ್ ಪಲೋನ್ಮಿತಾನ್ ||೧೦೩||

ಗುಡಾನ್ ಗೋಧೂಮ ಚೂರ್ಣೇನ ಕೃತ್ವಾ ಖಾದೇದ್ಧಿತಾಶನಃ ||
ಶುಕ್ರಾಸೃಗ್ದೋಷಶೋಷೇಷು ಕಾಸಕ್ಷೀಣಕ್ಷತೇಷು ಚ ||೧೦೪||

ಶರ್ಕರಾನಾಗರೋದೀಚ್ಯಂ ಕಂಟಕಾರೀಂ ಶಠೀಂಸಮಾಮ್ ||
ಪಿಷ್ಟ್ವಾ ರಸಂ ಪಿಬೇತ್ ಪೂತಂವಸ್ತ್ರೇಣ ಘೃತಮೂರ್ಚ್ಛಿತಮ್ ||೧೦೫||

ಮಹಿಷ್ಯಜಾವಿಗೋಕ್ಷೀರಧಾತ್ರೀಫಲರಸೈಃ ಸಮೈಃ ||
ಸರ್ಪಿಃ ಸಿದ್ಧಂ ಪಿಬೇದ್ಯುಕ್ತ್ಯಾ ಪಿತ್ತಕಾಸನಿಬರ್ಹಣಮ್ ||೧೦೬||

**ಅರ್ಥ —** ಪಿತ್ತಕಾಸದಲ್ಲಿ ಕಫದ ಅನುಬಂಧವಿದ್ದರೆ, ತುಪ್ಪದಿಂದಲೇ ಅಥವಾ ಮಂಗಾರಿಕಾಯಿ, ಶಿವನ್ನಿ, ಜೇಷ್ಠಮಧು, ಕಷಾಯಗಳಿಂದ ವಮನಮಾಡಿಸಬೇಕು. || ೮೨ || ಅಥವಾ ಜೇಷ್ಠಮಧು, ಮದನ ಫಲಗಳ ಕಲ್ಕಗಳಲ್ಲಿ ನೆಲಗುಂಬಳ, ಕಬ್ಬಿನ ರಸಗಳನ್ನು ಹಾಕಿ ಕೊಟ್ಟು

ದ್ರಾಕ್ಷಾಪುನರ್ನವಾಚವ್ಯದುರಾಲಭಾವಲ್ಲವೇತಸೈಃ ॥
ಶೃಂಗೀತಾಮಲಕೀಭಾರ್ಗೀರಾಸ್ನಾಗೋಕ್ಷುರಕೈಃ ಪಚೇತ್ ॥೧೨೬॥
ಕಲ್ಕೈಸ್ತತ್ಸರ್ವಕಾಸೇಷು ಹಿಕ್ಕಾಶ್ವಾಸೇಷು ಶಸ್ಯತೇ ॥
ಕಂಟಕಾರೀಘೃತಂ ಸಿದ್ಧಂ ಕಫವ್ಯಾಧಿನಿಷೂದನಮ್ ॥೧೨೭॥
ಕುಲತ್ಥರಸಸಂಯುಕ್ತಂ ಪಞ್ಚಮೂಲಶೃತಂ ಘೃತಮ್ ॥
ಧೂಮಾಂಸ್ತಾನೇವ ದದ್ಯಾಚ್ಚ ಯೇ ಪ್ರೋಕ್ತಾ ವಾತಕಾಸಿನಾಮ್
ಕೋಷಾತಕೀಫಲಾನ್ಮಧ್ಯಂ ಪಿಬೇದ್ವಾ ಸವುನಃಶಿಲಮ್ ॥
ತಮುಕಃ ಕಫಕಾಸೇ ತು ಸ್ಯಾಚ್ಚೇತ್ಪಿತ್ತಾನುಬಂಧಜೇ ॥೧೨೯॥
ಪಿತ್ತಕಾಸಕ್ರಿಯಾಂ ತತ್ರ ಯಥಾವಸ್ಥಂ ಪ್ರಯೋಜಯೇತ್ ॥
ಕಫಾನುಬಂಧೇ ಪವನೇ ಕುರ್ಯಾತ್ಕಫಹರೀಂ ಕ್ರಿಯಾಮ್॥೧೩೦
ಪಿತ್ತಾನುಬಂಧಯೋರ್ವಾತಕಫಯೋಃ ಪಿತ್ತನಾಶಿನೀಮ್ ॥
ಆರ್ದ್ರೇ ವಿರೂಕ್ಷಣಂ ಶುಷ್ಕೇ ಸ್ನಿಗ್ಧಂ ವಾತಕಫಾತ್ಮಕೇ ॥೧೩೧॥
ಕಾಸೇಽನ್ನಪಾನಂ ಕಫಜೇ ಸಪಿತ್ತೇ ತಿಕ್ತಸಂಯುತಮ್ ॥೧೩೧½॥

**ಅರ್ಥ:—** ಕಫಕಾಸಿಯು ಬಲಿಷ್ಠನಿದ್ದರೆ ವೊದಲು ವಮನಕೊಟ್ಟು ಶೋಧನಮಾಡಿ, ಕಾರ, ರೂಕ್ಷ, ಉಷ್ಣ ಮತ್ತು ಕಫನಾಶಕವಾದ ಅನ್ನವನ್ನೂ ಜವೆಗೋದಿಯಿಂದ ಮಾಡಿದ ಆಹಾರವನ್ನೂ ಕೊಡಬೇಕು. ||೧೦೭|| ಹಿಪ್ಪಲಿ, ಜವಕ್ಷಾರ, ಹಾಕಿ ಮಾಡಿದ ಹುರಳಿಯ ಕಟ್ಟಿನೊಡನೆ ಅಥವಾ ಒಣ ಮೂಲಂಗಿಯ ಕಟ್ಟಿನೊಡನೆ ಅಥವಾ ಕಾರ ಹಾಕಿದ ||೧೦೮|| ಜಾಂಗಲ ಮತ್ತು ಬಿಲೇಶಯ ಪ್ರಾಣಿಗಳ ಮಾಂಸರಸದೊಡನೆ ಅಥವಾ ಎಳ್ಳು, ಸಾಸಿವೆ, ಬಿಲ್ವ ಫಲಗಳ ಎಣ್ಣೆಯೊಡನೆ ಹಗುರಾದ ಆಹಾರವನ್ನು ತಿನ್ನಬೇಕು (ಊಟದ ನಂತರ) ಜೇನು, ಹುಳಿಮಜ್ಜಿಗೆ, ಬಿಸಿನೀರು, ಮದ್ಯ, ಅಥವಾ ಸ್ವಚ್ಛಮದ್ಯವನ್ನು ಕುಡಿಯಬೇಕು. ||೧೦೯|| ಪುಷ್ಕರಮೂಲ, ಕಕ್ಕೀಮೂಲ, ಕಹಿಪಡವಲದವಲಿ ಇವುಗಳ ಚೂರ್ಣವನ್ನು ರಾತ್ರಿಯಲ್ಲಿ ನೀರಲ್ಲಿ ಹಾಕಿಟ್ಟು, ಮುಂಜಾನೆ ಸೋಸಿ ತಕ್ಕೊಂಡು, ಊಟದ ಕಾಲದಲ್ಲಿ ಮತ್ತು ರಾತ್ರಿಗಳಲ್ಲಿ ಜೇನು ಹಾಕಿ ತಕ್ಕೊಳ್ಳಬೇಕು ||೧೧೦|| ಕಿರಿಶಿವನ್ನಿ ಗಂಜಳಗರಿಕೆ ಗಂಟುಭಾರಂಗಿ ಜೇಕು, ಹವೀಜ, ಬಜೆ, ಅಣಲೆ, ಸುಂಠಿ, ಕಲ್ಲುಸಬ್ಬಸಿಗೆ, ಕರ್ಕಟ

ಹಿಪ್ಪಲಿ, ನೆಲ್ಲೀಚೆಟ್ಟು, ಭತ್ತರಳು, ಅರಗು, ದ್ರಾಕ್ಷೆ, ಕಲ್ಲುಸಕ್ಕರೆ ಇವುಗಳನ್ನು ಹಾಲಿನಲ್ಲಿ ಕುದಿಸಿ, ಗಟ್ಟಿಯಾಗಲು ಇಳಿಸಿ ತಣ್ಣಗಾದನಂತರ ೩ ಜೇನು ಹಾಕಿ ನೆಕ್ಕಬೇಕು. || ೯೩ || ನೆಲಗುಂಬಳ, ಕಬ್ಬು, ಕಮಲದ ದೇಟುಗಳ ರಸ,ಹಾಲು ಕಲ್ಲುಸಕ್ಕರೆಗಳನ್ನು ಜೇನು ಹಾಕಿ ಕುಡಿಯಬೇಕು. ಪಿತ್ತಕಾಸಕ್ಕೆ ಇದು ಒಳ್ಳೇ ಔಷಧವಾಗಿದೆ. || ೯೪ || ಮಧುರಸ, ಜಾಂಗಲ ಮಾಂಸಗಳಲ್ಲಿ ಸಿದ್ಧಮಾಡಿದ ಸಾವಿ, ಜವೆ, ಹರಕಧಾನ್ಯಗಳ ಅನ್ನವನ್ನು ಹೆಸರು ಮುಂತಾದವುಗಳ ಕಟ್ಟಿನೊಡನೆ ಅಥವಾ ಕಹಿ ಪಲ್ಯಗಳೊಡನೆ ಸ್ವಲ್ಪ ಪ್ರಮಾಣದಿಂದ ತಕ್ಕೊಳ್ಳಲು ಹಿತವಾಗುವದು. || ೯೫ || ಪಿತ್ತಕಾಸದಲ್ಲಿ ಕಫವು ಗಟ್ಟಿಯಿದ್ದರೆ, ಮಧುರ ಪದಾರ್ಥಗಳಿಂದ ಕೂಡಿದ ಕಹಿಯಾದ ಲೇಹಗಳೂ ಅಕ್ಕೀಅನ್ನವೂ ಹಿತಕರವು. ಕಫವು ತೆಳ್ಳಗಿದ್ದರೆ, ಮಾಂಸರಸ ಮುಂತಾದವುಗಳೊಡನೆ ಷಷ್ಟಿಕ ಅಕ್ಕಿಯ ಅನ್ನವನ್ನು ತಿನ್ನಬೇಕು. ||೯೬|| ಅದನ್ನು ತಿಂದಮೇಲೆ ಅನುಪಾನವೆಂದು ಸಕ್ಕರೇ ಹಾಕಿದ ನೀರು, ದ್ರಾಕ್ಷೆ ಮತ್ತು ಕಬ್ಬುಗಳ ರಸ, ಹಾಲು ತಕ್ಕೊಳ್ಳಬೇಕು. ಅಂತೂ ಎಲ್ಲವು ಮಧುರ, ಶೀತ, ಅವಿದಾಹಿಯಾದ ದ್ರವ್ಯವು ಹಿತಕರವು. ||೯೭|| ಪಿತ್ತಕಾಸದಲ್ಲಿ ಕಾಕೋಲಿ, ಹೆಬ್ಬಗುಳ್ಳ, ಮೇದೆ, ಮಹಾಮೇದೆ, ಅಡಸಲ, ಸುಂಠಿ, ಇವುಗಳಿಂದ ಮಾಂಸರಸ, ಕ್ಷೀರ, ಕಟ್ಟುಗಳನ್ನು ಮಾಡಬೇಕು. ||೯೮|| ತೃಣಪಂಚಮೂಲ ಮತ್ತು ಹಿಪ್ಪಲಿ, ದ್ರಾಕ್ಷೆ, ಇವುಗಳ ಕಷಾಯದಿಂದ ಸಿದ್ಧಮಾಡಿದ ಹಾಲನ್ನು ಜೇನು ಸಕ್ಕರೆಗಳನ್ನುಹಾಕಿ ಕುಡಿಯಬೇಕು. ||೯೯|| ಸಕ್ಕರೆ, ಒಂದೆಲೆಹೊನ್ನೆ, ಮೂರೆಲೆಹೊನ್ನೆ, ಮುಂಡಿ, ನೆಲಹೆಬ್ಬಗುಳ್ಳ, ಮೂರೆಲೆಹೊನ್ನೆ, ಋಷಭಕ, ಕಾಕೋಲಿ, ನೆಲನೆಲ್ಲಿ, ಋದ್ಧಿ, ಜೀವಕ, ಇವುಗಳಿಂದ ||೧೦೦|| ಮಾಡಿದ ಹಾಲನ್ನು ಕುಡಿಯಬೇಕು. ಅದು ಕೆಮ್ಮು,, ಜ್ವರ, ದಾಹ, ಕ್ಷತಕ್ಷಯಗಳನ್ನು ಕಳೆಯುವದು. ಅಥವಾ ಆ ಹಾಲಿನಿಂದ ತುಪ್ಪ ತೆಗೆದು, ಅಷ್ಟೇ ಹಾಲು, ಮೂರುಪಾಲು ಕಬ್ಬಿನಹಾಲು ಹಾಕಿ ||೧೦೧|| ಅದರಲ್ಲಿ ಜೀವಕ ಮುಂತಾದ ೧೦ ಜೀವನೀಯಗಣ ಮತ್ತು ದ್ರಾಕ್ಷೆ ಖರ್ಜೂರ ಮುಂತಾದ ಮಧುರ ಫಲಗಳ ಮತ್ತು ಪಿಸ್ತೆ ಮುಂತಾದವುಗಳ ೩–೩ ತೊಲೆ ಕಲ್ಕಗಳನ್ನು ಕೂಡಿಸಿ ಘೃತವು ಸಿದ್ಧವಾಗಿ ತಣ್ಣಗಾಗಲು ಆದರಲ್ಲಿ ||೧೦೨|| ಸಕ್ಕರೆ, ಹಿಪ್ಪಲಿ, ವಂಶಲೋಚನ, ಮೆಣಸು, ಸೇಂಗಾಡೆ, ಇವುಗಳಚೂರ್ಣಗಳನ್ನು ಮತ್ತು ಜೇನುಗಳನ್ನುಹಾಕಿ,ಗೋದೀಹಿಟ್ಟಿನಲ್ಲಿಕಲಿಸಿ ೪–೪ ತೊಲಿ ||೧೦೩|| ಗುಳಿಗೆಗಳನ್ನು ಮಾಡಿ ಪಥ್ಯವನ್ನು ಮಾಡುತ್ತಾ ತಿನ್ನಬೇಕು. ಇದು ಶುಕ್ರದೋಷ, ರಜೋದೋಷ, ಶೋಷ, ಕೆಮ್ಮು ಕ್ಷತಕ್ಷಯ

ಗಳನ್ನು ಕಳೆಯುವದು. ||೧೦೪|| ಸಕ್ಕರಿ, ಸುಂಠಿ, ಬಾಳದಬೇರು, ನೆಲಗುಳ್ಳದ ಬೇರು, ಕಚೋರೆ ಇವುಗಳನ್ನು ಸಮನಾಗಿ ತಕ್ಕೊಂಡು ಕಷಾಯಮಾಡಿ ಸೋಸಿ ತುಪ್ಪವನ್ನು ಹಾಕಿ ಕುಡಿಯಬೇಕು. ||೧೦೫|| ಎಮ್ಮೆ ಆಡು ಕುರಿ ಆಕಳುಗಳ ಹಾಲು, ನೆಲ್ಲೀಹಣ್ಣಿನರಸ, ಇವುಗಳನ್ನು ಸಮನಾಗಿ ತಕ್ಕೊಂಡು ಘೃತವನ್ನು ಸಿದ್ಧಮಾಡಿ ಯೋಗ್ಯ ರೀತಿಯಿಂದ ಕುಡಿಯಬೇಕು. ಇದು ಪಿತ್ತ ಕಾಸವನ್ನು ಕಳೆಯುವದು. ||೧೦೬||

ಕಫಕಾಸ ಚಿಕಿತ್ಸೆಯನ್ನು ಹೇಳುತ್ತಾರೆ—

**ಬಲನಂ ವಮನೇನಾದೌ ಶೋಧಿತಂ ಕಫಕಾಸಿನಮ್ ||**
**ಯವಾನ್ನೈಃಕಟುರೂಕ್ಷೋಷ್ಣೈಃ ಕಫಘ್ನೈಶ್ಚಾಪ್ಯುಪಾಚರೇತ್||೧೦೭||**

**ಪಿಪ್ಪಲೀ ಕ್ಷಾರಕೈರ್ಯೂಷೈಃ ಕೌಲತ್ಥೈರ್ಮೂಲಕಸ್ಯ ಚ ||**
**ಲಘೂನ್ಯನ್ನಾನಿ ಭುಞ್ಜೀತ ರಸೈರ್ವಾ ಕಟುಕಾನ್ವಿತೈಃ ||೧೦೮||**

**ಧಾನ್ವಬೈಲೈಸ್ತಥಾ ಸ್ನೇಹೈಸ್ತಿಲಸರ್ಷಪಬಿಲ್ವಜೈಃ ||**
**ಮಧ್ವನ್ಲೋಷ್ಣಾಂಬು ತಕ್ರಂ ವಾ ಮಧ್ಯಂ ವಾ ನಿಗದಂ ಪಿಬೇತ್ ||೧೦೯||**

**ಪೌಷ್ಕರಾರಗ್ವಧಂ ಮೂಲಂ ಪಟೋಲಂ ತ್ರೈರ್ನಿಶಾಸ್ಥಿತಮ್ ||**
**ಜಲಂ ಮಧುಯುತಂ ಪೇಯಂ ಕಾಲೇಷ್ವನ್ನಸ್ಯ ರಾತ್ರಿಷು ||೧೧೦||**

**ಕಟ್‌ಫಲಂ ಕತ್ತೃಣಂ ಭಾರ್ಗೀಂ ಮುಸ್ತಂ ಧಾನ್ಯವಚಾಭಯಾಃ ||**
**ಶುಂಠೀಂ ಪರ್ಪಟಕಂ ಶೃಙ್ಗೀಂ ಸುರಾಹ್ವಞ್ಚ ಜಲೇ ಶೃತಮ್||೧೧೧||**

**ಮಧುಹಿಂಗುಯುತಂ ಪೇಯಂ ಕಾಸೇ ವಾತಕಫಾತ್ಮಕೇ ||**
**ಕಂಠರೋಗೇ ಮುಖೇ ಶೂನೇ ಶ್ವಾಸಹಿಕ್ಕಾಜ್ವರೇಷು ಚ ||೧೧೨||**

**ಪಾಠಾಶುಂಠೀಶಠೀಮೂರ್ವಾ ಗವಾಕ್ಷೀಮುಸ್ತಪಿಪ್ಪಲೀಃ ||**
**ಪಿಷ್ಟ್ವಾ ಘರ್ಮಾಂಬುನಾ ಹಿಂಗುಸೈಂಧವಾಭ್ಯಾಂ ಯುತಾಃ ಪಿಬೇತ್ ||೧೧೩||**

ಕ್ಷತಕಾಸ ಚಿಕಿತ್ಸೆಯನ್ನು ಹೇಳುತ್ತಾರೆ:—

ಕಾಸಮಾತ್ಯಯಿಕಂ ಮತ್ವಾ ಕ್ಷತಜಂ ತ್ವರಯಾ ಜಯೇತ್ ||೧೩೨||
ಮಧುರೈರ್ಜೀವನೀಯೈಶ್ಚ ಬಲಮಾಂಸವಿವರ್ಧನೈಃ
ಪಿಪ್ಪಲೀಮಧುಕಂ ಪಿಷ್ಟಂ ಕಾರ್ಷಿಕಂ ಸಸಿತೋಪಲಮ್ ||೧೩೩||
ಪ್ರಾಸ್ಥಿಕಂ ಗವ್ಯಮಾಜಞ್ಚ ಕ್ಷೀರಮಿಕ್ಷುರಸಸ್ತಥಾ ||
ಯವಗೋಧೂಮಮೃದ್ವೀಕಾಚೂರ್ಣಮಾಮಲಕಾದ್ ರಸಃ ||೧೩೪||
ಪ್ರಸೃತಾಂಶಾನಿ ತೈಲಞ್ಚ ತತ್ ಸರ್ವಂ ಮೃದುನಾಗ್ನಿನಾ ||
ಪಚೇಲ್ಲೇಹಂ ಘೃತಕ್ಷೌದ್ರಯುಕ್ತಃ ಸ ಕ್ಷತಕಾಸಹಾ ||೧೩೫||
ಕಾಸಹೃದ್ರೋಗಕಾರ್ಶ್ಯೇಷು ಹಿತೋ ವೃದ್ಧಾಲ್ಪರೇತಸೇ ||
ಕ್ಷತಕಾಸಾಭಿಭೂತಾನಾಂ ವೃತ್ತಿಃ ಸ್ಯಾತ್ ಪಿತ್ತಕಾಸಿಕೀ ||೧೩೬||
ಕ್ಷೀರಸರ್ಪಿರ್ಮಧುಪ್ರಾಯಾ ಸಂಸರ್ಗೇ ತು ವಿಶೇಷಣಮ್ ||
ವಾತಪಿತ್ತಾರ್ದಿತೇಽಭ್ಯಂಗೋ ಗಾತ್ರಭೇದೇ ಘೃತೈರ್ಹಿತಃ ||೧೩೭||
ತೈಲೈರ್ಮಾರುತರೋಗಘ್ನೈಃ ಪೀಡ್ಯಮಾನೇ ಚ ವಾಯುನಾ ||
ಹೃತ್ಪಾರ್ಶ್ವಾರ್ತಿಷು ಪಾನಂ ಸ್ಯಾಜ್ಜೀವನೀಯಸ್ಯ ಸರ್ಪಿಷಃ ||೧೩೮||
ಸದಾಹಂ ಕಾಸಿನೋ ರಕ್ತಂ ಷ್ಠೀವತಃ ಸಬಲೇಽನಲೇ ||
ಮಾಂಸೋಚಿತೇಭ್ಯಃ ಕ್ಷಾಮೇಭ್ಯೋ ಲಾವಾದೀನಾಂ ರಸಾ ಹಿತಾಃ
ತೃಷ್ಣಾರ್ತಾನಾಂ ಪಯಶ್ಛಾಗಂ ಶರಮೂಲಾದಿಭಿಃ ಶೃತಮ್ ||
ರಕ್ತೇ ಸ್ರೋತೋಭ್ಯ ಆಸ್ಯಾದ್ ವಾಪ್ಯಾಗತೇ ಕ್ಷೀರಜಂ ಘೃತಮ್
ಪಾನಂ ನಸ್ಯಂ ಯವಾಗೂರ್ವಾ ಶ್ರಾಂತೇ ಕ್ಷಾಮೇ ಹತಾನಲೇ ||
ಸ್ತಂಭಾಯಾಮೇಷು ಮಹತೀಂ ಮಾತ್ರಾಂ ವಾ ಸರ್ಪಿಷಃ ಪಿಬೇತ್
ಕುರ್ಯಾದ್ ವಾ ವಾತರೋಗಘ್ನಂ ಪಿತ್ತರಕ್ತಾವಿರೋಧಿನಮ್ ||
ನಿವೃತ್ತೇ ಕ್ಷತದೋಷೇ ತು ಕಫೇ ವೃದ್ಧ ಉರಃಕ್ಷತೇ ||೧೪೨||
ದಾಲ್ಯತೇ ಕಾಸಿನೋ ಯಸ್ಯ ಸ ಧೂಮಾನ್ ಸಾ ಪಿಬೇದಿಮಾನ್ ||
ದ್ವೇ ಮೇದೇ ಮಧುಕಂ ದ್ವೇ ಚ ಬಲೇ ತೈಃ ಕ್ಷಾಮಲಕ್ತಕೈಃ ||೧೪೩||
ವರ್ತಿತೈರ್ಧೂಮಮಾಪೀಯ ಜೀವನೀಯಘೃತಂ ಪಿಬೇತ್ ||
ಮನಃಶಿಲಾಪಲಾಶಾಜಗಂಧಾತ್ವಕ್ ಕ್ಷೀರಿನಾಗರೈಃ ||೧೪೪||

ವಮನ ಮಾಡಿಸಬೇಕು. ಅದರಿಂದ ದೋಷವು ಹೋಗಲು ಶೀತ ಮತ್ತು ಮಧುರವಾದ ಆಹಾರಗಳನ್ನು ಸೇವಿಸಬೇಕು ||೮೩|| ಪಿತ್ತಕಾಸದಲ್ಲಿ ಕಫವು ತೆಳ್ಳಗೆ ಇದ್ದರೆ ನಿಶೋತ್ತರದ ಕಷಾಯದಲ್ಲಿ ಮಧುರ ಪದಾರ್ಥಗಳನ್ನು ಹಾಕಿ, ಕಫವು ಗಟ್ಟಿಯಿದ್ದರೆ, ಕಹಿಪದಾರ್ಥಗಳನ್ನು ಹಾಕಿ, ವಿರೇಚನಕ್ಕಾಗಿ ವೈದ್ಯನು ಕೊಡಬೇಕು ||೮೪|| ಕಫವು ತೆಳ್ಳಗಿರಲು ಸ್ನಿಗ್ಧ ಮತ್ತು ಶೀತ ಕರ್ಮವನ್ನು ಗಟ್ಟಿಯಿರಲು, ರುಕ್ಷ ಶೀತ ಕರ್ಮವನ್ನು ಮಾಡಬೇಕು. ತಿನ್ನಲು ಸ್ನೇಹ ಹಾಗು ಲೇಹಗಳನ್ನು ಕೊಡಬೇಕು. (೮೫)

ಲೇಹಗಳನ್ನು ಹೇಳುತ್ತಾರೆ,

ಪಿತ್ತಕಾಸಿಗೆ ಶೇಂಗಾಡೆ ಪದ್ಮಬೀಜ, ನೀಲೀಫಲಮಜ್ಜೆ, ಹಿಪ್ಪಲಿ; ೨ ಹಿಪ್ಪಲಿ, ಜೇಕು ಜೇಷ್ಠಮಧು, ದ್ರಾಕ್ಷೆ ಮೂರ್ವಾ (ಹೆಗ್ಗೊರಟಿಗೆ) ಸುಂಠಿ; ||೮೬|| ೩ ಭತ್ತರಳು, ನೆಲ್ಲಿ, ದ್ರಾಕ್ಷೆ, ವಂಶಲೋಚನ, ಹಿಪ್ಪಲಿ, ಸಕ್ಕರೆ; ೪ ಹಿಪ್ಪಲಿ ಪದ್ಮಕಾಷ್ಠ ದ್ರಾಕ್ಷೆ ಹೆಬ್ಬಗುಳ್ಳದರಸ||೮೭|| ೫ ಉತ್ತತ್ತಿ ಹಿಪ್ಪಲಿ ವಂಶಲೋಚನ ನೆಗ್ಗಿಲು ಈ ಪ್ರಕಾರ ಅರ್ಧ ಶ್ಲೋಕಗಳಿಂದ ಹೇಳಿದ ೫ ಲೇಹಗಳನ್ನು ತುಪ್ಪ, ಜೇನುಹಾಕಿ ಕೊಡಬೇಕು. ಕೇವಲ ಪಿತ್ತಕಾಸದಲ್ಲಿ ಸಕ್ಕರೆ ಚಂದನ, ದ್ರಾಕ್ಷೆ ನೆಲ್ಲೀಚೆಟ್ಟು ನೀಲಕಮಲಗಳ ಲೇಹವನ್ನು ಮಾಡಿ ಜೇನುತುಪ್ಪದೊಡನೆ ನೆಕ್ಕಬೇಕು. ಆದರೆ ಅದಕ್ಕೆ ಕಫದ ಅನುಬಂಧವಿದ್ದರೆ ಜೇಕು ಮೆಣಸುಗಳನ್ನು ಹಾಕಬೇಕು. ವಾತದ ಅನುಬಂಧವಿದ್ದರೆ ಆ ಲೇಹದಲ್ಲಿ ತುಪ್ಪಹಾಕಿ ತಕ್ಕೊಳ್ಳಬೇಕು ||೮೯|| ದ್ರಾಕ್ಷೆ ೫೦, ಹಿಪ್ಪಲಿ ೩೦, ಸಕ್ಕರೆ ೪ ತೊಲಿ, ಇವುಗಳ ಚೂರ್ಣವನ್ನು ಜೇನಿನೊಡನೆ ನೆಕ್ಕಬೇಕು ಅಥವಾ ಆಕಳಮಲದ ರಸವನ್ನು ೪ ಪಾಲು ಹಾಲಿನಲ್ಲಿ ಕುದಿಸಿ ನೆಕ್ಕಬೇಕು ||೯೦|| ದಾಲಚಿನ್ನಿ, ಯಾಲಕ್ಕಿ, ತ್ರಿಕಟು, ದ್ರಾಕ್ಷೆ, ಮೋಡಿ, ಪುಷ್ಕರಮೂಲ ಬತ್ತದರಳು, ಜೇಕು, ಕಚೋರೆ, ರಾಸ್ನೆ, ನೆಲ್ಲೀಚೆಟ್ಟು, ತಾರೀಕಾಯಿಗಳಿಂದ ಮಾಡಿದ ||೯೧|| ಲೇಹವನ್ನು ಸಕ್ಕರೆ, ಜೇನು ಮತ್ತು ತುಪ್ಪಗಳನ್ನು ಹಾಕಿ ಕೊಡಲು ಕೆಮ್ಮು ಹೋಗುವದು. ಅದರಂತೆ ದಮ್ಮು, ಬಿಕ್ಕು, ಕ್ಷಯ, ಹೃದ್ರೋಗಗಳೂ ನಾಶಹೊಂದುವವು. ||೯೨||

ಶೃಂಗಿ, ದೇವದಾರು, ಇವುಗಳ ಕಷಾಯದಲ್ಲಿ ಜೇನು ಹಿಂಗುಗಳನ್ನು ಹಾಕಿ ಕುಡಿಯಬೇಕು.||೧೧|| ಇದು ವಾತಕಫದ, ಕೆಮ್ಮು, ಕಂಠರೋಗ, ಮುಖದ ಬಾವು, ಶ್ವಾಸ, ಬಿಕ್ಕು, ಜ್ವರಗಳನ್ನು ಕಳೆಯುವದು. ||೧೨|| ಅಗಳಸುಂಠಿ, ಸುಂಠಿ, ಕಚೋರೆ, ಹೆಗ್ಗೊರಟಿಗೆ, ಕಾಡಕವಡಿ, ಜೇಕು, ಹಿಪ್ಪಲಿ, ಇವುಗಳನ್ನು ಬಿಸಿನೀರಿನಲ್ಲಿ ಅರೆದು, ಇಂಗು ಸೈಂಧವಗಳನ್ನು ಹಾಕಿಕುಡಿಯಬೇಕು ||೧೩|| ಸುಂಠಿ, ಅತಿವಿಷ, ಜೇಕು, ಕಾಕಡಶಿಂಗಿ, ಅಣಲೆ, ಕಚೋರೆ ಇವುಗಳ ಚೂರ್ಣ ವನ್ನು ಮೇಲಿನಂತೆ ಕುಡಿಯಬೇಕು. ||೧೪|| ೧ತೊಲಿ ಹಿಪ್ಪಲೀ ಚೂರ್ಣ ವನ್ನು ಅಷ್ಟೇ ಸಕ್ಕರಿ ಕೂಡಿಸಿ ಎಣ್ಣೆಯಲ್ಲಿ ಕರಿದು ಹುರಳೀ ಕಷಾಯದೊಡನೆ ಕುಡಿಯಬೇಕು. ಇದು ಕಫಕಾಸವನ್ನು ಕಳೆಯುವದು. ||೧೫|| ಎಲವರಿಗೆ ರಸ, ಕುದುರೆಲದ್ದಿಯ ರಸ, ಭೃಂಗರಾಜ ರಸ, ಬದನೇಕಾಯಿ ರಸ, ಕರೇ ತುಳಸಿರಸ, ಇವುಗಳಲ್ಲಿ ಜೇನುಕೂಡಿಸಿ ಕೊಡಬೇಕು. ಇವು ಕಫಕಾಸವನ್ನು ಕಳೆಯುವವು. ||೧೬|| ದೇವದಾರು, ಕಚೋರೆ, ರಾಸ್ನೆ, ಕರ್ಕಟಶೃಂಗಿ, ನೆಲಇಂಗಳ ಇವುಗಳ ಲೇಹ ಅಥವಾ ಹಿಪ್ಪಲಿ, ಸುಂಠಿ, ಜೇಕು, ಅಣಲೆ, ನೆಲ್ಲಿ, ಕಲ್ಲುಸಕ್ಕರೆಗಳ ||೧೭|| ಲೇಹದಲ್ಲಿ ಜೇನು ಎಳ್ಳೆಣ್ಣೆಗಳನ್ನು ಕೂಡಿಸಿ ಕೊಡ ಬೇಕು. ಅದು ವಾತಕಫದ ಕೆಮ್ಮನ್ನು ಕಳೆಯುವದು. ೧ ಹಿಪ್ಪಲಿ, ಮೋಡಿ, ಚಿತ್ರಕ, ಗಜಹಿಪ್ಪಲಿಗಳಿಂದ ||೧೮|| ಅಥವಾ ೨ ಅಣಲೆ, ನೆಲನೆಲ್ಲಿ, ನೆಲ್ಲಿ, ಭದ್ರಮುಸ್ತೆ, ಹಿಪ್ಪಲಿ ಇವುಗಳಿಂದ ಅಥವಾ ೩ ದೇವದಾರು, ಅಣಲೆ, ಜೇಕು, ಹಿಪ್ಪಲಿ, ಸುಂಠಿಗಳಿಂದ ||೧೯|| ಅಥವಾ ೪ ಕಾಡಕವಡಿ, ಹಿಪ್ಪಲಿ, ಜೇಕು, ನಿಶೋತ್ತರ ಇವುಗಳಿಂದ ಮಾಡಿದ ೪ ಲೇಹಗಳನ್ನು ವೈದ್ಯನು ಜೇನಿನೊಡನೆ ನೆಕ್ಕಿಸಬೇಕು. ಇವು ಕಫಕಾಸಗಳನ್ನು ಕಳೆಯುವವು. ||೨೦|| ಕಾಚವಲಣ, ಅಣಲೆ, ನೆಲ್ಲಿ, ಹಿಪ್ಪಲಿ, ಜವಖಾರ, ಸುಂಠಿ ಇವುಗಳ ಚೂರ್ಣವನ್ನು ತುಪ್ಪ ದೊಡನೆ ನೆಕ್ಕಿಸಬೇಕು. ಇದು ವಾತಕಫದ ಕೆಮ್ಮುಗಳನ್ನು ಕಳೆಯುವದು. ||೨೧|| ದಶಮೂಲಾದಿ ಘೃತ– ದಶಮೂಲದ ಕಷಾಯ ೫೧೨ ತೊಲಿ, ತುಪ್ಪ ೧೨೮ ತೊಲಿ ಪುಷ್ಕರಮೂಲ, ಕಚೋರೆ, ಬಿಲ್ವ, ತುಳಸಿ, ತ್ರಿಕಟು, ಇಂಗು ಇವುಗಳ ಚೂರ್ಣವನ್ನು ೧–೧ ತೊಲಿ ಹಾಕಿ ||೨೨|| ಘೃತವನ್ನು ಸಿದ್ಧಮಾಡಿ ಕುಡಿದು ಮೇಲೆ ಪೇಯವನ್ನು ಕುಡಿಯಬೇಕು. ಅದು ಕಫವಾತದ ಕೆಮ್ಮುಗಳನ್ನು ಮತ್ತು ಕಫವಾತದ ಎಲ್ಲ ಶ್ವಾಸರೋಗಗಳನ್ನು ಕಳೆಯುವದು. ||೨೩||

**ಕಂಟಕಾರೀ ಘೃತವನ್ನು ಹೇಳುತ್ತಾರೆ—**

ಬೇರು-ಎಲೆ-ಟೊಂಗೆಗಳು ಸಹಿತ ನೆಲಗುಳ್ಳದ ರಸವನ್ನು ೫೧೨ ತೊಲಿ ತಕ್ಕೊಂಡು ಅದರಲ್ಲಿ ೧೨೮ ತೊಲಿ ಘೃತವನ್ನು ಮತ್ತು ಕಳ್ಳಂಗಡ್ಲೆ, ತ್ರಿಕಟು, ವಾವಡಿಂಗ, ಕಚೋರೆ, ಚಿತ್ರಕ, ||೧೨೪|| ಕಾಚಲವಣ, ಜವಖಾರ, ಬಿಲ್ವ, ನೆಲ್ಲಿ, ಪುಷ್ಕರಮೂಲ, ಬಿಳೀಗಣಜಲಬೇರು, ಹೆಬ್ಬಗುಳ್ಳ, ಅಣಲೆ, ಅಜವಾನ, ದಾಳಿಂಬ, ಋದ್ಧಿ ||೧೨೫|| ದ್ರಾಕ್ಷೆ ಕೆಂಪುಗಣಜಲಬೇರು,ಚವಕ, ನೆಲಇಂಗಳ, ಆಮ್ಲವೇತಸ, ಕಾಕಡಶಿಂಗಿ, ನೆಲನೆಲ್ಲಿ, ಭಾರಂಗಮೂಳ, ರಾಸ್ನೆ, ನೆಗ್ಗಿಲುಗಳ ಕಲ್ಕವನ್ನು ೩೨ ತೊಲಿ ಹಾಕಿ ೧೨೮ ತೊಲಿ ತುಪ್ಪವನ್ನು ಸಿದ್ಧಪಡಿಸಬೇಕು. ||೧೨೬|| ಈ ಕಂಟಕಾರೀ ಘೃತವು ಎಲ್ಲ ಕೆಮ್ಮು, ಬಿಕ್ಕು, ಶ್ವಾಸಗಳಲ್ಲಿ ಪ್ರಶಸ್ತವಾಗಿದೆ. ಕಫವ್ಯಾಧಿಗಳನ್ನು ನಿಶ್ಚಯವಾಗಿ ಗುಣಪಡಿಸುವದು. ||೧೨೭||

**ಕುಲತ್ಥಾದಿ ಘೃತ—**

ಹುರಳೀರಸದಲ್ಲಿ ಪಂಚಮೂಲದ ಕಲ್ಕವನ್ನು ಹಾಕಿ ಮಾಡಿದ ಘೃತವು ಕಫರೋಗವನ್ನು ಕಳೆಯುವದು. ವಾತಕಾಸಗಳಿಗೆ ಹೇಳಿದ ಧೂಮಗಳನ್ನೇ ಇದಕ್ಕೂ ಕೊಡಬೇಕು. ||೧೨೮|| ಕಹಿಹೀರೆಯ ಮಜ್ಜೆಯನ್ನು ಮನಶಿಲ ದೊಡನೆ ಧೂಮಪಾನ ಮಾಡಬೇಕು. ಪಿತ್ತದ ಅನುಬಂಧವುಳ್ಳ ಕಫಕಾಸ ದಲ್ಲಿ ತಮಕಶ್ವಾಸವು ಬಂದರೆ ||೧೨೯|| ಅವಸ್ಥಾನುಸಾರವಾಗಿ ಪಿತ್ತಕಾಸ ಚಿಕಿತ್ಸೆಯನ್ನು ಮಾಡಬೇಕು. ಕಫಾನುಬಂಧವುಳ್ಳ ವಾತಕಾಸದಲ್ಲಿ ಕಫ ನಾಶಕ ಚಿಕಿತ್ಸೆಯನ್ನು ಮಾಡಬೇಕು ||೦೩೦|| ಪಿತ್ತಾನುಬಂಧವುಳ್ಳ ವಾತಕಫ ಕಾಸಗಳಲ್ಲಿ ಪಿತ್ತನಾಶಕ ಚಿಕಿತ್ಸೆಯನ್ನು ಮಾಡಬೇಕು. ವಾತಕಫಾತ್ಮಕ ಕಾಸವು ಆರ್ದ್ರವಿದ್ದರೆ ರುಕ್ಷ, ಶುಷ್ಕವಿದ್ದರೆ ಸ್ನಿಗ್ಧ, ಅನ್ನಪಾನವನ್ನು ಮಾಡ ಬೇಕು. ||೧೩೧|| ಪಿತ್ತಕೂಡಿದ ಕಫಕಾಸದಲ್ಲಿ ಕಹಿದ್ರವ್ಯಕೂಡಿದ ಅನ್ನಪಾನ ಗಳನ್ನು ಕೊಡಬೇಕು. || ೧೩೧|| ||

ನಾಗರಾತಿವಿಷಾಮುಸ್ತಂ ಶೃಂಗ್ಯೋ ಕರ್ಕಟಕಸ್ಯ ಚ ॥
ಹರೀತಕೀ ಶಠೀ ಚೈವ ತೇನೈವ ವಿಧಿನಾ ಪಿಬೇತ್ ॥೧೧೪॥

ತೈಲೇ ಭೃಷ್ಟಾಂ ಪಿಪ್ಪಲ್ಯಾಃ ಕಲ್ಕಾಕ್ಷಂ ಸಸಿತೋಪಲಮ್ ॥
ಪಿಬೇದ್ವಾ ಕಫಕಾಸಘ್ನಂ ಕುಲತ್ಥಸಲಿಲಪ್ಲುತಮ್ ॥೧೧೫॥

ಕಾಸಮರ್ದಾಶ್ವವಿಡ್ಭೃಙ್ಗರಾಜವಾರ್ತಾಕಜಾ ರಸಾಃ ॥
ಕ್ಷೌದ್ರಯುಕ್ತಾಃ ಕಫಹರಾಃ ಸುರಸಸ್ಯಾಸಿತಸ್ಯ ಚ ॥೧೧೬॥

ದೇವದಾರುಶಠೀರಾಸ್ನಾಕರ್ಕಟಾಖ್ಯಾ ದುರಾಲಭಾಃ ॥
ಪಿಪ್ಪಲೀ ನಾಗರಂ ಮುಸ್ತಂ ಪಥ್ಯಾಧಾತ್ರೀಸಿತೋಪಲಾಃ ॥೧೧೭॥

ಮಧುತೈಲಯುತಾವೇತೌ ಲೇಹೌ ವಾತಾನುಗೇ ಕಫೇ ॥
ಪಿಪ್ಪಲೀ ಪಿಪ್ಪಲೀಮೂಲಂ ಚಿತ್ರಕಂ ಹಸ್ತಿಪಿಪ್ಪಲೀ ॥೧೧೮॥

ಪಥ್ಯಾತಾಮಲಕೀಧಾತ್ರೀಭದ್ರಮುಸ್ತಾನಿ ಪಿಪ್ಪಲೀ ॥
ದೇವದಾರ್ವಭಯಾ ಮುಸ್ತಂ ಪಿಪ್ಪಲೀ ವಿಶ್ವಭೇಷಜಮ್ ॥೧೧೯॥

ವಿಶಾಲಾ ಪಿಪ್ಪಲೀ ಮುಸ್ತಂ ತ್ರಿವೃತಾ ಚೇತಿ ಲೇಹಯೇತ್ ॥
ಚತುರೋ ಮಧುನಾ ಲೇಹಾನ್ ಕಫಕಾಸಹರಾನ್ ಭಿಷಕ್ ॥೧೨೦॥

ಸೌವರ್ಚಲಾಭಯಾಧಾತ್ರೀಪಿಪ್ಪಲೀಕ್ಷಾರನಾಗರಮ್ ॥
ಚೂರ್ಣಿತಂ ಸರ್ಪಿಷಾ ವಾತಕಫಕಾಸಹರಂ ಪಿಬೇತ್ ॥೧೨೧॥

ದಶಮೂಲಾದಿಘೃತಃ—

ದಶಮೂಲಾಢಕೇ ಪ್ರಸ್ಥಂ ಘೃತಸ್ಯಾಕ್ಷಸಮೈಃ ಪಚೇತ್ ॥
ಪುಷ್ಕರಾಹ್ವಶಠೀಬಿಲ್ವಸುರಸವ್ಯೋಷಹಿಙ್ಗುಭಿ ॥೧೨೨॥
ಪೇಯಾನುಪೇಯಂ ತತ್ಪೇಯಂ ಕಾಸೇ ವಾತಕಫಾತ್ಮಕೇ ॥
ಶ್ವಾಸರೋಗೇಷು ಸರ್ವೇಷು ಕಫವಾತಾತ್ಮಕೇಷು ಚ ॥೧೨೩॥

ಕಂಟಕಾರೀ ಘೃತಃ—

ಸಮೂಲಪತ್ರಶಾಖಾಯಾಃ ಕಂಟಕಾರ್ಯಾ ರಸಾಢಕೇ ॥
ಘೃತಪ್ರಸ್ಥಂ ಬಲಾವ್ಯೋಷವಿಡಂಗಶಠಿಚಿತ್ರಕೈಃ ॥೧೨೪॥
ಸೌವರ್ಚಲಯವಕ್ಷಾರಬಿಲ್ವಾಮಲಕಪೌಷ್ಕರೈಃ ॥
ವೃಶ್ಚೀರಬೃಹತೀಪಥ್ಯಾಯವಾನೀದಾಡಿಮರ್ದ್ಧಿಭಿಃ ॥೧೨೫॥

**ಭಾವಯಿತ್ವಾ ಪಿಬೇತ್ಕ್ಷೌಮಂ ಸಸಿತೇಕ್ಷುಗುಡೋದಕಮ್ ||**
**ಪಿಷ್ಟ್ವಾ ಮನಃಶಿಲಾಂ ತುಲ್ಯಾಮಾರ್ದ್ರಯಾ ವಟಶುಙ್ಗಯಾ ||೧೪೫||**
**ಸಸರ್ಪಿಷ್ಕಂ ಪಿಬೇತ್ಧೂಮಂ ತಿತ್ತಿರಿಪ್ರತಿಭೋಜನಮ್ ||**
**ಭಾವಿತಂ ಜೀವನೀಯೈರ್ವಾ ಕುಲಿಂಙ್ಗಾಂಡರಸಾಯುತೈಃ ||೧೪೬||**
**ಕ್ಷೌಮಂ ಧೂಮಂ ಪಿಬೇತ್ಕ್ಷೀರಂ ಶೃತಂ ವಾಽಯೋಗುಡೈರನು ||**

**ಅರ್ಥ:—** ವೈದ್ಯನು ಕ್ಷತಕಾಸವು ಭಯಂಕರವೆಂಬುದನ್ನು ಲಕ್ಷ ದಲ್ಲಿಟ್ಟು ಅದನ್ನು ತೀವ್ರವಾಗಿ ||೧೩೨|| ಬಲ ಮತ್ತು ಮಾಂಸವರ್ಧಕವಾದ ಮಧುರ ಮತ್ತು ಜೀವನೀಯ ಔಷಧಗಳನ್ನು ಕೊಟ್ಟು ಗೆಲ್ಲಬೇಕು.|| ೧೩೨|| ||

**ಪಿಪ್ಪಲ್ಯಾದಿ ಲೇಹವನ್ನು ಹೇಳುತ್ತಾರೆ—**

ಹಿಪ್ಪಲೀಚೂರ್ಣ ೧ ತೊಲಿ, ಜೇಷ್ಠಮಧು ೧ ತೊಲಿ, ಕಲ್ಲುಸಕ್ಕರೆ ೧ ತೊಲಿ ||೧೩೩|| ಆಕಳ ತುಪ್ಪ ೧೨ ತೊಲಿ ಆಡಿನಹಾಲು ೧೨ ತೊಲಿ ಕಬ್ಬಿನರಸ ೧೨ ತೊಲಿ ಜವೆಯ ಚೂರ್ಣ, ಗೋದಿಯಚೂರ್ಣ, ದ್ರಾಕ್ಷೆಯ ಚೂರ್ಣ, ನೆಲ್ಲಿಯರಸ, ||೧೩೪|| ಎಣ್ಣೆ ಇವುಗಳನ್ನು ೮—೮ ತೊಲಿ ಇವೆಲ್ಲ ವನ್ನು ಕೂಡಿಸಿ ಸಣ್ಣ ಉರಿಹಚ್ಚಿ ಅವಲೇಹವನ್ನು ಮಾಡಬೇಕು, ತುಪ್ಪ ಜೇನಿ ನೊಡನೆ ಇದನ್ನು ತಕ್ಕೊಂಡರೆ ಇದು ಕ್ಷತಕಾಸ ||೧೩೫|| ಕೆಮ್ಮು, ಹೃದ್ರೋಗ, ಕಾರ್ಶ್ಯ ರೋಗಿಗಳಿಗೂ, ವೃದ್ಧರಿಗೂ ಶುಕ್ರಕ್ಷಯಗಳಿಗೂ ಹಿತಕರವಾಗು ವದು. ( ೧೩೫|| )

ಕ್ಷತಕಾಸಿಗಳಿಗೆ ಪಿತ್ತಕಾಸಿಗಳ ಚಿಕಿತ್ಸೆಯನ್ನೇ ಮಾಡಬೇಕು (೧೩೬) ಹಾಲು ತುಪ್ಪ ಜೇನುಗಳನ್ನು ಹೆಚ್ಚಾಗಿ ಕೊಡಬೇಕು. ಬೇರೆ ದೋಷಗಳ ಸಂಸರ್ಗವಿದ್ದರೆ (ಕೆಳಗೆ ಹೇಳಿದ) ಹೆಚ್ಚಿನ ಚಿಕಿತ್ಸೆಯನ್ನು ಮಾಡಬೇಕು. ವಾತಪಿತ್ತಗಳಿಂದ ನೋಯುವ ಅಂಗಗಳಿಗೆ ತುಪ್ಪಗಳಿಂದ ಅಭ್ಯಂಗ ಮಾಡ ಬೇಕು. (೧೩೭) ವಾತದಿಂದ ನೋಯುವ ಶರೀರಕ್ಕೆ ವಾತನಾಶಕತೈಲಗಳಿಂದ ಅಭ್ಯಂಗ ಮಾಡಬೇಕು. ಎದೆ ಪಾರ್ಶ್ವಗಳಲ್ಲಿ ಶೂಲವಿದ್ದರೆ, (ವಾತರಕ್ತದಲ್ಲಿ ಹೇಳಿದ) ಜೀವನೀಯ ಘೃತವನ್ನು ಕುಡಿಸಬೇಕು. (೧೩೮) ದಾಹಯುಕ್ತ ವಾದ ರಕ್ತವನ್ನು ಉಗಳುವ ಕಾಸರೋಗಿಯ ಅಗ್ನಿಯು ಪ್ರಜ್ವಲಿತವಿದ್ದರೆ, ಮಾಂಸಾಹಾರದ ಅಭ್ಯಾಸವಿದ್ದರೆ, ಮತ್ತು ಅವನು ಕೃಶನಿದ್ದರೆ, ಅವನಿಗೆ ಲಾವ ಮುಂತಾದ (ವಿಷ್ಕಿರ) ಪ್ರಾಣಿಗಳ ಮಾಂಸವು ಹಿತಕರವು. (೧೩೯) ನೀರಡಿಕೆ

ಯಾದರೆ ತೃಣಪಂಚಮೂಲದಿಂದ ಸಿದ್ಧಮಾಡಿದ ಆಡಿನ ಹಾಲನ್ನು ಕೊಡಬೇಕು. ಬಾಯಿಂದ ಅಥವಾ ಬೇರೆ (ಮೂಗು ಮುಂತಾದ) ಸ್ರೋತಸ್ಸುಗಳಿಂದ ರಕ್ತವು ಬೀಳುತ್ತಿದ್ದರೆ, ಹಾಲಿನಿಂದ ತೆಗೆದ ಘೃತದ (೧೪೦) ಪಾನನಸ್ಯಗಳನ್ನು ಮಾಡಬೇಕು. ದಣಿದ, ಕೃಶ, ಅಗ್ನಿಮಾಂದ್ಯವುಳ್ಳ ರೋಗಿಗಳಿಗೆ ಪೇಯವನ್ನು ಕೊಡಬೇಕು. ಶರೀರವು ಶಿಟಿಯುತ್ತಿದ್ದರೆ, ಮತ್ತು ಬಹಳ ಆಯಾಸವೆನಿಸುತ್ತಿದ್ದರೆ, ಘೃತವನ್ನು ದೊಡ್ಡ ಪ್ರಮಾಣದಿಂದ (ಒಂದು ಹಗಲು ರಾತ್ರಿಗಳಲ್ಲಿ ಪಚನವಾಗುವಷ್ಟು ಅಂದರೆ ಸುಮಾರು ೩೨ ತೊಲಿ) ಕೊಡಬೇಕು. (೧೪೧) ಅಥವಾ ಪಿತ್ತರಕ್ತಗಳಿಗೆ ವಿರೋಧವಾಗದಂತೆ ವಾತನಾಶಕ ಔಷಧವನ್ನು ಕೊಡಬೇಕು. ಉರಃಕ್ಷತದಲ್ಲಿ ಕ್ಷತದೋಷಗಳು ಹೋಗಿ ಕಫವು ಹೆಚ್ಚಾಗಲು ಎದೆಯು ಕ್ಷತಸ್ಥಾನದಲ್ಲಿ ನೋಯುತ್ತದೆ. (೧೪೨) ಆಗ್ಗೆ ಈ (ಕೆಳಗೆ ಹೇಳಿದ) ಧೂಮಗಳನ್ನು ಕುಡಿಯಬೇಕು.

**ಧೂಮಗಳನ್ನು ಹೇಳುತ್ತಾರೆ—**

ಮೇದೆ, ಮಹಾಮೇದೆ, ಜೇಷ್ಠಮಧು, ಬಲಾ, ಅತಿಬಲಾ, ಇವುಗಳ ಕಲ್ಕವನ್ನು ನಾರಿನಮಡಿ ಅರಗುಗಳಿಗೆ ಸವರಿ ಬತ್ತಿಯಂತೆ ಮಾಡಿ (೧೪೩) ಅದರ ಧೂಮವನ್ನು ಕುಡಿದು ಆಮೇಲೆ ಜೀವನೀಯ ಘೃತವನ್ನು ಕುಡಿಯಬೇಕು. ಮನಶಿಳ, ಮುತ್ತಲಬೀಜ, ಅಡವಿಯ ತುಳಸಿ, ವಂಶಲೋಚನ, ಸುಂಠಿ ಇವುಗಳ ಚೂರ್ಣವನ್ನು (೧೪೪) ನಾರುಮಡಿಗೆ ಲೇಪಿಸಿ, ಅದನ್ನು ಶರಾವಸಂಪುಟದಲ್ಲಿಟ್ಟು ಧೂಮವನ್ನು ತಕ್ಕೊಳ್ಳಬೇಕು. ಮೇಲೆ ಸಕ್ಕರೆ ಹಾಕಿದ ನೀರು, ಕಬ್ಬಿನರಸ, ಬೆಲ್ಲದ ನೀರುಗಳನ್ನು ಕುಡಿಯಬೇಕು. ಹಸಿಯಿದ್ದ ಆಲದ ಜಡೆಯಲ್ಲಿ ಅಷ್ಟೇ ಮನಶೀಳವನ್ನು ಹಾಕಿ ಅರೆದು (೧೪೫) ತುಪ್ಪ ಕೂಡಿಸಿ, ಅದರ ಧೂಮವನ್ನು ಕುಡಿಯಬೇಕು. ಆನಂತರ ತಿತ್ತಿರಮಾಂಸವನ್ನು ತಿನ್ನಬೇಕು. ಜೀವನೀಯಗಣ, ಗುಬ್ಬಿಯ ತತ್ತಿಯ ರಸಗಳ ಭಾವನೆ ಕೊಟ್ಟ ನಾರುಮಡಿಯ ಧೂಮವನ್ನು ಕುಡಿಯಬೇಕು. (೧೪೬) ಅದರಮೇಲೆ ಬೆಂಕಿಯಿಂದಅಥವಾಕಾದಕಬ್ಬಿಣದ ಗುಂಡುಗಳನ್ನು ಹಾಕಿ ಕುದಿಸಿದಹಾಲನ್ನು ಕುಡಿಯಬೇಕು. (೧೪೭||)

**ಕ್ಷಯಕಾಸ ಚಿಕಿತ್ಸೆಯನ್ನು ಹೇಳುತ್ತಾರೆ—**

**ಸಂಪೂರ್ಣರೂಪಂ ಕ್ಷಯಜಂ ದುರ್ಬಲಸ್ಯ ವಿವರ್ಜಯೇತ್ ||೧೪೭||**

ಸರ್ವೋತ್ಥಿತಂ ಬಲವತಃ ಪ್ರತ್ಯಾಖ್ಯಾಯಾಚರೇತ್‌ಕ್ರಿಯಾಮ್ ||
ತಸ್ಯ ಬೃಂಹಣಮೇವಾದೌ ಕುರ್ಯಾದಗ್ನೇಶ್ಚ ದೀಪನಮ್ ||೧೪೮||

ಬಹುದೋಷಾಯ ಸಸ್ನೇಹಂ ಮೃದು ದದ್ಯಾದ್‌ವಿರೇಚನಮ್ ||
ಶಂಪಾಕೇನ ತ್ರಿವೃತಯಾ ಮೃದ್ವೀಕಾರಸಯುಕ್ತಯಾ ||೧೪೯||

ತಿಲ್ವಕಸ್ಯ ಕಷಾಯೇಣ ವಿದಾರೀಸ್ವರಸೇನ ಚ ||
ಸರ್ಪಿಃ ಸಿದ್ಧಂ ಪಿಬೇದ್‌ಯುಕ್ತ್ಯಾ ಕ್ಷೀಣದೇಹ ವಿಶೋಧನಮ್
||೧೫೦||

ಹಿತಂ ತದ್‌ದೇಹಬಲಯೋರಸ್ಯ ಸಂರಕ್ಷಣಂ ಮತಮ್ ||
ಪಿತ್ತೇ ಕಫೇ ಚ ಸಂಕ್ಷೀಣೇ ಪರಿಕ್ಷೀಣೇಷು ಧಾತುಷು ||೧೫೧||

ಘೃತಂ ಕರ್ಕಟಕಕ್ಷೀರ ದ್ವಿಬಲಾಸಾಧಿತಂ ಪಿಬೇತ್ ||
ವಿದಾರೀಭಿಃ ಕದಂಬೈರ್ವಾ ತಾಲಸಸ್ಯೈಸ್ತಥಾ ಘೃತಮ್ ||೧೫೨||

ಶೃತಂ ಪಯಶ್ಚ ಮೂತ್ರಸ್ಯ ವೈವರ್ಣ್ಯೇ ಕೃಚ್ಛ್ರನಿರ್ಗಮೇ ||
ಶೂನೇ ಸವೇದನೇ ಮೇಢ್ರೇ ಪಾಯೌ ಸಶ್ರೋಣಿವಂಕ್ಷಣೇ ||೧೫೩||

ಘೃತಮಂಡೇನ ಮಧುನಾಽನುವಾಸ್ಯೋ ಮಿಶ್ರಕೇಣ ವಾ ||
ಜಾಙ್ಗಲೈಃ ಪ್ರತಿಭುಕ್ತಸ್ಯ ವರ್ತಕಾದ್ಯಾ ಬಿಲೇಶಯಾಃ ||೧೫೪||

ಕ್ರಮಶಃ ಪ್ರಸಹಾಶ್ಚೈವ ಪ್ರಯೋಜ್ಯಾಃ ಪಿಶಿತಾಶಿನಃ ||
ಔಷ್ಣ್ಯಾತ್ ಪ್ರಮಾಥಿಭಾವಾಚ್ಚ ಸ್ರೋತೋಭ್ಯಶ್ಚ್ಯಾವಯಂತಿ ಚ
||೧೫೫||

ಕಫಂ ಶುದ್ಧಶ್ಚ ತೈಃ ಪುಷ್ಟಿಂ ಕುರ್ಯಾತ್‌ಸಮ್ಯಗ್‌ವಹನ್ ರಸಂ ||

**ಅರ್ಥ:—** ಅಶಕ್ತನಿಗೆ ಉಂಟಾದ ಕ್ಷಯಜಕಾಸದಲ್ಲಿ ಎಲ್ಲ ಲಕ್ಷಣಗಳು ಇದ್ದರೆ, ಅದನ್ನು ಬಿಡಬೇಕು. (೧೪೭) ಬಲಿಷ್ಠನಿಗೆ ಉಂಟಾದದ್ದು, ಅದು ಹೊಸದು ಇದ್ದರೆ ಮಾತ್ರ, ಅದರಲ್ಲಿ ಸಂಪೂರ್ಣ ಲಕ್ಷಣಗಳಿದ್ದರೂ 'ನೆಟ್ಟಗಾಗುವುದೋ' ಎಂದು ಹೇಳಲು ಬರುವಂತಿಲ್ಲವೆಂದು ಹೇಳಿ, ಚಿಕಿತ್ಸಿಸಬೇಕು. ಅವನಿಗೆ ಮೊದಲು ಬೃಂಹಣ ಮತ್ತು ಅಗ್ನಿದೀಪಕವಾದ ಚಿಕಿತ್ಸೆಯನ್ನು ಮಾಡಬೇಕು. (೧೪೮) ದೋಷವು ಬಹಳವಿದ್ದರೆ ಸ್ನಿಗ್ಧವಾದ(ಮುಂದೆಹೇಳಿದ) ಮೃದುವಿರೇಚನವನ್ನು ಕೊಡಬೇಕು. ದ್ರಾಕ್ಷಾರಸ, ಲೋಧ್ರದಕಷಾಯ; ನೆಲಗುಂಬಳದ ರಸ, ಇವುಗಳನ್ನು ಘೃತದ ೪ ನೇ ಪಾಲು ಹಾಕಿ ತಕ್ಕೊಂಡು,

ಅದರಲ್ಲಿ ಕಕ್ಕಿಯ ತಿಳಲು ನಿಶೋತ್ತರಗಳ ಚೂರ್ಣವನ್ನು ಘೃತದ ೪ ಹಾಕಿ (೧೪೯) ಸಿದ್ಧಮಾಡಿದ ಘೃತವನ್ನು ಯೋಗ್ಯ ಪ್ರಮಾಣದಿಂದಕುಡಿಯಬೇಕು. ಇದು ಕ್ಷೀಣವಾದ ದೇಹಕ್ಕೆ ಶೋಧನವಾಗಿದೆ. (೧೫೦) ಅದು ಅವನ ದೇಹ ಮತ್ತು ಬಲಗಳಿಗೆ ಸಂರಕ್ಷಣಮಾಡುವದರಲ್ಲಿ ಒಳ್ಳೇದು. ಕ್ಷಯಕಾಸದಲ್ಲಿ ಎಲ್ಲ ಧಾತುಗಳೂ ಮತ್ತು ಪಿತ್ತಕಫಗಳೂ ಕ್ಷೀಣವಾಗಿದ್ದರೆ (೧೫೧) ಕಾಕಡ ಶಿಂಗಿ, ಬಲಾ; ಅತಿಬಲೆಗಳ ಕಲ್ಕವನ್ನು ಹಾಕಿ ಅದರ ನಾಲ್ಕು ಪಾಲು ಹಾಲಿನಲ್ಲಿ ಸಿದ್ಧಮಾಡಿದ ಘೃತವನ್ನು ಕುಡಿಯಬೇಕು. ಮೂತ್ರಕೃಚ್ಛ್ರ, ಮತ್ತು ಮೂತ್ರದ ವಿವರ್ಣತೆಗಳಿದ್ದರೆ, ನೆಲಗುಂಬಳ ಕಲ್ಕ ಹಾಕಿ ಮಾಡಿದ ಘೃತ ಅಥವಾ ಕದಬಂದ ಕಲ್ಕಹಾಕಿ; ಅಥವಾ ತಾಲದ ಅಂಕುರದ ಕಲ್ಕಹಾಕಿ, ಮಾಡಿದ ಘೃತ ಅಥವಾ ದುಗ್ಧಗಳನ್ನು ಕುಡಿಯಬೇಕು. (೧೫೨) ಕ್ಷಯಕಾಸಿಯ ಶಿಶ್ನ, ಗುದ, ಗೆಜ್ಜೆಗಳಲ್ಲಿ ಶೂಲ ಮತ್ತು ಬಾವುಗಳಿದ್ದರೆ (೧೫೩) ತುಪ್ಪ ಜೇನು ತುಪ್ಪಗಳಿಂದ ಅಥವಾ ತುಪ್ಪ ತೈಲಗಳಿಂದ ಅನುವಾಸನಬಸ್ತಿ ಕೊಡಬೇಕು. ಆಮೇಲೆ ಅವನು ಮಾಂಸಾಹಾರಿ ಇದ್ದರೆ ಜಾಂಗಲಮಾಂಸ ರಸವನ್ನು ತಿನ್ನಲಿಕ್ಕೆ ಹಾಕಿ, ವರ್ತಕ (ಕೆಂಡೆಲಿಹಕ್ಕಿ) ಮಂತಾದ ಬಿಲೇಶಯ (ಹೊದರುಗಳಲ್ಲಿರುವಪ್ರಾಣಿ) (೧೫೪) ಪ್ರಸಹ (ಕಸಿದುತಿನ್ನುವ ಮೃಗ ಪಕ್ಷಿ) ಪ್ರಾಣಿಗಳ ಮಾಂಸವನ್ನು ಕ್ರಮದಿಂದ ತಿನ್ನಿಸಬೇಕು. ಇವು ಉಷ್ಣ ಮತ್ತು ಪ್ರಮಾಥಿ (ಎಲ್ಲದೇಹವನ್ನು ವ್ಯಾಪಿಸಿ ಪಕ್ವವಾಗುವ) ಯಾಗಿದ್ದದರಿಂದ ಸ್ರೋತಸ್ಸುಗಳಲ್ಲಿಯ ಕಫವನ್ನು ಹೊರಗೆ ಹಾಕುವವು. (೧೫೫) ಅವುಗಳಿಂದ ಸ್ರೋತಸ್ಸುಗಳನ್ನು ಶೋಧನವಾಗಲು, ರಸಧಾತುವು ಸರಿಯಾಗಿ ಸಂಚರಿಸಿ ಪುಷ್ಟಿಯನ ಉಂಟುಮಾಡುವದು. (೧೫೫|| )

ದ್ವಿಪಂಚ ಮೂಲ್ಯಾದಿಘೃತವನ್ನು ಹೇಳುತಾರೆ—

**ದ್ವಿಪಂಚಮೂಲೀ ತ್ರಿಫಲಾ ಚವಿಕಾಭಾರ್ಗಿಚಿತ್ರಕೈಃ ||೧೫೬||**
**ಕುಲತ್ಥಪಿಪ್ಪಲೀ ಮೂಲ ಪಾಠಾಕೋಲಯವೈರ್ಜಲೇ ||**

**ಶೃತೇ ನಾಗರದುಃಸ್ಪರ್ಶಶಠೀಪಿಪ್ಪಲಿಪೌಷ್ಕರೈಃ ||೧೫೭||**

**ಕಲ್ಕೈಃ ಕರ್ಕಟಶೃಙ್ಗ್ಯಾ ಚ ಸಮೈಃ ಸರ್ಪಿರ್ವಿಪಾಚಯೇತ್ ||**

**ಸಿದ್ಧೇಽಸ್ಮಿಂಶ್ಚೂರ್ಣಿತೌ ಕ್ಷಾರೌ ದ್ವೌ ಪಂಚಲವಣಾನಿ ಚ ||೧೫೮||**

**ದತ್ವಾ ಯುಕ್ತ್ಯಾ ಪಿಬೇನ್ಮಾತ್ರಾಂ ಕ್ಷಯಕಾಸನಿಪೀಡಿತಃ ||೧೫೮೨||**

**ಅರ್ಥ—** ದಶಮೂಲ, ತ್ರಿಫಳೆ, ಚವಕ, ಗಂಟುಭಾರಂಗಿ, ಚಿತ್ರಕ, || ೧೫೬ || ಹುರಳಿ, ಮೋಡಿ, ಅಗಳಸುಂಠಿ, ಬೋರೆ, ಜವೆಗಳ ಕಷಾಯದಲ್ಲಿ ಸುಂಠಿ, ನೆಲಇಂಗಳ, ಕಚೋರೆ, ಹಿಪ್ಪಲಿ, ಪುಷ್ಕರ ಮೂಲ, || ೧೫೭ || ಕರ್ಕಟಶೃಂಗಿಗಳನ್ನು ಸಮನಾಗಿ ತಕ್ಕೊಂಡು, ಅವುಗಳಕಲ್ಕವನ್ನು ಹಾಕಿ, ಅವುಗಳ ೪ ಪಾಲು ಘೃತವನ್ನು ಸಿದ್ಧಮಾಡಿ ಅದರಲ್ಲಿ ಜವಖಾರ, ಸಜ್ಜೀಖಾರ ಮತ್ತು ಪಂಚಲವಣಗಳ ಚೂರ್ಣವನ್ನು ಯೋಗ್ಯಪ್ರಮಾಣದಲ್ಲಿ || ೧೫೮ || ಹಾಕಿ, ಕ್ಷಯಕಾಸದಿಂದ ಪೀಡಿತನಾದವನು ಯೋಗ್ಯಪ್ರಮಾಣದಿಂದ ಕುಡಿಯಬೇಕು. ೧೫೮ ||

ಗುಡೂಚ್ಯಾದಿ ಘೃತವನ್ನು ಹೇಳುತ್ತಾರೆ—

**ಗುಡೂಚೀಂ ತ್ರಿಫಲಾಂ ಮೂರ್ವಾಂ ಹರಿದ್ರಾಂ ಶ್ರೇಯಸೀಂ ವಚಾಮ್ || ೧೫೯ || ನಿದಿಗ್ಧಿಕಾಂ ಕಾಸಮರ್ದಂ ಪಾಠಾಂ ಚಿತ್ರಕನಾಗರಮ್ || ಜಲೇ ಚತುರ್ಗುಣೇ ಪಕ್ತ್ವಾ ಪಾದಶೇಷೇಣ ತತ್ಸಮಮ್ || ೧೬೦ || ಸಿದ್ಧಂ ಸರ್ಪಿಃ ಪಿಬೇದ್ ಗುಲ್ಮಶ್ವಾಸಾರ್ತಿಕ್ಷಯಕಾಸನುತ್ || ೧೬೦|| ||**

**ಅರ್ಥ—** ಅಮೃತಬಳ್ಳಿ, ತ್ರಿಫಳೆ, ಹೆಗ್ಗೊರಟಿಗೆ, ಅರಿಷಿಣ, ಗಜಪಿಪ್ಪಲಿ, ಬಜೆ || ೧೫೯ || ನೆಲಗುಳ್ಳ, (ಎಲವರಿಗೆ) ಅಗಳಸುಂಠಿ, ಚಿತ್ರಕ, ಸುಂಠಿ ಇವೆಲ್ಲವನ್ನು ಸಮನಾಗಿ ತಕ್ಕೊಂಡು, ೪ ಪಾಲು ನೀರಿನಲ್ಲಿ ಕುದಿಸಿ, ¼ ಉಳಿಯಲು || ೧೬೦ || ಅದರಲ್ಲಿ ಅಷ್ಟೇ ಘೃತವನ್ನು ಹಾಕಿ ಸಿದ್ಧಮಾಡಿ ಕುಡಿಯಬೇಕು. ಅದು ಗುಲ್ಮ, ಶ್ವಾಸ, ಕ್ಷಯಕಾಸಗಳನ್ನು ಕಳೆಯುವದು. || ೧೬೦|| ||

ಕಾಸಮರ್ದಾದಿ ಘೃತವನ್ನು ಹೇಳುತ್ತಾರೆ—

**ಕಾಸಮರ್ದಾಭಯಾಮುಸ್ತಪಾಠಾಕಟ್ಫಲನಾಗರೈಃ || ೧೬೧ ||**
**ಪಿಪ್ಪಲೀಕಟುಕಾದ್ರಾಕ್ಷಾಕಾಶ್ಮರ್ಯಸುರಸೈಸ್ತಥಾ ||**
**ಅಕ್ಷಮಾತ್ರೈರ್ಘೃತಪ್ರಸ್ಥಂ ಕ್ಷೀರದ್ರಾಕ್ಷಾರಸಾಢಕೇ || ೧೬೨ ||**
**ಪಚೇಚ್ಛೋಷಜ್ವರಪ್ಲೀಹಸರ್ವಕಾಸಹರಂ ಶಿವಮ್ ||**

**ಅರ್ಥ—** ಎಲವರಿಗೆ, ಅಣಲೆ, ಜೇಕು, ಅಗಳಸುಂಠಿ, ಕಿರಿಶಿವನ್ನಿ ಸುಂಠಿ, ||೧೬೧|| ಹಿಪ್ಪಲಿ, ಕಟುಕರೋಣಿ, ದ್ರಾಕ್ಷೆ, ಶಿವನ್ನೀಮೂಲ, ತುಳಸಿ

ಇವುಗಳ ಕಲ್ಕವನ್ನು ಒಂದೊಂದು ತೊಲೆ ಹಾಕಿ, ೨೫೬ ತೊಲಿ ಹಾಲು, ೨೫೬ ತೊಲಿ ದ್ರಾಕ್ಷಾರಸಗಳಲ್ಲಿ ೧೨೮ ತೊಲಿ ಘೃತವನ್ನು ಸಿದ್ಧಮಾಡಬೇಕು. || ೧೬೨ || ಇದು ಶೋಷಜ್ವರ, ಪ್ಲೀಹ ಮತ್ತು ಎಲ್ಲ ಕೆಮ್ಮುಗಳನ್ನು ಕಳೆಯುವದು || ೧೬೨|| ||

ಬೇರೆ ನಾಲ್ಕು ಘೃತಗಳನ್ನು ಹೇಳುತ್ತಾರೆ.

**ಧಾತ್ರೀಫಲೈಃ ಕ್ಷೀರಸಿದ್ಧೈಃ ಸರ್ಪಿರ್ವಾಪ್ಯವಚೂರ್ಣಿತಮ್ ||೧೬೩||**
**ದ್ವಿಗುಣೇ ದಾಡಿಮರಸೇ ಸಿದ್ಧಂ ವಾ ವ್ಯೋಷಸಂಯುತಮ್ ||**
**ಪಿಬೇದುಪರಿಭಕ್ತಸ್ಯ ಯವಕ್ಷಾರಘೃತಂ ನರಃ || ೧೬೪ ||**
**ಪಿಪ್ಪಲೀಗುಡಸಿದ್ಧಂ ವಾ ಛಾಗಕ್ಷೀರಯುತಂ ಘೃತಮ್ ||**
**ಏತಾನ್ಯಗ್ನಿವಿವೃದ್ಧ್ಯರ್ಥಂ ಸರ್ಪೀಂಷಿ ಕ್ಷಯಕಾಸಿನಾಮ್ || ೧೬೫ ||**
**ಸ್ಯುರ್ದೋಷಬದ್ಧಕೋಷ್ಠೋರಃ ಸ್ರೋತಸಾಂ ಚ ವಿಶುದ್ಧಯೇ ||೧೬೫½||**

**ಅರ್ಥ**—ಹಾಲಿನಲ್ಲಿ ನೆಲ್ಲೀಕಣ್ಣುಗಳನ್ನು ಕುದಿಸಿ, ತುಪ್ಪದಲ್ಲಿ ಕಲಿಸಿ ತಿನ್ನಬೇಕು. ||೧೬೩|| ಅಥವಾ ತುಪ್ಪದ ¼ ತ್ರಿಕಟು ಚೂರ್ಣವನ್ನು, ತುಪ್ಪದ ೨ ಪಾಲು ದಾಳಿಂಬದರಸದಲ್ಲಿ ಹಾಕಿ ಸಿದ್ಧಮಾಡಿದ ಘೃತವನ್ನು ಕುಡಿಯಬೇಕು. ಅಥವಾ ಊಟದ ನಂತರ ¼ ಜವಖಾರ, ೪ ಪಾಲು ನೀರು ಹಾಕಿ ಸಿದ್ಧಮಾಡಿದ ಯಕ್ಷಾವರ ಘೃತವನ್ನು ಕುಡಿಯಬೇಕು. || ೧೬೪ || ಅಥವಾ ¼ ಹಿಪ್ಪಲೀ ಚೂರ್ಣ ಬೆಲ್ಲಗಳಕಲ್ಕವನ್ನು ಹಾಕಿ, ೪ ಪಾಲು ಆಡಿನಹಾಲಿನಲ್ಲಿ ಸಿದ್ಧಮಾಡಿದ ಘೃತವನ್ನು ಕುಡಿಯಬೇಕು. ಈ ೪ ಘೃತಗಳು ಕ್ಷಯಕಾಸಿಗಳ ಅಗ್ನಿಯನ್ನು ಹೆಚ್ಚಿಸುವವು. || ೧೬೫ || ಮತ್ತು ದೋಷದಿಂದ ಪ್ರತಿಬದ್ಧವಾದ ಕೋಷ್ಠ, ಎದೆ, ಮತ್ತು ಇತರ ಸ್ರೋತಸ್ಸುಗಳನ್ನು ಶುದ್ಧಮಾಡುವವು. || ೧೬೫|| ||

ಹರೀತಕೀ ಲೇಹವನ್ನು ಹೇಳುತ್ತಾರೆ.

**ಹರೀತಕೀರ್ಯವಕ್ವಾಥ ದ್ವ್ಯಾಢಕೇ ವಿಂಶತಿಂ ಪಚೇತ್ || ೧೬೬ ||**
**ಸ್ವಿನ್ನಾ ಮೃದಿತ್ವಾ ತಾಸ್ತಸ್ಮಿನ್ ಪುರಾಣಗುಡಷಟ್ ಪಲಮ್ ||**
**ದದ್ಯಾನ್ಮನಃಶಿಲಾಕರ್ಷಂ ಕರ್ಷಾರ್ಧಂ ಚ ರಸಾಂಜನಮ್ || ೧೬೭ ||**
**ಕುಡವಾರ್ಧಂ ಚ ಪಿಪ್ಪಲ್ಯಾಃ ಸ ಲೇಹಃ ಶ್ವಾಸಕಾಸನುತ್ ||**

**ಅರ್ಥ—** ೮ ಪಾಲು ನೀರು ಹಾಕಿ, ಅರ್ಧ ಉಳಿಸಿದ ೧೦೨೪ ತೊಲಿ ಜವೆಯ ಕಷಾಯಲ್ಲಿ ೨೦ ಅಣಲೆಗಳನ್ನು ಕುದಿಸಬೇಕು. ||೧೬೬|| ಬೆಂದ ನಂತರ ಅವನ್ನು ಕಿವುಚಿ ಅವುಗಳನ್ನೂ ೨೪ ತೊಲಿ ಹಳೇ ಬೆಲ್ಲವನ್ನೂ ಅದರಲ್ಲಿ ಕೂಡಿಸಬೇಕು. ಮತ್ತೆ ಕುದಿಸಿ ಲೇಹವಾಗಲು, ಅದರಲ್ಲಿ ಮನಸಿಳ ೧ ತೊಲಿ, ರಸಾಂಜನ ಅರ್ಧತೊಲಿ, ||೧೬೭|| ಹಿಪ್ಪಲಿ ೮ ತೊಲಿ, ಹಾಕಿ ಕಲಿಸಿ ಇಡಬೇಕು. ಈ ಲೇಹವು ಶ್ವಾಸಕಾಸಗಳನ್ನು ಕಳೆಯುವದು. || ೧೬೭|| ||

ಬೇರೆ ಲೇಹಗಳನ್ನು ಹೇಳುತ್ತಾರೆ—

**ಶ್ವಾವಿಧಾಂ ಸೂಚಯೋ ದಗ್ಧಾಃ ಸಘೃತ ಕ್ಷೌದ್ರಶರ್ಕರಾಃ || ೧೬೮ ||**
**ಶ್ವಾಸಕಾಸಹರಾ ಬರ್ಹಿಪಾದೌ ವಾ ಕ್ಷೌದ್ರಸರ್ಪಿಷಾ ||**
**ಏರಂಡಪತ್ರ ಕ್ಷಾರಂ ವಾ ವ್ಯೋಷತೈಲ ಗುಡಾನ್ವಿತಮ್ || ೧೬೯ ||**
**ಲಿಹ್ಯಾದೇತೇನ ವಿಧಿನಾ ಸುರಸೈರಂಡ ಪತ್ರಜಮ್ ||**
**ವಾರ್ತಾಕಪಿಪ್ಪಲೀದ್ರಾಕ್ಷಾಪದ್ಮಕಂ ಕ್ಷೌದ್ರಸರ್ಪಿಷಾ || ೧೭೦ ||**
**ಲಿಹ್ಯಾತ್ ತ್ರ್ಯೂಷಣ ಚೂರ್ಣಂ ವಾ ಪುರಾಣಗುಡಸರ್ಪಿಷಾ ||**
**ಚಿತ್ರಕಂ ತ್ರಿಫಲಾಜಾಜೀ ಕರ್ಕಟಾಖ್ಯಾಕಟುತ್ರಿಕಮ್ || ೧೭೧ ||**
**ದ್ರಾಕ್ಷಾಂ ಚ ಮಧುಸರ್ಪಿರ್ಭ್ಯಾಂಲಿಹ್ಯಾದ ದ್ಯಾದ್ ಗುಡೇನ ವಾ || ೧೭೧|| ||**

**ಅರ್ಥ—** ಮುಳ್ಳುಹಂದಿ ಮುಳ್ಳುಗಳನ್ನು ಸುಟ್ಟು, ಸಮುಸಕ್ಕರೆ ಕೂಡಿಸಿ, ತುಪ್ಪ ಜೇನುಗಳಲ್ಲಿ ನೆಕ್ಕಬೇಕು. ಅಥವಾ ನವಿಲಿನ ಪಾದಗಳನ್ನು ಸುಟ್ಟು, ತುಪ್ಪ ಜೇನಿನಲ್ಲಿ ನೆಕ್ಕಬೇಕು. ಇವು ಶ್ವಾಸಕಾಸಗಳನ್ನು ಕಳೆಯುವವು. ಅಥವಾ ಔಡಲಎಲೆಯ ಕ್ಷಾರವನ್ನು ಅಷ್ಟೇ ತ್ರಿಕಟುಚೂರ್ಣ ಕೂಡಿಸಿ, ಎಳ್ಳೆಣ್ಣೆ ಬೆಲ್ಲದೊಡನೆ ನೆಕ್ಕಬೇಕು. || ೧೬೯ || ಇದರಂತೆಯೇ ತುಳಸಿ, ಔಡಲ ಎಲೆಯ ಪತ್ರಗಳ ಕ್ಷಾರವನ್ನು ನೆಕ್ಕಬೇಕು. ಬದನೆ, ಹಿಪ್ಪಲಿ, ದ್ರಾಕ್ಷೆ, ಪದ್ಮಕಾಷ್ಠಗಳ ಚೂರ್ಣವನ್ನು ತುಪ್ಪ ಜೇನುಗಳೊಡನೆ || ೧೭೦ || ಅಥವಾ ತ್ರಿಕಟುಚೂರ್ಣವನ್ನು ಹಳೇಬೆಲ್ಲ ತುಪ್ಪದೊಡನೆ ನೆಕ್ಕಬೇಕು. ಚಿತ್ರಕ, ತ್ರಿಫಳೆ, ಜೀರಿಗೆ, ಕಾಕಡಶಿಂಗಿ, ತ್ರಿಕಟು, ದ್ರಾಕ್ಷೆಗಳ ಚೂರ್ಣವನ್ನು || ೧೭೧ || ತುಪ್ಪ ಜೇನಿನೊಡನೆ ಅಥವಾ ಬೆಲ್ಲದೊಡನೆ ನೆಕ್ಕಬೇಕು. || ೧೭೧|| ||

ಜೀವಂತ್ಯಾದಿ ಲೇಹವನ್ನು ಹೇಳುತ್ತಾರೆ.

**ಜೀವಂತೀಂ ಮಧುಕಂ ಪಾಠಾಂ ತ್ವಕ್ ಕ್ಷೀರೀಂ ತ್ರಿಫಲಾಂ ಶಠೀಂ ||೧೭೨||**
**ಮುಸ್ತೈಲೇ ಪಿಪ್ಪಲೀಂ ದ್ರಾಕ್ಷಾಂ ದ್ವೇ ಬೃಹತ್ಯೌ ವಿತುನ್ನಕಮ್ ||**
**ಸಾರಿವಾಂ ಪೌಷ್ಕರಂ ಮೂಲಂ ಕರ್ಕಟಾಖ್ಯಾಂ ರಸಾಂಜನಮ್ ||೧೭೩||**
**ಪುನರ್ನವಾಂ ಲೋಹರಜಸ್ತ್ರಾಯಮಾಣಾಂ ಯಮಾನಿಕಾಮ್ ||**
**ಭಾರ್ಗೀಂ ತಾಮಲಕೀಮೃದ್ಧಿಂ ವಿಡಙ್ಗಂ ಧನ್ವಯಾಸಕಮ್|| ೧೭೪ ||**
**ಕ್ಷಾರಚಿತ್ರಕಚವ್ಯಾಮ್ಲವೇತಸವ್ಯೋಷದಾರು ಚ ||**
**ಚೂರ್ಣೀಕೃತ್ಯ ಪಲಾಂಶಾನಿ ಲೇಹಯೇನ್ಮಧುಸರ್ಪಿಷಾ || ೧೭೫ ||**
**ಚೂರ್ಣಾತ್ ಪಾಣಿತಲಂ ಪಂಚ ಕಾಸಾನೇತದ್ ವ್ಯಪೋಹತಿ ೧೭೫||**

**ಅರ್ಥ—** ಸೀಹಾಲಿ, ಜೇಷ್ಠಮಧು, ಅಗಳಸುಂಠಿ, ವಂಶಲೋಚನ ತ್ರಿಫಳೆ, ಕಚೋರೆ || ೧೭೨ || ಜೇಕು, ಯಾಲಕ್ಕಿ, ಹಿಪ್ಪಲಿ, ದ್ರಾಕ್ಷೆ, ನೆಲಗುಳ್ಳ, ಹೆಬ್ಬಗುಳ್ಳ, ಹವೀಜ, ಅನಂತಮೂಲ, ಕಾಕಡಸಿಂಗಿ, ರಸಾಂಜನ || ೧೭೩ || ಬಿಳೀಗಣಜಲಬೇರು, ಲೋಹಭಸ್ಮ, ತ್ರಾಯಮಾಣ, ಅಜವಾನ ಭಾರಂಗಮೂಳ, ನೆಲನೆಲ್ಲಿ, ಋದ್ಧಿ, ವಾವಡಿಂಗ, ನೆಲಇಂಗಳ || ೧೭೪ || ಜವಖಾರ, ಚಿತ್ರಕ, ಚವಕ, ಅಮ್ಲವೇತಸ, ತ್ರಿಕಟು, ದೇವದಾರು ಇವುಗಳನ್ನು ೪-೪ ತೊಲಿ ತಕ್ಕೊಂಡು ಚೂರ್ಣಮಾಡಿ, ೧ ತೊಲಿಯಷ್ಟು ತುಪ್ಪ ಜೇನುಗಳೊಡನೆ ನೆಕ್ಕಬೇಕು. || ೧೭೫ || ಇದು ಐದೂ ಕೆಮ್ಮುಗಳನ್ನು ಕಳೆಯುವದು. || ೧೭೫|| ||

ಪದ್ಮಕಾದಿ ಲೇಹವನ್ನು ಹೇಳುತ್ತಾರೆ—

**ಪದ್ಮಕಂ ತ್ರಿಫಲಾಂ ವ್ಯೋಷಂ ವಿಡಂಗಂ ದೇವದಾರು ಚ || ೧೭೬ ||**
**ಬಲಾಂ ರಾಸ್ನಾಂಚ ತುಲ್ಯಾನಿ ಸೂಕ್ಷ್ಮಚೂರ್ಣಾನಿ ಕಾರಯೇತ್ ||**
**ಸರ್ವೈರೇಭಿಃ ಸಮಂ ಚೂರ್ಣೈಃ ಪೃಥಕ್ ಕ್ಷೌದ್ರಂ ಘೃತಂ ಸಿತಾಮ್ || ೧೭೭ ||**
**ಲಿಹ್ಯಾಲ್ಲೇಹಂ ವಿಮಥ್ಯೈತಂ ಸರ್ವಕಾಸಹರಂ ಶಿವಮ್ || ೧೭೭|| ||**

**ಅರ್ಥ—** ಪದ್ಮಕಾಷ್ಠ, ತ್ರಿಫಳೆ, ತ್ರಿಕಟು, ವಾವಡಿಂಗ, ದೇವದಾರು || ೧೭೬ || ಬಲಾ, ರಾಸ್ನಾ ಇವುಗಳನ್ನು ಸಮನಾಗಿ ತಕ್ಕೊಂಡು ಸಣ್ಣಪುಡಿ

ಮಾಡ ಬೇಕು. ಕೂಡಿಸಿದ ಈ ಎಲ್ಲ ಚೂರ್ಣಗಳಷ್ಟೇ ಜೇನು, ತುಪ್ಪ ಸಕ್ಕರೆಗಳನ್ನು ಬೇರೆಬೇರೆಯಾಗಿ ತಕ್ಕೊಂಡು ॥ ೧೭೭ ॥ ಕಡೆದು ನೆಕ್ಕಬೇಕು. ಈ ಉತ್ತಮವಾದ ಲೇಹವು ಎಲ್ಲ ಕಾಸಗಳನ್ನು ಕಳೆಯುತ್ತದೆ. ॥ ೧೭೭॥ ॥

**ಲಿಹ್ಯಾನ್ಮರಿಚಚೂರ್ಣಂ ವಾ ಸಘೃತಕ್ಷೌದ್ರಶರ್ಕರಮ್ ॥ ೧೭೮ ॥**
**ಸರ್ವಕಾಸಹರಂ ಶ್ರೇಷ್ಠಂ ಲೇಹಂ ಕಾಸಾರ್ದಿತೋ ನರಃ ॥**
**ಬದರೀಪತ್ರಕಲ್ಕಂ ವಾ ಘೃತಭೃಷ್ಟಂ ಸಸೈಂಧವಮ್ ॥ ೧೭೯ ॥**
**ಸ್ವರೋಪಘಾತೇ ಕಾಸೇ ಚ ಲೇಹಮೇತತ್ಪ್ರಯೋಜಯೇತ್ ॥೧೭೯॥ ॥**

**ಅರ್ಥ—** ಕಾಸರೋಗಿಯು ಮೆಣಸಿನ ಚೂರ್ಣವನ್ನು ತುಪ್ಪ, ಜೇನು, ಸಕ್ಕರೆಗಳೊಡನೆ ನೆಕ್ಕಬೇಕು. ॥ ೧೭೮ ॥ ಇದು ಎಲ್ಲ ಕಾಸಗಳನ್ನೂ ಕಳೆಯುವ ಶ್ರೇಷ್ಠ ಲೇಹವಾಗಿದೆ. ಅಥವಾ ಬೋರೆ ಎಲೆಗಳ ಕಲ್ಕವನ್ನು ತುಪ್ಪದಲ್ಲಿ ಕರಿದು ಸೈಂಧವಹಾಕಿ ನೆಕ್ಕಬೇಕು. ॥ ೧೭೯ ॥ ಇದನ್ನು ಸ್ವರಭಂಗದಲ್ಲಿಯೂ ಕೆಮ್ಮಿನಲ್ಲಿಯೂ ಉಪಯೋಗಿಸಬೇಕು. ॥ ೧೭೯॥ ॥

**ಪತ್ರಕಲ್ಕಂ ಘೃತೇ ಭೃಷ್ಟಂ ತಿಲ್ವಕಸ್ಯ ಸಶರ್ಕರಮ್ ॥ ೧೮೦ ॥**
**ಪೇಯಾ ಚೋತ್ಕಾರಿಕಾ ಛರ್ದಿತೃಟ್ಕಾಸಾಮಾತಿಸಾರನುತ್ ॥**
**ಗೌರಸರ್ಷಪಗಂಡೀರವಿಡಂಗವ್ಯೋಷಚಿತ್ರಕಾನ್ ॥ ೧೮೧ ॥**
**ಸಾಭಯಾನ್ ಸಾಧಯೇತ್ ತೋಯೇ ಯವಾಗೂಂ ತೇನ ಚಾಂಭಸಾ ॥**
**ಸಸರ್ಪಿರ್ಲವಣಾ ಕಾಸೇ ಹಿಕ್ಕಾಶ್ವಾಸೇ ಚ ಪೀನಸೇ ॥ ೧೮೨ ॥**
**ಪಾಂಡ್ವಾಮಯೇ ಕ್ಷಯೇ ಶೋಷೇ ಕರ್ಣಶೂಲೇ ಚ ಶಸ್ಯತೇ ॥ ೧೮೨॥ ॥**

**ಅರ್ಥ—** ಲೋಧದ ಎಲೆಗಳ ಕಲ್ಕವನ್ನು ತುಪ್ಪದಲ್ಲಿ ಕರಿದು, ಅಷ್ಟೇ ಸಕ್ಕರೆಯನ್ನು ಹಾಕಿ ಮಾಡಿದ ಪೇಯ ಅಥವಾ ರೊಟ್ಟಿಯು ॥ ೧೮೦ ॥ ವಾಂತಿ ನೀರಡಿಕೆ, ಕೆಮ್ಮು, ಆಮಾತಿಸಾರಗಳನ್ನು ಕಳೆಯುತ್ತದೆ. ಬಿಳೇಸಾಸಿವೆ, ಗಂಡೀರ ( ಶಮಠಶಾಕ ), ವಾವಡಿಂಗ, ತ್ರಿಕಟು, ಚಿತ್ರಕ, ॥ ೧೮೧ ॥ ಅಣಲೆಗಳನ್ನು ೧–೧ ತೊಲಿ ತಕ್ಕೊಂಡು ೬೪ ತೊಲಿ ನೀರಿನಲ್ಲಿ ಹಾಕಿ ಅದರಿಂದ ಪೇಯವನ್ನು ಮಾಡಬೇಕು. ಅದರಲ್ಲಿ ತುಪ್ಪ ಸೈಂಧವಗಳನ್ನು ಹಾಕಿ

ಕುಡಿಯಬೇಕು. ಇದು ಕೆಮ್ಮು, ಬಿಕ್ಕು, ದಮ್ಮು, ನೆಗಡಿ, ॥ ೧೮೨ ॥ ಪಾಂಡುರೋಗ, ಕ್ಷಯ, ಶೋಷ, ಕರ್ಣಶೂಲಗಳಲ್ಲಿ ಪ್ರಶಸ್ತವಾಗಿದೆ ॥ ೧೮೨॥ ॥

**ಕಂಟಕಾರೀರಸೇ ಸಿದ್ಧೋ ಮುದ್ಗಯೂಷಃ ಸುಸಂಸ್ಕೃತಃ ॥ ೧೮೩॥**
**ಸಗೌರಾಮಲಕಃ ಸಾಮ್ಲಃ ಸರ್ವಕಾಸೇ ಭಿಷಗ್‌ಜಿತಮ್ ॥ ೧೮೩॥ ॥**

**ಅರ್ಥ—** ನೆಲಗುಳ್ಳದ ಕಷಾಯದಿಂದ ಮಾಡಿದ ಹೆಸರಿನ ಕಟ್ಟಿಗೆ ತುಪ್ಪ ಮೆಣಸು ಮುಂತಾದವುಗಳ ಒಗ್ಗರಣೆ ಕೊಟ್ಟು ॥ ೧೮೩ ॥ ಅರಿಷಿಣ ನೆಲ್ಲಿಗಳ ಚೂರ್ಣವನ್ನು ಹಾಕಿ ಹುಳಿಮಾಡಿ ಕೊಡಬೇಕು. ಇದು ಎಲ್ಲ ಕೆಮ್ಮುಗಳ ಔಷಧವಾಗಿದೆ. ॥ ೧೮೩॥ ॥

**ವಾತಘ್ನೌಷಧನಿಃಕ್ವಾಥಂ ಕ್ಷೀರಯೂಷಾನ್ ರಸಾನಪಿ ॥ ೧೮೪ ॥**
**ವೈಷ್ಕಿರಪ್ರತುದಾದೀನಾಂ ದಾಪಯೇತ್ ಕ್ಷಯಕಾಸಿನೇ ॥**
**ಕ್ಷತಕಾಸೇ ಚ ಯೇ ಧೂಮಾಃ ಸಾನುಷ್ಠಾನಾ ನಿದರ್ಶಿತಾಃ ॥ ೧೮೫ ॥**
**ಕ್ಷಯಕಾಸೇಽಪಿ ತಾನೇವ ಯಥಾವಸ್ಥಂ ಪ್ರಯೋಜಯೇತ್ ॥**
**ದೀಪನಂ ಬ್ರಂಹಣಂಚೈವ ಸ್ರೋತಸಾಂಚ ವಿಶೋಧನಮ್ ॥ ೧೮೬ ॥**
**ವ್ಯತ್ಯಾಸಾತ್ ಕ್ಷಯಕಾಸಿಭ್ಯೋ ಬಲ್ಯಂ ಸರ್ವಂ ಹಿತಂ ಭವೇತ್ ॥**
**ಸನ್ನಿಪಾತೋದ್ಭವೋ ಹ್ಯೇಷ ಕ್ಷಯಕಾಸಃ ಸುದಾರುಣಃ ॥ ೧೮೭ ॥**
**ಸನ್ನಿಪಾತಹಿತಂ ತಸ್ಮಾತ್‌ಕಾರ್ಯಮತ್ರ ಭಿಷಗ್ಜಿತಮ್ ॥**
**ದೋಷಾನುಬಲಯೋಗಾಚ್ಚ ಭವೇದ್‌ರೋಗಬಲಾಬಲಮ್ ॥೧೮೮॥**
**ಕಾಸೇಷ್ವೇಷು ಗರೀಯಾಂಸಂ ಜಾನೀಯಾದುತ್ತರೋತ್ತರಮ್ ॥**

**ಅರ್ಥ—** ಕ್ಷಯಕಾಸಿಗೆ, ವಾತನಾಶಕ ದ್ರವ್ಯಗಳಿಂದವಾಡಿದ ಕಷಾಯ ಅಥವಾ ಕ್ಷೀರ, ಮತ್ತು ಕಟ್ಟುಗಳನ್ನು ॥೧೮೪॥ ಮತ್ತು ವಿಷ್ಕಿರ,(ಕೆದರಿಹರವಿತಿನ್ನು ವ ಕೋಳಿಮುಂತಾದಪ್ರಾಣಿ) ಪ್ರತುದ, (ಚುಂಚುವಿನಿಂದ ಚುಚ್ಚಿತಿನ್ನುವಗುಬ್ಬಿ ಮುಂತಾದ ಪ್ರಾಣಿ) ಮುಂತಾದ ಪ್ರಾಣಿಗಳ ಮಾಂಸರಸವನ್ನೂ ಕೊಡಬೇಕು. ಕ್ಷತಕಾಸದಲ್ಲಿ ಹೇಳಿದ ಧೂಮಗಳನ್ನು ಅದರಲ್ಲಿ ಹೇಳಿದ ವಿಧಿಯಂತೆ ॥ ೧೮೫ ॥ ಕ್ಷಯಕಾಸದಲ್ಲಿಯೂ ಅವಸ್ಥಾನುಸಾರವಾಗಿ ಕೊಡಬೇಕು. ಕ್ಷಯಕಾಸದಲ್ಲಿ ಆಯಾ ದೋಷಗಳ ವಿರುದ್ಧವಾದ ದೀಪನ, ಬೃಂಹಣ ಮತ್ತು ಸ್ರೋತಸ್ಸುಗಳ

ಶೋಧನವನ್ನು ಮಾಡುವ || ೧೮೬ || ಬಲ್ಯಗಳಾದ ಎಲ್ಲ ದ್ರವ್ಯಗಳನ್ನು ಕೊಡಬೇಕು. ಈ ಕ್ಷಯಕಾಸವು ಸನ್ನಿಪಾತದಿಂದ ಉಂಟಾಗಿರುವದರಿಂದ ಬಹಳ ಭಯಂಕರವಾಗಿದೆ. || ೧೮೭ || ಆದ್ದರಿಂದ ಇದರಲ್ಲಿ ಸನ್ನಿಪಾತಕ್ಕೆ ಯೋಗ್ಯವಾದ ಚಿಕಿತ್ಸೆಮಾಡಬೇಕು. ರೋಗದ ಬಲಾಬಲಗಳು ದೋಷಗಳ ಬಲಾಬಲಗಳಿಂದ ಉಂಟಾಗುತ್ತವೆ. || ೧೮೮ || ಈ ಎಲ್ಲ ಕಾಸಗಳಲ್ಲಿ ಮುಂದು ಮುಂದಿನವು ಹಿಂದಿನವುಗಳಿಗಿಂತ (ವಾತಜಕ್ಕಿಂತ ಪಿತ್ತಜವು ಪಿತ್ತಜಕ್ಕಿಂತ ಕಫಜವು ಕಫಜಕ್ಕಿಂತ ಕ್ಷತಜವು, ಕ್ಷತಜಕ್ಕಿಂತ ಕ್ಷಯಜವು. ) ಕಠಿಣವು. || ೧೮೮|| ||

## ತತ್ರ ಶ್ಲೋಕಾ

**ಭೋಜ್ಯಂ ಪಾನಾನಿ ಸರ್ಪಿಂಷಿ ಲೇಹಾಶ್ಚ ಸಹ ಪಾನಕೈಃ || ೧೮೯ ||**
**ಕ್ಷೀರಸರ್ಪಿರ್ಗುಡಾಧೂಮಾಃ ಕಾಸಭೈಷಜ್ಯಸಂಗ್ರಹಃ ||**
**ಸಂಖ್ಯಾನಿಮಿತ್ತರೂಪಾಣಿ ಸಾಧ್ಯಾಸಾಧ್ಯತ್ವಮೇವ ಚ || ೧೯೦ ||**
**ಕಾಸಾನಾಂ ಭೇಷಜಞ್ಶ್ಲೋಕ್ತಂ ಗರೀಯಸ್ತ್ವಂಚ ಕಾಸಿನಃ ||೧೯೦|| ||**

**ಅರ್ಥ—** ಕಾಸರೋಗಕ್ಕೆ ಉಪಯುಕ್ತವಾದ ಆಹಾರ, ಪಾನ, ಘೃತ, ಲೇಹ, ಪಾನಕ || ೧೮೯ || ಕ್ಷೀರ, ಸರ್ಪಿರ್ಗುಡ, (ತುಪ್ಪ ಬಹಳ ಹಾಕಿ ಮಾಡಿದ ಗುಳಿಗೆಗಳು ) ಧೂಮ, ಕಾಸದ ಔಷಧಗಳು. ಕಾಸಗಳ ಸಂಖ್ಯೆ ಅವುಗಳ ಕಾರಣ ರೂಪ ಸಾಧ್ಯಾಸಾಧ್ಯತೆ || ೧೯೦ || ಅವುಗಳ ಔಷಧ ಮತ್ತು ತಾರತಮ್ಯ ಇವು ಹೇಳಲ್ಪಟ್ಟವು. || ೧೯೦|| ||

**ಇತ್ಯಗ್ನಿವೇಶಕೃತೇ ತಂತ್ರೇ ದೃಢಬಲಪ್ರತಿಸಂಸ್ಕೃತೇ ಚಿಕಿತ್ಸಿತಸ್ಥಾನೇ ಕಾಸ ಚಿಕಿತ್ಸಿತಂ ನಾಮ ಅಷ್ಟಾದಶೋಽಧ್ಯಾಯಃ || ೧೮ ||**

**ಅರ್ಥ—** ಈ ಪ್ರಕಾರ ಅಗ್ನಿವೇಶರಿಂದ ರಚಿಸಲ್ಪಟ್ಟು ದೃಢಬಲದಿಂದ ಸಂಸ್ಕಾರ ಪಡೆದ ಚರಕ ಸಂಹಿತೆಯ ಚಿಕಿತ್ಸಾಸ್ಥಾನದಲ್ಲಿ **ಕಾಸಚಿಕಿತ್ಸೆ** ಎಂಬ ಹದಿನೆಂಟನೆಯ ಅಧ್ಯಾಯವು ಮುಗಿದುದು || ೧೮ ||

ಶ್ರೀ ಮದಾಪ್ಪ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಅಪ್ಪ ಅನಂತಾಚಾರ್ಯರಿಂದ ರಚಿತವಾದ **'ಚಿಕಿತ್ಸಾ ಬೋಧಿನಿ'** ಎಂಬ ಚರಕ ಸಂಹಿತೆಯ ಟಿಪ್ಪಣಿಯಲ್ಲಿ ಚಿಕಿತ್ಸಾ ಸ್ಥಾನದಲ್ಲಿ **'ಕಾಸ ಚಿಕಿತ್ಸೆ'** ಎಂಬ ಹದಿನೆಂಟನೆಯ ಅಧ್ಯಾಯವು ಮುಗಿದುದು.

# ಹತ್ತೊಂಬತ್ತನೆಯ ಅಧ್ಯಾಯ

## ಅತಿಸಾರ ಚಿಕಿತ್ಸೆ



ಅಗ್ನಿಮಾಂದ್ಯದಿಂದುಂಟಾಗುವ ಸಂಗ್ರಹಣಿಯ ನಂತರ ಅತಿಸಾರವನ್ನು ಹೇಳಬೇಕಾಗಿದ್ದರೂ ಸಂಗ್ರಹಣಿಯ ಕಾರ್ಯಗಳಾದ ಹಿಕ್ಕಾಶ್ವಾಸ ಕಾಸಗಳ ಚಿಕಿತ್ಸೆಗಳು ಪ್ರಾಸಂಗಿಕವಾದ್ದರಿಂದ ಅವನ್ನು ಹೇಳಿ, ಈಗ ಅತಿಸಾರ ಚಿಕಿತ್ಸೆಯನ್ನು ಹೇಳುತ್ತಾರೆ.

**ಅಥಾತೋ ಅತಿಸಾರಚಿಕಿತ್ಸಿತಂ ವ್ಯಾಖ್ಯಾಸ್ಯಾಮಃ ||**

**ಅರ್ಥ—** ಇನ್ನುಮೇಲೆ ಅತಿಸಾರ ಚಿಕಿತ್ಸೆಯನ್ನು ಹೇಳುವೆವು.

**ಇತಿ ಹಸ್ಮಾಹ ಭಗವಾನಾತ್ರೇಯಃ || ೧ ||**

**ಅರ್ಥ—** ಪೂಜ್ಯರಾದ ಆತ್ರೇಯಋಷಿಗಳು ಹೀಗೆ ಹೇಳಿದರು || ೧ ||

**ಭಗವಂತಂ ಖಲ್ವಾತ್ರೇಯಂ ಕೃತಾಹ್ನಿಕಂ ಹುತಾಗ್ನಿಹೋತ್ರಮಾಸೀನಮೃಷಿಗಣಪರಿವೃತಂ ಹಿಮವತ್ಪಾರ್ಶ್ವೆ ವಿನಯಾದುಪೇತ್ಯಾಭಿವಾದ್ಯಾಗ್ನಿವೇಶ ಉವಾಚ ಭಗವನ್ನತೀಸಾರಸ್ಯ ಪಾಗುತ್ಪತ್ತಿನಿಮಿತ್ತಲಕ್ಷಣೋಪಶಮನಾನಿ ತು ಪ್ರಜಾನುಗ್ರಹಾರ್ಥಮಾಖ್ಯಾತುಮರ್ಹಸೀತಿ||**

**ಅರ್ಥ—** ಆಹ್ನಿಕವನ್ನು ಮುಗಿಸಿ ಅಗ್ನಿಹೋತ್ರದಲ್ಲಿ ಆಹುತಿ ಹಾಕಿ, ಹಿಮಾಲಯದ ಒಂದು ಪಾರ್ಶ್ವದಲ್ಲಿ ಋಷಿಗಳಿಂದ ಸುತ್ತುಗಟ್ಟಲ್ಪಟ್ಟು ಕೂತಂಥ ಪೂಜ್ಯರಾದ ಆತ್ರೇಯಋಷಿಗಳ ಕಡೆಗೆ ಅಗ್ನಿವೇಶನು ವಿನಯದಿಂದ ಬಂದು ನಮಿಸಿ ಅಂದನು ಪೂಜ್ಯರೆ! ಅತಿಸಾರದ ಪೂರ್ವರೂಪ, ಕಾರಣ, ಲಕ್ಷಣ, ಚಿಕಿತ್ಸೆಗಳನ್ನು ಜನರ ಅನುಗ್ರಹಾರ್ಥವಾಗಿ ಹೇಳಬೇಕು. ||೨||

**ಅಥ ಭಗವಾನ್ ಪುನರ್ವಸುರಾತ್ರೇಯಸ್ತದಗ್ನಿವೇಶವಚನಮನುನಿಶಮ್ಯ ಉವಾಚ ಶ್ರೂಯತಾಮಗ್ನಿವೇಶ ಸರ್ವಮೇತದಖಿಲೇನ ವ್ಯಾಖ್ಯಾ**

ಯವಮಾನಮ್ । ಆದಿಕಾಲೇ ತು ಯಜ್ಞೇಷು ಪಶವಃ ಸಮಾಲಂಭ ನೀಯಾ ಬಭೂವುರ್ನಾಲಂಭಾಯ ಪ್ರಕ್ರಿಯಂತೇ ಸ್ಮ ತತೋ ದಕ್ಷ ಯಜ್ಞಂ ಪ್ರತ್ಯವರಕಾಲಂ ಮನೋಃ ಪುತ್ರಾಣಾಂ ನರಿಷ್ಯನ್ನಾಭಾಗೇ ಕ್ಷ್ವಾಕುದಿಷ್ಟಶರ್ಯಾತ್ಯಾದೀನಾಂ ಕ್ರತುಷು ಪಶವ ಏವಾಭ್ಯನು ಜ್ಞಾಯ ಪ್ರೋಕ್ಷಣಮೇವಾವಾಪುಃ । ಅತಃ ಪ್ರತ್ಯವರಕಾಲಂ ಪೃಷ ಧ್ರೇಣ ದೀರ್ಘಸತ್ರೇಣ ಯಜತಾ ಪಶೂನಾಮಲಾಭಾದ್ । ಗವಾ ಮಾಲಂಭಶ್ಚ ಪ್ರವರ್ತಿತಃ ತದ್‌ದೃಷ್ಟ್ವಾ ಪ್ರವ್ಯಥಿತಾ ಭೂತಗಣಾಃ ತೇಷಾಂ ಚೋಪಯೋಗಾದುಪಾಕೃತಾನಾಂ ಗವಾಂ ಗೌರವಾದೌಷ್ಣ್ಯಾ ದಸಾತ್ಮ್ಯಾತ್ ಅಶಸ್ತೋಪಯೋಗಾತ್ ಸ್ವಾದ್ವಪಯೋಗಾಚ್ಚೋಪ ಹತಾಗ್ನೀನಾಮುಪಹತಮನಸಾಞ್ಚಾತಿಸಾರಃ ಪೂರ್ವಮುತ್ಪನ್ನಸ್ತತ್ ಪೃಷಧ್ರಯಜ್ಞೇ ॥

**ಅರ್ಥ—** ಆ ಮೇಲೆ ಪೂಜ್ಯರಾದ ಆತ್ರೇಯ ಪುನರ್ವಸುಋಷಿ ಗಳು ಅಗ್ನಿವೇಶನ ಮಾತನ್ನುಕೇಳಿ ಅಗ್ನಿವೇಶನೇ! ಇದನ್ನೆಲ್ಲ ವಿವರಿಸಿ ಹೇಳುವೆನು ಕೇಳು ಪೂರ್ವಕಾಲದಲ್ಲಿ ಯಜ್ಞಗಳಲ್ಲಿ ಪಶುಗಳನ್ನು ಅಭಿ ಮಂತ್ರಿಸಿ ಬಿಡುತ್ತಿದ್ದರು. ಕೊಲ್ಲುತ್ತಿದ್ದಿಲ್ಲ. ಆ ಮೇಲೆ ದಕ್ಷಯಜ್ಞದ ನಂತರ ಕೆಲವು ಕಾಲದಮೇಲೆ ಮನುವಿನ ಪುತ್ರರಾದ ನರಿಷ್ಯನ್, ನಾಭಾಗ, ಇಕ್ಷ್ವಾಕು, ದಿಷ್ಟ, ಶರ್ಯಾ, ಮುಂತಾದವರ ಯಜ್ಞಗಳಲ್ಲಿ ಪಶುಗಳ ಅನುಮತಿ ಯಿಂದಲೇ ಅವುಗಳ ವಧವನ್ನು ಮಾಡಹತ್ತಿದರು ಆ ಮೇಲೆ ಕೆಲವು ಕಾಲಹೋಗಲು, ಪೃಷಧ್ರರಾಜನು ಮಾಡುವ ಯಜ್ಞವು ಬಹುಕಾಲ ಸಾಗಿದ್ದರಿಂದ ಪಶುಗಳೂ ಸಿಗದ ಹಾಗೆ ಆದ್ದರಿಂದ ಅವನು ಗೋಗಳ ವಧವನ್ನು ಮಾಡಹತ್ತಿದನು. ಅದನ್ನು ನೋಡಿ ಯಾವತ್ತೂ ಜನರು ದುಃಖಿತ ರಾದರು. ಕೊಂದ ಆ ಗೋವುಗಳ ಮಾಂಸವನ್ನು ತಿನ್ನುವದರಿಂದ ಅದರಲ್ಲಿದ್ದ ಜಡತ್ವ, ಉಷ್ಣತ್ವ, ಅಸಾತ್ಮ್ಯತೆ, (ಅಭ್ಯಾಸವಿಲ್ಲದಿರೋಣ), ಮತ್ತು ಅಮಂಗ ಲತೆ, ಮಾಧುರ್ಯರಹಿತತ್ವ ಗುಣಗಳಿಂದ ಅವರ ಅಗ್ನಿಯುನಾಶವಾದ್ದ ರಿಂದಲೂ ಮನಸ್ಸು ದುಂಖಿತವಾದ್ದರಿಂದಲೂ ಪೃಷಧರನಯಜ್ಞದಲ್ಲಿ ಮೊದಲು ಅವರಿಗೆ ಅತಿಸಾರವುಂಟಾಯಿತು. ॥೨॥

ವಾತಾತೀಸಾರದ ಲಕ್ಷಣಗಳನ್ನು ಹೇಳುತ್ತಾರೆ—

**ಅಥಾವರಕಾಲಂ ವಾತಲಸ್ಯ ವಾತಾತಪವ್ಯಾಯಾಮಾತಿಮಾತ್ರನಿಷೇವಿಣೋ ರುಕ್ಷಾಲ್ಪಪ್ರಮಿತಾಶಿನಃ ತೀಕ್ಷ್ಣ ಮದ್ಯವ್ಯವಾಯನಿತ್ಯಸ್ಯ ಉದಾವರ್ತಯತಶ್ಚ ವೇಗಾನ್ ವಾಯುಃ ಪ್ರಕೋಪಮಾಪದ್ಯತೇ ಪಕ್ತಾಚೋಪಹನ್ಯತೇ । ಸ ವಾಯುಃ ಪ್ರಕುಪಿತೋಽಗ್ನಾವುಪಹತೇ ಮೂತ್ರಸ್ವೇದೌ ಪುರೀಷಾಲಯಮುಪಹೃತ್ಯ ತಾಭ್ಯಾಂ ಪುರೀಷಂ ದ್ರವೀಕೃತ್ಯಾತಿಸಾರಾಯ ಕಲ್ಪತೇ ॥ ॥೪॥**

**ಅರ್ಥ—**ಇನ್ನು ಮುಂದೆ ಬಹಳ ವಾತವುಳ್ಳವನ ಅಥವಾ ವಾತಬಿಸಲು ವ್ಯಾಯಾಮುಗಳನ್ನು ಬಹಳವಾಗಿ ಸೇವಿಸುವವನ, ರುಕ್ಷ ಬಹಳ ಸ್ವಲ್ಪ ಊಟ ಮಾಡುವವನ, ತೀಕ್ಷ್ಣಮದ್ಯ-ಮೈಥುನಗಳನ್ನು ಯಾವಾಗಲೂ ಸೇವಿಸುವವನ, ಮತ್ತು ವೇಗಗಳನ್ನು ಪ್ರತಿಬಂಧಿಸುವವನ ವಾಯುವು ಪ್ರಕೋಪ ಹೊಂದಿ, ಅಗ್ನಿಯನ್ನು ನಾಶಮಾಡುತ್ತದೆ. ಅಗ್ನಿಯು ನಷ್ಟವಾಗಲು ಕುಪಿತವಾದ ಆ ವಾಯುವು ಮೂತ್ರ ಸ್ವೇದಗಳನ್ನು ಮಲಾಶಯಕ್ಕೆ ಒಯ್ದು ಅವುಗಳಿಂದ ಮಲವನ್ನು ತೆಳ್ಳಗೆಮಾಡಿ ಅತಿಸಾರವನ್ನುಂಟುಮಾಡುತ್ತದೆ. ॥ ೪ ॥

ವಾತಾತೀಸಾರದ ಲಕ್ಷಣಗಳನ್ನು ಹೇಳುತ್ತಾರೆ—

**ತಸ್ಯ ರೂಪಾಣಿ— ವಿಜ್ಜಲಮಾಮವಿಪ್ಲುತಮವಸಾದಿ ರುಕ್ಷಂ ದ್ರವಂ ಸಶೂಲಮಾಮಗಂಧಮೀಷಚ್ಛಬ್ಧಂ ವಾ ವಿಬದ್ಧಮೂತ್ರಧಾರಮತಿಸಾರ್ಯತೆ ಪುರೀಷಮ್ । ವಾಯುಶ್ಚಾಂತಃಕೋಷ್ಠೇ ಸಶಬ್ದಶೂಲಸ್ತಿರ್ಯಕ್ ಚರತಿ ವಿಬದ್ಧಃ ॥ ಇತ್ಯಾಮಾತಿಸಾರೋ ವಾತಾತ್। ಪಕ್ವಂ ವಾ ವಿಬದ್ಧಮಲ್ಪಾಲ್ಪಂ ಸಶಬ್ದಶೂಲಫೇನಪಿಚ್ಛಾಪರಿಕರ್ತಿಕಂ ಹೃಷ್ಟರೋಮಾ ವಿನಿಶ್ವಸ್ಯ ಶುಷ್ಕಮುಖಃ ಕಟ್ಯೂರುತ್ರಿಕಜಾನುಪೃಷ್ಠಪಾರ್ಶ್ವಶೂಲೀ ಭ್ರಷ್ಟಗುದೋ ಮುಹುರ್ಮುಹುರ್ವಿಗ್ರಥಿತಮುಪವೇಶ್ಯತೇ ವಾತಾತ್ ತಮಾಹುರಸುಗ್ರಥಿತಮಿತ್ಯೇಕೇ ವಾತಾನುಗ್ರಥಿತವರ್ಚಸ್ತ್ವಾತ್ ॥**

**ಅರ್ಥ—** ವಾತಾತಿಸಾರದ ಲಕ್ಷಣಗಳು— ಜಿಗುಟು, ಆಮದಿಂದಕೂಡಿದ ನೆಲದಲ್ಲಿ ಕೂಡಲೆ ಇಂಗುವ, ರುಕ್ಷ, ದ್ರವ, ಶೂಲಯುಕ್ತ, ಗುನುಗುನು ನಾರುವ, ಸ್ವಲ್ಪಶಬ್ದವುಳ್ಳ, ಮಲವು ಬೀಳುವದು. ಮೂತ್ರಧಾರೆಯು ತಟ್ಟಿಸುವದು. ಕೋಷ್ಠದ ಒಳಗೆ ವಾಯುವು ಅಲ್ಲಲ್ಲಿ ಪ್ರತಿಬದ್ಧವಾಗಿ ಶಬ್ದಶೂಲಗ

ಳನ್ನುಂಟುಮಾಡುತ್ತ ಅತ್ತಿತ್ತ ಓಡಾಡುವದು. ಇದು ವಾತದ ಆಮಾತಿಸಾರದ ಲಕ್ಷಣವು. ಪಕ್ವವಾತಾತಿಸಾರದಲ್ಲಿ ತಟ್ಟೆಸುತ್ತ ಶಬ್ದ, ಶೂಲ, ಬುರುಗು ಲೋಳೆ, ಕತ್ತರಿಸಿದಂತೆ ಪೀಡೆಯುಳ್ಳ ಸ್ವಲ್ಪಸ್ವಲ್ಪ ಪಕ್ವ ಮಲವು ಬೀಳುವದು. ರೋಮಾಂಚಗಳೇಳುವವು. ಶ್ವಾಸೋಚ್ಛ್ವಾಸಬಿಡುವನು. ಮೋರೆ ಒಣಗುವದು. ಟೊಂಕ, ತೊಡೆ, ತಿಗ, ಮೊಣಕಾಲು, ಬೆನ್ನು ಪಾರ್ಶ್ವಗಗಲ್ಲಿ ಶೂಲವುಂಟಾಗುವದು. ಗುದಭ್ರಂಶವಾಗುವದು. ಆಗಾಗ್ಗೆ ಗಂಟು ಗಂಟು ಮಲಬೀಳುವದು. ಇದಕ್ಕೆ ಕೆಲವರು ' ಅನುಗ್ರಥಿತ ' ವೆನ್ನುವರು. ಏಕಂದ್ಧರೆ ಇದರಲ್ಲಿ ಮಲವು ವಾತದಿಂದ ಗಂಟುಕಟ್ಟಲ್ಪಟ್ಟಿರುವದು. ||೫||

ಪಿತ್ತಾತೀಸಾರ ಕಾರಣಗಳನ್ನು ಹೇಳುತ್ತಾರೆ.

**ಪಿತ್ತಲಸ್ಯಪುನರಮ್ಲಲವಣಕಟುಕ್ಷಾರೋಷ್ಣತೀಕ್ಷ್ಣಾತಿಮಾತ್ರನಿಷೇವಿಣಃ ಪ್ರತತಾಗ್ನಿಸೂರ್ಯಸಂತಾಪೋಷ್ಣಮಾರುತೋಪಹತಗಾತ್ರಸ್ಯ ಕ್ರೋಧೇರ್ಷ್ಯಾಬಹುಲಸ್ಯ ಪಿತ್ತಂ ಪ್ರಕೋಪಮಾಪದ್ಯತೇ ತದ್ ದ್ರವತ್ವಾದುಷ್ಮಾಣಮುಪಹತ್ಯ ಪುರೀಷಾಶಯಾಶ್ರಿತಮೌಷ್ಣ್ಯಾದ್ ದ್ರವ ತ್ವಾತ್ ಸರತ್ವಾಚ್ಚ ಭಿತ್ವಾ ಪುರೀಷಮತಿಸಾರಾಯ ಕಲ್ಪತೇ ||**

**ಅರ್ಥ—** ಬಹಳಪಿತ್ತವುಳ್ಳವನು ಹುಳಿ, ಉಪ್ಪು, ಕಾರ, ಕ್ಷಾರ, ಉಷ್ಣ ತೀಕ್ಷ್ಣದ್ರವ್ಯಗಳನ್ನು ಹೆಚ್ಚಾಗಿ ತಿಂದರೆ ಅಥವಾ ಬೆಂಕಿ ಬಿಸಿಲು ಬಿಸಿಗಾಳಿಗಳು ಹೆಚ್ಚು ಶರೀರಕ್ಕೆತಾಕಿದರೆ, ಅಥವಾ ಕ್ರೋಧ ಈರ್ಷ್ಯೆಗಳು ಬಹಳ ಉಂಟಾದರೆ ಅವನಪಿತ್ತವು ಪ್ರಕೋಪವನ್ನು ಹೊಂದುತ್ತದೆ. ಅದು ದ್ರವವಿರುವದರಿಂದ ಜಠರಾಗ್ನಿಯನ್ನು ಆರಿಸಿ ತನ್ನಲ್ಲಿದ್ದ ಉಷ್ಣತ್ವ, ದ್ರವತ್ವ, ಸರತ್ವಗುಣಗಳಿಂದ ಮಲಾಶಯದಲ್ಲಿದ್ದ ಮಲವನ್ನು ಒಡೆದು ಅತಿಸಾರವನ್ನುಂಟು ಮಾಡುತ್ತದೆ. ||೬||

ಪಿತ್ತಾತೀಸಾರದ ಲಕ್ಷಣಗಳನ್ನು ಹೇಳುತ್ತಾರೆ—

**ತಸ್ಯ ರೂಪಾಣಿ – ಹಾರಿದ್ರಂ ಹರಿತಂ ನೀಲಂ ಕೃಷ್ಣಂ ರಕ್ತಪಿತ್ತೋಪಗಂತಂ ಅತಿದುರ್ಗಂಧಮತಿಸಾರ್ಯತೇ ಪುರಿಷಮ್ । ತೃಷ್ಣಾದಾಹಸ್ವೇದಮೂರ್ಛಾಶೂಲಬ್ರಧ್ನಸಂತಾಪಪಾಕ ಪರೀತಃ । ಇತಿ ಪಿತ್ತಾತಿಸಾರಃ ||೭||**

**ಅರ್ಥ—** ಪಿತ್ತಾತಿಸಾರದ ಲಕ್ಷಣಗಳು—ಹಳದಿ, ಹಸರು, ನೀಲ ಕಪ್ಪು ಮತ್ತು ರಕ್ತಪಿತ್ತದಿಂದಕೂಡಿದ ಅತಿದುರ್ಗಂಧವಾದ ಮಲವು ಬೀಳು ವದು. ನೀರಡಿಕೆ, ದಾಹ, ಬೆವರು, ಮೂರ್ಛೆ ಶೂಲ ಗುದಸಂತಾಪ, ಪಾಕಗಳುಂಟಾಗುವವು ಇದು ಪಿತ್ತಾತಿಸಾರವು ॥೭॥

ಕಫಾತಿಸಾರದ ಕಾರಣಗಳನ್ನು ಹೇಳುತ್ತಾರೆ—

**ಶ್ಲೇಷ್ಮಲಸ್ಯ ತು ಗುರುಮಧುರಶೀತಸ್ನಿಗ್ಧೋಪಸೇವಿನಃ ಸಂಪೂರಕಸ್ಯ ಅಚಿಂತಯತೋ ದಿವಾಸ್ವಪ್ನಪರಸ್ಯಾಲಸಸ್ಯ ಶ್ಲೇಷ್ಮಾಪ್ರಕೋಪಮಾಪ ದ್ಯತೇ ಸ ಪುನಃ ಸ್ವಭಾವಾದ್ ಗುರುಮಧುರಶೀತಸ್ನಿಗ್ಧಸ್ಯ ಪುಂಸೋ ಗ್ನಿಮುಪಹತ್ಯ ಸೌಮ್ಯಸ್ವಭಾವಾತ್ ಪುರೀಷಾಶಯಮುಪಗಮ್ಯೋಪ ಕ್ಲೇದ್ಯಚಾತಿಸಾರಾಯ ಕಲ್ಪತೇ ॥**

**ಅರ್ಥ—** ಬಹಳ ಕಫವುಳ್ಳವನ ಜಡ, ಮಧುರ, ಶೀತ, ಸ್ನಿಗ್ಧ ದ್ರವ್ಯಗಳನ್ನು ಸೇವಿಸುವವನ ಅಥವಾ ಬಹಳ ದ್ರವ ಪದಾರ್ಥಗಳನ್ನು ತಿನ್ನು ವವನ, ಚಿಂತೆಯಿಲ್ಲದೆ ಆಲಸ್ಯದಿಂದಕೂಡಿದವನ, ಹಗಲು ನಿದ್ರೆಯನ್ನು ಮಾಡುವವನ, ಕಫವು ಕುಪಿತವಾಗುವದು. ಆ ಕಫವು ತನ್ನ ಸ್ವಭಾವದಿಂದ ಜಡ, ಮಧುರ, ಶೀತ, ಸ್ನಿಗ್ಧನಾದ ಅವನ ಅಗ್ನಿಯನ್ನುಕಳೆದು ತನ್ನ ಸೌಮ್ಯಸ್ವಭಾವದಿಂದ ಮಲಾಶಯಕ್ಕೆ ಬಂದು ಮಲವನ್ನು ತೋಯಿಸಿ ಅತಿ ಸಾರವನ್ನುಂಟು ಮಾಡುತ್ತದೆ. ॥೮॥

ಕಫಾತೀಸಾರದ ಲಕ್ಷಣಗಳನ್ನೇ ಹೇಳುತ್ತಾರೆ—

**ತಸ್ಯರೂಪಾಣಿ|—ಸ್ನಿಗ್ಧಂ ಶ್ವೇತಂ ಪಿಚ್ಛಿಲಂ ತಂತುಮದಾಮಂ ಗುರು ದುರ್ಗಂಧಮನುಬದ್ಧಶೂಲಮತ್ಯಲ್ಪಮಭೀಕ್ಷ್ಣಮತಿಸಾರ್ಯತೇ ಸಪ್ರ ವಾಹಿಕಂ ಗುರುತರಂ ಗುರೂದರಗುದಬಸ್ತಿವಂಕ್ಷಣದೇಶಃ ಕೃತಾಪ ಕೃತಸಂಜ್ಞಃ ಸೋತ್ಕ್ಲೇಶೋ ನಿದ್ರಾಲಸ್ಯಪರೀತಃ ಸಲೋಮಹರ್ಷಃಸದ ನ್ನೋನ್ನದ್ವೇಷೀ ಚ ಇತಿಶ್ಲೇಷ್ಮಾತಿಸಾರಃ ॥**

**ಅರ್ಥ—** ಕಫಾತಿಸಾರದ ಲಕ್ಷಣಗಳು–ಸ್ನಿಗ್ಧ, ಬಿಳೀ, ಜಿಗಟು. ತಂತುಗಳುಳ್ಳ ಆಮ, ಜಡ, ದುರ್ಗಂಧ, ಒಂದೇಸವನೆ ಶೂಲವುಳ್ಳಮಲವು, ಆಗಾಗ್ಗೆ ಸ್ವಲ್ಪ ಸ್ವಲ್ಪ ಬೀಳುತ್ತದೆ. ರೋಗಿಯು ತಿಣಕುವನು ಹೊಟ್ಟೆ,

ಗುದಬಸ್ತಿ ಕಿಬ್ಬೊಟ್ಟೆಗಳು ಜಡವಾಗುವವು. ಮಲವು ಬಿದ್ದರೂ ಬೀಳ ದಂತೆ ಅನಿಸುವದು. ಹೊರಕಡಿಗೆ ಬಂದಂತೆ ಆಗುವದು. ನಿದ್ರೆ, ಆಲಸ್ಯ ರೋಮಾಂಚ, ದೌರ್ಬಲ್ಯ ಅನ್ನದ್ವೇಷಗಳಿರುವವು. ಇದು ಕಫಾತಿಸಾರವು.

ಸನ್ನಿಪಾತಾತಿಸಾರದ ಲಕ್ಷಣವನ್ನು ಹೇಳುತ್ತಾರೆ-

**ಅತಿಶೀತಸ್ನಿಗ್ಧರುಕ್ಷೋಷ್ಣಗುರುಖರಕಠಿನವಿಶದ ವಿಷಮವಿರು ದ್ಧಾಽಸಾತ್ಮ್ಯಭೋಜನಾದ್ ಅಭೋಜನಾತ್ ಕಾಲಾತೀತಭೋಜನಾಚ್ಚ ಕಿಚಿಂತ್ ಅಭ್ಯವಹರಣಾತ್ ಪ್ರದುಷ್ಟಮದ್ಯಪಾನೀಯಪಾನಾತ್ ಅತಿಮ ದ್ಯಪಾನೀಯಪಾನಾತ್ ಅಸಂಶೋಧನಾತ್ ಪ್ರತಿಕರ್ಮಣಾಂ ವಿಷಮಗ ಮನಾದನುಪಚಾರಾಜ್ಜ್ವಲನಾದಿತ್ಯಪವನಸಲಿಲಾತಿಸೇವನಾತ್ ಅಸ್ವ ಪ್ನಾದ್ ವೇಗವಿಧಾರಣಾ ದೃತುವಿಪರ್ಯಯಾತ್ ಅಯಥಾಬಲಮಾ ರಂಭಾದ್ ಭಯಶೋಕಚಿಂತೋದ್ವೇ ಗಾತಿಯೋಗಾತ್ ಕ್ರಿಮಿಶೋಥ ಜ್ವರಾಶೋರ್ವಿಕಾರಾತಿಕರ್ಷಣೈಃ ವ್ಯಾಪನ್ನಾಗ್ನೇ ಸ್ತ್ರಯೋದೋಷಾಃ ಪ್ರಕುಪಿತಾ ಭೂಯ ಏವಾಗ್ನಿಮುಪಹತ್ಯ ಪಕ್ವಾಶಯಮನುಪ್ರವಿಶ್ಯ ಅತಿಸಾರಂ ಸರ್ವದೋಷಲಿಗಂ ಜನಯಂತಿ ॥**

**ಅರ್ಥ—** ಬಹಳ ಶೀತ, ಬಹಳಸ್ನಿಗ್ಧ, ಬಹಳರುಕ್ಷ, ಬಹಳಉಷ್ಣ, ಬ ಹಳ ಜಡ, ಬಿರಸು ಗಟ್ಟಿ, ವಿಶದ (ಜಿಗಟುಅಲ್ಲದ್ದು) ಮತ್ತು ವಿಷವಾಹಾರ, ವಿರುದ್ಧಾಹಾರ, ಅಸಾತ್ಮ್ಯಾಹಾರದಿಂದಲೂ, ಉಪವಾಸದಿಂದಲೂ, ಕಾಲಮೀರಿ ಉಣ್ಣುವದರಿಂದಲೂ, ಸ್ವಲ್ಪಊಟಮಾಡುವದರಿಂದಲೂ ದುಷ್ಟಮದ್ಯ ಮತ್ತು ನೀರು ಕುಡಿಯುವದರಿಂದಲೂ ಶರೀರಶುದ್ಧಿಯನ್ನು ಮಾಡಿಕೊಳ್ಳದಿರುವದ ರಿಂದಲೂ ಪಂಚಕರ್ಮಗಳ ಅಯೋಗದಿಂದಲೂ ಯೋಗ್ಯಕಾಲದಲ್ಲಿ ಉಪಚಾರ ಮಾಡಿಕೊಳ್ಳದಿರುವದರಿಂದಲೂ ಬೆಂಕಿ ಬಿಸಿಲು ಗಾಳಿನೀರುಗಳ ಅತಿಸೇವನೆ ಯಿಂದಲೂ ಜಾಗರಣದಿಂದಲೂ ವೇಗಧಾರಣದಿಂದಲೂ ಋತುಗಳಲ್ಲಿಯ ವೈಪ ರಿತ್ಯದಿಂದಲೂ ಶಕ್ತಿಮೀರಿ ಕೆಲಸಮಾಡುವದರಿಂದಲೂ ಅಂಜಿಕೆ ದುಃಖ ಚಿಂತೆ ಉದ್ವೇಗ ಗ್ಲಾನಿಗಳು ಬಹಳವಾಗುವದರಿಂದಲೂ ಕೃಮಿ,ಬಾವು,ಜ್ವರ, ಮೂಲ ವ್ಯಾಧಿಗಳಿಂದ ಬಲಕ್ಷಯವಾಗುವದರಿಂದಲೂ ಅಗ್ನಿಮಾಂದ್ಯವಾಗಲು ಮೂರೂ ದೋಷಗಳುಕುಪಿತವಾಗಿ ಅಗ್ನಿಯನ್ನು ಮತ್ತಿಷ್ಟುನಾಶಮಾಡಿ ಪಕ್ವಾಶಯವನ್ನು ಸೇರಿಮೂರೂದೋಷಗಳ ಲಕ್ಷಣವುಳ್ಳ ಅತಿಸಾರವನ್ನುಂಟುಮಾಡುತ್ತವೆ.॥೧೦॥

ಸನ್ನಿಪಾತಾತೀಸಾರದ ಲಕ್ಷಣವನ್ನು ಹೇಳುತ್ತಾರೆ.—

**ಅಪಿ ಚ ಶೋಣಿತಾದೀನ್ ಧಾತೂನತಿಪ್ರದುಷ್ಟಾನ್ ದೂಷಯಂತೋಧಾತುದೋಷ ಸ್ವಭಾವಕೃತಾನತೀಸಾರವರ್ಣಾನ್ ದರ್ಶಯಂತಿ ತತ್ರ ಶೋಣಿತಾದಿಷು ಧಾತುಷು ನಾತಿಪ್ರದುಷ್ಟೇಷು ಹಾರಿದ್ರಹರಿತನೀಲ ಮಾಂಜಿಷ್ಠ ಮಾಂಸಧಾವನ ಸಂಕಾಶಂ ರಕ್ತಂ ಕೃಷ್ಣಂ ಶ್ವೇತಂ ವಾ ವರಾಹಮೇದಃಸದೃಶಮ್ ಅನುಬದ್ಧವೇದನಮತಿವೇದನಂ ವಾ ಸಮಾಸವ್ಯಸ್ತಾಸಾದುಪವೇಶ್ಯತೇಪುರೀಷಮ್ ಮಹದ್ ಗ್ರಥಿತಮಾಮಂ ಶಕೃದಪಿ ವಾ ಪಕ್ವಮನತಿಕ್ಷೀಣಮಾಂಸಶೋಣಿತಬಲೋ ಮಂದಾಗ್ನಿವಿಹತಮುಖರಸಸ್ತಾದೃಶಮಾತುರಂ ಕೃಚ್ಛ್ರಸಾಧ್ಯಂ ವಿದ್ಯಾತ್ ಏಭಿರ್ವರ್ಣೈಃ ಅತಿಸಾರ್ಯಮಾಣಂ ಸೋಪದ್ರವಮಾತುರಮಸಾಧ್ಯೋಽಯಮಿತಿ ಪ್ರತ್ಯಾಚಕ್ಷೀತ ತದ್ ಯಥಾ -ಕ್ವಾಥಶೋಣಿತಾಭಂ ಯಕೃತ್ಪಿಂಡೋಪಮಂ ಮೇದೋಮಾಂಸೋದಕಸದೃಶಂ ದಧಿಮಜ್ಜತೈಲಕ್ಷೀರವಸಾವೇಶವಾರಾಭಮತಿನೀಲಂ ಅತಿರಕ್ತಮತಿಕೃಷ್ಣಂ ಉದಕಮಿವ ಪುನರ್ಮೇಚಕಾಭಮತಿಸ್ನಿಗ್ಧಂ ಹರಿತಾಭಂ ನೀಲಕಷಾಯವರ್ಣಂ ಕರ್ಬುರವರ್ಣಂ ವಾ ಆವಿಲಂ ಪಿಚ್ಛಿಲಂ ತಂತುಮದಾಮಂ ಚಂದ್ರಕೋಪಗತಮ್ ಅತಿಕುಣಪಪೂತಿಪೂಯಗಂಧ್ಯಾಮಮತ್ಸ್ಯಗಂಧಿ ಮಕ್ಷಿಕಾಕ್ರಾಂತಂ ಕುಥಿತಂ ವಾ ಬಹುಧಾತುಸ್ರಾವಮಲ್ಪಪುರೀಷಂ ವಾತಿಸಾರ್ಯಮಾಣಂ ತೃಷ್ಣಾದಾಹಜ್ವರಭ್ರಮತಮೋಹಿಕ್ಕಾಶ್ವಾಸಾನುಬಂಧಂ ಅತಿವೇದನಂ ಅವೇದನಂ ವಾ ಸ್ರಸ್ತಪಕ್ವಗುದಂ ಪತಿತಗುದವಲಿಂ ಮುಕ್ತನಾಲಮತಿಕ್ಷೀಣಬಲಮಾಂಸಶೋಣಿತಂ ಸರ್ವಪರ್ವಾಸ್ಥಿಶೂಲಿನಂ ಅರೋಚಕಾರತಿಪ್ರಲಾಪಸಮ್ಮೋಹಪರೀತಂಸಹಸೋಪರತವಿಕಾರಮತಿಸಾರಿಣಂ ಅಚಿಕಿತ್ಸ್ಯಂ ವಿದ್ಯಾತ್ ಇತಿ ಸನ್ನಿಪಾತಾತಿಸಾರಃ ॥ ೧೧ ॥**

**ಅರ್ಥ—** ಮತ್ತು ದುಷ್ಟವಾದ ರಕ್ತಾದಿಧಾತುಗಳನ್ನು ಮತ್ತಿಷ್ಟು ಕೆಡಿಸುತ್ತ, ಧಾತುಸ್ವಭಾವದಿಂದಲೂ ದೋಷಸ್ವಭಾವದಿಂದಲೂ ಅತಿಸಾರದಲ್ಲಿ ಬೇರೆಬೇರೆ ಬಣ್ಣಗಳನ್ನುಂಟುಮಾಡುತ್ತವೆ. ಅದರಲ್ಲಿ ರಕ್ತಾದಿಧಾತುಗಳು ಬಹಳ ದುಷ್ಟವಾಗಿದ್ದರೆ ಹಳದಿ, ಹಸರು, ನೀಲ, ಕೇಶರೀ ಬಣ್ಣದ ಅಥವಾ ತೊಳೆದ ಮಾಂಸದಂತೆಇದ್ದ ಕೆಂಪು, ಕಪ್ಪು, ಬಿಳೀ ಅಥವಾ ಹಂದಿಮೇದದಂಥ ಬಣ್ಣಗಳಲ್ಲಿ ಒಂದೊಂದಾಗಿ ಅಥವಾ ಎಲ್ಲ ಬಣ್ಣಗಳುಳ್ಳ ಮಲವು ಬೀಳುತ್ತದೆ.

ಒಂದೇಸವನೆ ಅಥವಾ ಬಹಳ ವ್ಯಥೆಯಾಗುತ್ತದೆ. ಮಲವು ಬಹಳ ಮತ್ತು ಗಟ್ಟಿಯಾಗಿದ್ದು ಒಮ್ಮೊಮ್ಮೆ ಪಕ್ವ ಒಮ್ಮೊಮ್ಮೆ ಅಪಕ್ವವಿರುತ್ತದೆ. ಅಗ್ನಿ ಮಾಂದ್ಯದಿಂದ ಬಾಯಿಯ ರುಚಿ ಕೆಟ್ಟಿರುತ್ತದೆ. ಇಂಥ ರೋಗಿಯ ರಕ್ತ ಮಾಂಸ-ಬಲಗಳು ಬಹಳ ಕ್ಷೀಣವಾಗದೆ ಇದ್ದರೆ ಅವನ ರೋಗವು ಕಷ್ಟಸಾಧ್ಯ ವೆಂದು ತಿಳಿಯಬೇಕು. ಮುಂದೆ ಹೇಳಿದ ಎಲ್ಲ ಬಣ್ಣ ಮತ್ತು ಉಪದ್ರವ ವುಳ್ಳ ಅತಿಸಾರವು ಅಸಾಧ್ಯವೆಂದು ತಿಳಿದು ಬಿಟ್ಟುಬಿಡಬೇಕು. ಅವು ಯಾವ ವೆಂದರೆ– ಕುದಿಸಿದ ರಕ್ತದಂಥ, ಯಕೃತ್‌ಪಿಂಡದಂಥ (ಕೆಂಪು ನೀಲಿ) ಮೇಪ ಮಾಂಸಗಳ ನೀರಿನಂಥ, ಮೊಸರು, ಮಜ್ಜೆ, ತೈಲ, ಹಾಲು, ನೆಣ, ಕುಟ್ಟಿದ ಮಾಂಸದಂಥ, ಬಹಳನೀಲ, ಬಹಳಕೆಂಪು, ಬಹಳಕಪ್ಪು, ನೀರಿನಂಥ, ಕಾಡಿ ಗೆಯಂಥ,ಅತಿಸ್ನಿಗ್ಧ, ಹಸುರು, ನೀಲಕಷಾಯದಂಥ, ತರತರದ ಬಣ್ಣವುಳ್ಳ ಅಥವಾ ಹೊಲಸು ಜಿಗಟು ತಂತುಗಳುಳ್ಳ ನವಿಲಿನ ಗರಿಯಂತೆ ಹೊಳೆಯುವ ಹೆಣದಂತೆ ಹೊಲಸುನಾರುವ, ಕೀವಿನಂತೆ, ಅಪಕ್ವದಂತೆ ಮೀನಿನಂತೆ ಹೊಲ ಸುನಾರುವ, ಬಹಳ ನೊಣಗಳು ಮುಕರುವ, ಕೊಳೆತ ವಾಸನೆವುಳ್ಳ, ಅನೇಕ ಧಾತುಗಳ ಸ್ರಾವವುಳ್ಳ ಸ್ವಲ್ಪ ಅಥವಾ ಬಹಳ ಮಲಬೀಳುವ ಮತ್ತು ಅತಿ ಸಾರದಲ್ಲಿ ನೀರಡಿಕೆ, ದಾಹ, ಜ್ವರ, ಭ್ರಮ, ಕತ್ತಲೆಗುಡಿಸೋಣ, ಬಿಕ್ಕ ಶ್ವಾಸಗಳ ಅನುಬಂಧವಿದ್ದು, ವೇದನೆಯು ಸ್ವಲ್ಪ ಅಥವಾ ಬಹಳವಿರಲಿ ಗುದ ಪಾಕವಾಗಿ ಅದು ಕೆಳಗೆ ಸರಿದಿದ್ದರೆ ಗುದಲಿಲಿಯು ಕೆಳಗೆ ಬಂದಿದ್ದರೆ ಅಥವಾ ಗುದನಾಲವು ಸರಿದಿದ್ದರೆ, ಬಲ ಮಾಂಸ ರಕ್ತಗಳು ಬಹಳ ಕ್ಷೀಣವಾಗಿ ಎಲ್ಲ ಸಂಧಿ ಅಸ್ಥಿಗಳಲ್ಲಿ ಶೂಲವಿದ್ದರೆ, ಅರುಚಿ, ಅರತಿ, ಪ್ರಲಾಪ, ಮೋಹಗಳು ಇದ್ದರೆ, ಎಲ್ಲ ವಿಕಾರಗಳೂ ಒಮ್ಮೆಲೇ ಇಲ್ಲದಂತೆ ಆದರೆ, ಆ ಅತಿಸಾರವು ಅಸಾ ಧ್ಯವೆಂದು ತಿಳಿಯಬೇಕು. ಇದು ಸನ್ನಿಪಾತಾತಿಸಾರವು || ೧೧ ||

**ತಮುಸಾಧ್ಯಮುಸಾಧ್ಯತಾಂ ಅಸಂಪ್ರಾಪ್ತಂ ಚಿಕಿತ್ಸೇತ್ ಯಥಾಪ್ರಧಾ ನೇನೋಪ ಕ್ರಮೇಣ ಹೇತೂಪಶಯದೋಷವಿಶೇಷಪರೀಕ್ಷಯಾ ಚೇತಿ || ೧೨ ||**

**ಅರ್ಥ—** ಈ ಸನ್ನಿಪಾತಾತಿಸಾರವನ್ನು ಅದು ಅಸಾಧ್ಯವಾಗುವ ಮೊದಲೇ ಮುಖ್ಯವಾದ ದೋಷ, ಅದರ ಕಾರಣ, ಉಪಶಯ, ದೋಷವಿಶೇಷ ಗಳನ್ನು ಪರೀಕ್ಷಿಸಿ ಚಿಕಿತ್ಸಿಸಬೇಕು. || ೧೨ ||

ಆಗಂತು ಅತಿಸಾರಗಳನ್ನು ಹೇಳುತ್ತಾರೆ—

**ಆಗಂತೂ ದ್ವಾವತೀಸಾರೌ ಮಾನಸೌ ಭಯಶೋಕಜೌ ||**
**ಯೌ ತಯೋರ್ಲಕ್ಷಣಂ ವಾಯೋರ್ಯದತೀಸಾರಲಕ್ಷಣಮ್ || ೧೩ ||**

**ಮಾರುತೋ ಭಯಶೋಕಾಭ್ಯಾಂ ಶೀಘ್ರಂ ಹಿ ಪರಿಕುಪ್ಯತಿ ||**
**ತಯೋಃ ಕ್ರಿಯಾ ವಾತಹರೀ ಹರ್ಷಣಾಶ್ವಾಸನಾನಿ ಚ || ೧೪ ||**

**ಇತ್ಯುಕ್ತಾಃ ಷಡತೀಸಾರಾಃ ಸಾಧ್ಯಾನಾಂ ಸಾಧನಂ ತತಃ ||**
**ಪ್ರವಕ್ಷ್ಯಾಮ್ಯನುಪೂರ್ವೇಣ ಯಥಾವತ್ ತನ್ನಿಬೋಧತ || ೧೫ ||**

**ಅರ್ಥ—** ಆಗಂತು ಅತಿಸಾರಗಳು ಎರಡು. ಅವು ಮಾನಸವಿಕಾರಗಳಾದ ಭಯ ಮತ್ತು ಶೋಕಗಳಿಂದ ಉಂಟಾಗುತ್ತವೆ. ಅವುಗಳ ಲಕ್ಷಣವು ವಾತಾತಿಸಾರದಂತೆ ಇರುತ್ತದೆ. || ೧೩ || ಏಕಂದರೆ ಭಯ ಮತ್ತು ಶೋಕಗಳಿಂದ ವಾತವು ಕುಪಿತವಾಗುತ್ತದೆ. ಅವುಗಳಿಗೆ ವಾತಹರ ಚಿಕಿತ್ಸೆಯನ್ನು ಸಮಾಧಾನ ಸಂತೋಷಗಳನ್ನು ಮಾಡಬೇಕು || ೧೪ || ಈ ಪ್ರಕಾರ ಆರು ಅತಿಸಾರಗಳು ಹೇಳಲ್ಪಟ್ಟವು. ಇವುಗಳಲ್ಲಿ ಸಾಧ್ಯವಾದವುಗಳ ಚಿಕಿತ್ಸೆಯನ್ನು ಕ್ರಮವಾಗಿ ಸರಿಯಾಗಿ ಹೇಳುವೆವು ಕೇಳಿರಿ. || ೧೫ ||

ಅತಿಸಾರದ ಚಿಕಿತ್ಸೆಯನ್ನು ಹೇಳುತ್ತಾರೆ—

**ದೋಷಾಃ ಸನ್ನಿಚಿತಾ ಯಸ್ಯ ವಿದಗ್ಧಾಹಾರಮೂರ್ಚ್ಛಿತಾಃ ||**
**ಅತೀಸಾರಾಯ ಕಲ್ಪಂತೇ ಭೂಯಸ್ತಾನ್ ಸಂಪ್ರವರ್ತಯೇತ್ ||೧೬ ||**

**ನ ತು ಸಂಗ್ರಹಣಂ ದೇಯಂ ಪೂರ್ವಮಾಮಾತಿಸಾರಿಣೇ ||**
**ದೋಷಾ ಹ್ಯಾದೌ ಬಧ್ಯಮಾನಾ ಜನಯಂತ್ಯಾಮಯಾನ್ ಬಹೂನ್ || ೧೬ ||**

**ಶೋಥಪಾಂಡ್ವಾಮಯಪ್ಲೀಹಕುಷ್ಠಗುಲ್ಮೋದರಜ್ವರಾನ್ ||**
**ದಂಡಕಾಲಸಕಾಧ್ಮಾನಗ್ರಹಣ್ಯರ್ಶೋಗದಾಂಸ್ತಥಾ || ೧೮ ||**

**ತಸ್ಮಾದುಪೇಕ್ಷೇತೋತ್ಕ್ಲಿಷ್ಟಾನ್ ವರ್ತಮಾನಾನ್ ಸ್ವಯಂ ಮಲಾನ್ ||**
**ಕೃಚ್ಛ್ರಂ ವಾ ವಹತಾಂ ದದ್ಯಾದಭಯಾಂ ಸಂಪ್ರವರ್ತಿನೀಮ್ || ೧೯ ||**

**ತಥಾ ಪ್ರವಾಹಿತೇ ದೋಷೇ ಪ್ರಶಾಮ್ಯತ್ಯುದರಾಮಯಃ ||**
**ಪ್ರಮಥ್ಯಾಂ ಮಧ್ಯದೋಷೇಭ್ಯೋ ದದ್ಯಾದ್ ದೀಪನಪಾಚನೀಮ್ ||೨೦**

**ಜಾಯತೇ ದೇಹಲಘುತಾ ಜಠರಾಗ್ನಿಶ್ಚ ವರ್ಧತೇ ||**
**ಲಂಘನಞ್ಚಾಲ್ಪ ದೋಷಾಣಾಂ ಪ್ರಶಸ್ತಮತಿಸಾರಿಣಾಮ್ ||೨೧||**

**ಅರ್ಥ—** ಯಾವನ ಸಂಚಿತದೋಷಗಳು ಅಪಕ್ವ ಅನ್ನದಿಂದ ಕುಪಿತವಾಗಿ ಅತಿಸಾರವುಂಟಾಗಿರುತ್ತದೆ ಅವನ ಮಲವು ಮತ್ತೆ ಹೆಚ್ಚುಹೋಗುವಂತೆ ಮಾಡಬೇಕು. ||೧೬|| ಆಮಾತಿಸಾರದಲ್ಲಿ ಮೊದಲು ಸ್ತಂಭನವನ್ನು ಕೊಡಬಾರದು. ಏಕಂದರೆ ದೋಷಗಳು ಮೊದಲೇ ಪ್ರತಿಬಂಧಿಸಲ್ಪಟ್ಟರೆ ಅವು || ೧೭ || ಬಾವು, ಪಾಂಡುರೋಗ, ಪ್ಲೀಹ, ಕುಷ್ಠ, ಗುಲ್ಮ, ಉದರ, ಜ್ವರ, ದಂಡಕ, ಅಲಸಕ, ಹೊಟ್ಟೆಯುಬ್ಬು, ಸಂಗ್ರಹಣಿ, ಮೂಲವ್ಯಾಧಿ ಮುಂತಾದ ಅನೇಕ ರೋಗಗಳನ್ನುಂಟುಮಾಡುತ್ತವೆ. ||೧೮|| ಆಕಾರಣ ತಾವೇ ಉತ್ಕ್ಲೇಶಹೊಂದಿ ( ಕೆರಳಿ ) ಹೋಗುವಂಥ ಮಲಗಳನ್ನು ಹೋಗಗೊಡಬೇಕು. ಚನ್ನಾಗಿ ಹೋಗದಿದ್ದರೆ. ಅದನ್ನು ಹೋಗಿಸುವಂಥ ಅಣಲೇಕಾಯಿಯನ್ನು ಕೊಡಬೇಕು. ||೧೯|| ಅದರಿಂದ ದೋಷಗಳು ಹೊರಹೋಗಲು ಅತಿಸಾರವು ನಿಲ್ಲುವದು. ದೋಷಗಳು ಮಧ್ಯಮ ಇದ್ದರೆ ದೀಪನಪಾಚನವಾದ ಪ್ರಮಥ್ಯೆ ( ೮ ಪಾಲು ನೀರು ಹಾಕಿ ೪ ಪಾಲು ಉಳಿಸಿದ ಕಲ್ಕ ) ಯನ್ನು ಕೊಡಬೇಕು. ||೨೦|| ಅದರಿಂದ ಶರೀರವು ಹಗುರು ಆಗಿ ಜಠರಾಗ್ನಿಯು ಬೆಳೆಯುವದು. ಅಲ್ಪದೋಷವುಳ್ಳತಿಸಾರಿಗೆ ಲಂಘನವು ಒಳ್ಳೆಯದು. ||೨೧||

ಪ್ರಮಥ್ಯೆಗಳನ್ನು ಹೇಳುತ್ತಾರೆ—

**ಪಿಪ್ಪಲೀ ನಾಗರಂ ಧಾನ್ಯಂ ಭೂತೀಕಮಭಯಾ ವಚಾ ||**
**ಹ್ರೀಬೇರಂ ಭದ್ರಮುಸ್ತಾನಿ ಬಿಲ್ವನಾಗರಧಾನ್ಯಕಮ್ ||೨೨||**
**ಪೃಶ್ನಿಪರ್ಣೀ ಶ್ವದಂಷ್ಟ್ರಾ ಚ ಸಮಂಗಾಕಂಟಿಕಾರಿಕಾ ||**
**ತಿಸ್ರಃ ಪ್ರಮಥ್ಯಾ ವಿಹಿತಾಃ ಶ್ಲೋಕಾರ್ಧೈರತಿಸಾರಿಣಾಮ್ ||೨೩||**
**ವಚಾಪ್ರತಿವಿಷಾಭ್ಯಾಂ ವಾ ಮುಸ್ತ ಪರ್ಪಟಕೇನ ವಾ ||**
**ಹ್ರೀಬೇರಶೃಂಗಬೇರಾಭ್ಯಾಂ ಪಕ್ವಂ ವಾ ದಾಪಯೇಜ್ಜಲಮ್ ||೨೪||**

**ಅರ್ಥ—** ೧ ಹಿಪ್ಪಲಿ, ಶುಂಠಿ, ಹವೀಜ, ಭೂತೀಕ( ಅಜವಾನ) ಅಣಲೆ, ಬಜೆ, ೨ ಬಾಳದಬೇರು, ಭದ್ರಮುಸ್ತೆ, ಬಿಲ್ವ, ಶುಂಠಿ, ಹವೀಜ || ೨೨ || ೩ ಮೂರೆಲೆಹೊನ್ನೆ, ನೆಗ್ಗಿನಮುಳ್ಳು ಸಮಂಗ( ಹರಳುಗಿಡಮಂಜಿಷ್ಠಾ)ನೆಲಗುಳ್ಳ,

ಈ ಪ್ರಕಾರ ಅರ್ಧ—ಅರ್ಧ ಶ್ಲೋಕದಿಂದ ಹೇಳಿದ ೩ ಪ್ರಮಥ್ಯೆಗಳನ್ನು ಅತಿಸಾರಿಗಳಿಗೆ ಕೊಡಬೇಕು. ॥ ೨೩ ॥ ೧ ಬಜೆ, ಅತಿವಿಷ, ಅಥವಾ ೨ ಜೇಕು, ಕಲ್ಲುಸಬ್ಬಸಿಗೆ, ಅಥವಾ ೩ ಬಾಳದಬೇರು, ಶುಂಠಿ ಇವುಗಳನ್ನು ೧ ತೊಲಿಯಷ್ಟು ೬೪ ತೊಲಿ ನೀರಿನಲ್ಲಿ ಹಾಕಿ ಅರ್ಧ ಉಳಿಸಿ ಅದನ್ನು ನೀರಡಿಸಿದಾಗ ಕೊಡುತ್ತಿರಬೇಕು. ॥ ೨೪ ॥

ಅನ್ನಪಾನಗಳು ಹೇಳುತ್ತಾರೆ—

ಯುಕ್ತೇಽನ್ನಕಾಲೇ ಕ್ಷುತ್ ಕ್ಷಾಮಂ ಲಘೂನ್ಯನ್ನಾನಿ ಭೋಜಯೇತ್ ॥
ತಥಾ ಸ ಶೀಘ್ರಂ ಪ್ರಾಪ್ನೋತಿ ರುಚಿಮಗ್ನಿಬಲಂ ಬಲಮ್ ॥ ೨೫ ॥

ತಕ್ರೇಣಾವಂತಿಸೋಮೇನ ಯವಾಗ್ವಾ ತರ್ಪಣೇನ ವಾ ॥
ಸುರಯಾ ಮಧುನಾ ಚಾದೌ ಯಥಾಸಾತ್ಮ್ಯಮುಪಾಚರೇತ್ ॥ ೨೬ ॥

ಯವಾಗೂಭಿರ್ವಿಲೇಪೀಭಿಃ ಖಡೈರ್ಯೂಷೈ ರಸೌದನೈಃ ॥
ದೀಪನಗ್ರಾಹಿಸಂಯುಕ್ತೈಃ ಕ್ರಮಶ್ಚ ಸ್ಯಾದತಃ ಪರಮ್ ॥ ೨೭ ॥

ಶಾಲಪರ್ಣೀ ಪೃಶ್ನಿಪರ್ಣೀ ಬೃಹತೀ ಕಂಟಕಾರಿಕಾ ॥
ಬಲಾಶ್ವದಂಷ್ಟ್ರಾಬಿಲ್ವಾನಿ ಪಾಠಾನಾಗರಧಾನ್ಯಕಮ್ ॥ ೨೮ ॥

ಶಟೀಂ ಪಲಾಶಾಂ ಹಪುಷಾಂ ವಚಾಜೀರಕಪಿಪ್ಪಲೀಃ ॥
ಯವಾನೀಂ ಪಿಪ್ಪಲೀಮೂಲಂ ಚಿತ್ರಕಂ ಹಸ್ತಿಪಿಪ್ಪಲೀಮ್ ॥ ೨೯ ॥

ವೃಕ್ಷಾಮ್ಲಂ ದಾಡಿಮಂ ಚಾಮ್ಲಂ ಸಹಿಂಗು ವಿಡಸೈಂಧವಮ್ ॥
ಪ್ರಯೋಜಯೇದನ್ನಪಾನೇ ವಿಧಿನಾ ಸೂಪಕಲ್ಪಿತಮ್ ॥ ೩೦ ॥

ವಾತಶ್ಲೇಷ್ಮಹರೋ ಹ್ಯೇಷ ಗಣೋ ದೀಪನಪಾಚನಃ ॥
ಗ್ರಾಹೀ ಬಲ್ಯೋ ರೋಚನಶ್ಚ ತಸ್ಮಾಚ್ಛಸ್ತೋಽತಿಸಾರಿಣಾಮ್ ॥ ೩೧ ॥

ಆಮೇ ಪರಿಣತೇ ಯಸ್ತು ವಿಬದ್ಧಮತಿಸಾರ್ಯತೇ ॥
ಸಫೇನಪಿಚ್ಛಮಲ್ಪಾಲ್ಪಂ ಬಹುಶಃ ಸಪ್ರವಾಹಿಕಮ್ ॥ ೩೨ ॥

ತಂ ಮೂಲಕಾನಾಂ ಯೂಷೇಣ ಬದರಾಣಾಮಥಾಪಿ ವಾ ॥
ಉಪೋದಿಕಾಯಾಃ ಕ್ಷೀರಿಣ್ಯಾ ಯವಾನ್ಯಾ ವಾಸ್ತುಕಸ್ಯ ಚ ॥ ೩೩ ॥

ಸುವರ್ಚಲಾಯಾಶ್ಚಂಚ್ವಾ ವಾ ಶಾಕೇನಾವಲ್ಗುಜಸ್ಯ ವಾ ॥
ಶಟ್ಯಾಃ ಕರ್ಕಾರುಕಾಣಾಂ ವಾ ಜೀವಂತ್ಯಾಶ್ಚಿರ್ಭಟಸ್ಯ ಚ ॥ ೩೪ ॥

ಲೋಣಿಕಾಯಾಃ ಸಪಾಠಾಯಾಃ ಶುಷ್ಕಶಾಕೇನ ವಾ ಪುನಃ ||
ದಧಿದಾಡಿಮಸಿದ್ಧೇನ ಬಹುಸ್ನೇಹೇನ ಭೋಜಯೇತ್ || ೩೫ ||

ಕಲ್ಕಃ ಸ್ಯಾದ್ ಬಾಲಬಿಲ್ವಾನಾಂ ತಿಲಕಲ್ಕಶ್ಚ ತತ್ಸಮಃ ||
ದಧ್ನಃ ಸರೋಽಮ್ಲಃ ಸ್ನೇಹಾಢ್ಯಃ ಖಡೋ ಹನ್ಯಾತ್ ಪ್ರವಾಹಿಕಾಮ್ || ೩೬ ||

ಯವಾನಾಂ ಮುದ್ಗಮಾಷಾಣಾಂ ಶಾಲೀನಾಞ್ಚ ತಿಲಸ್ಯ ಚ ||
ಕೋಲಾನಾಂ ಬಾಲಬಿಲ್ವಾನಾಂ ಧಾನ್ಯಯೂಷಂ ಪ್ರಕಲ್ಪಯೇತ್ || ೩೭ ||

ಏಕಧ್ಯಂ ಯಮಕೇ ಭೃಷ್ಟಂ ದಧಿದಾಡಿಮಸಾಧಿತಮ್ ||
ವರ್ಚಃಕ್ಷಯೇ ಶುಷ್ಕಮುಖಂ ಶಾಲ್ಯನ್ನಂ ತೇನ ಭೋಜಯೇತ್ || ೩೮ ||

ದಧ್ನಃ ಸರಂ ವಾ ಯಮಕೇ ಭೃಷ್ಟಂ ಸಗುಡನಾಗರಮ್ ||
ಸುರಾಂ ವಾ ಯಮಕೇ ಭೃಷ್ಟ್ವಾ ವ್ಯಞ್ಜನಾರ್ಥೇ ಪ್ರಯೋಜಯೇತ್ || ೩೯ ||

ಫಲಾಮ್ಲಂ ಯಮಕೇ ಭೃಷ್ಟಂ ಯೂಷಂ ಗೃಞ್ಜನಕಸ್ಯ ವಾ ||
ಲೋಪಾಕರಸಮಮ್ಲಂ ವಾ ಸ್ನಿಗ್ಧಾಮ್ಲಂ ಕಚ್ಛಪಸ್ಯ ವಾ || ೪೦ ||

ವರ್ಹಿತಿತ್ತಿರಿದಕ್ಷಾಣಾಂ ವರ್ತಕಾನಾಂ ತಥಾ ರಸಃ ||
ಸ್ನಿಗ್ಧೋಷ್ಣಃ ಶಾಲಯಶ್ಚಾಗ್ರ್ಯಾ ವರ್ಚಃಕ್ಷಯರುಜಾಪಹಾಃ || ೪೧ ||

ಅಂತರಾಧಿರಸಂ ಪೂತ್ವಾ ರಕ್ತಂ ಮೇಷಸ್ಯ ಚೋಭಯಮ್ ||
ಪಚೇದ್ ದಾಡಿಮಸಾರಾಮ್ಲಂ ಸಧಾನ್ಯಸ್ನೇಹನಾಗರಮ್ || ೪೨ ||

ಭೋಜನೇ ರಕ್ತಶಾಲೀನಾಂ ತೇನಾದ್ಯಾತ್ ಪ್ರಪಿಬೇಚ್ಚ ತಮ್ ||
ತಥಾ ವರ್ಚಃಕ್ಷಯಕೃತೈರ್ವ್ಯಾಧಿಭಿರ್ವಿಪ್ರಮುಚ್ಯತೇ || ೪೩ ||

**ಅರ್ಥ—** ಹಸಿವೆಯಾಗಲು ಸರಿಯಾದ ಊಟವಕಾಲಕ್ಕೆ ಹಗುರು ಆಹಾರಗಳನ್ನು ಉಣಿಸಬೇಕು. ಇದರಿಂದ ಅವನಿಗೆ ತೀವ್ರವಾಗಿ ರುಚಿಯೂ ಅಗ್ನಿಬಲವೂ ಶಕ್ತಿಯೂ ಉಂಟಾಗುವವು. ||೩೪|| ಮೊದಲು ಅವನ ಅಭ್ಯಾಸದ ಅನ್ನವನ್ನು ಮಜ್ಜಿಗೆಯೊಡನೆ ಅಥವಾ ಗಂಜಿಯೊಡನೆ, ಪೇಯದೊಡನೆ ತರ್ಪಣದೊಡನೆ ಅಥವಾ ಸುರೆಯೊಡನೆ, ಜೇನಿನೊಡನೆ ಕೊಡಬೇಕು. ||೩೬||

ಆಮೇಲೆ ದೀಪಕ ಮತ್ತು ಸ್ತಂಭಕದ್ರವ್ಯಗಳಿಂದ ಕೂಡಿದ ಪೇಯ, ವಿಲೇಪಿ, ಖಡ (ಕಾಯಿಗಳಿಂದ ಮಾಡಿದ ಕಟ್ಟು) ಕಟ್ವರ ಮತ್ತು ಮಾಂಸರಸಗಳಿಂದ ಮಾಡಿದ ಅನ್ನಗಳನ್ನು ಕ್ರಮವಾಗಿ ಕೊಡಬೇಕು. ||೨೭||

**ದೀಪನ ಪಾಚನಗಣಗಳನ್ನು ಹೇಳುತ್ತಾರೆ—**

ಒಂದೆಲೆಹೊನ್ನೆ, ಮೂರೆಲೆಹೊನ್ನೆ, ಹೆಬ್ಬಗುಳ್ಳ, ನೆಲಗುಳ್ಳ, ಮುಷ್ಟಿ, ನೆಗ್ಗಿಲು, ಬಿಲ್ವ, ಆಗಳಶುಂಠಿ, ಹವೀಜ||೨೮|| ಕಚೋರೆ, ಮುತ್ತಲು ಹಪುಷಾ ಹ್ರೌಚೇರ (ಹಿಂದಿ) ಬಜೆ, ಜೀರಿಗೆ, ಹಿಪ್ಪಲಿ, ಅಜವಾನ, ಮೋಡಿ, ಚಿತ್ರಕ, ಗಜಹಿಪ್ಪಲಿ, ||೨೯|| ವೃಕ್ಷಾಮ್ಲ (ಅಮಸೂಲ) ದಾಳಿಂಬ, ಇಂಗು ಬಿಡ ಲವಣ, ಸೈಂಧವ ಇವುಗಳನ್ನು ವಿಧಿಯಂತೆ ಸಿದ್ಧಮಾಡಿ ||೩೦|| ಅನ್ನಪಾನ ಗಳಲ್ಲಿ ಉಪಯೋಗಿಸಬೇಕು. ಇದು ವಾತಕಫನಾಶಕ, ದೀಪನ, ಪಾಚನಗಣ ವಿದ್ದು ಸ್ತಂಭಕ, ಬಲವರ್ಧಕ, ರುಚಿಕರವಾಗಿದೆ. ಆದ್ದರಿಂದ ಅತಿಸಾರಿಗಳಿಗೆ ಒಳ್ಳೆಯದು. ||೩೧|| ಆಮವು ಪಕ್ವವಾದಮೇಲೆ ಶೂಲಯುಕ್ತ ಜಿಗುಟಾದ ಸ್ವಲ್ಪಸ್ವಲ್ಪ ಮಲವು ತಿಣುಕಿ ತಿಣುಕಿ ತಟ್ಟಿಸುತ್ತ ಅನೇಕ ಸಾರೆ ಬೀಳುವದು. ||೩೨|| ಅವನಿಗೆ ಮೂಲಂಗಿಯ ಅಥವಾ ಜೋಳದ ಕಟ್ಟನ್ನು ಅಥವಾ ಬಸಳೆ, ಕ್ಷೀರಿಣೀ (ಶಾಕವಿಶೇಷ) ಅಜವಾನ, ವಾಸ್ತುಕ, (ಚಕೋತ) ಸುವ ರ್ಚಲಾ, (ಸೂರ್ಯಪುಷ್ಪ ನಾಯಿಸಾಸಿವೆ) ಚಂಚು, (ಶಾಕವಿಶೇಷ) ಕಚೋರ ಕರ್ಕಾರುಕ (ಶಾಕವಿಶೇಷ) ಜೀವಂತಿ ಚಿರ್ಭಟಿ ||೩೪|| (ಕೆಂಪುಕುಂಬಳ) ಲೋಣೀಕಾ (ಚಾಂಗೇರಿ) ಅಗಳಶುಂಠಿ, ಯವ್ಯಶಾಕ (ಶಾಕವಿಶೇಷ) ಇವುಗಳ ಪಲ್ಲೆಯನ್ನು ಮೊಸರು, ದಾಳಿಂಬ ಮತ್ತು ಬಹಳ ಸ್ನೇಹ ಹಾಕಿ ತಿನ್ನಿಸಬೇಕು. ||೩೫|| ಎಳೇ ಬಿಲ್ವಗಳ ಕಲ್ಕದಲ್ಲಿ ಅಷ್ಟೇ ಎಳ್ಳು ಹಿಂಡಿಯನ್ನು ಕೂಡಿಸಿ, ಮೊಸರಿನ ಮೇಲಿನ ನೀರನ್ನು ಹಾಕಿ ಹುಳಿಮಾಡಿ ಹೆಚ್ಚು ಸ್ನೇಹವನ್ನು ಹಾಕಿ ಮಾಡಿದ ಕಟ್ಟು ಪ್ರವಾಹಿಕೆ (ತಿಣುಕುವದು) ಯನ್ನು ಕಳೆಯುತ್ತದೆ. ||೩೬|| ಅತಿಸಾರದಿಂದ ಮೋರೆ ಒಣಗಿದ ರೋಗಿಗೆ ಜವೆ, ಹೆಸರು, ಉದ್ದು, ಅಕ್ಕಿ, ಎಳ್ಳು, ಜೋಳ, ಎಳೇ ಬಿಲ್ವಗಳನ್ನು ಹಾಕಿ ಧಾನ್ಯದ ಕಟ್ಟನ್ನು ಮಾಡಿ ||೩೭|| ಅದಕ್ಕೆ ತುಪ್ಪ ಎಣ್ಣೆಗಳ ಒಗ್ಗರಣೆಕೊಟ್ಟು ಮೊಸರು ದಾಳಿಂಬಗಳನ್ನು ಹಾಕಿ ಅದರೊಡನೆ ಅಕ್ಕಿಅನ್ನವನ್ನು ತಿನ್ನಿಸಬೇಕು. ಇದು ಮಲಕ್ಷಯ (ಬಹಳ ಅತಿಸಾರದಿಂದುಂಟಾದ) ದಲ್ಲಿ ಹಿತಕರವು. ||೩೮|| ವ್ಯಂಜನಕ್ಕಾಗಿ ಬೆಲ್ಲ ಸುಂಠಿ ಯನ್ನು ಹಾಕಿದ ಮೊಸರಿನ ನೀರಿಗೆ ಅಥವಾ ಸುರೆಗೆ ತುಪ್ಪ ಎಣ್ಣೆಗಳ ಒಗ್ಗ

ರಣೆಯನ್ನು ಕೊಟ್ಟು ಉಪಯೋಗಿಸಬೇಕು. ||೩೯|| ಅಥವಾ ಗಜ್ಜರೀ ಕಟ್ಟನ್ನು ಹುಳಿಫಲಗಳನ್ನು ಹಾಕಿ ತುಪ್ಪ ಎಣ್ಣೆಗಳ ಒಗ್ಗರಣೆ ಕೊಟ್ಟು ಅಥವಾ ಸಣ್ಣ ನರಿಯ ಮಾಂಸರಸವನ್ನು ಹುಳಿಮಾಡಿ ಅಥವಾ ಆಡಿನ ರಸವನ್ನು ಸ್ನೇಹ ಹುಳಿಹಾಕಿ ಉಪಯೋಗಿಸಬೇಕು. ||೪೦|| ನವಿಲು, ತಿತ್ತಿರಿ (ಕೌಜುಗಹಕ್ಕಿ), ಕೋಳಿ, ವರ್ತಕ (ಕೆಂಡಿಲಹಕ್ಕಿ) ಗಳ ಮಾಂಸರಸವನ್ನು ಅಥವಾ ಸ್ನೇಹ ಹಾಕಿದ ಬಿಸಿಯಾದ ಉತ್ತಮ ಅಕ್ಕಿಯ ಅನ್ನವನ್ನು ತಿನ್ನಿಸಬೇಕು. ಇವು ಮಲಕ್ಷಯದ ರೋಗಗಳನ್ನು ಕಳೆಯುವವು. ||೪೧|| ಹೋತಿನ ಮಧ್ಯದೇಹದ ಮಾಂಸರಸವನ್ನು ಸೋಸಿ ತೆಕ್ಕೊಂಡು, ಅದರಲ್ಲಿ ಅದರ ರಕ್ತವನ್ನು ಕೂಡಿಸಿ ಎರಡನ್ನೂ ಕುದಿಸಿ, ಅದರಲ್ಲಿ ಹವೀಜ, ಸ್ನೇಹ, ಸುಂಠಿ ಹಾಕಿ ದಾಳಿಂಬ ರಸ ದಿಂದ ಹುಳಿಮಾಡಿ ||೪೨|| ಕೆಂಪು ಅಕ್ಕಿಯ ಅನ್ನವನ್ನು ತಿನಿಸಬೇಕು. ಮೇಲೆ ಅದನ್ನು ಕುಡಿಸಬೇಕು. ಇದರಿಂದ ಮಲಕ್ಷಯದಿಂದುಂಟಾದ ರೋಗಗಳಿಂದ ರೋಗಿಯು ಮುಕ್ತನಾಗುತ್ತಾನೆ. ||೪೩||

ಗುದಭ್ರಂಶದ ಚಿಕಿತ್ಸೆಯನ್ನು ಹೇಳುತ್ತಾರೆ—

**ಗುದನಿಃಸರಣೇ ಶೂಲೇ ಪಾನಮಮ್ಲಸ್ಯ ಸರ್ಪಿಷಃ ||**
**ಪ್ರಶಸ್ಯತೇ ನಿರಾಮಾಣಾಮಥವಾಪ್ಯನುವಾಸನಮ್ || ೪೪ ||**

ಚಾಂಗೇರಿ ಘೃತ—

**ಚಾಂಗೇರೀಕೋಲದಧ್ಯಮ್ಲನಾಗರಕ್ಷಾರಸಂಯುತಮ್ ||**
**ಘೃತಮುತ್ಕ್ವಥಿತಂ ಪೇಯಂ ಗುದಭ್ರಂಶರುಜಾಪಹಮ್ || ೪೫ ||**

ಚವ್ಯಾದಿ ಘೃತ—

**ಸಚವ್ಯಪಿಪ್ಪಲೀಮೂಲಂ ಸವ್ಯೋಷಗುಡದಾಡಿಮಮ್ ||**
**ಪೇಯಮಮ್ಲಘೃತಂ ಯುಕ್ತ್ಯಾ ಸಾಜಾಜೀಧಾನ್ಯನಾಗರಮ್ || ೪೬ ||**
**ದಶಮೂಲ್ಯುಪಸಿದ್ಧಂ ವಾ ಸಬಿಲ್ವಮನುವಾಸನಮ್ ||**
**ಶಠೀಶತಾಹ್ವಾಕುಷ್ಠೈರ್ವಾ ವಚಯಾ ಚಿತ್ರಕೇಣ ವಾ || ೪೭ ||**
**ಸ್ತಬ್ಧೇ ಭ್ರಷ್ಟೇ ಗುದೇ ಪೂರ್ವಂ ಸ್ನೇಹಸ್ವೇದೌ ಪ್ರಯೋಜಯೇತ್ ||**
**ಸುಸ್ವಿನ್ನಂ ತಂ ಮೃದೂಭೂತಂ ಪಿಚುನಾ ಸಂಪ್ರವೇಶಯೇತ್ || ೪೮ ||**

**ಅರ್ಥ—** ಗುದಭ್ರಂಶ ಮತ್ತು ಶೂಲಗಳಿದ್ದರೆ (ದಾಳಿಂಬ,ನೆಲ್ಲಿ ಮುಂತಾದ ಆಮ್ಲ ದ್ರವ್ಯಗಳಿಂದ ಸಿದ್ಧವಾದ) ಹುಳಿ ಘೃತವನ್ನು ಕುಡಿಯ ಬೇಕು. ಅತಿಸಾರವು ಪಕ್ವವಿದ್ದರೆ ಅನುವಾಸನ ಬಸ್ತಿಯನ್ನು ಕೊಡಬೇಕು. || ೪೪ ||

**ಚಾಂಗೇರಿ ಘೃತವನ್ನು ಹೇಳುತ್ತಾರೆ—**

ಪುಳ್ಳಂಪುರಚಿ, ಬೋರೆ, ಮೊಸರು ೮-೮ ಪ್ರಸ್ಥ ಸುಂಠಿ, ಜವಖಾರ ಗಳನ್ನು ಕೂಡಿ ೩೨ ತೊಲಿ ಹಾಕಿ ಕುದಿಸಿದ ೧೨೮ ತೊಲಿ ಘೃತವು ಗುದ ಭ್ರಂಶ ಶೂಲಗಳನ್ನು ಕಳೆಯುವದು. || ೪೫ ||

**ಚವ್ಯಾದಿ ಘೃತವನ್ನು ಹೇಳುತ್ತಾರೆ—**

ಚವಕ, ತ್ರಿಕಟು, ಬೆಲ್ಲ, ದಾಳಿಂಬ, ಜೀರಗಿ, ಹವೀಜ, ಶುಂಠಿ, ಇವುಗಳ ಕಲ್ಕಗಳಿಂದ ಮೇಲೆ ಹೇಳಿದ ದ್ರವಗಳಲ್ಲಿ ಮಾಡಿದ ಆಮ್ಲಘೃತವನ್ನು ಕುಡಿಯಬೇಕು. || ೪೬ ||

ದಶಮೂಲ ಕಷಾಯದಲ್ಲಿ ಬಾಲಬಿಲ್ವದ ಕಲ್ಕವನ್ನು ಹಾಕಿ ಸಿದ್ಧಮಾಡಿದ ಅಥವಾ ಕಚೋರೆ, ಬಡೀಸೋಪ, ಕೋಷ್ಠ ಕಲ್ಕಗಳಿಂದ ಮೇಲಿನ ದ್ರವಗಳಲ್ಲಿ ಸಿದ್ಧಮಾಡಿದ ಅಥವಾ ಬಜಿ, ಚಿತ್ರಕಗಳ ಕಲ್ಕದಿಂದ ಮೇಲಿನ ದ್ರವಗಳಲ್ಲಿ ಸಿದ್ಧಮಾಡಿದ ಘೃತಗಳಿಂದ ಅನುವಾಸನ ಬಸ್ತಿಯನ್ನು ಕೊಡಬೇಕು ||೪೭||

ಭ್ರಂಶ ಹೊಂದಿದ ಗುದವು ಮೇಲಕ್ಕೆ ಏರದೆ ಹೋದರೆ, ಮೊದಲು ಸ್ನೇಹ ಸ್ವೇದಗಳನ್ನು ಮಾಡಿ, ಅದು ಮೆತ್ತಗಾಗಲು, ಅರಿವೆಯ ತುಂಡಿನಿಂದ ಒತ್ತಿ ಪ್ರವೇಶಿಸಬೇಕು. || ೪೮ ||

**ವಿಬದ್ಧವಾತವರ್ಚಾಸ್ತು ಬಹುಶೂಲಪ್ರವಾಹಿಕಃ ||**
**ಸರಕ್ತಪಿಚ್ಛಸ್ತೃಷ್ಣಾರ್ತಃ ಕ್ಷೀರಸೌಹಿತ್ಯಮರ್ಹತಿ || ೪೯ ||**
**ಯಮಕಸ್ಯೋಪರಿ ಕ್ಷೀರಂ ಧಾರೋಷ್ಣಂ ವಾ ಪಿಬೇತ್ಸನಾ ||**
**ಶೃತಮೇರಂಡಮೂಲೇನ ಬಾಲಬಿಲ್ವೇನ ವಾ ಪುನಃ ||೫೦ ||**
**ಏವಂ ಕ್ಷೀರಪ್ರಯೋಗೇಣ ರಕ್ತಂ ಪಿಚ್ಛಾ ಚ ಶಾಮ್ಯತಿ ||**
**ಶೂಲಂ ಪ್ರವಾಹಿಕಾ ಚೈವ ವಿಬಂಧಶ್ಚೋಪಶಾಮ್ಯತಿ || ೫೧ ||**

**ಅರ್ಥ—** ಮಲವಾತಗಳ ಪ್ರತಿಬಂಧ, ಶೂಲ, ತಿಣಕೋಣ, ರಕ್ತ ಕೂಡಿದ ಬುರಗುಮಲ ಮತ್ತು ಬಹಳ ನೀರಡಿಕೆಗಳಿದ್ದರೆ ಯಥೇಷ್ಟವಾಗಿ

ಹಾಲು ಕುಡಿಯಬೇಕು. ಯಮಕ, [ಹುಗ್ಗಿ] ವನ್ನು ತಿಂದು ಧಾರೋಷ್ಣ ಹಾಲನ್ನು ಕುಡಿಯಬೇಕು. ||೪೯|| ಅಥವಾ ಔಡಲಬೇರಿನಿಂದ ಅಥವಾ ಬಾಲಬಿಲ್ವದಿಂದ ಸಿದ್ಧವಾದ ಹಾಲನ್ನು ಕುಡಿಯಬೇಕು. ||೫೦|| ಈ ಕ್ಷೀರ ಪ್ರಯೋಗದಿಂದ ರಕ್ತವು, ಬುರುಗು, ಶೂಲ, ತಿಣಕೋಣ, ಮಲವಾತಗಳ ಪ್ರತಿಬಂಧವು ಶಾಂತವಾಗುವದು. || ೫೧ ||

**ಪಿತ್ತಾತಿಸಾರ ಚಿಕಿತ್ಸೆಯನ್ನು ಹೇಳುತ್ತಾರೆ—**

**ಪಿತ್ತಾತಿಸಾರಂ ಪುನರ್ನಿದಾನೋಪಶಯಾಕೃತಿಭಿರಾಮಾನ್ವಯಮುಪಲಭ್ಯ ಯಥಾಬಲಂ ಲಂಘನಪಾಚನಾಭ್ಯಾಮುಪಾಚರೇತ್ ತೃಷ್ಯತಸ್ತು ಮುಸ್ತಪರ್ಪಟಕೋಶೀರಶಾರಿವಾಚಂದನಕಿರಾತತಿಕ್ತಕೋದಿಚ್ಯವಾರಿಭಿಃ ಉಪಚಾರಃ । ಲಂಘಿತಸ್ಯ ತಸ್ಯ ಚಾಹಾರಕಾಲೇ ಬಲಾತಿಬಲಾಸೂಪ್ಯಪರ್ಣಿ ಶಾಲಪರ್ಣೀ ಪೃಶ್ನಿಪರ್ಣೀಬೃಹತೀಕಂಟಕಾರಿ ಕಾಶತಾವರೀಶ್ವದಂಷ್ಟ್ರಾನಿರ್ಯೂಹಪ್ರಯುಕ್ತೇನ ಯಥಾಸಾತ್ಮ್ಯಂ ಯವಾಗೂಮಂಡಾದಿನಾ ತರ್ಪಣಾದಿನಾ ವಾ ಕ್ರಮೇಣೋಪಚಾರಃ । ಮುದ್ಗಹರೇಣುಮಸೂರಮುಕುಷ್ಠಾಢಕೀಯೂಷೈರ್ವಾ ಲಾವಕಪಿಞ್ಜಲಶಶಹರಿಣೈಣಕಾಲಪುಚ್ಛರಸೈರೀಷದಮ್ಲೈರನಮ್ಲೈರ್ವಾ ಕ್ರಮಶೋಽಗ್ನಿಂ ಸಂಧುಕ್ಷಯೇತ್ ॥ ಅನುಬಂಧೇ ತ್ವಸ್ಯ ದೀಪನೀಯಪಾಚನೀಯೋಪಶಮನೀಯಸಂಗ್ರಹಣೀಯಾನ್ ಯೋಗಾನ್ ಪ್ರಯೋಜಯೇದಿತಿ ||೫೨||**

**ಅರ್ಥ—** ಪಿತ್ತಾತಿಸಾರದಲ್ಲಿ ನಿದಾನ, ಉಪಶಮ ಲಕ್ಷಣಗಳನ್ನು ಆಲೋಚಿಸಿ ಆಮದ ಸಂಬಂಧವಿದೆಯೆಂಬುದು ಕಂಡು ಬಂದರೆ, ಅವನ ಶಕ್ತಿಯಂತೆ ಪಾಚನದೀಪನಗಳನ್ನು ಕೊಡಬೇಕು. ನೀರಡಿಸಿದವನಿಗೆ ಜೇಕು, ಕಲ್ಲುಸಬ್ಬಸಿಗೆ, ಕರೇಬಾಳದಬೇರು, ಅನಂತಮೂಲ, ಚಂದನ, ಚಿರಾಯತ, ಬಿಳೇಬಾದಳಬೇರುಗಳಿಂದ ಸಿದ್ಧವಾದ ( ೧ ತೊಲಿ ಕಲ್ಕ ೬೪ ತೊಲಿ ನೀರು ಹಾಕಿ ಕುದಿಸಿ ಅರ್ಧ ಉಳಿಸಿದ) ನೀರನ್ನು ಕೊಡಬೇಕು. ಲಂಘನ ಮಾಡಿಸಿ ಹಸಿವೆಯಾಗಲು ಆಹಾರಕಾಲಕ್ಕೆ ಬಲಾ, ಅತಿಬಲಾ, ಅಡವಿಹೆಸರು, ಅಡವಿಉದ್ದು, ಒಂದೆಲೆಪೊನ್ನೆ, ಮೂರೆಲೆಪೊನ್ನೆ, ಹೆಬ್ಬಗುಳ್ಳ, ನೆಲಗುಳ್ಳ, ಶತಾವರಿ, ನೆಗ್ಗಿಲುಗಳ ಕಷಾಯದಿಂದ ಸಿದ್ಧವಾದ ಮಂಡಪೇಯ ತರ್ಪಣಗಳಲ್ಲಿ ಅವನಿಗೆ

ಸಾತ್ಮ್ಯವಾದದ್ದನ್ನು ಕ್ರಮದಿಂದ ಕೊಡುತ್ತ ಹೋಗಬೇಕು. ಹುಳಿ ಮಾಡಿದ ಅಥವಾ ಮಾಡದಿದ್ದ ಹೆಸರು, ಹರೇಣ ( ರೇಣುಕಬೀಜ ), ಚನ್ನಂಗಿ, ಅಡವಿ ಹೆಸರು, ತೊಗರಿಗಳ ಕಟ್ಟುಗಳಿಂದ ಅಥವಾ ಲಾವ ( ಲಾವಪಕ್ಷಿ ) ಬಿಳಿ ತಿತ್ತಿರಿ, ನೊಲ, ಚಿಗರಿ, ಏಣ (ಕಪ್ಪುಚಿಗರಿ) ಕಾಲಪುಚ್ಛ (ಮೃಗಜಾತಿ)ಗಳ ಮಾಂಸ ರಸದಿಂದ ಅವನ ಅಗ್ನಿಯನ್ನು ಕ್ರಮಶಃ ಪ್ರಜ್ವಲಿತ ಮಾಡಬೇಕು. ಆದರೂ ಪಿತ್ತಾತಿಸಾರವು ಹೋಗದಿದ್ದರೆ ದೀಪನೀಯ ( ಹಿಪ್ಪಲಿ ಮುಂ. ) ಪಾಚನೀಯ (ಜೀವಕ ಮುಂತಾದ) ಉಪಶಮನೀಯ ( ಬಾಲಬಿಲ್ವ ಮುಂ.) ಮಲಸಂಗ್ರಹಣೀಯ (ಮುಂದೆಹೇಳುವ) ಯೋಗಗಳನ್ನು ಕೊಡಬೇಕು.

## ಭವಂತಿ ಚಾತ್ರ

**ಸಕ್ಷೌದ್ರಾತಿವಿಷಂ ಪಿಷ್ಟ್ವಾ ವತ್ಸಕಸ್ಯಫಲತ್ವಚಮ್ ||**
**ತಂಡುಲೋದಕಸಂಯುಕ್ತಂ ಪೇಯಂ ಪಿತ್ತಾತಿಸಾರನುತ್ || ೫೩ ||**

**ಕಿರಾತತಿಕ್ತಕಂ ಮುಸ್ತಂ ವತ್ಸಕಃ ಸರಸಾಂಜನಃ ||**
**ಬಿಲ್ವಂ ದಾರುಹರಿದ್ರಾ ಚ ಹ್ರೀಬೇರಂ ಸದುರಾಲಭಮ್ || ೫೪ ||**

**ಚಂದನಂ ಚ ಮೃಣಾಲಞ್ಚ ನಾಗರಂ ಲೋಧ್ರಮುತ್ಪಲಮ್ ||**
**ತಿಲಾ ಮೋಚರಸೋ ಲೋಧ್ರಂ ಸಮಂಗಾ ಕಮಲೋತ್ಪಲಮ್ ||೫೫||**

**ನಾಗರಂ ಧಾತಕೀಪುಷ್ಪಮುತ್ಪಲಂ ದಾಡಿಮತ್ವಚಃ ||**
**ಕಟ್‌ಫಲಂ ನಾಗರಂ ಪಾಠಾ ಜಂಬ್ವಾಮ್ರಾಸ್ಥಿ ದುರಾಲಭಾ ||೫೬||**

**ಯೋಗಾಃ ಷಡೇತೇ ಸಕ್ಷೌದ್ರಾಸ್ತಂಡುಲೋದಕಸಂಯುತಾಃ ||**
**ಪೇಯಾಃ ಪಿತ್ತಾತಿಸಾರಘ್ನಾಃ ಶ್ಲೋಕಾರ್ಧೇ ತು ನಿದರ್ಶಿತಾಃ ||೫೭||**

**ಜೀರ್ಣೌಷಧಾನಾಂ ಶಸ್ಯಂತೇ ಯಥಾಯೋಗೋಪಕಲ್ಪಿತೈಃ ||**
**ರಸೈಃ ಸಾಂಗ್ರಾಹಿಕೈರ್ಯುಕ್ತಾಃ ಪುರಾಣಾರಕ್ತಶಾಲಯಃ ||೫೮||**

**ಅರ್ಥ—** ಹಲಗತ್ತಿಯ ತೋಟೆ, ಇಂದ್ರಜವೆ, ಅತಿವಿಷಗಳ ಕಲ್ಕವನ್ನು ಜೇನಿನಲ್ಲಿ ಕಲಿಸಿ ಅಕ್ಕಿಯನೀರಿನಲ್ಲಿ ಕುಡಿಯಬೇಕು. ಇದು ಪಿತ್ತಾತಿಸಾರ ವನ್ನು ಕಳೆಯುವದು. || ೫೩ || ೧ ಚಿರಾಯತ, ಜೇಕು, ಹಲಗತ್ತಿತೋಟಿ, ರಸಾಂಜನ ೨ ಬಿಲ್ವ, ಮರಅರಿಷಿಣ, ಬಾಳದಬೇರು, ನೆಲಇಂಗಳ || ೫೪ || ೩ ಚಂದನ, ಮೃಣಾಲ (ಕಮಲದ ಸಣ್ಣದೇಟು), ಸುಂಠಿ, ಲೋಧ್ರ, ನೀಲ

ಕಮಲ ೪ ಎಳ್ಳು ಮೋಚರಸ, [ಬೂರಲಅಂಟು] ಲೋಧ್ರ, ಸಮಂಗಾ [ಚಿಕ್ಕ ಹರಳುಗಿಡ ಮಂಜಿಷ್ಠಾ] ನೀಲಕಮಲ || ೫೫ || ೫ ಸುಂಠಿ, ಧಾತಕೀಪುಷ್ಪ, ನೀಲಕಮಲ, ದಾಳಿಂಬತೋಟೆ ೬ ಕಟ್ಫಲ ( ಕಿರಿಶಿವನ್ನಿ ) ಶುಂಠಿ, ಅಗಳಸುಂಠಿ ನೇರಿಲ ಮತ್ತು ಮಾವಿನಮಜ್ಜೆ ನೆಲಅಂಗಳ || ೫೬ || ಈ ಆರು ಶ್ಲೋಕಾರ್ಧಗಳಿಂದ ಹೇಳಿದ ಆರುಯೋಗಗಳನ್ನು ಜೇನುಹಾಕಿ ಅಕ್ಕಿಯ ನೀರಿನೊಡನೆ ಕುಡಿಯಬೇಕು ಅಂದರೆ ಅವು ಪಿತ್ತಾತಿಸಾರವನ್ನು ಕಳೆಯುವವು. || ೫೭ || ಈ ಔಷಧಗಳು ಜೀರ್ಣವಾಗಲು ಯೋಗ್ಯ. ಔಷಧಗಳನ್ನು ಹಾಕಿ ಮಾಡಿದ ಮಲಬಂಧಕ ಮಾಂಸರಸದೊಡನೆ ಹಳೇ ಅಕ್ಕಿಯ ಅನ್ನವನ್ನು ತಿನ್ನಬೇಕು. ೫೮ ||

**ಪಿತ್ತಾತಿಸಾರೋ ದೀಪ್ತಾಗ್ನೇಃ ಶೀಘ್ರಂ ಸಮುಪಶಾಮ್ಯತಿ ||**
**ಅಜಾಕ್ಷೀರಪ್ರಯೋಗೇಣ ಬಲಂ ವರ್ಣಶ್ಚ ವರ್ಧತೇ || ೫೯ ||**

**ಬಹುದೋಷಸ್ಯ ದೀಪ್ತಾಗ್ನೇಃ ಸಪ್ರಾಣಸ್ಯ ನ ತಿಷ್ಠತಿ ||**
**ಪೈತ್ತಿಕೋ ಯದ್ಯತೀಸಾರಃ ಪಯಸಾ ತಂ ವಿರೇಚಯೇತ್ || ೬೦ ||**

**ಪಲಾಶಫಲನಿರ್ಯೂಹಂ ಪಯಸಾ ಸಹ ವಾ ಪಿಬೇತ್ ||**
**ತತೋಽನುಕೋಷ್ಣಂ ಪಾತವ್ಯಂ ಕ್ಷೀರಮೇವ ಯಥಾಬಲಮ್ ||೬೧||**

**ಪ್ರವಾಹಿತೇ ಮಲೇ ತೇನ ಪ್ರಶಾಮ್ಯತ್ಯುದರಾಮಯಃ ||**
**ಪಲಾಶವತ್ಪ್ರಯೋಜ್ಯಾ ವಾ ತ್ರಾಯಮಾಣಾ ವಿಶೋಧನೀ ||೬೨||**

**ಸಾಂಸರ್ಗ್ಯಾಂ ಕ್ರಿಯಮಾಣಾಯಾಂ ಶೂಲಂ ಯದ್ಯನುವರ್ತತೇ ||**
**ಸ್ರುತದೋಷಸ್ಯ ತಂ ಶೀಘ್ರಂ ಯಥಾವದನುವಾಸಯೇತ್ ||೬೩||**

**ಶತಪುಷ್ಪಾವರೀಭ್ಯಾಂಚ ಪಯಸಾ ಮಧುಕೇನ ಚ ||**
**ತೈಲಪಾದಂ ಘೃತಂ ಸಿದ್ಧಂ ಸಬಿಲ್ವಮನುವಾಸನಮ್ ||೬೪||**

**ಕೃತಾನುವಾಸನಸ್ಯಾಸ್ಯ ಕೃತಸಂಸರ್ಜನಸ್ಯ ಚ ||**
**ವರ್ತತೇ ಯದ್ಯತೀಸಾರಃ ಪಿಚ್ಛಾಬಸ್ತಿರತಃ ಪರಮ್ ||೬೫||**

**ಅರ್ಥ—** ರೋಗಿಯ ಅಗ್ನಿಯು ಪ್ರದೀಪ್ತವಿದ್ದರೆ, ಆಡಿನ ಹಾಲನ್ನು ಕೊಡುವದರಿಂದ ಪಿತ್ತಾತಿಸಾರವು ಶಾಂತವಾಗಿ ಬಲ ಮತ್ತು ವರ್ಣಗಳು ಹೆಚ್ಚುವವು. ||೫೯||

ದೋಷವು ಬಹಳವಿದ್ದವರಿಂದ ಪಿತ್ತಾತಿಸಾರವು ಹೋಗದೆ ಇದ್ದರೆ, ರೋಗಿಯು ಮತ್ತು ಬಲಿಷ್ಠ ಅಗ್ನಿಯು ಪ್ರದೀಪ್ತ ವಾಗಿದ್ದಲ್ಲಿ ಅವನಿಗೆ ಹಾಲು ಕೊಟ್ಟು ವಿರೇಚನ ಮಾಡಿಸಬೇಕು. ||೬೦|| ಹಾಲಿನ ವಿರೇಚನವನ್ನು ಹೇಳು ತ್ತಾರೆ. ಮುತ್ತಲಫಲದ ರಸವನ್ನು ಹಾಲಿನೊಡನೆ ಕುಡಿದು ಮೇಲೆ ತನ್ನ ಶಕ್ತಿ ಯಂತೆ ಬೆಚ್ಚಗಿನ ಹಾಲನ್ನು ಯಥಾಶಕ್ತಿಕುಡಿಯಬೇಕು. || ೬೧ || ಅದರಿಂದ ಮಲವು ಹೊರಬೀಳಲು ಅತಿಸಾರವು ಹೋಗುವದು. ಪಲಾಶದಂತೆ ವಿರೇಚ ಕವಾದ ತ್ರಾಯಮಾಣದ ಉಪಯೋಗವನ್ನೂ ಮಾಡಬೇಕು. || ೬೨ || ಹೀಗೆ ವಳಗೆ ಉಳಿದ ಮಲವನ್ನು ಕಳೆಯಲು ದೋಷವು ಹೋದರೂ ಶೂಲವು ಉಳಿ ದರೆ ಅವನಿಗೆ ತೀವ್ರವಾಗಿ ವಿಧಿಯಂತೆ ಅನುವಾಸನ ಬಸ್ತಿಯನ್ನು ಕೊಡಬೇಕು ||೬೩|| ನಾಲ್ಕನೇ ಪಾಲು ತೈಲಕೂಡಿದ ಘೃತದಲ್ಲಿ ಅದರ ¼ ಬಡೇಸೋಪು, ಶತಾವರಿ, ಜೇಷ್ಠಮಧು, ಬಾಲಬಿಲ್ವಗಳ ಕಲ್ಕವನ್ನು ಹಾಕಿ ೪ ಪಾಲು ಹಾಲಿ ನಲ್ಲಿ ಅದನ್ನು ಸಿದ್ಧಮಾಡಿ ಅನುವಾಸನವನ್ನು ಮಾಡಬೇಕು. ||೬೪|| ಹೀಗೆ ಅನುವಾಸನವನ್ನುಮಾಡಿ ಪೇಯಾದಿಗಳನ್ನು ತಕ್ಕೊಂಡನಂತರವೂ ಅತಿಸಾರವು ಉಳಿದರೆ ಆಮೇಲೆ ಪಿಚ್ಛಾಬಸ್ತಿಯನ್ನು ತಕ್ಕೊಳ್ಳಬೇಕು. || ೬೫ ||

ಪಿಚ್ಛಾಬಸ್ತಿಯನ್ನು ಹೇಳುತ್ತಾರೆ—

**ಪರಿವೇಷ್ಟ್ಯ ಕುಶೈರಾರ್ದ್ರೈರಾರ್ದ್ರವೃಂತಾನಿ ಶಾಲ್ಮಲೇಃ ||**
**ಕೃಷ್ಣಮೃತ್ತಿಕಯಾಲಿಪ್ಯ ಸ್ವೇದಯೇದ್ಗೋಮಯಾಗ್ನಿನಾ || ೬೬ ||**

**ಸುಶುಷ್ಕಾಂ ಮೃತ್ತಿಕಾಂ ಜ್ಞಾತ್ವಾ ತಾನಿ ವೃಂತಾನಿ ಶಾಲ್ಮಲೇಃ ||**
**ಸೃತೇ ಪಯಸಿ ಮೃಧ್ನೀಯಾದಾಪೋಥ್ಯೋಲೂಖಲೇ ತತಃ || ೬೭ ||**

**ಪಿಂಡಂ ಮುಷ್ಟಿಸಮಂ ಪ್ರಸ್ಥೇ ತತ್ಪೂತಂ ತೈಲಸರ್ಪಿಷೋಃ ||**
**ಸ್ನೇಹಿತಂ ಮಾತ್ರಯಾ ಯುಕ್ತಂ ಕಲ್ಕೇನ ಮಧುಕಸ್ಯ ಚ || ೬೮ ||**

**ಬಸ್ತಿಮಭ್ಯಕ್ತಗಾತ್ರಾಯ ದದ್ಯಾತ್ಪ್ರತ್ಯಾಗತೇ ತತಃ**
**ಸ್ನಾತ್ವಾ ಭುಞ್ಜೀತ ಪಯಸಾ ಜಾಂಗಲಾನಾಂ ರಸೇನ ವಾ || ೬೯ ||**

**ಪಿತ್ತಾತಿಸಾರಜ್ವರಶೋಷಗುಲ್ಮಜೀರ್ಣಾತಿಸಾರಗ್ರಹಣೀಪ್ರದೋಷಾನ್ ||**
**ಜಯತ್ಯಯಂ ಶೀಘ್ರಮತಿಪ್ರವೃದ್ಧಾನ್ ವಿರೇಚನಾಸ್ಥಾಪನಯೋಶ್ಚ ಬಸ್ತಿಃ || ೭೦ ||**

**ಅರ್ಥ—** ಬೂರಲಮರದ ಹಸಿದೇಟುಗಳನ್ನು ತರ್ಕೊಂಡು ಹಸಿದರ್ಭೆ ಗಳಿಂದ ಸುತ್ತಿ, ಕರೇಮಣ್ಣಿನಿಂದ ಮೆತ್ತಿ, ಕುಳ್ಳುಗಳಿಂದ ಬೇಯಿಸಬೇಕು. ||೬೬|| ಮೇಲಿನ ಮಣ್ಣು ಒಣಗಲು ಆ ಬೂರಲದ ಹಸಿದೇಟುಗಳನ್ನು ಒರ ಳಲ್ಲಿ ಚೆನ್ನಾಗಿ ಕುಟ್ಟಿ ೪ ತೊಲಿ ಮುದ್ದಿಯನ್ನು ೬೪ ತೊಲಿ ಕುದಿಸಿದ ಹಾಲಿ ನಲ್ಲಿ ಕಲಿಸಬೇಕು. || ೬೭ || ಆಮೇಲೆ ಸೋಸಿ, ಎಣ್ಣೆ ತುಪ್ಪಗಳನ್ನು ಹಾಕಿ, ಜೇಷ್ಟಮದದ ಕಲ್ಕವನ್ನು ಕೂಡಿಸಿ, ||೬೮|| ಅದರ ಬಸ್ತಿಯನ್ನು ರೋಗಿಗೆ ಅಭ್ಯಂಗವಮಾಡಿ ಕೊಡಬೇಕು. ಅದು ತಿರುಗಿ ಬರಲು ಸ್ನಾನವಮಾಡಿ ಹಾಲಿ ನೊಡನೆ ಅಥವಾ ಜಾಂಗಲಮಾಂಸರಸದೊಡನೆ ಆಹಾರವನ್ನು ಮಾಡಬೇಕು. ||೬೯|| ಈ ವಿರೇಚನಾಸ್ಥಾಪನಗಳ ಪಿಚ್ಛಾಬಸ್ತಿಯು ಬಹಳ ಬೆಳೆದ ಪಿತ್ತಾತಿ ಸಾರ, ಜ್ವರ, ಶೋಷ, ಗುಲ್ಮ, ಜೀರ್ಣಾತಿಸಾರ, ಗ್ರಹಣೀದೋಷಗಳನ್ನು ಶೀಘ್ರವಾಗಿ ಕಳೆಯುತ್ತದೆ. ||೭೦||

**ಕಾರಣ ವಿಶೇಷದಿಂದ ಉಂಟಾಗುವ ಪಿತ್ತಾತಿಸಾರದ ಅವಸ್ಥಾವಿಶೇಷವಾದ ರಕ್ತಾತಿಸಾರದ ಲಕ್ಷಣ ಚಿಕಿತ್ಸೆಯನ್ನು ಹೇಳುತ್ತಾರೆ—**

**ಪಿತ್ತಾತಿಸಾರೀ ಯಸ್ತ್ವೇತಾಂ ಕ್ರಿಯಾಂ ಮುಕ್ತ್ವಾ ನಿಷೇವತೇ ||**
**ಪಿತ್ತಲಾನ್ಯನ್ನಪಾನಾನಿ ತಸ್ಯ ಪಿತ್ತಂ ಮಹಾಬಲವ್ || ೭೧ ||**

**ರಕ್ತಾತಿಸಾರಂ ಕುರುತೇ ರಕ್ತಮಾಶುಪ್ರದೂಷಯತ್ ||**
**ತೃಷ್ಣಾಂ ದಾಹಞ್ಚ ಶೂಲಞ್ಚ ಗುದಪಾಕಞ್ಚ ದಾರುಣಮ್ || ೭೨ ||**

**ತತ್ರ ಛಾಗಪಯಃ ಶಸ್ತಂ ಶೀತಂ ಸಮಧುಶರ್ಕರಮ್ ||**
**ಪಾನಾರ್ಥಂ ವ್ಯಞ್ಜನಾರ್ಥಞ್ಚ ಗುದಪ್ರಕ್ಷಾಲನೇ ತಥಾ || ೭೩ ||**

**ಭೋಜನಂ ರಕ್ತಶಾಲೀನಾಂ ಪಯಸಾ ತೇನ ಭೋಜಯೇತ್ ||**
**ರಸೈಃ ಪಾರಾವತಾದೀನಾಂ ಘೃತಭೃಷ್ಟೈಃ ಸಶರ್ಕರೈಃ || ೭೪ ||**

**ಶಶಾನಾಂ ಧನ್ವಜಾನಾಂಚ ಶೀತಾನಾಂ ಮೃಗಪಕ್ಷಿಣಾಮ್ ||**
**ರಸೈರನಮ್ಲೈಃ ಸಘೃತೈರ್ಭೋಜಯೇತ್ ತು ಸಶರ್ಕರೈಃ || ೭೫ ||**

**ರುಧಿರಂ ಮಾರ್ಗಮಾಜಂ ವಾ ಘೃತಭೃಷ್ಟಂ ಪ್ರಶಸ್ಯತೇ ||**
**ಕಾಶ್ಮರ್ಯಫಲಯೂಷೋ ವಾ ಕಿಂಚಿದಮ್ಲಃ ಸಶರ್ಕರಃ || ೭೬ ||**

**ನೀಲೋತ್ಪಲಂ ಮೋಚರಸಂ ಸಮಂಗಾಮ್ ಪದ್ಮಕೇಶರಮ್ ||**
**ಅಜಾಕ್ಷೀರಯುತಂ ದದ್ಯಾಜ್ಜೀರ್ಣೇ ಚ ಪಯಸೌದನಮ್ || ೭೭ ||**

ದುರ್ಬಲಂ ಪಾಯಯಿತ್ವಾ ವಾ ತಸ್ಯೈವೋಪರಿಭೋಜಯೇತ್ ||
ಪ್ರಾಗ್ಭಕ್ತಂ ನವನೀತಂ ವಾ ದದ್ಯಾತ್ಸಮಧುಶರ್ಕರಮ್ || ೭೮ ||

ಪ್ರಾಶ್ಯ ಕ್ಷೀರೋತ್ಥಿತಂ ಸರ್ಪಿಃ ಕಪಿಂಜಲರಸಾಶನಃ ||
ತ್ರ್ಯಹಾದಾರೋಗ್ಯಮಾಪ್ನೋತಿ ಪಯಸಾ ಕ್ಷೀರಭುಕ್ ತಥಾ || ೭೯ ||

ಪೀತ್ವಾ ಶತಾವರೀಕಲ್ಕಂ ಪಯಸಾ ಕ್ಷೀರಭುಗ್ಜಯೇತ್ ||
ರಕ್ತಾತಿಸಾರಂ ಪೀತ್ವಾ ವಾ ತಯಾ ಸಿದ್ಧಂ ಘೃತಂ ನರಃ || ೮೦ ||

ಘೃತಂ ಯವಾಗೂಮಂಡೇನ ಕುಟಜಸ್ಯ ಫಲೈಃ ಶೃತಮ್ ||
ಪೇಯಂ ತಸ್ಯಾನುಪಾತವ್ಯಾ ಪೇಯಾ ರಕ್ತೋಪಶಾಂತಯೇ || ೮೧ ||

ವತ್ಸಕಸ್ಯ ಚ ಬೀಜಾನಿ ದಾರ್ವ್ಯಾಶ್ಚ ತ್ವಚ ಉತ್ತಮಾಃ ||
ಪಿಪ್ಪಲೀಶೃಂಗವೇರಂಚ ಲಾಕ್ಷಾ ಕಟುಕರೋಹಿಣೀ || ೮೨ ||

ಷಡ್ಭಿರೇತೈರ್ಘೃತಂ ಸಿದ್ಧಂ ಪೇಯಾಮಂಡಾವಚಾರಿತಮ್ ||
ಅತೀಸಾರಂ ಜಯೇಚ್ಛೀಘ್ರಂ ತ್ರಿದೋಷಮಪಿದಾರುಣಮ್ || ೮೩ ||

ಕೃಷ್ಣಾಮೃನ್ಮಧುಕಂ ಶಂಖಂ ರುಧಿರಂ ತಂಡುಲೋದಕಮ್ ||
ಪೀತಮೇಕತ್ರ ಸಂಯುಕ್ತಂ ರಕ್ತಸಂಗ್ರಹಣಂ ಪರಮ್ || ೮೪ ||

ಪೀತಃ ಪ್ರಿಯಂಗುಕಾಕಲ್ಕಃ ಸಕ್ಷೌದ್ರಸ್ತಂಡುಲಾಂಬುನಾ ||
ರಕ್ತಸ್ರಾವಂ ಜಯೇಚ್ಛೀಘ್ರಂ ಧನ್ವಮಾಂಸರಸಾಶಿನಃ || ೮೫ ||

ಕಲ್ಕಸ್ತಿಲಾನಾಂ ಕೃಷ್ಣಾನಾಂ ಶರ್ಕರಾಪಂಚಭಾಗಿಕ: ||
ಆಜೇನ ಪಯಸಾ ಪೀತಃ ಸದ್ಯೋ ರಕ್ತಂ ನಿಯಚ್ಛತಿ || ೮೬ ||

ಪಲಂ ವತ್ಸಕಬೀಜಸ್ಯ ಶ್ರಪಯಿತ್ವಾ ರಸಂ ಪಿಬೇತ್ ||
ಯೋ ರಸಾಶೀ ಜಯೇಚ್ಛೀಘ್ರಂ ಸ ಪೈತ್ತಂ ಜಠರಾಮಯಮ್ ||೮೭||

ಪೀತ್ವಾ ಸಶರ್ಕರಾಕ್ಷೌದ್ರಂ ಚಂದನಂ ತಂಡುಲಾಂಬುನಾ ||
ದಾಹತೃಷ್ಣಾಪ್ರಮೇಹೇಭ್ಯೋ ರಕ್ತಸ್ರಾವಾಚ್ಚ ಮುಚ್ಯತೆ || ೮೮ ||

**ಅರ್ಥ—** ಪಿತ್ತಾತಿಸಾರಿಯು ಮೇಲೆ ಹೇಳಿದ ಚಿಕಿತ್ಸೆಯನ್ನು ಮಾಡದೆ ಪಿತ್ತಕರವಾದ ಅನ್ನಪಾನವನ್ನು ಸೇವಿಸಿದರೆ ಬಲಿಷ್ಠವಾದಂಥ ಅವನ ಪಿತ್ತವು ||೭೧|| ರಕ್ತವನ್ನು ತೀವ್ರವಾಗಿ ಕೆಡಿಸಿ ರಕ್ತಾತಿಸಾರವನ್ನುಂಟುಮಾಡುತ್ತದೆ. ಆಗ್ಗೆ ನೀರಡಿಕೆ, ದಾಹ, ಶೂಲ, ಭಯಂಕರವಾದ ಗುದಪಾಕಗಳುಂಟಾಗು

ತ್ರವೆ. ||೭೨|| ಆದರಲ್ಲಿ ಕುಡಿಯುವದಕ್ಕಾಗಿ, ವ್ಯಂಜನಕ್ಕಾಗಿ ಮತ್ತು ಗುದ ಪ್ರಕ್ಷಾಲನಕ್ಕಾಗಿ ಜೇನು ಸಕ್ಕರೆಗಳನ್ನು ಹಾಕಿದ ಆಡಿನ ಶೀತ ಹಾಲನ್ನು ಉಪಯೋಗಿಸುವದು ಒಳ್ಳೆಯದು. ||೭೩|| ಆ ಹಾಲಿನಿಂದಲೂ ಪಾರಿವಾಳ ಮುಂತಾದವುಗಳ ತುಪ್ಪದಲ್ಲಿ ಕರಿದು ಸಕ್ಕರೆ ಹಾಕಿದ ಮಾಂಸರಸಗಳಿಂದ ಕೆಂಪಕ್ಕಿಯು ಅನ್ನವನ್ನು ತಿನ್ನಿಸಬೇಕು. ||೭೪|| ಮೊಲ, ಜಾಂಗಲದೇಶದ ಶೀತಮೃಗಪಕ್ಷಿಗಳ ಹುಳಿಯಿಲ್ಲದ ಸಕ್ಕರೆ ತುಪ್ಪಗಳನ್ನು ಹಾಕಿದ ಮಾಂಸರಸಗಳಿಂದ ಊಟವನ್ನು ಮಾಡಿಸಬೇಕು. ||೭೫|| ಮೃಗದ ಅಥವಾ ಆಡಿನ ರಕ್ತವನ್ನು ತುಪ್ಪದ ಒಗ್ಗರಣೆಕೊಟ್ಟು ಕೊಡಬೇಕು. ಅಥವಾ ಶಿವನ್ನೀಫಲದ ಕಟ್ಟನ್ನು ಸ್ವಲ್ಪ ಹುಳಿಮಾಡಿ ಸಕ್ಕರೆ ಹಾಕಿ ಕೊಡಬೇಕು. ||೭೬|| ನೀಲಕಮಲ ಬೂರಲಅಂಟು, ಮಂಜಿಷ್ಠ ಪದ್ಮಕೇಶರಗಳ ಚೂರ್ಣವನ್ನು ಆಡಿನ ಹಾಲಿನಲ್ಲಿ ಕೊಟ್ಟು ಅದು ಜೀರ್ಣವಾಗಲು ಹಾಲು ಅನ್ನವನ್ನು ಕೊಡಬೇಕು. ||೭೭|| ರೋಗಿಯುಅಶಕ್ತನಿದ್ದರೆ ಆ ಚೂರ್ಣವನ್ನು ಆಡಿನಹಾಲಿನಲ್ಲಿ ಕೊಟ್ಟಕೂಡಲೇ ಉಣಿಸಬೇಕು. ಅಥವಾ ಊಟದ ಮೊದಲು ಜೇನು ಸಕ್ಕರೆಗಳನ್ನು ಕೂಡಿಸಿ ಬೆಣ್ಣೆಯನ್ನು ಕೊಡಬೇಕು. ||೭೮|| ಹಾಲಿನಿಂದ ತೆಗೆದ ತುಪ್ಪವನ್ನು ತಿಂದು ಬಿಳೇತಿತ್ತಿರಿಯ ಮಾಂಸರಸವನ್ನು ಹಾಲಿನೊಡನೆ ಕುಡಿಯುತ್ತಿದ್ದರೆ ಅಥವಾ ಹಾಲಿನ ಮೇಲೆಯೇ ಇದ್ದರೆ ಮೂರು ದಿವಸದಲ್ಲಿ ಆರೋಗ್ಯ ಹೊಂದುವನು. ||೭೯|| ಶತಾವರೀ ಕಲ್ಕವನ್ನು ಹಾಲಿನೊಡನೆ ಕುಡಿದು ಅಥವಾ ಶತಾವರೀ ಘೃತವನ್ನು ಕುಡಿದು ಹಾಲಿನ ಮೇಲೆಯೇ ಇದ್ದರೆ ರಕ್ತಾತಿಸಾರವು ಹೋಗುವದು . ||೮೦|| ಇಂದ್ರಜವೆಗಳಕಲ್ಕದಿಂದಮಾಡಿದ ಘೃತವನ್ನು ಯವಾಗೂ ಅಥವಾ ಗಂಜಿಯೊಡನೆ ಕುಡಿದು ಮೇಲೆ ಪೇಯವನ್ನು ಕುಡಿಯಬೇಕು. ಅಂದರೆ ರಕ್ತಾತಿಸಾರವು ಶಾಂತವಾಗುವದು. ||೮೧|| ಇಂದ್ರಜವಿ, ಮರಅರಿಷಿಣದ ಉತ್ತಮ ತೋಟಿ ಪಿಪ್ಪಲಿ, ಸುಂಠಿ, ಅರಗು ಕಟುಕರೋಣಿ ||೮೨|| ಈ ಆರು ದ್ರವ್ಯಗಳ ಕಲ್ಕದಿಂದ ೪ ಪಾಲು ನೀರಿನಲ್ಲಿ ಸಿದ್ಧಮಾಡಿದ ಘೃತವನ್ನು ಪೇಯ ಅಥವಾ ಗಂಜಿಯಲ್ಲಿ ಕೂಡಿಸಿ ಕುಡಿದರೆ ಅದು ಭಯಂಕರವಾದ ತ್ರಿದೋಷ ಅತಿಸಾರವನ್ನೂ ಕೂಡಾ ಕಳೆಯುವದು. ||೮೩|| ಕರೇಮಣ್ಣು ಜೇಷ್ಠಮಧು, ಶಂಖಭಸ್ಮ, ರಕ್ತ, ಅಕ್ಕಿಯನೀರು ಕುಡಿದರೆ ರಕ್ತವು ನಿಲ್ಲುವದು. ||೮೪|| ಪ್ರಿಯಂಗು (ಗವ್ವಲಾ) ವಿನ ಕಲ್ಕವನ್ನು ಜೇನು ಮತ್ತು ಅಕ್ಕಿಯ ನೀರಿನೊಡನೆ ಕುಡಿದು, ಜಾಂಗಲಮಾಂಸರಸವನ್ನು ತಿನ್ನುತ್ತಿದ್ದರೆ, ಅದು ತೀವ್ರವಾಗಿ ರಕ್ತಸ್ರಾವವನ್ನು ಗೆಲ್ಲುವದು. ||೮೫|| ಕರೇಎಳ್ಳುಗಳ ಕಲ್ಕ

೧ ಭಾಗ, ಸಕ್ಕರೆ ೫ ಭಾಗ ತಕ್ಕೊಂಡು ಆಡಿನ ಹಾಲಿನಲ್ಲಿ ಕುಡಿದರೆ, ಅದು ಕೂಡಲೇ ರಕ್ತವನ್ನು ತಡೆಯುವದು. ||೮೬|| ಇಂದ್ರಜವಿ ೪ ತೊಲಿ ತಕ್ಕೊಂಡು ೮ ಪಾಲು ನೀರು ಹಾಕಿ ೧/೪ ಉಳಿಯಲು ಕುದಿಸಿ ಮಾಂಸರಸವನ್ನು ತಿನ್ನುತ್ತಿದ್ದರೆ, ಅದು ತೀವ್ರವಾಗಿ ಪಿತ್ತಾತಿಸಾರವನ್ನು ಕಳೆಯುವದು. ||೮೭|| ರಕ್ತಚಂದನದ ಕಲ್ಕವನ್ನು ಸಕ್ಕರಿ ಜೇನುತುಪ್ಪ ಕಲಿಸಿ ಅಕ್ಕಿಯ ನೀರಿನೊಡನೆ ಕುಡಿದರೆ, ದಾಹ, ನೀರಡಿಕೆ, ಮೋಹ, ರಕ್ತಸ್ರಾವಗಳಿಂದ ಮುಕ್ತನಾಗುವನು. || ೮೮ ||

**ಗುದಪಾಕ ಚಿಕಿತ್ಸೆಯನ್ನು ಹೇಳುತ್ತಾರೆ—**

**ಗುದೋ ಬಹುಭಿರುತ್ಥಾನೈರ್ಯಸ್ಯ ಪಿತ್ತೇನ ಪಚ್ಯತೇ ||**
**ಸೇಚಯೇತ್ತಂ ಸುಶೀತೇನ ಪಟೋಲಮಧುಕಾಂಬುನಾ || ೮೯ ||**

**ಪಂಚವಲ್ಕಮಧೂಕಾನಾಂ ರಸೈರಿಕ್ಷುರಸೈರ್ಘೃತೈಃ ||**
**ಛಾಗೈರ್ಗವ್ಯೈಃ ಪಯೋಭಿರ್ವಾ ಶರ್ಕರಾಕ್ಷೌದ್ರಸಂಯುತೈಃ || ೯೦ ||**

**ಪ್ರಕ್ಷಾಲನಾನಾಂ ಕಲ್ಕೈರ್ವಾ ಸಸರ್ಪಿಷ್ಕೈಃ ಪ್ರಲೇಪಯೇತ್ ||**
**ಏಷಾಂ ವಾ ಸೂಕ್ಷ್ಮೈಶ್ಚೂರ್ಣೈಸ್ತಂ ಗುದಂ ಪ್ರತಿಸಾರಯೇತ್ || ೯೧ ||**

**ತಥಾ ರಕ್ತಂ ನ ಸ್ರವತಿ ಗುದಂ ತೈಃ ಪ್ರತಿಸಾರಿತಮ್ ||**
**ಪಕ್ವತಾ ಪ್ರಶಮಂ ಯಾತಿ ವೇದನಾ ಚೋಪಶಾಮ್ಯತಿ || ೯೨ ||**

**ಯಥೋಕ್ತೈಃ ಸೇಚನೈಃ ಶೀತೈಃ ಶೋಣಿತೇಽತಿಸ್ರವತ್ಯಪಿ ||**
**ಗುದವಂಕ್ಷಣಕಟ್ಯೂರುಸೇಚಯೇದ್ ಘೃತಭಾವಿತಮ್ || ೯೩ ||**

**ಚಂದನಾದ್ಯೇನ ತೈಲೇನ ಶತಧೌತೇನ ಸರ್ಪಿಷಾ ||**
**ಕಾರ್ಪಾಸಸಂಗೃಹೀತೇನ ಭಾವಯೇದ್ ಗುದವಂಕ್ಷಣಮ್ || ೯೪ ||**

**ಅಲ್ಪಾಲ್ಪಂ ಬಹುಶೋ ರಕ್ತಂ ಸಶೂಲಮುಪವೇಶ್ಯತೇ ||**
**ಯದಾ ವಾಯುರ್ವಿಬದ್ಧಶ್ಚ ಕೃಚ್ಛ್ರಂ ಚರತಿ ವಾ ನ ವಾ || ೯೫ ||**

**ಪಿಚ್ಛಾಬಸ್ತಿಂ ತದಾ ತಸ್ಯ ಯಥೋಕ್ತಮುಪಕಲ್ಪಯೇತ್ ||**
**ಪ್ರಪೌಂಡರೀಕಸಿದ್ಧೇನ ಸರ್ಪಿಷಾ ಚಾನುವಾಸಯೇತ್ || ೯೬ ||**

**ಪ್ರಾಯಶೋ ದುರ್ಬಲಗುದಾಶ್ಚಿರಕಾಲಾತಿಸಾರಿಣಃ ||**
**ತಸ್ಮಾದಭೀಕ್ಷ್ಣಶಸ್ತೇಷಾಂ ಗುದೇ ಸ್ನೇಹಂ ಪ್ರಯೋಜಯೇತ್ || ೯೭ ||**

**ಅತಿವೃತ್ತೌ ಹಿ ಪವನಃ ಸ್ವೇ ಸ್ಥಾನೇ ಲಭತೇಽಧಿಕಮ್ ॥**
**ಬಲಂ ತಸ್ಯ ಸಪಿತ್ತಸ್ಯ ಜಯಾರ್ಥೇ ಬಸ್ತಿರುತ್ತಮಃ ॥ ೯೮ ॥**

**ಅರ್ಥ—** ಬಹಳಸಾರೆ ಮಲವಿಸರ್ಜನೆಗಳಿಂದ ಪಿತ್ತದಿಂದ ಪಕ್ವವಾದ ಗುದವನ್ನು ಕಹಿಪಡವಲ, ಜೇಷ್ಠಮಧುವಿನ ಕಷಾಯವನ್ನು ಮಾಡಿ ಆರಿಸಿ ಅದರಿಂದ ಸೇಚನ ಮಾಡಬೇಕು. ॥೮೯॥ ಅಥವಾ ಪಂಚವಲ್ಕಲ (ಆಲ, ಅತ್ತಿ, ಅಶ್ವತ್ಥ, ಅರಳಿ, ಬಸರಿ, ಹೆಬ್ಬೆಗಳ ತೊಗಟಿ) ಗಳ ಮತ್ತು ಜೇಷ್ಠಮಧುವಿನ ಕಷಾಯ, ಕಬ್ಬಿನರಸ, ಘೃತಗಳಿಂದ ಅಥವಾ ಸಕ್ಕರೆ, ಜೇನು ಕೂಡಿಸಿದ ಆಡಿನ ಆಕಳ ಹಾಲುಗಳಿಂದ ಸೇಚನ ಮಾಡಬೇಕು. ॥೯೦॥ ಅಥವಾ ಮೇಲೆ ಹೇಳಿದ ಪ್ರಕ್ಷಾಲನ (ಕಹಿಪಡವಲ ಮುಂ.) ದ್ರವ್ಯಗಳ ಕಲ್ಕದಲ್ಲಿ ತುಪ್ಪಹಾಕಿ ಲೇಪನಮಾಡಬೇಕು. ಮತ್ತು ಇವುಗಳ ಚೂರ್ಣವನ್ನು ಉದುರಿಸಬೇಕು. ॥೯೧॥ ಹೀಗೆ ಮಾಡುವದರಿಂದ ರಕ್ತಸ್ರಾವವು ನಿಲ್ಲುವದು. ಪಾಕವೂ ಹೋಗುವದು. ವೇದನೆಯೂ ನಿಲ್ಲುವದು. ॥೯೨॥ ರಕ್ತಸ್ರಾವವು ಬಹಳ ವಾಗುತ್ತಿದ್ದರೂ ಗುದ, ಗೆಜ್ಜಿ, ಟೊಂಕ, ತೊಡೆಗಳಿಗೆ ಘೃತವನ್ನು ತೊಡೆದು ಮೇಲೆ ಹೇಳಿದ ಶೀತ ಸೇಚನ ದ್ರವ್ಯಗಳನ್ನು ಅವುಗಳ ಮೇಲೆ ಹಾಕಬೇಕು. ॥೯೩॥ (ಜ್ವರಾಧಿಕಾರದಲ್ಲಿ ಹೇಳಿದ) ಚಂದನಾದಿತೈಲ, ಶತಧೌತ ಘೃತ ಗಳನ್ನು ಅರಳೆಗೆ ಹಚ್ಚಿ ಗುದ ಗೆಜ್ಜೆಗಳನ್ನು ತೊಡೆಯಬೇಕು. ॥೯೪॥ ವಾಯು ವಿಗೆ ಪ್ರತಿಬಂಧವಾಗುವದರಿಂದ ಅದು ಒಳ್ಳೇ ಕಷ್ಟದಿಂದಸಾಗುವದು. ಅಥವಾ ಸಾಗುವದೇ ಇಲ್ಲ. ಮತ್ತು ಅನೇಕಸಾರೆ ಸ್ವಲ್ಪಸ್ವಲ್ಪಾಗಿ ರಕ್ತ ಬೀಳುವದು. ಮತ್ತು ಶೂಲವಿರುವದು. ॥೯೫॥ ಆಗ್ಗೆ ಅದಕ್ಕೆ ಹಿಂದೆ ಹೇಳಿದ ಪಿಚ್ಛಾಬಸ್ತಿ ಯನ್ನು ಕೊಡಬೇಕು. ಮತ್ತು ಪುಂಡರೀಕ ಕಮಲದಿಂದ ಸಿದ್ಧಮಾಡಿದ ಘೃತದ ಅನುವಾಸನವನ್ನು ಮಾಡಬೇಕು. ॥೯೬॥ ಬಹಳ ದಿವಸ ಅತಿಸಾರ ವುಳ್ಳವರ ಗುದಗಳು ಅಶಕ್ತ ಇರುವವು, ಆ ಕಾರಣ ಅವುಗಳಿಗೆ ಆಗಾಗ್ಗೆ ಗುದ ದಲ್ಲಿ ಸ್ನೇಹವನ್ನು ಉಪಯೋಗಿಸಬೇಕು. ॥೯೭॥ ವಾತವು ತನ್ನ ಸ್ಥಾನದಲ್ಲಿ ಬಹಳದಿವಸವಿದ್ದರೆ, ಅದರ ಬಲವು ಬೆಳೆಯುತ್ತದೆ. ಪಿತ್ತದಿಂದ ಕೂಡಿದ ಆ ವಾತವನ್ನು ಕಳೆಯುವದಕ್ಕೆ ಬಸ್ತಿಯು ಉತ್ತಮವು ॥ ೯೮ ॥

**ರಕ್ತಂವಿಟ್ಸಹಿತಂ ಪೂರ್ವಂ ಪಶ್ಚಾದ್ ವಾ ಯೋಽತಿಸಾರ್ಯತೇ ॥**
**ಶತಾವರೀಘೃತಂ ತಸ್ಯ ಲೇಹಾರ್ಥಮುಪಕಲ್ಪಯೇತ್ ॥ ೯೯ ॥**

ಶರ್ಕರಾರ್ಧಾಂಶಿಕಂ ಲೀಢಂ ನವನೀತಂ ನವೋದ್ಧೃತಮ್ ||
ಕ್ಷೌದ್ರಪ್ರಾದಂ ಜಯೇಚ್ಛೀಘ್ರಂ ತಂ ವಿಕಾರಂ ಹಿತಾಶಿನಃ || ೧೦೦ ||

ನ್ಯಗ್ರೋಧೋದುಂಬರಾಶ್ವತ್ಥ ಶುಂಗಾನಾಪೋಥ್ಯವಾಸಯೇತ್ ||
ಅಹೋರಾತ್ರಂ ಜಲೇ ತಪ್ತೇ ಘೃತಂ ತೇನಾಂಭಸಾ ಪಚೇತ್ || ೧೦೧ ||

ತದರ್ಧಶರ್ಕರಾಯುಕ್ತಂ ಲೇಹಯೇತ್ ಕ್ಷೌದ್ರಪ್ರಾದಿಕಮ್ ||
ಅಧೋ ವಾ ಯದಿ ವಾಪ್ಯೂರ್ಧ್ವಂ ಯಸ್ಯ ರಕ್ತಂ ಪ್ರವರ್ತತೇ|| ೧೦೨ ||

ಯಸ್ತ್ವೇವಂ ದುರ್ಬಲೋ ಮೋಹಾತ್ ಪಿತ್ತಲಾನ್ಯೇವ ಸೇವತೇ ||
ದಾರುಣಂ ಸ ವಲೀಪಾಕಂ ಪ್ರಾಪ್ಯ ಶೀಘ್ರಂ ವಿಪದ್ಯತೇ || ೧೦೩ ||

**ಅರ್ಥ—** ಮಲಕ್ಕಿಂತ ಮೊದಲು ಅಥವಾ ಹಿಂದುಗಡೆ ಯಾವನಿಗೆ ರಕ್ತವು ಬೀಳುತ್ತದೋ ಅವನಿಗೆ ಶತಾವರಿ ಘೃತವನ್ನು ನೆಕ್ಕಲು ಕೊಡಬೇಕು. ||೯೯|| ಹೊಸಬೆಣ್ಣೆಯಲ್ಲಿ ಅದರ ಅರ್ಧವಷ್ಟು ಸಕ್ಕರೆ ಹಾಗೂ ಜೇನು ಹಾಕಿ ತಿಂದು ಪಥ್ಯದಿಂದ ಇದ್ದರೆ ಆ ವಿಕಾರವು ನಾಶವಾಗುವದು. ||೧೦೦|| ಆಲ ಅತ್ತಿ ಅರಳೆಗಳ ಶುಂಗ (ಚಿಗರು) ಗಳನ್ನು ಕುಟ್ಟಿ ೪ ಪಾಲು ಬಿಸಿ ನೀರಿನಲ್ಲಿ ಒಂದು ಹಗಲು ರಾತ್ರಿ ಇಟ್ಟು ಆ ನೀರಿನಿಂದ ಘೃತವನ್ನು ಸಿದ್ಧಮಾಡಬೇಕು. ||೧೦೧|| ಅದರಲ್ಲಿ ಅರ್ಧಸಕ್ಕರೆ ಹಾಗೂ ಜೇನು ಹಾಕಿ ನೆಕ್ಕಬೇಕು. ಅಂದರೆ ಮಲಕ್ಕಿಂತ ಮೊದಲು ಅಥವಾ ಅನಂತರ ಬೀಳುವ ರಕ್ತವು ನಿಲ್ಲುವದು. ||೧೦೨|| ಈರೀತಿ ದುರ್ಬಲನಿದ್ದರೂ ಯಾವನು ಮೂರ್ಖತನದಿಂದ ಪಿತ್ತಕರವಾದ ದ್ರವ್ಯಗಳನ್ನೇ ಸೇವಿಸುವನೋ ಅವನಿಗೆ ಭಯಂಕರವಾದ ಗುದಪಾಕವಾಗಿ ತೀವ್ರವೇ ಸಾಯುವನು. || ೧೦೩ ||

ಕಫಾತಿಸಾರ ಚಿಕಿತ್ಸೆಯನ್ನು ಹೇಳುತ್ತಾರೆ—

ಶ್ಲೇಷ್ಮಾತಿಸಾರೇ ಪ್ರಥಮಂ ಹಿತಂ ಲಂಘನಪಾಚನಮ್ ||
ಯೋಜ್ಯಶ್ಚಾಮಾತಿಸಾರಘ್ನೋ ಯಥೋಕ್ತೋ ದೀಪನೋ ಗಣಃ || ೧೦೪ ||

ಲಂಘಿತಸ್ಯಾನುಪೂರ್ವ್ಯಾಂ ಚ ಕೃತಾಯಾಂ ನ ನಿವರ್ತತೇ ||
ಕಫಜೋ ಯೋ ಹ್ಯತೀಸಾರಃ ಕಫಘ್ನೈಸ್ತಮುಪಾಚರೇತ್ || ೧೦೫ ||

ಬಿಲ್ವಕರ್ಕಟಿಕಾಮುಸ್ತಮಭಯಾ ವಿಶ್ವಭೇಷಜಮ್ ||
ವಚಾವಿಡಂಗಭೂತೀಕಧಾನ್ಯಕಂ ಸುರದಾರು ಚ || ೧೦೬ ||

ಕುಷ್ಠಂ ಸಾತಿವಿಷಾ ಪಾಠಾ ಚವ್ಯಂ ಕಟುಕರೋಹಿಣೀ ||
ಪಿಪ್ಪಲೀ ಪಿಪ್ಪಲೀಮೂಲಂ ಚಿತ್ರಕೋ ಹಸ್ತಿಪಿಪ್ಪಲೀ || ೧೦೭ ||
ಯೋಗಾಃ ಶ್ಲೋಕಾರ್ಧವಿಹಿತಾ ಶ್ಚತುರಸ್ತಾನ್ ಪ್ರಯೋಜಯೇತ್ ||
ಶೃತಾನ್ ಶ್ಲೇಷ್ಮಾತಿಸಾರೇಷು ಕಾಯಾಗ್ನಿ ಬಲವರ್ಧನಾನ್ || ೧೦೮ ||
ಅಜಾಜೀಮುಸಿತಾಂ ಪಾಠಾಂ ನಾಗರಂ ಮರಿಚಾನಿ ಚ ||
ಧಾತಕೀದ್ವಿಗುಣಾಂ ದದ್ಯಾನ್ಮಾತುಲುಂಗರಸಾಪ್ಲುತಮ್ || ೧೦೯ ||
ರಸಾಂಜನಂ ಸಾತಿವಿಷಂ ಕುಟಜಸ್ಯ ಫಲಾನಿ ಚ ||
ಧಾತಕೀದ್ವಿಗುಣಾಂ ದದ್ಯಾತ್ ಪಾತುಂ ಸಕ್ಷೌದ್ರನಾಗರಮ್ || ೧೧೦ ||
ಧಾತಕೀ ನಾಗರಂ ಬಿಲ್ವಂ ಲೋಧ್ರಂ ಪದ್ಮಸ್ಯ ಕೇಶರಮ್ ||
ಜಮ್ಬುತ್ವಙ್ ನಾಗರಂ ಧಾನ್ಯಂ ಪಾಠಾ ಮೋಚರಸಂ ಬಲಾ || ೧೧೧ ||
ಸಮಂಗಾ ಧಾತಕೀಬಿಲ್ವಮಧ್ಯಂ ಜಂಬ್ವಾಮ್ರಯೋಸ್ತ್ವಚಾ ||
ಕಪಿತ್ಥಾನಿ ವಿಡಂಗಾನಿ ನಾಗರಂ ಮರಿಚಾನಿ ಚ || ೧೧೨ ||
ಚಾಂಗೇರಿತಕ್ರಕೋಲಾಮ್ಲಾಂಶ್ಚತುರಸ್ತಾನ್ ಕಫೋತ್ತರೇ ||
ಶ್ಲೋಕಾರ್ಧವಿಹಿತಾನ್ ದದ್ಯಾತ್ ಸಸ್ನೇಹಲವಣಾನ್ ಖಡಾನ್ || ೧೧೩ ||
ಕಪಿತ್ಥಮಧ್ಯಂ ಲೀಢ್ವೈವ ಸವ್ಯೋಷಕ್ಷೌದ್ರಶರ್ಕರಮ್ ||
ಕಟ್ಫಲಂ ಮಧುಯುಕ್ತಂ ವಾ ಮುಚ್ಯತೇ ಜಠರಾಮಯಾತ್ || ೧೧೪ ||
ಕಣಾಂ ಮಧುಯುತಾಂ ಲೀಢ್ವಾ ತಕ್ರಂ ಪೀತ್ವಾ ಸಚಿತ್ರಕಮ್ ||
ಜಗ್ಧ್ವಾ ವಾ ಬಾಲಬಿಲ್ವಾನಿ ಮುಚ್ಯತೇ ಜಠರಾಮಯಾತ್ || ೧೧೫ ||
ಬಾಲಬಿಲ್ವಂ ಗುಡಂ ತೈಲಂ ಪಿಪ್ಪಲೀ ವಿಶ್ವಭೇಷಜಮ್ ||
ಲಿಹ್ಯಾದ್ ವಾತೇ ಪ್ರತಿಹತೇ ಸಶೂಲಃ ಸಪ್ರವಾಹಿಕಃ || ೧೧೬ ||
ಭೋಜ್ಯಂ ಮೂಲಕಯೂಷೇಣ ವಾತಶ್ಲೇಷ್ಮೋಪಸೇವನೈಃ ||
ವಾತಾತಿಸಾರವಿಹಿತೈರ್ಯೂಷೈರ್ಮಾಂಸರಸೈಃ ಖಡೈಃ || ೧೧೭ ||
ಪೂರ್ವೋಕ್ತಮಮ್ಲಸರ್ಪಿರ್ವಾ ಷಟ್ಪಲಂ ವಾ ಯಥಾಬಲಂ ||
ಪುರಾಣಂ ವಾ ಘೃತಂ ದದ್ಯಾದ್ ಯವಾಗೂಮಂಡಮಿಶ್ರಿತಮ್ || ೧೧೮ ||
ವಾತಶ್ಲೇಷ್ಮವಿಬಂಧೇ ವಾ ಕಫೇ ವಾ ತಿಸ್ರವತ್ಯಪಿ ||
ಶೂಲೇ ಪ್ರವಾಹಿಕಾಯಾಞ್ಚ ಪಿಚ್ಛಾಬಸ್ತಿಂ ಪ್ರಯೋಜಯೇತ್ || ೧೧೯ ||

ಪಿಪ್ಪಲೀ ಬಿಲ್ವಕುಷ್ಠಾನಾಂ ಶತಾಹ್ವಾವಚಯೋರಪಿ ||
ಕಲ್ಕೈಃ ಸಲವಣೈರ್ಯುಕ್ತಂ ಪೂರ್ವೋಕ್ತಂ ಸನ್ನಿಧಾಪಯೇತ್||೧೨೦||

ಪ್ರತ್ಯಾಗತೇ ಸುಖೇ ಸ್ನಾತಂ ಕೃತಾಹಾರಂ ದಿನಾತ್ಯಯೇ ||
ಬಿಲ್ವತೈಲೇನ ಮತಿಮಾನ್ ಸುಖೋಷ್ಣೇನಾನುವಾಸಯೇತ್ ||೧೨೧||

ವಚಾಂತೈರಥವಾ ಕಲ್ಕೈಸ್ತೈಲಂ ಪಕ್ತ್ವಾನುವಾಸಯೇತ್ ||
ಬಹುಶಃ ಕಫವಾತಾರ್ತಸ್ತಥಾ ಸಲಭತೇ ಸುಖಮ್ ||೧೨೨||

ಸ್ವಸ್ಥಾನೇ ಮಾರುತೋಽವಶ್ಯಂ ವರ್ಧತೇ ಕಫಸಂಕ್ಷಯಾತ್ ||
ವಿವೃದ್ಧಃ ಸಹಸಾ ಹನ್ಯಾತ್ ತಸ್ಮಾತ್ ತಂ ತ್ವರಯಾ ಜಯೇತ್ ||೧೨೩||

ವಾತಸ್ಯಾನು ಜಯೇತ್ ಪಿತ್ತಂ ಪಿತ್ತಸ್ಯಾನು ಜಯೇತ್ ಕಫಮ್ ||
ತ್ರಯಾಣಾಂ ವಾ ಜಯೇತ್ ಪೂರ್ವಂ ಯೋಭವೇತ್ ಬಲವತ್ತರಃ
|| ೧೨೪ ||

**ಅರ್ಥ—** ಕಫಾತಿಸಾರದಲ್ಲಿ ಮೊದಲು ಲಂಘನ ಪಾಚನಗಳನ್ನು ಮಾಡುವದು ಹಿತಕರ. ಆಮೇಲೆ ಆಮಾತಿಸಾರನಾಶಕವಾದ ಹಿಂದೆಹೇಳಿದ ದೀಪನದ್ರವ್ಯಗಳನ್ನು ಯೋಜಿಸಬೇಕು. || ೧೦೪ || ಲಂಘನಮಾಡಿಸಿ, ಆಮೇಲೆ ಮಾಡತಕ್ಕ ಕ್ರಮ ( ಪಾಚನ ಅತಿಸಾರನಾಶನದೀಪನ ಮುಂತಾದ ವಿಧಿ ) ಗಳನ್ನು ಕೈಕೊಂಡರೂ ಕಫಜ ಅತಿಸಾರವು ನಾಶವಾಗದಿದ್ದರೆ ಕಫಘ್ನ ( ಮುಂದೆಹೇಳಿದ ) ಔಷಧಗಳನ್ನು ಕೊಡಬೇಕು. || ೧೦೫ || ೧ ಬಿಲ್ವ, ಕಾಕಡಶಿಂಗಿ, ಜೇಕು, ಅಣಲೆ, ಸುಂಠಿ, ೨ ಬಜೆ, ವಾವಡಿಂಗ, ಭೂತೀಕ(ಅಜವಾನ) ಹವೀಜ, ದೇವದಾರು || ೧೦೬ || ೩ ಕೋಷ್ಠ, ಅತಿವಿಷ, ಅಗಳಸುಂಠಿ, ಚವಕ, ಕಟುಕರೋಹಿಣಿ, ೪ ಹಿಪ್ಪಲಿ, ಮೋಡಿ, ಚಿತ್ರಕ, ಗಜಹಿಪ್ಪಲಿ, ||೧೦೭|| ಹೀಗೆ ಅರ್ಧ ಶ್ಲೋಕಗಳಿಂದ ಹೇಳಿದ ನಾಲ್ಕು ಔಷಧಗಳ ಕಷಾಯವನ್ನು ಕೊಡಬೇಕು. ಇವು ಕಫಾತಿಸಾರಗಳಲ್ಲಿ ಶರೀರ ಮತ್ತು ಅಗ್ನಿಯ ಬಲವನ್ನು ಹೆಚ್ಚಿಸುತ್ತವೆ. ||೧೦೮|| ಕರಿಜೀರಿಗೆ, ಅಗಳಶುಂಠಿ, ಸುಂಠಿ, ಮೆಣಸು, ಇವೆಲ್ಲವರ ೨ ಪಾಲು ಧಾತಕೀಪುಷ್ಪ ಇವುಗಳ ಚೂರ್ಣವನ್ನುಮಾಡಿ ಮಾದಾಳದ ರಸದಲ್ಲಿ ಕೊಡಬೇಕು. ||೧೦೯|| ರಸಾಂಜನ, ಅತಿವಿಷ, ಇಂದ್ರಜವಿ ೧—೧ ಭಾಗ ೨ ಪಾಲು ಧಾತಕೀಪುಷ್ಪ, ಸುಂಠಿ ೧ಭಾಗ ಇವುಗಳ ಚೂರ್ಣಮಾಡಿ ೪ ಪಾಲು ಜೇನುತುಪ್ಪದಲ್ಲಿ ಕೊಡಬೇಕು. || ೧೧೦ || ೧ ಧಾತಕೀಪುಷ್ಪ,

ಸುಂಠಿ, ಬಿಲ್ವ, ಲೋಧ್ರ, ಪದ್ಮಕೇಶರ ೨ ನೇರಿಲತೋಟಿ, ಸುಂಠಿ, ಹವೀಜ, ಅಗಳಸುಂಠಿ, ಬೂರಲಅಂಟು, ಮುಪ್ರೈ ॥ ೧೧ ॥ ೩ ಮಂಜಿಷ್ಠೆ, ಧಾತಕೀಪುಷ್ಪ, ಬಿಲ್ವದತಿಳಲು. ನೇರಿಲ ಮತ್ತು ಮಾವಿನತೋಟಿ, ೪ ಬೇಳವಲತಿಳಲು, ಮಾವಡಿಂಗ, ಸುಂಠಿ, ಮೆಣಸು, ॥೧೨॥ ಈ ಪ್ರಕಾರ ಅರ್ಧ ಶ್ಲೋಕದಿಂದ ಹೇಳಿದ ೪ ಔಷಧಗಳ ಕಟ್ಟಿನ್ನುಮಾಡಿ ಅವುಗಳಲ್ಲಿ ಹುಳಚಿಕ್ಕ ಮಜ್ಜಿಗೆ ಬೋರೆಗಳನ್ನು ಹಾಕಿ ಹುಳಿಮಾಡಿ ಸ್ನೇಹಲವಣಗಳನ್ನು ಕೂಡಿಸಿ ಕಫಾಧಿಕ ಅತಿಸಾರದಲ್ಲಿ ಕೊಡಬೇಕು. ॥೧೩॥ ಬೇಳವಲದ ತಿಳಲಿನಲ್ಲಿ ತ್ರಿಕಟು, ಜೇನು, ಸಕ್ಕರೆಗಳನ್ನು ಹಾಕಿ ಅಥವಾ ಕಿರಿಶಿವನ್ನಿ ಚೂರ್ಣದಲ್ಲಿ ಜೇನುತುಪ್ಪ ಕೂಡಿಸಿ ನೆಕ್ಕಿದರೆ ಅತಿಸಾರದಿಂದ ಮುಕ್ತನಾಗುವನು. ॥೧೪॥ ಹಿಪ್ಪಲಿಯನ್ನು ಜೇನಿನೊಡನೆ ನೆಕ್ಕಲು ಅಥವಾ ಚಿತ್ರಕ ಚೂರ್ಣವನ್ನು ಮಜ್ಜಿಗೆಯೊಡನೆ ಕುಡಿಯಲು ಅಥವಾ ಬಾಲಬಿಲ್ವದ ತಿಳಲನ್ನು ತಕ್ಕೊಳ್ಳಲು ಅತಿಸಾರದಿಂದ ಮುಕ್ತನಾಗುವನು. ॥೧೫॥ ವಾತದ ಪ್ರತಿಬಂಧ, ಶೂಲ, ತಿಣಕೋಣ ಇವಿದ್ದರೆ ಬಿಲ್ವದ ತಿಳಲು, ಬೆಲ್ಲ, ಹಿಪ್ಪಲಿ, ಸುಂಠಿಗಳ ಚೂರ್ಣವನ್ನು ತೈಲದಲ್ಲಿ ನೆಕ್ಕಬೇಕು. ॥೧೬॥ ಮೂಲಂಗಿಯ ಕಟ್ಟಿನಿಂದ ಮತ್ತು ವಾತನಾಶಕ (ಮೊಸರು ಮುಂತಾದ ) ವ್ಯಂಜನಗಳಿಂದ ವಾತಾತಿಸಾರಕ್ಕೆ ಹೇಳಿದ ಕಟ್ಟುಗಳಿಂದಲೂ ಮಾಂಸರಸಗಳಿಂದಲೂ ಕಾಯಿಗಳಿಂದಮಾಡಿದ ಕಟ್ಟುಗಳಿಂದಲೂ ಅನ್ನವನ್ನು ತಿನ್ನಬೇಕು. ॥೧೭॥ ಹಿಂದೆ ಹೇಳಿದ ಹುಳಿಯಾದ ಘೃತ( ಚಾಂಗೇರಿಘೃತ ಮುಂತಾದ)ಗಳನ್ನು ಅಥವಾ ಷಟ್ಫಲಘೃತವನ್ನು ಅಥವಾ ಹಳೇತುಪ್ಪವನ್ನು ಪೇಯಮಂಡಗಳಲ್ಲಿ ಕೂಡಿಸಿ ಪತ್ಥ್ಯವನ್ನು ನೋಡಿಕೊಡಬೇಕು. ॥ ೧೮ ॥ ವಾತಕಫದ ಪ್ರತಿಬಂಧವಿರಲು ಅಥವಾ ಅತಿಕಫಸ್ರಾವವಾಗುತ್ತಿರಲು ಅಥವಾ ಶೂಲ, ತಿಣಕೋಣವಿರಲು ಪಿಚ್ಛಾಬಸ್ತಿಯನ್ನು ಕೊಡಬೇಕು. ॥ ೧೯ ॥ ಹಿಪ್ಪಲಿ, ಬಿಲ್ವಕೋಷ್ಠ, ಬಡೇಸೋಪು, ಬಜೆ ಇವುಗಳ ಕಲ್ಕ ಮತ್ತು ಉಪ್ಪು ಇವುಗಳನ್ನು ಕೂಡಿಸಿ ಹಿಂದೆಹೇಳಿದ ಪಿಚ್ಛಾಬಸ್ತಿಯನ್ನು ಕೊಡಬೇಕು.॥೨೦॥ ಆಮ ತಿರುಗಿಬರಲು ಸಮಾಧಾನವೆನಿಸಲು ಸಂಜೆಗೆ ಸ್ನಾನಮಾಡಿ ಬುದ್ಧಿವಂತನು ಬೆಚ್ಚಗಿನ ಬಿಲ್ವತೈಲದ ಅನುವಾಸನ ಬಸ್ತಿಯನ್ನು ತಕ್ಕೊಳ್ಳಬೇಕು. ॥೨೧॥ ಕಫವಾತಗಳಿಂದ ಬಹಳ ಪೀಡಿತನಾಗಿದ್ದರೆ ಬೇವು, ಕಾಕಡಸಿಂಗಿ, ಜೇಕು, ಅಣಲೆ, ಸುಂಠಿ, ಬಜೆ, ಇವುಗಳ ಕಲ್ಕದಿಂದ ೪ ಪಾಲು ನೀರಿನಲ್ಲಿ ಸಿದ್ಧಮಾಡಿದ ತೈಲದ ಅನುವಾಸನವನ್ನು ಕೊಡಬೇಕು. ಅದರಿಂದ ಅವನಿಗೆ ಸಮಾಧಾನವೆನಿಸುವದು. ॥ ೨೨ ॥ ಕಫಬೀಳುವದರಿಂದ ಆ ಸ್ಥಾನದಲ್ಲಿ

ವಾತವು ನಿಶ್ಚಿತವಾಗಿ ಹೆಚ್ಚುವದು. ಅದು ಬೆಳೆದರೆ ಒಮ್ಮೆಲೇ ಕೊಲ್ಲಬಹುದು. ಕಾರಣ ವಾತವನ್ನು ತೀವ್ರವಾಗಿ ಗೆಲ್ಲಬೇಕು. ||೧೨೩|| ವಾತದನಂತರ ಪಿತ್ತವನ್ನು ಪಿತ್ತದನಂತರ ಕಫವನ್ನು ಗೆಲ್ಲಬೇಕು. ಅಥವಾ ಮೂರರಲ್ಲಿ ಯಾವದು ಬಲಿಷ್ಠವಿದೆಯೋ ಅದನ್ನು ಮೊದಲು ಗೆಲ್ಲಬೇಕು. ||೧೨೪||

### ತತ್ರಶ್ಲೋಕಃ

**ಪ್ರಾಗುತ್ಪತ್ತಿರ್ನಿದಾನಾನಿ ಲಕ್ಷಣಂ ಸಾಧ್ಯತಾ ನ ಚ ||**
**ಕ್ರಿಯಾ ಚಾವಸ್ಥಿಕೀ ಸಿದ್ಧಾ ನಿರ್ದಿಷ್ಟಾ ಹ್ಯತಿಸಾರಿಣಾಮ್ || ೧೨೫ ||**

**ಅರ್ಥ—** ಅತಿಸಾರದ ಮೂಲ, ಉತ್ಪತ್ತಿ, ಕಾರಣ, ಲಕ್ಷಣ, ಅದರ ಸಾಧ್ಯಾಸಾಧ್ಯತೆ ಅತಿಸಾರಿಗಳ ಆಯಾ ಅವಸ್ಥೆಗಳಲ್ಲಿ ಮಾಡಬೇಕಾದ ಸಿಶ್ಚಿತ ಚಿಕಿತ್ಸೆ ಇವು ಹೇಳಲ್ಪಟ್ಟವು. ||೧೨೫||

**ಇತ್ಯಗ್ನಿವೇಶಕೃತೇ ತಂತ್ರೇ ದೃಢಬಲಪ್ರತಿಸಂಸ್ಕೃತೇ ಚಿಕಿತ್ಸಿತಸ್ಥಾನೇ ಅತಿಸಾರ ಚಿಕಿತ್ಸಿತಂ ನಾಮ ಏಕೋನವಿಂಶೋಧ್ಯಾಯಃ ||**

ಶ್ರೀ ಮದಾದ್ಯ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ **ಚರಕ 'ಚಿಕಿತ್ಸಾ** ಬೋಧಿನಿ' ಎಂಬ ಚರಕ ಸಂಹಿತೆಯು ಟಿಪ್ಪಣಿಯಲ್ಲಿ **ಅತಿಸಾರಚಿಕಿತ್ಸೆ** ಎಂಬ ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



# ೨೦ನೆಯ ಅಧ್ಯಾಯ

## ಛರ್ದಿ ಚಿಕಿತ್ಸೆ

ಅಧೋಮಾರ್ಗ (ಗುದ) ಪ್ರವೃತ್ತಿರೂಪವಾದ ಅತಿಸಾರವನ್ನು ಹೇಳಿದನಂತರಅದರ ವಿರುದ್ಧವಾದ ಊರ್ಧ್ವಮಾರ್ಗ (ಮುಖ) ಪ್ರವೃತ್ತಿರೂಪವಾದ ಛರ್ದಿ (ವಾಂತಿ) ಯನ್ನು ಹೇಳುತ್ತಾರೆ.

**ಅಥಾತಶ್ಛರ್ದಿಚಿಕಿತ್ಸಿತಂ ವ್ಯಾಖ್ಯಾಸ್ಯಾಮಃ ||**

**ಅರ್ಥ—** ಇನ್ನುಮೇಲೆ ಛರ್ದಿ ಚಿಕಿತ್ಸೆಯನ್ನು ಹೇಳುವೆವು.

**ಇತಿ ಹ ಸ್ಮಾಹ ಭಗವಾನಾತ್ರೇಯಃ || ೧ ||**

**ಅರ್ಥ—** ಪೂಜ್ಯರಾದ ಆತ್ರೇಯ ಋಷಿಗಳು ಹೀಗೆ ಹೇಳಿದರು. ||೧||

**ಯಶಸ್ವಿನಂ ಬ್ರಹ್ಮತಪೋಧೃತಿಭ್ಯಾಂ ಜ್ವಲಂತಮಗ್ನ್ಯರ್ಕಸಮಪ್ರಭಾವಮ್ ||**
**ಪುನರ್ವಸುಂ ಭೂತಹಿತೇ ನಿವಿಷ್ಟಂ ಪಪ್ರಚ್ಛ ಶಿಷ್ಯೋಽತ್ರಿಜಮಗ್ನಿವೇಶಃ || ೨ ||**
**ಯಾಶ್ಛರ್ದಯಃ ಪಞ್ಚ ಪುರಾ ತ್ವಯೋಕ್ತಾ ರೋಗಾಧಿಕಾರೇ ಭಿಷಜಾಂ ವರಿಷ್ಠ ||**
**ತಾಸಾಂ ಚಿಕಿತ್ಸಾಂ ಸನಿದಾನಲಿಂಗಾಂ ಯಥಾವದಾಚಕ್ಷ್ವ ಹಿತಾಯ ನೃಣಾಮ್ || ೩ ||**
**ತದಗ್ನಿವೇಶಸ್ಯ ವಚೋ ನಿಶಮ್ಯ ಪ್ರೀತೋ ಭಿಷಕ್‌ಶ್ರೇಷ್ಠ ಇದಂ ಜಗಾದ**
**ಯಾಶ್ಛರ್ದಯಃ ಪಞ್ಚ ಪುರಾ ಮಯೋಕ್ತಾಸ್ತಾ ವಿಸ್ತರೇಣ ಬ್ರುವತೋ ನಿಬೋಧ || ೪ ||**

**ಅರ್ಥ—** ಕೀರ್ತಿವಂತ ಜ್ಞಾನ ತಪಸ್ಸುಗಳ ತೇಜದಿಂದ ಹೊಳೆಯುವ ಅಗ್ನಿ, ಸೂರ್ಯರಂತೆ ಪ್ರಭಾವವುಳ್ಳ ಪ್ರಾಣಿಗಳ ಕಲ್ಯಾಣವಲ್ಲಿ ತೊಡಗಿದ

ಆತ್ರೇಯ ಪುನರ್ವಸು ಋಷಿಗಳಿಗೆ ಶಿಷ್ಯನಾದ ಅಗ್ನಿವೇಶನು ಪ್ರಶ್ನಮಾಡಿದನು ॥ ೨ ॥ ವೈದ್ಯಶ್ರೇಷ್ಠರೇ ಹಿಂದೆ (ಅಷ್ಟೋದರಿಯ ಅಧ್ಯಾಯದಲ್ಲಿ) ಹೇಳಿದ ಐದು ಛರ್ದಿ (ವಾಂತಿ) ಗಳ ಕಾರಣ ಲಕ್ಷಣ ಚಿಕಿತ್ಸೆಯನ್ನು ಜನರ ಕಲ್ಯಾಣಕ್ಕಾಗಿ ಸರಿಯಾಗಿ ಹೇಳಿರಿ. ॥ ೩ ॥ ಅಗ್ನಿವೇಶನ ಈ ಮಾತನ್ನು ಕೇಳಿ ಸಂತುಷ್ಟರಾದ ವೈದ್ಯಶ್ರೇಷ್ಠರಾದ ಆತ್ರೇಯಋಷಿಗಳು ಹಿಂದೆ ನಾನು ಹೇಳಿದ ಐದು ಛರ್ದಿಗಳನ್ನೇ ವಿಸ್ತಾರದಿಂದ ಹೇಳುವೆನು ಕೇಳೆಂದುಹೇಳಿದರು ॥ ೪ ॥

ಛರ್ದಿಯ ಸಾಮಾನ್ಯ ಪೂರ್ವರೂಪವನ್ನು ಹೇಳುತ್ತಾರೆ—

**ದೋಷೈಃ ಪೃಥಕ್ ತ್ರಿಪ್ರಭವಾ ಚತಸ್ರೋ ದ್ವಿಷ್ಟಾರ್ಥಯೋಗಾದಪಿ ಪಂಚಮೀ ಸ್ಯಾತ್ ॥**
**ತಾಸಾಂ ಹೃದುತ್ಕ್ಲೇಶಕಫಪ್ರಸೇಕೌ ದ್ವೇಷೋಽಶನೇ ಚೈವ ಹಿ ಪೂರ್ವರೂಪಮ್ ॥ ೫ ॥**

**ಅರ್ಥ—** ಹೃದಯದ ಉತ್ಕ್ಲೇಶ (ಕೆರಳೋಣ) ಕಫಬೀಳೋಣ ಅನ್ನದ್ವೇಷ, ಇವು ಬೇರೆಬೇರೆ ದೋಷಗಳಿಂದುಂಟಾದ ಮೂರು ಸನ್ನಿಪಾತದಿಂದ ಮತ್ತು ಹೇಸಿಕೆಬಂದ ದ್ರವ್ಯದಿಂದುಂಟಾದ ಎರಡು ಹೀಗೆ ಐದೂ ಛರ್ದಿಗಳ ಪೂರ್ವರೂಪಗಳು ॥ ೫ ॥

ವಾತಛರ್ದಿಯ ನಿದಾನ ಸಂಪ್ರಾಪ್ತಿ ಲಕ್ಷಣಗಳನ್ನು ಹೇಳುತ್ತಾರೆ—

**ವ್ಯಾಯಾಮತೀಕ್ಷ್ಣೌಷಧಶೋಕರೋಗಭಯೋಪವಾಸಾದ್ಯತಿಕರ್ಶಿತಸ್ಯ ವಾಯುರ್ಮಹಾಸ್ರೋತಸಿ ಸಂಪ್ರವೃದ್ಧಃ ಉತ್ಕ್ಲೇಶ್ಯ ದೋಷಾಂಸ್ತತ ಊರ್ಧ್ವಮಸ್ಯನ್ ॥ ೬ ॥**
**ಆಮಾಶಯೋತ್ಕ್ಲೇಶಕೃತಾಂಚ ಮರ್ಮಪ್ರಪೀಡಯಂಶ್ಛರ್ದಿಮುದೀರಯೇತ್ ತು ॥**
**ಹೃತ್ಪಾರ್ಶ್ವಪೀಡಾ ಮುಖಶೋಷಮೂರ್ಧ್ವನಾಭ್ಯರ್ತಿಕಾಸಸ್ವರಭೇದತೋದೈಃ ॥ ೭ ॥**
**ಉದ್ಗಾರಶಬ್ದಪ್ರಬಲಂ ಸಫೇನಂ ವಿಚ್ಛಿನ್ನಕೃಷ್ಣಂ ತನುಕಂ ಕಷಾಯಂ ॥**
**ಕೃಚ್ಛ್ರೇಣ ಚಾಲ್ಪಂ ಮಹತಾ ಚ ವೇಗೇನಾರ್ತೋಽನಿಲಾಚ್ಛರ್ದಯತೀಹ ದುಃಖಮ್ ॥ ೮ ॥**

**ಅರ್ಥ—** ವ್ಯಾಯಾಮ ತೀಕ್ಷ್ಣಔಷಧ, ಶೋಕ, ರೋಗ, ಭಯ, ಉಪವಾಸ ಮುಂತಾದವುಗಳಿಂದ ಬಹಳ ಅಶಕ್ತನಾದವನ ಕೋಷ್ಠದಲ್ಲಿ ವಾಯುವು ಬೆಳೆದು ದೋಷಗಳನ್ನು ಕೆರಳಿಸಿ ಮೇಲಕ್ಕೆ ಚೆಲ್ಲುತ್ತ ||೬ || ಮರ್ಮಗಳನ್ನು ಪೀಡಿಸುತ್ತ ಆಮಾಶಯದ ಉತ್ಕ್ಲೇಶದಿಂದ ಛರ್ದಿಯನ್ನುಂಟುಮಾಡುತ್ತದೆ. ವಾತದ ಛರ್ದಿಯಲ್ಲಿ ಎದೆ ಪಾರ್ಶ್ವಗಳಲ್ಲಿ ನೋವು, ಬಾಯಿಒಣಗೋಣ, ತಲೆಹೊಕ್ಕಳಗಳಲ್ಲಿ ಶೂಲ, ಕೆಮ್ಮು, ಸ್ವರಭಂಗ, ಚುಚ್ಚುವಿಕೆಗಳು ಇರುವವು. || ೭ || ಬಹಳ ವೇಗದಿಂದ ಪ್ರಬಲ ಶಬ್ದದಿಂದ ತೇಕುತ್ತ ಬುರುಗುಳ್ಳ ಕಪ್ಪುಬಣ್ಣದ ಒಗರುರಸದ ದ್ರವವಾದ ಸ್ವಲ್ಪ ಕಫವನ್ನು ಕಷ್ಟದಿಂದ ಹೇಗೋ ಕಾರುವನು. || ೮ ||

ಪಿತ್ತಜಛರ್ದಿಯ ನಿದಾನ ಸಂಪ್ರಾಪ್ತಿ ಲಕ್ಷಣಗಳನ್ನು ಹೇಳುತ್ತಾರೆ—

**ಅಜೀರ್ಣಕಟ್ವಮ್ಲವಿದಾಹ್ಯಶೀತೈರಾಮಾಶಯೇ ಪಿತ್ತಮುದೀರ್ಣವೇಗಂ||**
**ರಸಾಯನೀಭಿರ್ವಿಸೃತಂ ಪ್ರಪೀಡ್ಯ ಮರ್ಮೋರ್ಧ್ವಮಾಗಮ್ಯ ವಮಿಂ**
**ಕರೋತಿ　　　　|| ೯ ||**

**ಮೂರ್ಛಾಪಿಪಾಸಾಮುಖಶೋಷಮೂರ್ಧತಾಲ್ವಕ್ಷಿಸಂತಾಪತಮೋ**
**ಭ್ರಮಾರ್ತಃ ||**
**ಪೀತಂ ಭೃಶೋಷ್ಣಂ ಹರಿತಂ ಸತಿಕ್ತಂ ಧೂಮ್ರಂಚ ಪಿತ್ತೇನ ವಮೇ**
**ತ್ಸದಾಹಮ್　　　　|| ೧೦ ||**

**ಅರ್ಥ—** ಅಜೀರ್ಣ, ಕಾರ, ಹುಳಿ, ವಿದಾಹಿ, ಉಷ್ಣಗಳಿಂದ ಆಮಾಶಯವಲ್ಲಿದ್ದ ಪಿತ್ತವೂ ಕುಪಿತವಾಗಿ ರಸವಾಹಕ ಧಮನಿಗಳಿಂದ ಶರೀರದಲ್ಲಿ ಪಸರಿಸಿ ಮರ್ಮವನ್ನು ಪೀಡಿಸಿ ಮೇಲಕ್ಕೆ ಬಂದು ವಾಂತಿಯನ್ನುಂಟುಮಾಡುವದು. || ೯ || ಪಿತ್ತಜಛರ್ದಿಯಲ್ಲಿ ಮೂರ್ಛೆ, ನೀರಡಿಕೆ, ಬಾಯಿಒಣಗೋಣ ತಲೆ ಅಂಗಳು ಕಣ್ಣು ಉರಿಯೋಣ, ಕಣ್ಣಿಗೆ ಕತ್ತಲೆಬರೋಣ, ಭ್ರಮ ಇವು ಉಂಟಾಗುವವು. ಬಹಳ ಉಷ್ಣವಿದ್ದ ಹಸರು ಹಳದಿ ಅಥವಾ ಧೂಮವರ್ಣದ ಕಫವನ್ನು ಕಾರುವನು; ದಾಹವಾಗುವದು. || ೧೦ ||

ಕಫಛರ್ದಿಯ ನಿದಾನ ಸಂಪ್ರಾಪ್ತಿ ಲಕ್ಷಣಗಳನ್ನು ಹೇಳುತ್ತಾರೆ—

**ಸ್ನಿಗ್ಧಾತಿಗುರ್ವಾಮವಿದಾಹಿಭೋಜ್ಯೈಃ ಸ್ವಪ್ನಾದಿಭಿಶ್ಚೈವ ಕಫೋಽತಿ ವೃದ್ಧಃ ||**
**ಉರಃಶಿರೋಮರ್ಮರಸಾಯನೀಶ್ಚ ಸರ್ವಾಃ ಸಮಾವೃತ್ಯ ವಮಿಂ ಕರೋತಿ || ೧೧ ||**

**ತಂದ್ರಾಸ್ಯಮಾಧುರ್ಯಕಫಪ್ರಸೇಕಸಂತೋಷನಿದ್ರಾರುಚಿಗೌರವಾರ್ತಃ||**
**ಸ್ನಿಗ್ಧಂ ಘನಂ ಸ್ವಾದು ಕಫಂ ವಿಶುದ್ಧಂ ಸಲೋಮಹರ್ಷೋಽಲ್ಪರುಜಂ ವಮೇತ್ತು || ೧೨ ||**

**ಅರ್ಥ—** ಸ್ನಿಗ್ಧ, ಅತಿಜಡ, ಆಮ, ವಿದಾಹಿ ಆಹಾರಗಳಿಂದಲೂ ಬಹಳ ಮಲಗೋಣ ಮುಂತಾದವುಗಳಿಂದಲೂ ಕಫವು ಹೆಚ್ಚಾಗಿ ಬೆಳೆದು ಎದೆ, ತಲೆ, ಮರ್ಮ, ರಸವಾಹಕಧಮನಿ ಇವೆಲ್ಲವನ್ನು ಆವರಿಸಿ ವಾಂತಿಯನ್ನುಂಟು ಮಾಡುತ್ತದೆ. || ೧೧ || ಆದರಿಂದ ತಂದ್ರೆ ಬಾಯಿಗೆಸವಿ ಕಫಬೀಳೋಣ ತೃಪ್ತಿ ನಿದ್ರೆ, ಅರುಚಿ, ಜಡತ್ವ ರೋಮಾಂಚಗಳು ಉಂಟಾಗುವವು. ಸ್ನಿಗ್ಧ, ಗಟ್ಟಿ, ಸವಿಯಾದ ಶುದ್ಧ ಕಫವು ತ್ರಾಸವಾಗದೆ ಬೀಳುವದು. ||೧೨||

ತ್ರಿದೋಷಛರ್ದಿಯ ನಿದಾನ ಸಂಪ್ರಾಪ್ತಿ ಲಕ್ಷಣಗಳನ್ನು ಹೇಳುತ್ತಾರೆ—

**ಸಮಶ್ನತಃ ಸರ್ವರಸಾನ್ ಪ್ರಸಕ್ತಮಾಮಪ್ರದೋಷರ್ತುವಿಪರ್ಯಯೈಶ್ಚ**
**ಸರ್ವೇ ಪ್ರಕೋಪಂ ಯುಗಪತ್ ಪ್ರಪನ್ನಾಶ್ಛರ್ದಿಂ ತ್ರಿದೋಷಾಂ ಜನಯಂತಿದೋಷಾಃ || ೧೩ ||**

**ಶೂಲಾವಿಪಾಕಾರುಚಿದಾಹತೃಷ್ಣಾಶ್ವಾಸಪ್ರಮೋಹಪ್ರಬಲಾಪ್ರಸಕ್ತಂ ||**
**ಛರ್ದಿಸ್ತ್ರಿದೋಷಾಲ್ಲವಣಾಮ್ಲನೀಲಸಾಂದ್ರೋಷ್ಣರಕ್ತಂ ವಮತಾಂ ನೃಣಾಂ ಸ್ಯಾತ್ || ೧೪ ||**

**ಅರ್ಥ—** ಯಾವಾಗಲೂ ಎಲ್ಲ ರಸಗಳನ್ನು ಪಥ್ಯಾಪಥ್ಯಗಳನ್ನುಕೂಡಿಸಿ ತಿನ್ನುವವನಿಗೆ ಆಮದೋಷ ಮತ್ತು ಋತು ವಿಪರ್ಯಯಗಳಿಂದ ಎಲ್ಲದೋಷಗಳು ಒಮ್ಮೆಲೆ ಕುಪಿತವಾಗಿ ತ್ರಿದೋಷಜಛರ್ದಿಯನ್ನುಂಟು ಮಾಡುತ್ತದೆ.||೧೩|| ಈ ತ್ರಿದೋಷಛರ್ದಿಯಲ್ಲಿ ಶೂಲ, ಅಜೀರ್ಣ, ಅರುಚಿ, ದಾಹ, ನೀರಡಿಕೆ,

ಶ್ವಾಸ, ಮೋಹಗಳು ಯಾವಾಗಲೂ ಪ್ರಬಲವಾಗಿರುವವು. ಉಪ್ಪು, ಹುಳಿ, ಕಪ್ಪು, ಗಟ್ಟಿ, ಉಷ್ಣ, ಕೆಂಪಾದ ವಾಂತಿಯು ಆಗುವದು. ||೧೪||

ಅಸಾಧ್ಯ ತ್ರಿದೋಷ ಛರ್ದಿಯನ್ನು ಹೇಳುತ್ತಾರೆ—

**ವಿಟ್ ಸ್ವೇದಮೂತ್ರಾಂಬುವಹಾನಿ ವಾಯುಃ ಸ್ರೋತಾಂಸಿ ಸಂರುಧ್ಯ ಯದೋರ್ಧ್ವಮೇತಿ ||**
**ಉತ್ಸನ್ನದೋಷಸ್ಯ ಸಮಾಚಿತಂ ತಂ ದೋಷಂ ಸಮುದ್ಧೂಯ ನರಸ್ಯ ಕೊಷ್ಠಾತ್ || ೧೫ ||**
**ವಿಣ್ಮೂತ್ರಯೋಸ್ತತ್ಸಮಗಂಧವರ್ಣಂ ತೃಟ್ ಶ್ವಾಸಹಿಕ್ಕಾರ್ತಿಯುತಂ ಪ್ರಸಕ್ತಮ್ ||**
**ಪ್ರಚ್ಛರ್ದಯೇದ್ದುಷ್ಟಮಿಹಾತಿಯೋಗಾತ್ತಯಾರ್ದಿತಶ್ಚಾಶು ವಿನಾಶಮೇತಿ || ೧೬ ||**

**ಅರ್ಥ—** ಯಾವಾಗ್ಗೆ ವಾಯುವು ಮಲ, ಸ್ವೇದ, ಮೂತ್ರ, ರಸವಾಹಕಸ್ರೋತಸ್ಸುಗಳನ್ನು ಪ್ರತಿಬಂಧಿಸಿ ಮೇಲಕ್ಕೆ ಬರುವದೋ ಆಗ್ಗೆ ಅದು ರೋಗಿಯ ಮೇಲಕ್ಕೆಬಂದ ಎಲ್ಲದೋಷಗಳನ್ನು ಕೋಷ್ಠದಿಂದ ಮೇಲಕ್ಕೆಹಾರಿಸುತ್ತ, || ೧೫ || ಮಲಮೂತ್ರಗಳ ವಾಸನೆಯುಳ್ಳ ನೀರಡಿಕೆ, ಶ್ವಾಸ, ಬಿಕ್ಕು, ಶೂಲಗಳಿಂದ ಕೂಡಿದ ದುಷ್ಟವಾದ ವಾಂತಿಯನ್ನು ಒಂದೇಸವನೆ ಅತಿಯಾಗಿ ಮಾಡಿಸುವದು. ಅದರಿಂದ ಪೀಡಿತನಾದ ರೋಗಿಯು ತೀವ್ರವಾಗಿ ಸಾಯುವನು. ||೧೬||

ಆಗಂತು ಛರ್ದಿಗಳನ್ನು ಹೇಳುತ್ತಾರೆ—

**ದ್ವಿಷ್ಟಪ್ರತೀಪಾಶುಚಿಪೂತ್ಯಮೇಧ್ಯಬೀಭತ್ಸಗಂಧಾಶನದರ್ಶನೈಶ್ಚ ||**
**ಯಚ್ಛರ್ದಯೇತ್ ತಪ್ತಮನಾ ಮನೋಘ್ನೈರ್ದ್ವಿಷ್ಟಾರ್ಥಸಂಯೋಗಭವಾ ಮತಾ ಸಾ || ೧೭ ||**

**ಅರ್ಥ—** ಅತ್ಯಂತ ಬೇಡಾದ, ಸಾತ್ಮ್ಯವಿರದ, ಅಪವಿತ್ರ, ದುರ್ಗಂಧವುಳ್ಳ, ಮನಸ್ಸಿನ ವಿರುದ್ಧವಾದ ವಿಕೃತಪದಾರ್ಥಗಳ, ದುಃಖದಾಯಕ ಗಂಧ, ಭಕ್ಷಣ, ದರ್ಶನಗಳಿಂದ ಮನಸ್ಸಿಗೆ ಖೇದವಾಗಿ ಆಗುವ ವಾಂತಿಯು ದ್ವಿಷ್ಟಸಂಯೋಗಜವೆಂದು ಕರೆಯಲ್ಪಡುತ್ತದೆ. ||೧೭||

ಎಲ್ಲವುಗಳಲ್ಲಿ ಅಸಾಧ್ಯಲಕ್ಷಣಗಳನ್ನು ಹೇಳುತ್ತಾರೆ—

**ಕ್ಷೀಣಸ್ಯ ಯಾಛರ್ದಿರತಿಪ್ರಸಕ್ತಾ ಸೋಪದ್ರವಾ ಶೋಣಿತಪೂಯ ಯುಕ್ತಾ ||**
**ಸಚಂದ್ರಿಕಾಂ ತಾಂ ಪ್ರವದೇದಸಾಧ್ಯಾಂ ಸಾಧ್ಯಾಂ ಚಿಕಿತ್ಸೇದನುಪದ್ರವಾಂಚ || ೧೮ ||**

**ಅರ್ಥ—** ಕ್ಷೀಣಮನುಷ್ಯನಿಗೆ ಉಂಟಾದ ಉಪದ್ರವಗಳಿಂದ ಕೂಡಿದ ರಕ್ತಕೀವು ಮತ್ತು ಚಂದ್ರಿಕೆ ( ನವಿಲುಗರಿಯಬಣ್ಣ ) ಗಳುಳ್ಳ, ಬಹಳವಾದ ವಾಂತಿಯು ಅಸಾಧ್ಯವೆಂದು ತಿಳಿಯಬೇಕು. ಉಪದ್ರವವಿಲ್ಲದ, ಸಾಧ್ಯವಾದ ವಾಂತಿಯನ್ನು ಚಿಕಿತ್ಸಿಸಬೇಕು. ||೧೮||

ಸಾಧ್ಯಛರ್ದಿಗಳ ಚಿಕಿತ್ಸೆಯನ್ನು ಹೇಳುತ್ತಾರೆ—

**ಆಮಾಶಯೋತ್ಕ್ಲೇಶಭವಾ ಹಿ ಸರ್ವಾ ಶ್ಛರ್ದ್ಯೋ ಮತಾ ಲಂಘನಮೇವ ತಸ್ಮಾತ್ ||**
**ಪ್ರಾಕ್ಕಾರಯೇನ್ಮಾರುತಜಾಂ ವಿಮುಚ್ಯ ಸಂಶೋಧನಂ ವಾ ಕಫಪಿತ್ತಹಾರಿ || ೧೯ ||**

**ಚೂರ್ಣಾನಿ ಲಿಹ್ಯಾನ್ಮಧುನಾಭಯಾನಾಂ ಹೃದ್ಯಾನಿ ವಾ ಯಾನಿ ವಿರೇಚನಾನಿ ||**
**ಮದ್ಯೈಃ ಪಯೋಭಿಶ್ಚ ಯುತಾನಿ ಯುಕ್ತ್ಯಾ ನಯಂತ್ಯಧೋದೋಷಮುದೀರ್ಣಮೂರ್ಧ್ವಮ್ || ೨೦ ||**

**ವಲ್ಲೀಫಲಾದ್ಯೈರ್ವಮನಂ ಪಿಬೇದ್ ವಾ ಯೋ ದುರ್ಬಲಸ್ತಂ ಶಮನೈಶ್ಚಿಕಿತ್ಸೇತ್ ||**
**ರಸೈರ್ಮನೋಜ್ಞೈರ್ಲಘುಭಿರ್ವಿಶುಷ್ಕೈರ್ಭಕ್ಷ್ಯೈಃ ಸಭೋಜ್ಯೈರ್ವಿವಿಧೈಶ್ಚ ಪಾನೈಃ || ೨೦ ||**

**ಅರ್ಥ—** ಎಲ್ಲಿ ಛರ್ದಿಗಳು ಆಮಾಶಯದ ಕ್ಲೋಭದಿಂದುಂಟಾಗುವದರಿಂದ ವಾತಜಛರ್ದಿಯ ಹೊರತಾಗಿ ಉಳಿದ ಎಲ್ಲ ವಾಂತಿಯಲ್ಲಿಯೂ ಲಂಘನವನ್ನೇ ಮಾಡಿಸಬೇಕು. ಅಥವಾ ಕಫ ಪಿತ್ತನಾಶಕವಾದ ವಮನ ವಿರೇಚನ ಮಾಡಿಸಬೇಕು. || ೧೯ ||

ಆ ವಮನ ವಿರೇಚನಗಳನ್ನು ಹೇಳುತ್ತಾರೆ—

ಆಣಲೀ ಚೂರ್ಣವನ್ನು ಜೇನಿನೊಡನೆ ನೆಕ್ಕಬೇಕು. ರುಚಿಕರವಾದ ವಮನ ವಿರೇಚನವನ್ನು ಮದ್ಯ ಅಥವಾ ಹಾಲುಗಳಿಂದ ಯೋಗ್ಯ ಪ್ರಮಾಣ ದಲ್ಲಿ ತೆಗೆದುಕೊಳ್ಳಬೇಕು. ಅವು ಮೇಲಕ್ಕೆ ಹೋಗುವ ದೋಷಗಳನ್ನು ಕೆಳಗೆ ಒಯ್ಯುವವು. ॥ ೨೦ ॥ ಅಥವಾ ಕಫಪಿತ್ತನಾಶಕ ವಮನವನ್ನು ಕಹಿ ಈಸ ಗುಂಬಳ ಕಷಾಯ ಮುಂತಾದವುಗಳೊಡನೆ ತೆಗೆದುಕೊಳ್ಳಬೇಕು. ರೋಗಿಯು ದುರ್ಬಲನಿದ್ದರೆ ಶಮನ ಔಷಧಗಳನ್ನು ಕೊಡಬೇಕು. ಅದಕ್ಕಾಗಿ ರುಚಿಕರ ವಾದ ಮಾಂಸರಸ ಹಗುರಾದ (ರೊಟ್ಟಿ ಮುಂತಾದ) ಒಣಗಿದ ಆಹಾರ ವಿವಿಧ ಅನ್ನಪಾನಗಳನ್ನು ಕೊಡಬೇಕು. ॥ ೨೧ ॥

ವಾತಜವಾಂತಿಯ ವಿಶಿಷ್ಟ ಚಿಕಿತ್ಸೆಯನ್ನು ಹೇಳುತ್ತಾರೆ—

**ಸುಸಂಸ್ಕೃತಾಸ್ತಿತ್ತಿರಿಬರ್ಹಿಲಾವರಸಾ ವ್ಯಪೋಹಂತ್ಯನಿಲಪ್ರವೃತ್ತಾಮ್ ॥**
**ಛರ್ದಿಂ ತಥಾ ಕೋಲಕುಲತ್ಥಧಾನ್ಯಬಿಲ್ವಾದಿಮೂಲಾಮ್ಲಯವೈಶ್ಚ**
**ಯೂಷೈಃ ॥ ೨೨ ॥**
**ವಾತಾತ್ಮಿಕಾಯಾಂ ಹೃದಯದ್ರವಾರ್ತಃ ಕಾಮಂ ಪಿಬೇತ್ ಸೈಂಧವವ**
**ದ್ ಘೃತಂ ವಾ ॥**
**ಸಿದ್ಧಂ ತಥಾ ನಾಗರಧಾನ್ಯಕಾಭ್ಯಾಂ ದಧ್ನಾ ಚ ತೋಯೇನ ಚ ದಾಡಿ**
**ಮಸ್ಯ ॥ ೨೩ ॥**
**ವ್ಯೋಷೇಣ ಯುಕ್ತಾಂ ಲವಣೈಸ್ತ್ರಿಭಿಶ್ಚ ತಸ್ಯೈವ ಮಾತ್ರಾಮಥವಾ**
**ಪ್ರದದ್ಯಾತ್ ॥**
**ಸ್ನಿಗ್ಧಾನಿಹೃದ್ಯಾನಿಚಭೋಜನಾನಿರಸೈಃಸಯೂಷೈರ್ದಧಿ ದಾಡಿಮೈಶ್ಚ**
**॥ ೨೪ ॥**

**ಅರ್ಥ—** ಒಗ್ಗರಣೆ ಮುಂತಾದ್ದು ಹಾಕಿ ರುಚಿಕರಮಾಡಿದ ವೇದಪಕ್ಷಿ ನವಿಲು, ಲಾವ (ಪಕ್ಷಿವಿಶೇಷ) ಪಕ್ಷಿಗಳ ಮಾಂಸರಸಗಳೂ ಅದರಂತೆ ಬೋರೆ, ಹುರಳಿ, ಹವೀಜ, ಬಿಲ್ವಾದಿಪಂಚಮೂಲ ಮತ್ತು ಗಂಜಿ ಜವೆ ಮುಂತಾದವುಗ ಳಿಂದ ಮಾಡಿದ ಕಟ್ಟುಗಳು ವಾತಜವಾಂತಿಗಳನ್ನು ಕಳೆಯುವವು. ॥ ೨೨ ॥ ವಾತಜವಾಂತಿಯಲ್ಲಿ ಹೃದಯಸ್ಪಂದವಿದ್ದರೆ, ಸೈಂಧವಹಾಕಿದ ಘೃತವನ್ನು

ಅಥವಾ ಸುಂಠಿ ಹವೀಜಗಳ ಕಲ್ಕವನ್ನು ಹಾಕಿ ೪ ಪಾಲು ಮೊಸರಿನಲ್ಲಿ ಸಿದ್ಧ ಮಾಡಿದ ಅಥವಾ ದಾಳಿಂಬ ರಸದಲ್ಲಿ ಸಿದ್ಧ ಮಾಡಿದ ಘೃತವನ್ನು ಕುಡಿಯಬೇಕು. || ೨೩ || ಅಥವಾ ಆ ಘೃತವನ್ನು ತ್ರಿಕಟು, ತ್ರಿಲವಣ(ಕಾಚ, ಸೈಂಧವ ಬಿಡ) ಗಳನ್ನು ಹಾಕಿ ಯೋಗ್ಯಪ್ರಮಾಣದಲ್ಲಿ ಕೊಡಬೇಕು. ಸ್ನಿಗ್ಧ, ರುಚಿಕರ ಆಹಾರವನ್ನು ಕಟ್ಟು, ಮೊಸರು, ದಾಳಿಂಬರಸಗಳೊಡನೆ ಕೊಡಬೇಕು. || ೨೪ ||

ಪಿತ್ತಜವಾಂತಿಯ ಚಿಕಿತ್ಸೆಯನ್ನು ಹೇಳುತ್ತಾರೆ—

**ಪಿತ್ತಾತ್ಮಿಕಾಯಾಂ ತ್ವನುಲೋಪನಾರ್ಥಂ ದ್ರಾಕ್ಷಾವಿದಾರೀಕ್ಷುರಸೈಸ್ತ್ರಿವೃತ್ ಸ್ಯಾತ್ ||**
**ಕಫಾಶಯಸ್ಥಂ ತ್ವತಿಮಾತ್ರವೃದ್ಧಂ ಪಿತ್ತಂ ಹರೇತ್ ಸ್ವಾದುಭಿರೂರ್ಧ್ವಮೇವ || ೨೫ ||**

**ಶುದ್ಧಾಯ ಕಾಲೇ ಮಧುಶರ್ಕರಾಭ್ಯಾಂ ಲಾಜೈಶ್ಚ ಮಂಥಂ ಯದಿ ವಾಪಿ ಪೇಯಾಮ್ ||**
**ಪ್ರದಾಪಯೇನ್ಮುದ್ಗರಸೇನ ವಾಪಿ ಶಾಲ್ಯೋದನಂ ಜಾಂಗಲಜೈರಸೈರ್ವಾ || ೨೬ ||**

**ಸಿತೋಪಲಾಮಾಕ್ಷಿಕಪಿಪ್ಪಲೀಭಿಃ ಕುಲ್ಮಾಷಲಾಜಾಯವಸಕ್ತುಗೃಂಟಾನ್ ||**
**ಖರ್ಜೂರಮಾಂಸಾನ್ಯಥ ನಾರಿಕೇಲಂ ದ್ರಾಕ್ಷಾಮಥೋ ವಾ ಬದರಾಣಿ ಲಿಹ್ಯಾತ್ || ೨೭ ||**

**ಸ್ರೋತೋಜಲಾಜೋತ್ಪಲಕೋಲಮಜ್ಜಚೂರ್ಣಾನಿ ಲಿಹ್ಯಾನ್ಮಧುನಾಭಯಾಂ ವಾ ||**
**ಕೋಲಾಸ್ಥಿಮಜ್ಜಾಂಜನಮಕ್ಷಿಕಾವಿಡ್‌ಲಾಜಾಸಿತಾಮಾಗಧಿಕಾ ಕಣಾವಾ || ೨೮ ||**

**ದ್ರಾಕ್ಷಾರಸಂ ವಾ ಪ್ರಪಿಬೇತ್ ಸುಶೀತಂ ಮೃದ್ಭೃಷ್ಟಲೋಷ್ಟಪ್ರಭವಂ ಜಲಂ ವಾ ||**
**ಜಂಬ್ವಾಮ್ರಯೋಃ ಪಲ್ಲವಜಂ ಕಷಾಯಂ ಪಿಬೇತ್ ಸುಶೀತಂ ಮಧುಸಂಯುತಂ ವಾ || ೨೯ ||**

ಶಿಸ್ಥಿತಂ ವಾರಿ ಸಮುದ್ಗಕೃಷ್ಣಂಸೋಶೀರಧಾನ್ಯಂಚಣಕೋದಕಂವಾ॥ ಗವೇಧುಕಾಮೂಲಜಲಂ ಗುಡೂಚ್ಯಾಃ ಜಲಂ ಪಿಬೇದಿಕ್ಷುರಸಂ ಪಯೋವಾ ॥ ೩೦ ॥

ಸೇವ್ಯಂ ಪಿಬೇತ್ಕಾಂಚನಗೈರಿಕಂ ವಾ ಸನಾಲಕಂ ತಣ್ಡುಲಧಾವನೇನ॥ ಕಲ್ಕಂ ತಥಾ ಚನ್ದನಸೇವ್ಯಮಾಂಸೀದ್ರಾಕ್ಷೋತ್ತಮಾವಾಲಕಗೈರಿಕಾ ಣಾಮ್ ॥ ೩೧ ॥

ಶೀತಾಮ್ಬುನಾ ಗೈರಿಕಶಾಲಿಚೂರ್ಣಂ ಮೂರ್ವಾಂ ತಥಾ ತಣ್ಡುಲಧಾವ ನೇನ ॥
ಧಾತ್ರೀರಸೇನೋತ್ತಮಚನ್ದನಂ ವಾ ಸ್ಯುಶ್ಛರ್ದಿತೃಷ್ಣಾಸುಸಮಾಕ್ಷಿಕಾಣಿ ॥ ೩೨ ॥

**ಅರ್ಥ—** ಪಿತ್ತಜವಾಂತಿಯಲ್ಲಿ ದ್ರಾಕ್ಷಾರಸ, ನೆಲಗುಂಬಳರಸ, ಕಬ್ಬಿನ ರಸಗಳೊಡನೆ ನಿಶೋತ್ತರವನ್ನು ಕೊಡಬೇಕು. ಅದು ಅನುಲೋಮನ ಮಾಡುವದು. ಕಫಾಶಯದಲ್ಲಿ ಪಿತ್ತವು ಬಹಳೇ ಸಂಚಿತವಾಗಿದ್ದಲ್ಲಿ ಮಧುರ ದ್ರವ್ಯಗಳಿಂದ ವಮನವನ್ನೇ ಮಾಡಿಸಬೇಕು. ॥ ೨೫ ॥ (ಈ ರೀತಿಯಾಗಿ) ಶೋಧನ ಕೊಟ್ಟನಂತರ ಹಸಿವೆಯಾಗಲು ಭತ್ತರಳುಗಳಿಂದ ಮಾಡಿದ ಮಂಥ ಅಥವಾ ಪೇಯವನ್ನು ಸಕ್ಕರೆ ಜೇನು ಹಾಕಿ ಕೊಡಬೇಕು. ಅಥವಾ (ಸಶಕ್ತ ನಿದ್ದರೆ) ಅಕ್ಕಿಯಅನ್ನವನ್ನು ಹೆಸರಿನಕಟ್ಟಿನೊಡನೆ ಅಥವಾ ಜಾಂಗಲಮಾಂಸ ರಸದೊಡನೆ ಕೊಡಬೇಕು. ॥ ೨೬ ॥ ಕಡ್ಲೆ, ಭತ್ತರಳು, ಜವೆ ಇವುಗಳ ಹುರಿದ ಹಿಟ್ಟು, ಗಜ್ಜುರಿಚೂರ್ಣವನ್ನು ಅಥವಾ ಖಜ್ಜೂರಿಯತಿಳಲನ್ನು ಅಥವಾ ಟೆಂಗಿನಕಾಯಿ ತಿಳಲನ್ನು ಅಥವಾ ದ್ರಾಕ್ಷೆಯನ್ನು ಅಥವಾ ಬೋರೆಕಾಯಿ ಗಳನ್ನು ಹಿಪ್ಪಲಿ ಕಲ್ಲುಸಕ್ಕರೆಗಳ ಚೂರ್ಣವನ್ನು ಕೂಡಿಸಿ ಜೇನಿನೊಡನೆ ನೆಕ್ಕ ಬೇಕು. ॥೨೭॥ ರಸಾಂಜನ, ಭತ್ತರಳು, ನೀಲಕಮಲ, ಬೋರೆ, ಮಜ್ಜೆಗಳ ಚೂರ್ಣವನ್ನು ಅಥವಾ ಅಣಲೆಯನ್ನು ಅಥವಾ ಬೋರೇಮಜ್ಜ, ರಸಾಂಜನ ನೊಣದಮಲ, ಭತ್ತರಳು, ಸಕ್ಕರೆ, ಹಿಪ್ಪಲಿಗಳ ಚೂರ್ಣವನ್ನು ಜೇನಿನೊಡನೆ ಕೊಡಬೇಕು. ॥೨೮॥ ದಾಕ್ಷೆ ಕಷಾಯವನ್ನು ತಣ್ಣಗೆಮಾಡಿ ಕುಡಿಯಬೇಕು. ಅಥವಾ ಹುರಿವ ಮಣ್ಣಿನ ಹೆಂಟೆಯನ್ನು ಹಾಕಿದ ನೀರನ್ನು ಅಥವಾ ನೇರಿಲ ಮಾವುಗಳ ಎಲೆಗಳ ಕಷಾಯವನ್ನು ತಣ್ಣಗೆಮಾಡಿ ಜೇನು ಹಾಕಿ ಕುಡಿಯ ಬೇಕು. ॥೨೯॥ ರಾತ್ರಿಯಲ್ಲಿ ಹೆಸರು ಹಿಪ್ಪಲಿಗಳನ್ನು ಹಾಕಿ ಇಟ್ಟ ನೀರನ್ನು

ಅಥವಾ ಬಾಳದ ಬೇರು, ಹವೀಜ ಹಾಕಿದ ನೀರನ್ನು ಅಥವಾ ಕಡ್ಲೆ ಹಾಕಿಟ್ಟ ನೀರನ್ನು ಅಥವಾ ಗವೇಧುಕ (ತೃಣಧಾನ್ಯ) ದಬೇರು ಹಾಕಿಟ್ಟ ನೀರನ್ನು ಅಥವಾ ಅಮೃತಬಳ್ಳಿಯನ್ನು ರಾತ್ರಿಯಲ್ಲಿ ನೆನೆಯಿಟ್ಟು ಅದರ ನೀರನ್ನು ಅಥವಾ ಕಬ್ಬಿನರಸವನ್ನು ಅಥವಾ ಹಾಲನ್ನು ಕುಡಿಯಬೇಕು. || ೩೦ || ಬಾಳದಬೇರಿನ ಚೂರ್ಣವನ್ನು ಅಥವಾ ಬಾಳದಬೇರು, ಕಾವಿಯ ಚೂರ್ಣವನ್ನು ಅಕ್ಕಿ ತೊಳೆದ ನೀರಿನೊಡನೆ ಕುಡಿಯಬೇಕು. ಅಥವಾ ಚಂದನ, ಬಾಳದಬೇರು, ಜಟಾಮಾಂಶಿ, ದ್ರಾಕ್ಷೆ, ಪ್ರಿಯಂಗು, ಹಿರೇಬಾಳದಬೇರು, ಕಾವಿಗಳ ಕಲ್ಕ ವನ್ನು ಅಕ್ಕಿತೊಳೆದನೀರಿನೊಡನೆ ಕುಡಿಯಬೇಕು. || ೩೧ || ಕಾವಿ ಅಕ್ಕಿಗಳ ಚೂರ್ಣವನ್ನು ತಣ್ಣೀರಿನೊಡನೆ ಕುಡಿಯಬೇಕು. ಅಥವಾ ಹೆಗ್ಗೊರಟಿಗೆ ಚೂರ್ಣವನ್ನು ಅಕ್ಕಿತೊಳೆದ ನೀರಿನಲ್ಲಿ ಕುಡಿಯಬೇಕು. ಬಿಳೀಚಂದನವನ್ನು ನೆಲ್ಲೀರಸದೊಡನೆ ಕುಡಿಯಬೇಕು. ವಾಂತಿಯೊಡನೆ ನೀರಡಿಕೆಯೂ ಇದ್ದರೆ, ಇವುಗಳಲ್ಲಿ ಜೇನನ್ನು ಸೇರಿಸಬೇಕು. || ೩೨ ||

ಕಫವಾಂತಿಯ ಚಿಕಿತ್ಸೆಯನ್ನು ಹೇಳುತ್ತಾರೆ—

**ಕಫಾತ್ಮಿಕಾಯಾಂ ವಮನಂ ಪ್ರಶಸ್ತಂ ಸಪಿಪ್ಪಲೀಸರ್ಷಪನಿಂಬ ತೋಯೈಃ ||**
**ಪಿಂಡೀತಕೈಃ ಸೈಂಧವಸಂಪ್ರಯುಕ್ತೈಶ್ಛರ್ದ್ಯಾಂಕಫಾಮಾಶಯಶೋಧ ನಾರ್ಥಮ್ || ೩೩ ||**
**ಗೋಧೂಮಶಾಲೀನ್ ಸಯವಾನ್ ಪುರಾಣಾನ್ ಯೂಷೈಃಪಟೋಲಾ ಮೃತಚಿತ್ರಕಾಣಾಮ್ ||**
**ವ್ಯೋಷಸ್ಯ ನಿಂಬಸ್ಯ ಚ ತಕ್ರಸಿದ್ಧೈರ್ಯೂಷೈಃ ಫಲಾಮ್ಲೈಃ ಕಟುಭಿಸ್ತ ಥಾದ್ಯಾತ್ || ೩೪ ||***
**ರಸಾಂಶ್ಚ ಶೂಲ್ಯಾನಿ ಚ ಜಾಂಗಲಾನಾಂ ಮಾಂಸಾನಿ ಜೀರ್ಣಾನ್ ಮಧುಶೀಧ್ವರಿಷ್ಟಾನ್ ||**
**ರಾಗಾಂಸ್ತಥಾ ಷಾಡವಪಾನಕಾನಿ ದ್ರಾಕ್ಷಾಕಪಿತ್ಥೈಃ ಫಲಪೂರಕೈಶ್ಚ || ೩೫ ||**
**ಮುದ್ಗಾನ್ ಮಸೂರಾಂಶ್ಚಣಕಾನ್ ಕಲಾಯಾನ್ ಭೃಷ್ಟಾನ್ ಯುತಾನ್ ನಾಗರಮಾಕ್ಷಿಕಾಭ್ಯಾಂ ||**

ಲಿಹ್ಯಾತ್‌ತಥೈವ ತ್ರಿಫಲಾವಿಡಂಗಚೂರ್ಣಂ ವಿಡಂಗಪ್ಲವಯೋ ರಸಂ
ವಾ ‖ ೩೬ ‖

ಸಜಾಮ್ಬವಂ ವಾ ಬದರಸ್ಯ ಚೂರ್ಣಂ ಮುಸ್ತಾಯುತಾಂ
ಕರ್ಕಟಕಸ್ಯ ಶೃಂಗೀಮ್ ‖

ದುರಾಲಭಾಂ ವಾ ಮಧುಸಂಪ್ರಯುಕ್ತಾಂ ಲಿಹ್ಯಾತ್‌ಕಫಚ್ಛರ್ದಿ
ವಿನಿಗ್ರಹಾರ್ಥಮ್ ‖ ೩೭ ‖

ಮನಃಶಿಲಾಯಾಃ ಫಲಪೂರಕಸ್ಯ ರಸೈಃ ಕಪಿತ್ಥಸ್ಯ ಚ ಪಿಪ್ಪಲೀನಾಮ್‖
ಕ್ಷಾದ್ರೇಣ ಚೂರ್ಣಂ ಮರಿಚೈಶ್ಚ ಯುಕ್ತಂ ಲಿಹಞ್‌ಜಯೇಚ್ಛರ್ದಿ
ಮುದೀರ್ಣವೇಗಾಮ್ ‖ ೩೮ ‖

**ಅರ್ಥ—** ಕಫಜ ವಾಂತಿಯಲ್ಲಿ ಕಫ ಮತ್ತು ಆಮಾಶಯಗಳ ಶೋಧನ ವಾಗುವದಕ್ಕಾಗಿ ಸೈಂಧವ ಹಾಕಿದ ಮುಂಗಾರಿಕಾಯಿಯ ಕಲ್ಕದ ವಮನ ವನ್ನು ಹಿಪ್ಪಲಿ ಸಾಸಿವೆ ಬೇವಿನ ತೋಟಿಗಳ ಕಷಾಯದಲ್ಲಿ ಕೊಡುವದು ಒಳ್ಳೆ ಯದು. ‖೩೩‖ ಹಳೇಗೋದಿ, ಅಕ್ಕಿ, ಜವೆಗಳ ಆಹಾರವನ್ನು ಪಡವಲ ಅಮೃತಾ, ಚಿತ್ರಕಗಳ ಕಟ್ಟಿನೊಡನೆ ಅಥವಾ ತ್ರಿಕಟು, ಬೇವುಗಳಿಂದ ಮಜ್ಜಿಗೆ ಯಲ್ಲಿ ಮಾಡಿದ ಮತ್ತು ಫಲಗಳ ಹುಳಿ ಮತ್ತು ಖಾರಹಾಕಿದ ಕಟ್ಟುಗಳೊಡನೆ ತಿನ್ನಬೇಕು. ‖೩೪‖ ಜಾಂಗಲಮಾಂಸರಸಗಳನ್ನು ಶೂಲದಮೇಲೆ ಬೇಯಿಸಿದ ಮಾಂಸಗಳನ್ನು ಹಳೇ ಜೇನು, ಕಬ್ಬಿನಮದ್ಯ, ಅರಿಷ್ಟಗಳನ್ನು ದ್ರಾಕ್ಷ, ಬೆಳ ವಲಿ, ಮಾದಾಳ ಫಲಗಳಿಂದ ಮಾಡಿದ ಉಪ್ಪಿನಕಾಯಿ, ಚಟನೀ ಪಾನಕ ಗಳನ್ನು ತಿನ್ನಬೇಕು. ‖೩೫‖ ಹುರಿದ ಹೆಸರು, ಚೆನ್ನಂಗಿ, ಕಡ್ಲೆ, ಬಟಗಡ್ಲೆ ಗಳ ಚೂರ್ಣವನ್ನು ಸುಂಠಿ, ಜೇನುಗಳೊಡನೆ ನೆಕ್ಕಬೇಕು. ಅಪರಂತೆ ತ್ರಿಫಳಾ ವಾವಡಿಂಗ•ಚೂರ್ಣವನ್ನೂ ನೆಕ್ಕಬೇಕು. ಅಥವಾ ವಾವಡಿಂಗ ಭದ್ರಮುಸ್ತೆ ಗಳ ಕಷಾಯವನ್ನು ಕುಡಿಯಬೇಕು. ‖೩೬‖ ನೇರಿಲ ಚೂರ್ಣ ಕೂಡಿಸಿದ ಬೋರೇ ಚೂರ್ಣವನ್ನು ಅಥವಾ ಜೇಕಿನ ಚೂರ್ಣದೊಡನೆ ಕಾಕಡಸಿಂಗಿಯ ಚೂರ್ಣವನ್ನು ಅಥವಾ ನೆಲಇಂಗಳ ಚೂರ್ಣವನ್ನು ಜೇನಿನೊಡನೆ ನೆಕ್ಕ ಬೇಕು. ಇವು ಕಫವಾಂತಿಯನ್ನು ಕಳೆಯುವವು. ‖೩೭‖ ಮಾದಾಳದ ರಸ ಮತ್ತು ಬೆಳವಲದ ರಸದೊಡನೆ (ಹಸಿ ಸುಂಠಿ ರಸದ ಭಾವನೆಯಿಂದ ಶುದ್ಧ ಮಾಡಿದ) ಮನಶಿಳೆಯ ಚೂರ್ಣವನ್ನು ಅಥವಾ ಮೆಣಸಿನ ಹಿಪ್ಪಲಿಗಳ

ಚೂರ್ಣವನ್ನು ಜೇನಿನೊಡನೆ ನೆಕ್ಕಿದರೆ ಪ್ರಬಲವಾದ ವಾಂತಿಯನ್ನು ಕಳೆಯು
ವದು. ||೨೮||

ಸನ್ನಿಪಾತವಾಂತಿಯ ಚಿಕಿತ್ಸೆಯನ್ನು ಹೇಳುತ್ತಾರೆ—

**ಏಷಾ ಪೃಥಕ್ತ್ವೇನ ಚ ಯಾ ಕ್ರಿಯೋಕ್ತಾ ತಾಂ ಸನ್ನಿಪಾತೇಽಪಿ**
**ಸಮೀಕ್ಷ್ಯ ಬುದ್ಧ್ಯಾ ||**
**ರೋಗರ್ತುದೋಷಾಗ್ನಿಬಲಾನ್ಯವೇಕ್ಷ್ಯ ಕುರ್ಯಾದ್ಭಿಷಕ್**
**ಶಾಸ್ತ್ರವಿದಪ್ರಮತ್ತಃ || ೩೯ ||**

**ಅರ್ಥ—** ಬೇರೆ ಬೇರೆ ದೋಷಗಳಲ್ಲಿ ಹೇಳಿದ ಈ ಚಿಕಿತ್ಸೆಯನ್ನೇ ಸನ್ನಿಪಾತದಲ್ಲಿ ಕೂಡ ಶಾಸ್ತ್ರಜ್ಞನೂ ಪ್ರಮಾದರಹಿತನೂ ಆದ ವೈದ್ಯನು ತನ್ನ ಬುದ್ಧಿಯಿಂದ ವಿಚಾರಮಾಡಿ ರೋಗ–ಋತು–ದೋಷ–ಅಗ್ನಿ ಬಲಗಳನ್ನು ಆಲೋಚಿಸಿ ಮಾಡಬೇಕು. ||೩೯||

ಐದನೇ (ದ್ವಿಷ್ಟಾರ್ಥ) ವಾಂತಿ ಚಿಕಿತ್ಸೆಯನ್ನು ಹೇಳುತ್ತಾರೆ—

**ಮನೋಽಭಿಘಾತೇ ತು ಮನೋನುಕೂಲಾ ವಾಚಃ**
**ಸಮಾಶ್ವಾಸನಹರ್ಷಣಾನಿ ||**
**ಲೋಕಪ್ರಸಿದ್ಧಾಃ ಶ್ರುತಯೋ ವಯಸ್ಯಾಃ ಶೃಂಗಾರಯುಕ್ತಾಶ್ಚ**
**ಹಿತಾ ವಿಹಾರಾಃ || ೪೦ ||**
**ಗಂಧಾ ವಿಚಿತ್ರಾ ಮನಸೋನಕೂಲಾ ಮೃತ್‌ಪುಷ್ಪಯುಕ್ತಾಮ್ರ**
**ಫಲಾದಿಕಾನಾಮ್ ||**
**ಶಾಕಾನಿ ಭೋಜ್ಯಾನ್ಯಥ ಪಾನಕಾನಿ ಸುಸಂಸ್ಕೃತಾಃ**
**ಷಾಡವರಾಗಲೇಹಾಃ || ೪೧ ||**
**ಯೂಷಾ ರಸಾಃ ಕಾಂಬಲಿಕಾಃ ಖಡಾಶ್ಚ ಮಾಂಸಾನಿ ಧಾನಾ**
**ವಿವಿಧಾಶ್ಚ ಭಕ್ಷ್ಯಾಃ ||**
**ಫಲಾನಿ ಮೂಲಾನಿ ಚ ಗಂಧವರ್ಣರಸೈರುಪೇತಾನಿ ವಮಿಂ ಜಯಂತಿ**
**|| ೪೨ ||**

**ಗಂಧಂ ರಸಂ ಸ್ಪರ್ಶಮಥಾಪಿ ಶಬ್ದಂ ರೂಪಞ್ಚ ಯದ್ಯತ್**
**ಪ್ರಿಯಮಪ್ಯಸಾತ್ಮ್ಯಮ್ ॥**
**ತದೇವ ದದ್ಯಾತ್ ಪ್ರಶಮೋ ಹಿ ತಸ್ಯ ತಜ್ಜೋ ಹಿ ರೋಗಃ ಸುಖ**
**ಏವ ಜೇತುಮ್ ॥ ೪೩ ॥**

**ಅರ್ಥ—** ( ಅತ್ಯಂತ ಬೇಡಾದ ವಸ್ತುವಿನ ದರ್ಶನಾದಿಗಳಿಂದ ) ಮನಸ್ಸಿಗೆ ಉಂಟಾದ ಆಘಾತಜವಾಂತಿಯಲ್ಲಿ ಮನಸ್ಸಿಗೆ ಅನುಕೂಲವಾದ ಭಾಷಣ, ಆಶ್ವಾಸನ, ಆನಂದದಾಯಕ ಕರ್ಮಗಳೂ ಜನರಲ್ಲಿ ಮಾನ್ಯವಾದ ಗ್ರಂಥಗಳ ಶ್ರವಣವೂ ಗೆಳೆಯರೊಡನೆ ಆನಂದದೊಡನೆ ವಿಹಾರಗಳೂ॥೧೪೦॥ ಮನೋಹರವಾದ ಮಣ್ಣು, ಹೂವುಗಳಿಂದಕೂಡಿದ ಮಾವಿನಹಣ್ಣು ಮುಂತಾದವುಗಳ ತರತರದ ವಾಸನೆಯೂ, ಅದರಂತೆ ಮನೋಹರ ಪಲ್ಯೆ, ಆಹಾರ, ಪಾನಕ, ಸಂಸ್ಕಾರಕೊಟ್ಟ ಚಟನೀ, ಉಪ್ಪಿನಕಾಯಿ ಮತ್ತು ಲೇಹಗಳೂ ॥೪೧॥ ಕಟ್ಟು, ರಸ, ಹುಳಿಯಾದ ಕಟ್ಟು, ಧಾನ್ಯದಿಂದ ಮಾಡಿದ ಕಟ್ಟು, ಮಾಂಸ, ತರತರದ ಹುರಿದ ತಿನ್ನುವ ಧಾನ್ಯಗಳೂ ಉತ್ತಮ ಗಂಧ, ಬಣ್ಣ, ರಸಗಳುಳ್ಳ ಫಲಮೂಲಗಳೂ ವಾಂತಿಯನ್ನು ಗೆಲ್ಲುವವು. ॥೪೨॥ ಅವನಿಗೆ ಪ್ರಿಯವಾಗಿದ್ದರೂ ಸಾತ್ಮ್ಯವಲ್ಲದ ಗಂಧ, ರಸ, ಸ್ಪರ್ಶ, ರೂಪಗಳುಳ್ಳ ವಸ್ತುಗಳನ್ನು ವಾಂತಿಯನ್ನು ಕಳೆಯುವದಕ್ಕಾಗಿ ಕೊಡಬೇಕು. ಏಕೆಂದರೆ ಅಸಾತ್ಮ್ಯ ದ್ರವ್ಯಗಳಿಂದುಂಟಾದ ರೋಗವನ್ನು ಗೆಲ್ಲುವದು. ಇದರಿಂದ ಅಸಾತ್ಮ್ಯ ಪ್ರಿಯ ಸೇವನೆಯಿಂದ ಹಗುರಾಗುವದು. ॥೪೩॥

ವಾಂತಿಯ ಉಪದ್ರವಗಳ ಚಿಕಿತ್ಸೆಯನ್ನು ಹೇಳುತ್ತಾರೆ—

**ಛರ್ದ್ಯಾಪ್ರಸಕ್ತಾನಾಞ್ಚ ಚಿಕಿತ್ಸಿತಾತ್ಸ್ವಾಚ್ಚಿಕಿತ್ಸಿತಂ ಕಾರ್ಯಮುಪದ್ರವಾಣಾಮ್ ॥**
**ಅತಿಪ್ರವೃತ್ತಾಸು ವಿರೇಚನಸ್ಯ ಕರ್ಮಾತಿಯೋಗೈರ್ವಿಹಿತಂ ವಿಧೇಯಮ್ ॥ ೪೪ ॥**
**ಛರ್ದಿಪ್ರಸಂಗಾತ್ ಪವನೋ ಹ್ಯವಶ್ಯಂ ಧಾತುಕ್ಷಯಾದ್ ವೃದ್ಧಿಮುಪೈತಿ ತಸ್ಮಾತ್ ॥**
**ಚಿರಪ್ರವೃತ್ತಾಸ್ವನಿಲಾಪಹಾನಿ ಕಾರ್ಯಾಣ್ಯುಪಷ್ಟಮ್ಭನಬೃಂಹಣಾನಿ ॥ ॥ ೪೫ ॥**

**ಸರ್ಪಿಗುಡಾಃ ಕ್ಷೀರವಿಧಿರ್ಘೃತಾನಿ ಕಲ್ಯಾಣಕತ್ರ್ಯೂಷಣಜೀವನಾನಿ॥ ವೃಷ್ಯಾಸ್ತಥಾ ಮಾಂಸರಸಾಃ ಸಲೇಹಾಶ್ಛರ್ದಿಂ ಚಿರೋತ್ಥಾಂ ಪ್ರಶಮಂ ನಯನ್ತಿ ॥ ೪೬ ॥**

**ಅರ್ಥ—** ವಾಂತಿಯಿಂದುಂಟಾದ ಉಪದ್ರವಗಳಿಗೆ ಆಯಾ ರೋಗಗಳ ಚಿಕಿತ್ಸೆಯನ್ನೇ ಮಾಡಬೇಕು. ವಾಂತಿಗಳು ಬಹಳವಾಗುತ್ತಿದ್ದರೆ ವಿರೇಚನದ ಅತಿಯೋಗದಲ್ಲಿ ಹೇಳಿದ ಚಿಕಿತ್ಸೆಯನ್ನು ಮಾಡಬೇಕು. ॥೪೪॥ ವಾಂತಿಯು ಬಹಳಕಾಲವಿರಲು, ಧಾತುಕ್ಷಯವಾಗುವದರಿಂದ ನಿಶ್ಚಿತವಾಗಿ ವಾತವು ಹೆಚ್ಚುವದು. ಆದ್ದರಿಂದ ವಾಂತಿಯು ಬಹಳ ದಿವಸವಿರಲು ವಾತನಾಶಕವಾದ ಶಮನ-ಬೃಂಹಣ ಚಿಕಿತ್ಸೆಗಳನ್ನು ಮಾಡಬೇಕು. ॥೪೫॥ (ಕ್ಷತಕ್ಷೀಣ ಚಿಕಿತ್ಸೆಯಲ್ಲಿ ಹೇಳಿದ) ಸರ್ಪಿಗುಡ, ಕ್ಷೀರವಿಧಿ, ಕಲ್ಯಾಣಕ, ತ್ರ್ಯೂಷಣ, ಜೀವನ ಘೃತಗಳು ಮತ್ತು ವೃಷ್ಯವಾದ ಮಾಂಸರಸ ಮತ್ತು ಲೇಹಗಳು ಬಹಳ ದಿವಸದ ವಾಂತಿಯನ್ನು ಕಳೆಯುವವು. ॥೪೬॥

**ಸಂಖ್ಯಾಂ ಹೇತುಂ ಲಕ್ಷಣಮುಪದ್ರವಾನ್ ಸಾಧ್ಯತಾಂ ತದ್ಯೋಗಾಂಶ್ಚ ॥ ಛರ್ದೀನಾಂ ಪ್ರಶಮಾರ್ಥಂ ಚಿಕಿತ್ಸಿತಂ ಪ್ರಾಹ ಮುನಿವರ್ಯಃ ॥೪೭॥**

**ಅರ್ಥ—** ಮುನಿಶ್ರೇಷ್ಠರಾದ ಆತ್ರೇಯರು ವಾಂತಿಯ ನಾಶಕ್ಕಾಗಿ ಅದರ ಸಂಖ್ಯೆ, ಕಾರಣ, ಲಕ್ಷಣ, ಉಪದ್ರವ, ಸಾಧ್ಯಾಸಾಧ್ಯತೆ ಮತ್ತು ಅವುಗಳ ಔಷಧಗಳನ್ನು ಮತ್ತು ಚಿಕಿತ್ಸೆಯನ್ನೂ ಹೇಳಿದರು. ॥೪೭॥

**ಇತ್ಯಗ್ನಿವೇಶಕೃತೇ ತಂತ್ರೇ ದೃಢಬಲಪ್ರತಿಸಂಸ್ಕೃತೇ ಚಿಕಿತ್ಸಿತಸ್ಥಾನೇ ಛರ್ದಿಚಿಕಿತ್ಸಿತಂನಾಮ ವಿಂಶೋಽಧ್ಯಾಯಃ ॥**

ಶ್ರೀ ಮದಾದ್ಯ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ **ಚರಕ 'ಚಿಕಿತ್ಸಾ ಬೋಧಿನಿ'** ಎಂಬ ಚರಕ ಸಂಹಿತೆಯ ಟಿಪ್ಪಣಿಯಲ್ಲಿ **ಛರ್ದಿಚಿಕಿತ್ಸೆ** ಎಂಬ ಇಪ್ಪತ್ತನೆಯ ಅಧ್ಯಾಯವು ಮುಗಿದುದು.



# ಇಪ್ಪತ್ತೊಂದನೇ ಅಧ್ಯಾಯ

## ವಿಸರ್ಪ ಚಿಕಿತ್ಸೆ

ಛರ್ದಿ ವಿಘಾತದಿಂದ ವಿಸರ್ಪವಾಗುವದರಿಂದ ವಾಂತಿಯ ಚಿಕಿತ್ಸೆಯ ನಂತರ ವಿಸರ್ಪಚಿಕಿತ್ಸೆಯನ್ನು ಹೇಳುತ್ತಾರೆ.

**ಅಥಾತೋ ವಿಸರ್ಪ ಚಿಕಿತ್ಸಿತಂ ವ್ಯಾಖ್ಯಾಸ್ಯಾಮಃ ||**

**ಅರ್ಥ—** ಇನ್ನು ಮೇಲೆ ವಿಸರ್ಪಚಿಕಿತ್ಸೆಯನ್ನು ಹೇಳುತ್ತಾರೆ.

**ಇತಿ ಹ ಸ್ಮಾಹ ಭಗವಾನಾತ್ರೇಯಃ || ೧ ||**

**ಅರ್ಥ—** ಪೂಜ್ಯರಾದ ಆತ್ರೇಯ ಋಷಿಗಳು ಹೀಗೆ ಹೇಳಿದರು ||೧||

**ಕೈಲಾಸೇ ಕಿನ್ನರಾಕೀರ್ಣೇ ಬಹುಪ್ರಸ್ರವಣೌಷಧೌ ||**
**ಪಾದಪೈರ್ವಿವಿಧೈಃ ಸ್ನಿಗ್ಧೇ ನಿತ್ಯಂ ಕುಸುಮಸಂಪದಾ || ೨ ||**
**ವಹದ್ಭಿರ್ಮಧುರಾನ್ ಗನ್ಧಾನ್ ಸರ್ವತಃ ಸ್ವತ್ಯಲಂಕೃತೇ ||**
**ವಿಹರನ್ತಂ ಜಿತಾತ್ಮಾನಮಾತ್ರೇಯಮೃಷಿವನ್ದಿತಮ್ || ೩ ||**
**ಮಹರ್ಷಿಭಿಃ ಪರಿವೃತಂ ಸರ್ವಭೂತಹಿತೇ ರತಮ್ ||**
**ಅಗ್ನಿವೇಶೋ ಗುರುಂ ಕಾಲೇ ವಿನಯಾದಿದಮುಕ್ತವಾನ್ || ೪ ||**
**ಭಗವನ್ ದಾರುಣಂ ರೋಗಮಾಶೀವಿಷವಿಷೋಪಮಮ್ ||**
**ಸಂಸರ್ಪನ್ತಂ ಶರೀರೇಷು ದೇಹಿನಾಮುಪಲಕ್ಷಯೇ || ೫ ||**
**ಸಹಸೈವ ನರಾಸ್ತೇನ ಪರೀತಾಃ ಶೀಘ್ರಕಾರಿಣಾ ||**
**ವಿನಶ್ಯಂತ್ಯನುಪಕ್ರಾಂತಾಸ್ತತ್ರ ಮೇ ಸಂಶಯೋ ಮಹಾನ್ || ೬ ||**
**ಸ ನಾಮ್ನಾ ಕೇನ ವಿಜ್ಞೇಯಃ ಸಂಜ್ಞಿತಃ ಕೇನ ಹೇತುನಾ ||**
**ಕತಿಧಾತುಃ ಕತಿವಿಧೋ ಜಾಯತೇ ಕೈಶ್ಚ ಹೇತುಭಿಃ || ೭ ||**
**ಸುಖಸಾಧ್ಯಃ ಕೃಚ್ಛ್ರಸಾಧ್ಯೋ ಜ್ಞೇಯೋ ಯಶ್ಚಾನುಪಕ್ರಮಃ ||**
**ಕಥಂ ಕೈರ್ಲಕ್ಷಣೈಃ ಕಿಞ್ಚ ಭಗವಂಸ್ತತ್ರ ಭೇಷಜಮ್ || ೮ ||**

**ಅರ್ಥ—** ಬಹಳ ನದೀ ಮತ್ತು ಔಷಧಗಳಿಂದಲೂ, ಸುಗಂಧವನ್ನು ಬೀರುವ ವಿವಿಧ ಗಿಡಗಳಿಂದಲೂ, ಯಾವಾಗಲೂ ಇರುವ ಹೂವುಗಳಸಮೃದ್ಧಿಯಿಂದಲೂ ॥೨॥ ಎಲ್ಲ ಕಡೆಯಲ್ಲಿ ಮಾಡಿದ ಸ್ವಸ್ತಿಕರ್ಮಗಳಿಂದಲೂ ಅಲಂಕೃತವಾದ, ಕಿನ್ನರ ದೇವತೆಗಳಿಂದ ವ್ಯಾಪಿಸಿದ ಕೈಲಾಸಪರ್ವತದಲ್ಲಿ ತಿರುಗಾಡುತ್ತಿರುವ ಜಿತೇಂದ್ರಿಯನಾದ, ಋಷಿಗಳಿಂದ ನಮಿಸಲ್ಪಟ್ಟ ॥೩॥ ಮಹರ್ಷಿಗಳಿಂದ ಸುತ್ತುಗಟ್ಟಿದ, ಸರ್ವಪ್ರಾಣಿಗಳ ಹಿತಕ್ಕಾಗಿ ತೊಡಗಿದ, ಆತ್ರೇಯಗುರುಗಳಿಗೆ ಯೋಗ್ಯ ಅವಸರವನ್ನು ಕಂಡು— ಅಗ್ನಿವೇಶ ಮುನಿಗಳು ವಿನಯಪೂರ್ವಕವಾಗಿ ಹೀಗೆ ಅಂದರು. ॥ ೪ ॥ ಪೂಜ್ಯರೇ, ಮನುಷ್ಯರ ಶರೀರದಮೇಲೆ ಪಸರಿಸುವ ಸರ್ಪದ ವಿಷದಂತೆ ಇರುವ, ಒಂದು ಭಯಂಕರ ರೋಗವು ಕಂಡುಬರುತ್ತದೆ. ॥ ೫ ॥ ಶೀಘ್ರಕಾರಿಯಾದ ಆ ರೋಗದಿಂದ ಪೀಡಿತರಾದವರು ತೀವ್ರ ಚಿಕಿತ್ಸೆಯನ್ನು ಮಾಡದಿದ್ದರೆ ಒಮ್ಮೆಲೇ ಸಾಯುವರು. ॥ ೬ ॥ ಆ ರೋಗದ ವಿಷಯದಲ್ಲಿ ನನಗೆ ಬಹಳ ಸಂಶಯವಿದೆ ಅದರ ಹೆಸರು ಏನು ? ಮತ್ತು ಅದಕ್ಕೆ ಆ ಹೆಸರು ಏಕೆ ಕೊಡಲ್ಪಟ್ಟಿತು ? ಅದರಲ್ಲಿ ಎಷ್ಟು ಧಾತುಗಳು ದೂಷಿತವಾಗಿರುವವು ? ಅದರ ಪ್ರಕಾರಗಳೆಷ್ಟು ? ಮತ್ತು ಯಾವ ಕಾರಣಗಳಿಂದ ಆಗುತ್ತವೆ ॥ ೭ ॥ ಸುಖಸಾಧ್ಯ, ಕಷ್ಟಸಾಧ್ಯ, ಅಸಾಧ್ಯಗಳು ಹೇಗೆ ಆಗುವವು ? ಅವನ್ನು ಯಾವ ಲಕ್ಷಣಗಳಿಂದ ತಿಳಿದುಕೊಳ್ಳಬೇಕು ? ಪೂಜ್ಯರೇ ಅವಕ್ಕೆ ಔಷಧ ಯಾವದು ? ॥ ೮ ॥

ಆತ್ರೇಯರು ಉತ್ತರವನ್ನು ಹೇಳುತ್ತಾರೆ—

**ತದಗ್ನಿವೇಶಸ್ಯ ವಚಃ ಶ್ರುತ್ವಾತ್ರೇಯಃ ಪುನರ್ವಸುಃ ॥**
**ಯಥಾವದಖಿಲಂ ಸರ್ವಂ ಪ್ರೋವಾಚ ಮುನಿಸತ್ತಮಃ ॥ ೯ ॥**

**ವಿವಿಧಂ ಸರ್ಪತಿ ಯತೋ ವಿಸರ್ಪಸ್ತೇನ ಸಸ್ಮೃತಃ ॥**
**ಪರಿಸರ್ಪೋಽಥವಾ ನಾಮ್ನಾ ಸರ್ವತಃ ಪರಿಸರ್ಪಣಾತ್ ॥ ೧೦ ॥**

**ಸ ಚ ಸಪ್ತವಿಧೋ ದೋಷೈರ್ವಿಜ್ಞೇಯಃ ಸಪ್ತಧಾತುಕಃ ॥**
**ಪೃಥಕ್‌ತ್ರಯಸ್ತ್ರಿಭಿಶ್ಚೈಕೋ ವಿಸರ್ಪೋ ದ್ವಂದ್ವಜಾಸ್ತ್ರಯಃ ॥ ೧೧ ॥**

**ವಾತಿಕಃ ಪೈತ್ತಿಕಶ್ಚೈವ ಕಫಜಃ ಸಾನ್ನಿಪಾತಿಕಃ ॥**
**ಚತ್ವಾರ ಏತೇ ವಿಸರ್ಪಾಃ ವಕ್ಷ್ಯಂತೇ ದ್ವಂದ್ವಜಾಸ್ತ್ರಯಃ ॥ ೧೨ ॥**
**ಆಗ್ನೇಯೋ ವಾತಪಿತ್ತಾಭ್ಯಾಂ ಗ್ರಂಥ್ಯಾಖ್ಯಃ ಕಫವಾತಜಃ ॥**

**ಯಸ್ತು ಕರ್ದಮಕೋ ಘೋರಃ ಸ ಪಿತ್ತಕಫಸಂಭವಃ　　॥ ೧೩ ॥**
**ರಕ್ತಂ ಲಸೀಕಾ ತ್ವಙ್ಮಾಂಸಂ ದೂಷ್ಯಂ ದೋಷಾಸ್ತ್ರಯೋ ಮಲಾಃ॥**
**ವಿಸರ್ಪಾಣಾಂ ಸಮುತ್ಪತ್ತೌ ವಿಜ್ಞೇಯಾಃ ಸಪ್ತ ಧಾತವಃ　　॥ ೧೪ ॥**

**ಅರ್ಥ—** ಅಗ್ನಿವೇಶನ ಆ ಮಾತನ್ನು ಕೇಳಿ ಆತ್ರೇಯ ಪುನರ್ವಸುಗಳು ಎಲ್ಲವನ್ನು ಇದ್ದಕ್ಕಿದ್ದಂತೆ ಹೇಳಿದರು- ॥ ೯ ॥ ವಿವಿಧ ರೀತಿಯಿಂದ ಅಂದರೆ ಮೇಲೆ ಕೆಳಗೆ ಅಡ್ಡ ಅಥವಾ ಬಾವು ಬಕ್ಕೆ ಮುಂತಾದ ರೂಪದಿಂದ ಹಬ್ಬುವ ದೆಂದು ಇದಕ್ಕೆ ವಿಸರ್ಪ ವಿವಿಧಂ ಸರ್ಪತಿ ಇತಿ ವಿಸರ್ಪಃ ವೆಂದೆನ್ನುತ್ತಾರೆ. ಎಲ್ಲ ಕಡೆಗೆ ಹಬ್ಬುವದರಿಂದ ಇದಕ್ಕೆ ಪರಿಸರ್ಪ ಪರಿತ: ಸರ್ಪತಿ ಇತಿ ಪರಿಸರ್ಪಃ ವೆಂಬ ಹೆಸರೂ ಇದೆ ॥ ೧೦ ॥ ವಾತಾದಿ ದೋಷಗಳಿಂದ ಅವು ಏಳು ಪ್ರಕಾರ ದವು ಇವೆ. ಮತ್ತು ಏಳು ಧಾತುಗಳ ದುಷ್ಟಿಯಿದ ಉಂಟಾಗುತ್ತದೆ. ಬೇರೆ ಬೇರೆ ದೋಷಗಳಿಂದ ಮೂರು, ಸನ್ನಿಪಾತದಿಂದ ಒಂದು, ದ್ವಂದ್ವಗಳಿಂದ ಮೂರು ॥ ೧೧ ॥ (ಅಂದರೆ) ವಾತಿಕ, ಪೈತ್ತಿಕ, ಕಫಜ, ಸಾನ್ನಿಪಾತಿಕವೆಂದು ಇವು ನಾಲ್ಕು ವಿಸರ್ಪಗಳು. ದ್ವಂದ್ವಗಳಿಂದುಂಟಾಗುವ ಮೂರು ವಿಸರ್ಪ ಗಳನ್ನು ಮುಂದೆ ಹೇಳುವೆವು ॥ ೧೨ ॥ ಆಗ್ನೇಯವೆಂಬ ವಿಸರ್ಪವು ವಾತಪಿತ್ತ ದಿಂದಲೂ ಗ್ರಂಥಿಯೆಂಬ ವಿಸರ್ಪವು ಕಫವಾತದಿಂದಲೂ ಭಯಂಕರವಾದ 'ಕರ್ದಮಕ' ಎಂಬ ವಿಸರ್ಪವು ಪಿತ್ತಕಫದಿಂದ ಉಂಟಾಗುತ್ತದೆ. ॥ ೧೩ ॥ ವಿಸರ್ಪದ ಉತ್ಪತ್ತಿಯಲ್ಲಿ ರಕ್ತ, ಲಸೀಕೆ, ತ್ವಚೆ, ಮಾಂಸವೆಂಬ ನಾಲ್ಕು ದೂಷ್ಯಗಳೂ ಮೂರು ದೋಷಗಳೂ ಹೀಗೆ ಏಳು ಧಾತುಗಳು ಭಾಗವಹಿಸು ತ್ತವೆ ॥ ೧೪ ॥

ವಿಸರ್ಪದ ಕಾರಣವನ್ನು ಹೇಳುತ್ತಾರೆ—

**ಲವಣಾಮ್ಲಕಟೂಷ್ಣಾನಾಂ ರಸಾನಾಮತಿಸೇವನಾತ್ ॥**
**ದಧ್ಯಮ್ಲಮಸ್ತುಶುಕ್ತಾನಾಂ ಸುರಾಸೌವೀರಕಸ್ಯ ಚ　　॥೧೫॥**
**ವ್ಯಾಪನ್ನಬಹುಮದ್ಯೋಷ್ಣರಾಗಷಾಡವಸೇವನಾತ್ ॥**
**ಶಾಕಾನಾಂ ಹರಿತಾನಾಞ್ಚ ಸೇವನಾಚ್ಚ ವಿದಾಹಿನಾಮ್　　॥೧೬॥**
**ಕೂರ್ಚಿಕಾನಾಂ ಕಿಲಾಟಾನಾಂ ಸೇವನಾನ್ಮಂದಕಸ್ಯ ಚ ॥**
**ದಧ್ನಃ ಶಿಂಡಾಕಿಪೂರ್ವಾಣಾಮಾಲುಕಾನಾಂಚ ಸೇವನಾತ್　　॥ ೧೭ ॥**

**ತಿಲಮಾಷಕುಲತ್ಥಾನಾಂ ತೈಲಾನಾಂ ಪಿಷ್ಟಕಸ್ಯ ಚ ||**
**ಗ್ರಾಮ್ಯಾನೂಪೌದಕಾನಾಂಚ ಸೇನಸಾಲ್ಲಶುನಸ್ಯ ಚ || ೧೮ ||**
**ಪ್ರಕ್ಲಿನ್ನಾನಾಂ ಚ ಮತ್ಸ್ಯಾನಾಂ ವಿರುದ್ಧಾನಾಂ ಚ ಸೇವನಾತ್ ||**
**ಅತ್ಯಾದಾನಾದ್ದಿವಾಸ್ವಪ್ನಾದಜೀರ್ಣಾಧ್ಯಶನಾಶನಾತ್ || ೧೯ ||**
**ಕ್ಷತಬಂಧಪ್ರಪತನಾದ್ಘರ್ಮಕರ್ಮಾತಿಸೇವನಾತ್ ||**
**ವಿಷವಾತಾಗ್ನಿದೋಷಾಚ್ಚ ವಿಸರ್ಪಾಣಾಂ ಸಮುದ್ಭವಃ || ೨೦ ||**

**ಅರ್ಥ—** ಉಪ್ಪು, ಹುಳಿ, ಕಾರ, ಉಷ್ಣ ರಸಗಳನ್ನು ಬಹಳ ಸೇವಿಸುವದರಿಂದಲೂ ಮೊಸರು, ಬೇರೆ ಹುಳಿ ಪದಾರ್ಥ ಮತ್ತು ಮೊಸರಿನಮೇಲಿನ ಕೆನೆಗಳಿಂದ ಮಾಡಿದ ಶುಕ್ತ (ಕಂದಮೂಲಾದಿಗಳಿಂದ ಮಾಡಿದ ಮದ್ಯ) ಮದ್ಯ ಸೌವೀರಕ (ಒಂದುತರದ ಗಂಜಿ) || ೧೫ || ಟ್ಟಕೆಮದ್ಯ, ಬಹಳಮದ್ಯ ಮತ್ತು ಉಷ್ಣವಾದ ಉಪ್ಪಿನಕಾಯಿ ಚಟ್ಣಿ ವಿದಾಹಮಾಡುವ ಹರಿತವೆಂಬಶಾಕ || ೧೬ || ಮತ್ತು ಕೂರ್ಚಿಕೆ (ಮೊಸರುಹಾಕಿ ಕುದಿಸಿ ಕೆಡಿಸಿದಹಾಲು) ಕಿಲಾಟ (ಕೆಟ್ಟ ಹಾಲಿನಲ್ಲಿಯ ಗಟ್ಟಿಭಾಗ) ಇನ್ನೂ ಆಗದೆಇದ್ದ ಮೊಸರು ಮೊಸರಿನಿಂದಮಾಡಿದ ಸಿಂಡಾಕಿ (ಗಡ್ಡೆ, ಸಾಸಿರೆಹಾಕಿಮಾಡಿದ ಮದ್ಯ) ಮುಂತಾದವುಗಳ ಮತ್ತು ಕಸವುಗಳ ಸೇವನೆಯಿಂದಲೂ || ೧೭ || ಎಳ್ಳು, ಉದ್ದು, ಹುರುಳಿ, ಎಣ್ಣೆ ಹಿಟ್ಟಿನಪದಾರ್ಥ ಗ್ರಾಮದಲ್ಲಿರುವ ಪ್ರಾಣಿಗಳ ಮಲನಾಡದ ಪ್ರಾಣಿಗಳ ಅಥವಾ ನೀರಿನಲ್ಲಿ ಇರುವ ಪ್ರಾಣಿಗಳ ಮಾಂಸವನ್ನು ಅಥವಾ ಬಳ್ಳೊಳ್ಳಿಯನ್ನು || ೧೮ || ಅಥವಾ ಬಹಳ ಕುದಿಸಿದ ಮೀನುಗಳನ್ನು ಅಥವಾ ಸಂಯೋಗಾದಿಗಳಿಂದ ವಿರುದ್ಧವಾದ ಪದಾರ್ಥಗಳನ್ನು ತಿನ್ನುವದರಿಂದ, ಬಹಳ ಊಟದಿಂದ, ಹಗಲು ಮಲಗುವದರಿಂದ, ಅಜೀರ್ಣದಿಂದ, ಅಧ್ಯಶನದಿಂದ || ೧೯ || ಗಾಯಕ್ಕೆ ಕಟ್ಟಿದ ಬಂಧವು ಹೋಗುವದರಿಂದ, ಬಹಳ ಬೆಂಕಿಯನ್ನು ಕಾಯಿಸುವದರಿಂದ, ವಿಷವಾತ ಅಗ್ನಿಗಳ ದೋಷದಿಂದ ವಿಸರ್ಪ ಉಂಟಾಗುತ್ತದೆ. || ೨೦ ||

ಅಂತರಬಹಿರ್ವಿಸರ್ಪಗಳ ಕಾರಣ, ಲಕ್ಷಣ ಮತ್ತು ಸಾಧ್ಯಾಸಾಧ್ಯತೆಗಳನ್ನು ಹೇಳುತ್ತಾರೆ—

**ಏಭಿರ್ನಿದಾನೈರ್ವ್ಯಾಮಿಶ್ರೈಃ ಕುಪಿತಾ ಮಾರುತಾದಯಃ ||**
**ದೂಷ್ಯಾನ್ ಸಂದೂಷ್ಯ ರಕ್ತಾದೀನ್ ವಿಸರ್ಪಂತ್ಯಹಿತಾಶಿನಾಮ್ || ೨೧ ||**

ಬಹಿಃ ಶ್ರಿತಃ ಶ್ರಿತಶ್ಚಾಂತಸ್ತಥಾ ಚೋಭಯಸಂಶ್ರಿತಃ ||
ವಿಸರ್ಪೋ ಬಲಮೇಷಾಂತು ಜ್ಞೇಯಂ ಗುರು ಯಥೋತ್ತರಮ್ ||೨೨||
ಬಹಿರ್ಮಾರ್ಗಾಶ್ರಿತಂ ಸಾಧ್ಯಮಸಾಧ್ಯಮುಭಯಾಶ್ರಿತಮ್ ||
ವಿಸರ್ಪಂ ದಾರುಣಂ ವಿದ್ಯಾತ್ ಸುಕೃಚ್ಛ್ರಂ ತ್ವಂತರಾಶ್ರಯಂ || ೨೩ ||
ಅಂತಃಪ್ರಕುಪಿತಾ ದೋಷಾ ವಿಸರ್ಪಂತ್ಯಂತರಾಶ್ರಯೇ ||
ಬಹಿರ್ಬಹಿಃ ಪ್ರಕುಪಿತಾಃ ಸರ್ವತ್ರೋಭಯಸಂಶ್ರಿತಾಃ || ೨೪ ||
ಮರ್ಮೋಪಘಾತಾತ್ ಸಂರೋಧಾದಯನಾನಾಂ ವಿಘಟ್ಟನಾತ್ ||
ತೃಷ್ಣಾತಿಯೋಗಾದ್ ವೇಗಾನಾಂ ವಿಷಮಾಣಾಂ ಪ್ರವರ್ತನಾತ್ ||೨೫||
ವಿದ್ಯಾದ್ ವಿಸರ್ಪಮಂತರ್ಯದಾಶುಚಾಗ್ನಿಬಲಕ್ಷಯಾತ್ ||
ಅತೋ ವಿಪರ್ಯಯಾದ್‌ಬಾಹ್ಯಮನ್ಯಂ ವಿದ್ಯಾತ್ ಸ್ವಲಕ್ಷಣೈಃ || ೨೬ ||
ಯಸ್ಯ ಲಿಂಗಾನಿ ಸರ್ವಾಣಿ ಬಲವದ್‌ಯಸ್ಯ ಕಾರಣಮ್ ||
ಯಸ್ಯ ಚೋಪದ್ರವಾಃ ಕಷ್ಟಾ ಮರ್ಮಗೋ ಯಶ್ಚ ಹಂತಿ ಸಃ || ೨೭ ||

**ಅರ್ಥ—** ಈ ಮಿಶ್ರ ಕಾರಣಗಳಿಂದ ಕುಪಿತವಾದ ವಾತ ಮೊದಲಾದವು ಅಪಥ್ಯಮಾಡುವವರ ರಕ್ತ ಮೊದಲಾದ ದೂಷ್ಯಗಳನ್ನು ಕೆಡಿಸಿ ವಿಸರ್ಪವನ್ನುಂಟುಮಾಡುವವು. ||೨೧|| ವಿಸರ್ಪವು ಬಹಿಃಶ್ರಿತ, ಅಂತಃಶ್ರಿತ ಉಭಯಶ್ರಿತ ಎಂದು ಮೂರು ಪ್ರಕಾರವುಳ್ಳದ್ದು. ಮುಂದಿನದು ಹಿಂದಿನದಕ್ಕಿಂತ ಹೆಚ್ಚು ಬಲಿಷ್ಠವು. ||೨೨|| ಬಹಿಃಶ್ರಿತವು ಸಾಧ್ಯವು. ಉಭಯಾಶ್ರಿತವು ಅಸಾಧ್ಯವು. ಅಂತರಾಶ್ರಿತವು ಭಯಂಕರವೂ ಕಷ್ಟಸಾಧ್ಯವೂ ಎಂದು ತಿಳಿಯಬೇಕು. ||೨೩|| ಒಳಗೆ ಕುಪಿತವಾದ ದೋಷಗಳು ಒಳಗೂ, ಹೊರಗೆ ಕುಪಿತವಾದ ದೋಷಗಳು ಹೊರಗೂ ಎರಡೂ ಕಡೆಯಲ್ಲಿ ಕುಪಿತವಾದ ದೋಷಗಳು ಎಲ್ಲ ಕಡೆಯಲ್ಲಿಯೂ ವಿಸರ್ಪವನ್ನುಂಟುಮಾಡುತ್ತವೆ. ||೨೪|| ಹೃದಯದ ಆಘಾತದಿಂದಲೂ, ಮಾರ್ಗಗಳ ಪ್ರತಿಬಂಧ ಮತ್ತು ಸಂಘಟ್ಟನಗಳಿಂದಲೂ, ಬಹಳ ನೀರಡಿಕೆಯಿಂದಲೂ, ವೇಗಗಳ ವಿಷಮ ಪ್ರವೃತ್ತಿಯಿಂದಲೂ, ||೨೫|| ಒಮ್ಮೆಲೆ ಅಗ್ನಿ ಮತ್ತು ಶಕ್ತಿಗಳ ಕ್ಷಯವಾಗುವದರಿಂದಲೂ, ಅಂತರ್ವಿಸರ್ಪವನ್ನು ಗುರುತಿಸಬೇಕು. ಇದರ ವಿಪರೀತ ಲಕ್ಷಣಗಳಿದ್ದರೆ ಬಹಿರ್ವಿಸರ್ಪವೆಂದು ತಿಳಿಯಬೇಕು. ||೨೬|| ಉಭಯಾಶ್ರಿತ ವಿಸರ್ಪವನ್ನು (ಮುಂದೆ ಹೇಳಿದ ಲಕ್ಷಣಗಳಿಂದ) ತಿಳಿಯಬೇಕು. ಯಾತರಲ್ಲಿ ಎಲ್ಲ ಲಕ್ಷಣಗಳೂ ಇರುವವೋ

ಕಾರಣವೂ ಬಲಿಷ್ಠವಾಗಿರುವದೋ ಮತ್ತು ಕಷ್ಟಕರ ಉಪದ್ರವವಿರುವವೋ ಮತ್ತು ಯಾವದು ಮರ್ಮದಲ್ಲಿ ಆಗಿರುವದೋ ಅದು (ಉಭಯಾಶ್ರಿತವು) ರೋಗಿಯನ್ನು ಕೊಲ್ಲುವದು. ||೨೭||

ವಾತವಿಸರ್ಪದ ನಿದಾನ ಸಂಪ್ರಾಪ್ತಿ ಲಕ್ಷಣಗಳನ್ನು ಹೇಳುತ್ತಾರೆ—

**ರೂಕ್ಷೋಷ್ಣೈಃ ಕಾರಣೈರ್ವಾಯುಃ ಪೂರಣೈರ್ವಾ ಸಮಾಹಿತಃ ||**
**ಪ್ರದುಷ್ಟೋ ದೂಷಯನ್‌ದೂಷ್ಯಾನ್ ವಿಸರ್ಪತಿ ಯಥಾಬಲಮ್||೨೮||**

**ತಸ್ಯ ರೂಪಾಣಿ=ಭ್ರಮ, ದವಥು, ಪಿಪಾಸಾ, ನಿಸ್ತೋದ, ಶೂಲಾಙ್ಗಮರ್ದೋದ್ವೇಷ್ಟನ, ಕಂಪ, ಜ್ವರ, ತಮಕ, ಕಾಶಾಸ್ಥಿಸಂಧಿಭೇದ, ವಮನಾರೋಚಕಾಪಿಪಾಕಾಶ್ಚಕ್ಷು ಷೋರಾಕುಲತ್ವಮಸ್ರಾಗಮನಮ್| ಪಿಪೀಲಿಕಾನಾಂ ಸಂಪ್ರಸರ ಇವಾಂಗೇಷು | ಯಸ್ಮಿಂಶ್ಚಾವಕಾಶೇ ವಿಸರ್ಪೋಽನುಸರ್ಪತಿ ಸೋಽವಕಾಶಃ ಶ್ಯಾವಾರುಣಾವಭಾಸೋವಾಶ್ ಯಥುಮಾನ್ ನಿಸ್ತೋದಶೂಲಭೇದಾಯಾಸಸಂಕೋಚಹರ್ಷಸ್ಫುರಣೈರತಿಮಾತ್ರೈಃ ಪೀಡ್ಯತೇ || ಅನುಪಕ್ರಾಂತಶ್ಚೋಪಚೀಯತೇ ಶೀಘ್ರಭೇದೈಃ ಸ್ಫೋಟೈಸ್ತನುಭಿರರುಣಾಭಾಸೈಃ ಶ್ಯಾವೈರ್ವಾ ತನುವಿಷಮಾರುಣಾಲ್ಪಸ್ರಾವೈರ್ವಿಬದ್ಧವಾತಮೂತ್ರ ಪುರೀಷಶ್ಚ ಭವತಿ| ನಿದಾನ್ಯೋಕ್ತಾನ್ಯಸ್ಯ ನೋಪಶೇರತೇ ವಿಪರೀತಾನಿ ಚೋಪಶೇರತೇ || ಇತಿ ವಾತವಿಸರ್ಪಃ || ೨೯ ||**

**ಅರ್ಥ—** ರುಕ್ಷ ಮತ್ತು ಉಷ್ಣ ಉಪಚಾರಗಳಿಂದ ಅಥವಾ ಅಂಥ ದ್ರವ್ಯಗಳಿಂದ ಹೆಚ್ಚಾದ ದುಷ್ಟವಾಯುವು ರಕ್ತಾದಿಧಾತುಗಳನ್ನು ಕೆಡಿಸಿ ತಮ್ಮ ಶಕ್ತಿಯಂತೆ ವಿಸರ್ಪವನ್ನುಂಟುಮಾಡುತ್ತದೆ. ||೨೮||

ಅದರ ಲಕ್ಷಣಗಳು— ಭ್ರಮ, ದಾಹ, ನೀರಡಿಕೆ, ಚುಚ್ಚಿದಂತೆ ಆಗೋಣ, ಶೂಲ, ಮೈನೋವು, ಹಿಂಡಿದಂತೆ ಆಗೋಣ, ನಡುಗು, ಜ್ವರ, ತಮಕಶ್ವಾಸ, ಕೆಮ್ಮು, ಎಲವುಸಂಧಿನೋಯೋಣ, ವಿವರ್ಣತೆ, ವಮನ, ಅರುಚಿ, ಕಣ್ಣಿಗೆ ತ್ರಾಸ, ಬಾಯಿ ಮುಂತಾದವುಗಳಿಂದ ರಕ್ತ ಬರೋಣ, ಮೈಮೇಲೆ ಇರವಿಗಳು ಓಡಾಡಿದಂತೆ ಆನಿಸೋಣ, ಯಾವ ಸ್ಥಳದಲ್ಲಿ ವಿಸರ್ಪವು ಸರಿದು ಬರುವದೊ, ಅದು ಕಪ್ಪು, ನಸುಗೆಂಪು ಬಣ್ಣದ್ದು ಆಗುವದು. ಆ ಸ್ಥಳವು ಬಾವು, ಚುಚ್ಚಿದಂತೆ, ಸೀಳುವಂತೆ ನೋವು, ಶೂಲ, ಆಯಾಸ,

ಸಂಕೋಚ, ರೊಮಾಂಚ, ಸ್ಫುರಣಗಳಿಂದ ಬಹಳವಾಗಿ ಪೀಡಿಸಲ್ಪಡುವದು. ಉಪಚಾರ ಮಾಡದಿದ್ದರೆ ತೀವ್ರವೇ ಉತ್ಪನ್ನವಾದ ಸಣ್ಣ ಸಣ್ಣ ಕೆಂಪು ಅಥವಾ ಕಪ್ಪು ಬಣ್ಣದ, ಅಸಿಯುಮಿತವಾಗಿ ತೆಳ್ಳಗಿನ ಅಲ್ಪಸ್ರಾವಗಳುಳ್ಳ ಬಕ್ಕೆಗಳಿಂದ ಪುಷ್ಟವಾಗುತ್ತದೆ. ರೋಗಿಯ ವಾತ ಮೂತ್ರ ಮಲಗಳು ಬಂದಾಗುತ್ತವೆ. ಕಾರಣವಾದ ಆಹಾರ ವಿಹಾರ ಸೇವನೆಗಳಿಂದ ಅಸಮಾಧಾನವು ಅದರ ವಿಪರೀತ ಆಹಾರ ವಿಹಾರಗಳಿಂದ ಸಮಾಧಾನವೂ ಉಂಟಾಗುತ್ತದೆ. ಇದು ವಾತ ವಿಸರ್ಪವು. ||೨೯||

ಪಿತ್ತ ವಿಸರ್ಪದ ನಿದಾನ ಸಂಪ್ರಾಪ್ತಿ ಲಕ್ಷಣಗಳನ್ನು ಹೇಳುತ್ತಾರೆ—

**ಪಿತ್ತಮುಷ್ಣೋಪಚಾರೇಣ ವಿದಾಹ್ಯಮ್ಲಾದಿಭಿಶ್ಚಿತಮ್ ||**
**ದೂಷ್ಯಾನ್ ಸಂದೂಷ್ಯ ಧಮನೀಃ ಪೂರಯದ್ವೈ ವಿಸರ್ಪತಿ ||೩೦||**
**ತಸ್ಯ ರೂಪಾಣಿ ಜ್ವರಸ್ತೃಷ್ಣಾ ಮೂರ್ಚ್ಛಾಛರ್ದಿರರೋಚಕೋಽಙ್ಗಭೇದಃ ಸ್ವೇದೋಽತಿಮಾತ್ರಮಂತರ್ದಾಹಃ ಪ್ರಲಾಪಃ ಶಿರೋರುಕ್ ಚಕ್ಷುಷೋರಾಕುಲತ್ವಂ ಅಸ್ವಪ್ನೋಽರತಿಭ್ರಮಃಶೀತವಾತವಾರಿತರ್ಷೋಽತಿಮಾತ್ರಂ ಹರಿತಹಾರಿದ್ರಮೂತ್ರವರ್ಚಸ್ತ್ವಂ ಹಾರಿದ್ರದರ್ಶನಮ್ । ಯಸ್ಮಿಂಶ್ಚಾವಕಾಶೇ ವಿಸರ್ಪೋಽನುಸರ್ಪತಿ ಸೋಽವಕಾಶಸ್ತಾಮ್ರಹರಿತಹಾರಿದ್ರನೀಲಕೃಷ್ಣರಕ್ತಾನಾಮನ್ಯತಮಃ ಪುಷ್ಯತಿ ಸೋತ್ಸೇಧೈಶ್ಚಾತಿಮಾತ್ರಂ ದಾಹಸಂಭೇದನಪರೀತೈಃ ಸ್ಫೋಟೈರುಪಚೀಯತೆ ತುಲ್ಯವರ್ಣಸ್ರಾವಿಭಿರಚಿರಪಾಕಶ್ಚ ಭವತಿ । ನಿದಾನೋಕ್ತಾನ್ಯಸ್ಯ ನೋಪಶೇರತೆ ವಿಪರೀತಾನಿ ಚೋಪಶೇರತೆ ಇತಿ ಪಿತ್ತ ವಿಸರ್ಪಃ ||೩೦||**

**ಅರ್ಥ—** ಪಿತ್ತವು ಉಷ್ಣೋಪಚಾರದಿಂದ ಅಥವಾ ವಿದಾಹಿ, ಹುಳಿ ಮುಂತಾದ ಪದಾರ್ಥಗಳಿಂದ ರಸಾದಿಗಳನ್ನು ಕೆಡಿಸಿ, ಧಮನಿಗಳಲ್ಲಿ ತುಂಬಿಕೊಂಡು ವಿಸರ್ಪವನ್ನುಂಟುಮಾಡುತ್ತವೆ. ||೩೦||

ಅದರ ಲಕ್ಷಣಗಳು— ಜ್ವರ, ನೀರಡಿಕೆ, ಮೂರ್ಛೆ, ವಾಂತಿ, ಅರುಚಿ, ಮೈನೋವು, ಬೆವರು, ಒಳಗೆ ಬಹಳ ದಾಹ, ಪ್ರಲಾಪ, ತಲೆನೋವು, ಕಂಣುನೋವು, ನಿದ್ರಾಭಾವ, ಚೈನವಿಲ್ಲದಿರೋಣ, ಭ್ರಮ, ತಣ್ಣೀರು ಮತ್ತು ತಣ್ಣಗಿನ ಗಾಳಿಯಲ್ಲಿ ಬಹಳ ಅಭಿಲಾಷೆ, ಮಲಮೂತ್ರಗಳು ಹಸರು ಹಳದಿ

ಯಾಗೋಣ, ಎಲ್ಲವೂ ಹಳದಿ ಕಾಣಿಸೋಣ, ಯಾವ ಸ್ಥಳದಲ್ಲಿ ವಿಸರ್ಪವು ಸರಿಮು ಬರುವದೊ ಆ ಸ್ಥಳವು ಕೆಂಪು, ಹಸರು, ಹಳದಿ, ನೀಲ, ಕಪ್ಪು, ತಾಮ್ರ ವರ್ಣಗಳಲ್ಲಿ ಯಾವದಾದರೊಂದು ಬಣ್ಣದ್ದಾಗಿ ಪುಷ್ಟವಾಗುವದು. ಬಹಳ ದಾಹ, ಚುಚ್ಚುವಿಕೆಗಳುಳ್ಳ ಎತ್ತರವಾದ ಬಕ್ಕೆಗಳಿಂದ ವಿಸ್ತೃತವಾಗುವದು. ಅದೇ ವರ್ಣದ ಸ್ರಾವವು ಅವುಗಳಿಂದ ಉಂಟಾಗುವದು. ಪಾಕವು ತೀವ್ರವಾಗುವದು. ಕಾರಣವೆಂದು ಹೇಳಿದ ಆಹಾರವಿಹಾರಗಳಿಂದ ಬೇನೆಯು ಹೆಚ್ಚುವದು. ಅವರ ವಿಪರೀತ ಆಹಾರ ವಿಹಾರಗಳಿಂದ ರೋಗ ಶಮನವೂ ಆಗುವದು. ಇದು ಪಿತ್ತವಿಸರ್ಪವು. ||೩೧||

ಕಫವಿಸರ್ಪದ ನಿದಾನ ಸಂಪ್ರಾಪ್ತಿ ಲಕ್ಷಣಗಳನ್ನು ಹೇಳುತ್ತಾರೆ—

**ಸ್ವಾದ್ವಮ್ಲಲವಣಸ್ನಿಗ್ಧಗುರ್ವನ್ನಸ್ವಪ್ನಸಂಚಿತಃ ||**
**ಕಫಃ ಸಂದೂಷಯನ್ ದೂಷ್ಯಾನ್ ಕೃತ್ಸ್ನಮಂಗಂ ವಿಸರ್ಪತಿ || ೩೨ ||**

**ತಸ್ಯರೂಪಾಣಿ— ಶೀತಜ್ವರೋ ಗೌರವಂ ನಿದ್ರಾರೋಚಕೋಽವಿಪಾಕೋ ಮಧುರಾಸ್ಯತ್ವಮಾಸ್ಯೋಪಲೇಪಃ ಪ್ರಸೇಕಶ್ಛರ್ದಿರಾಲಸ್ಯಂ ಸ್ತೈಮಿತ್ಯಮಗ್ನಿಸಾದೋ ದೌರ್ಬಲ್ಯಂ ಯಸ್ಮಿಂಶಾವಕಾಶೇ ವಿಸರ್ಪೋಽನುಸರ್ಪತಿ ಸೋಽವಕಾಶಃ ಶ್ವಯಥುಮಾನ್ ಪಾಂಡುರ್ನಾತಿರಕ್ತಃ ಸ್ನೇಹಸುಪ್ತಿಸ್ತಂಭಗೌರವೈರನ್ವಿತೋಽಲ್ಪವೇದನಃ ಕೃಚ್ಛ್ರಪಾಕೈಶ್ಚಿರಕಾರಿಭಿರ್ಬಹಲತ್ವಗುಪಲೇಪೈಃ ಸ್ಫೋಟೈಃ ಶ್ವೇತಪಾಂಡುಭಿರನುಬಧ್ಯತೇ| ಪ್ರಭಿನ್ನಶ್ಚ ಶ್ವೇತಪಿಚ್ಛಿಲಂ ತಂತುಮದ್ ಘನಮನುಬದ್ಧಂ ದುರ್ಗಂಧಮಾಸ್ರಾವಂ ಸ್ರವತ್ಯೂರ್ಧ್ವಂಚ ಗುರುಭಿಃ ಸ್ಥಿರೈರ್ಜಾಲಾವತತೈಃ ಸ್ನಿಗ್ಧೈರ್ಬಹಲತ್ವಗುಪಲೇಪೈರನುಬಧ್ಯತೇಽನುಷಂಗೀ ಭವತಿ | ಶ್ವೇತತ್ವಙ್ ನಖನಯನವದನಮೂತ್ರವರ್ಚಸ್ತ್ವಮ್ ನಿದಾನೋಕ್ತಾನ್ಯಸ್ಯ ನೋಪಶೇರತೇ ವಿಪರೀತಾನಿ ಚೋಪಶೇರತೇ | ಇತಿ ಶ್ಲೇಷ್ಮವಿಸರ್ಪಃ || ೩೩ ||**

**ಅರ್ಥ—** ಸಿಹಿ, ಹುಳಿ, ಉಪ್ಪು, ಹೆಡಸು, ಜಡಾನ್ನ, ಹಗಲುನಿದ್ದೆಗಳಿಂದ ಸಂಚಿತವಾದ ಕಫವು ದೂಷ್ಯವಾದ ರಸ–ರಕ್ತಾದಿಗಳನ್ನು ಕೆಡಿಸಿ ಇಡೀ ಶರೀರದಲ್ಲಿ ವಿಸರ್ಪವನ್ನುಂಟುಮಾಡುತ್ತವೆ. ||೩೨||

ಅದರ ಲಕ್ಷಣಗಳು— ಚಳಿಜ್ವರ, ಜಡತ್ವ, ನಿದ್ದೆ, ಅರುಚಿ, ಅಪಚನ, ಬಾಯಿ ಸಿಹಿಯಾಗೋಣ, ಬಾಯಿಯಲ್ಲಿ ಜಿಗಟು, ಬಾಯಿಗೆ ನೀರುಬಿಡೋಣ, ವಾಂತಿ, ಆಲಸ್ಯ, ಮಂದತೆ, ಅಗ್ನಿಮಾಂದ್ಯ, ಅಶಕ್ತತೆಗಳು ಯಾವ ಸ್ಥಳದಲ್ಲಿ ವಿಸರ್ಪವು ಸರಿದು ಬರುವದೊ ಆ ಸ್ಥಳದಲ್ಲಿ ಬಾವು, ಬಿಳವು, ನಸುಗೆಂಪು ಬಣ್ಣ ಸ್ನಿಗ್ಧತೆ, ಸಂಜ್ಞಾನಾಶ, ಸ್ತಬ್ಧತೆ, ಜಡತ್ವಗಳುಂಟಾಗುತ್ತವೆ. ನೋವು ಬಹಳ ಇರುವದಿಲ್ಲ. ಬಹು ದಿವಸಕ್ಕೆ ಬಹಳ ಕಷ್ಟದಿಂದ ಪಕ್ವವಾಗುವ ದಪ್ಪಾದ ತ್ವಚೆಗಳುಳ್ಳ ಬಿಳೀ ಮಸಕುಬಣ್ಣದ ಬಕ್ಕೆಗಳು ಉಂಟಾಗುತ್ತವೆ. ಅವು ಒಡೆಯಲು ಬಿಳೀ ಹೆಡಸಾದ ತಂತುಗಳುಳ್ಳ ಗಟ್ಟಿಯಾದ ದುರ್ಗಂಧ ಸ್ರಾವವು ಸುರಿಯಹತ್ತುವದು. ಅವುಗಳ ಮೇಲೆ ಜಡ, ಸ್ಥಿರ, ಜಾಳಿಗೆಗಳುಳ್ಳ ಸ್ನಿಗ್ಧ, ದಪ್ಪಾದ ತ್ವಚೆಗಳುಳ್ಳ ಬೇರೆ ಬಕ್ಕಿಗಳು ಉಂಟಾಗುತ್ತ ಹೋಗುವವು. ರೋಗಿಯ ತ್ವಚೆ–ಉಗುರು–ಕಣ್ಣು–ಮೋರೆ–ಮೂತ್ರ–ಮಲಗಳು ಬೆಳ್ಳಗಿರುವವು. ಕಾರಣವೆಂದು ಹೇಳಿದ ಆಹಾರವಿಹಾರಗಳಿಂದ ರೋಗದ ಶಮನವಾಗದು. ಅದರ ವಿಪರೀತ ಆಹಾರವಿಹಾರಗಳಿಂದ ಶಮನವಾಗುವದು. ಇದು ಕಫವಿಸರ್ಪವು. ||೩೩||

ಅಗ್ನಿವಿಸರ್ಪದ ನಿದಾನ ಸಂಪ್ರಾಪ್ತಿ ಲಕ್ಷಣಗಳನ್ನು ಹೇಳುತ್ತಾರೆ—

**ವಾತಪಿತ್ತಂ ಪ್ರಕುಪಿತಮತಿಮಾತ್ರಂ ಸ್ವಹೇತುಭಿಃ ||**
**ಪರಸ್ಪರಂ ಲಬ್ಧಬಲಂ ಶೀಘ್ರಮಂಗೇ ವಿಸರ್ಪತಿ || ೩೪ ||**

**ತದುಪತಾಪಾದಾತುರಃ ಸರ್ವಶರೀರಮಂಗಾರೈರವಕೀರ್ಯಮಾಣಂ || ಮನ್ಯತೇಛರ್ದ್ಯತೀಸಾರಮೂರ್ಚ್ಛಾದಾಹಮೋಹಜ್ವರತಮಕಾಸ್ಥಿಸಂಧಿಭೇದತೃಷ್ಣಾರೋಚಕಾವಿಪಾಕಾಂಗಭೇದಾದಿಭಿಶ್ಚಾಭಿಭೂಯತೇ। ಯಂಚಾವಕಾಶಂ ವಿಸರ್ಪೋಽನುಸರ್ಪತಿ ಸೋಽವಕಾಶಃ ಶಾಂತಾಂಗಾರಪ್ರಕಾಶೋಽತಿರಕ್ತೋ ವಾ ಭವತ್ಯಗ್ನಿದಗ್ಧಪ್ರಕಾರೈಶ್ಚ ಸ್ಫೋಟೈರುಪಚೀಯತೇ। ಸ ಶೀಘ್ರಗತ್ವಾದಾಶ್ವೇವ ಮರ್ಮಾನುಸಾರೀ ಭವತಿ ಮರ್ಮಣಿ ಚೋಪತಪ್ತೇ ಪವನೋಽತಿಬಲಂ ಭಿನತ್ಯಂಗಾನಿ ಅತಿಮಾತ್ರಂ ಪ್ರಮೋಹಯತಿ ಸಜ್ಞಾಂ ಹಿಕ್ಕಾಶ್ವಾಸೌ ಜನಯತಿ ಪ್ರಣಾಶಯತಿ ನಿದ್ರಾಮ್ ಸ ನಷ್ಟನಿದ್ರೋ ಮೂಢಸಂಜ್ಞೋ ವ್ಯಥಿತಚೇತಾ ನಕ್ವಚಿತ್ ಸುಖಮುಪಲಭತೇ ಪರಿತಃ ಸ್ಥಾನಾದಾಸನಾಚ್ಛಯ್ಯಾಂ ಕ್ರಾಂತುಮಿಚ್ಛತಿ**

**ಕ್ಲಿಷ್ಟಭೂಯಿಷ್ಠಶ್ಚಾಶು ನಿದ್ರಾಂಲಭತೇ ದುಷ್ಟಬೋಧೀ ಚ ಭವತಿ। ಏವಂವಿಧಮಾತುರಮಗ್ನಿವಿಸರ್ಪಪರೀತಂ ಅಚಿಕಿತ್ಸ್ಯಂ ವಿದ್ಯಾತ್ ॥೩೫॥**

**ಅರ್ಥ—** ತಮ್ಮ ಕಾರಣಗಳಿಂದ ವಾತಪಿತ್ತಗಳು ಅತ್ಯಂತ ಕುಪಿತವಾಗಿ ಒಂದರಿಂದೊಂದು ಬಲವನ್ನು ಹೊಂದಿ ತೀವ್ರವಾಗಿ ಶರೀರದಲ್ಲಿ ವಿಸರ್ಪವನ್ನುಂಟುಮಾಡುವವು. ॥೩೪॥ ಅದರ ತಾಪದಿಂದ ರೋಗಿಯ ಎಲ್ಲ ಶರೀರಕ್ಕೆ ಕೆಂಡಹಚ್ಚಿದಂತೆ ಆಗುವದು. ವಾಂತಿ, ಅತಿಸಾರ, ಮೂರ್ಚ್ಛೆ, ದಾಹ, ಮೋಹ, ಜ್ವರ, ತಮಕಶ್ವಾಸ, ಅಸ್ಥಿಸಂಧಿಗಳಲ್ಲಿ ಚುಚ್ಚೋಣ, ನೀರಡಿಕೆ, ಅರುಚಿ ಅಪಚನ, ಮೈ ನೋಯೋಣ ಮುಂತಾದ ವಿಕಾರಗಳುಂಟಾಗುವವು. ಯಾವ ಸ್ಥಳದಲ್ಲಿ ವಿಸರ್ಪವು ಸರಿದು ಬರುವದೊ ಆ ಸ್ಥಳವು ತೊಳೆದ ಕೆಂಡದಂತೆ ಕಪ್ಪು ಅಥವಾ ಬಹಳ ಕೆಂಪು ಆಗುವದು. ಬೆಂಕಿಯಿಂದ ಸುಟ್ಟು ಉಂಟಾದ ಬಕ್ಕೆಗಳಂಥ ಬಕ್ಕೆಗಳು ಏಳುವವು. ಇದು ಶೀಘ್ರಕಾರಿಯಾದ್ದರಿಂದ ಶೀಘ್ರವೇ ಮರ್ಮಕ್ಕೆ ಹತ್ತಿಕೊಳ್ಳುವದು. ಮರ್ಮವು ಅದರಿಂದ ಪೀಡಿತವಾಗಲು, ವಾತವು ಬಲದಿಂದ ಶರೀರವನ್ನು ಪೀಡಿಸುವದು. ಸಂಜ್ಞೆಯನ್ನು ಅತಿಯಾಗಿ ಕಳೆಯುವದು. ದಮ್ಮು ಕೆಮ್ಮುಗಳನ್ನುಂಟುಮಾಡುವದು. ನಿದ್ರೆಯನ್ನು ನಾಶಮಾಡುವದು. ಹೀಗೆ ನಿದ್ರೆಯು ನಾಶವಾಗಿ, ಸಂಜ್ಞೆಯನ್ನು ಕಳಕೊಂಡು ದುಃಖಿತನಾದವನುಎಲ್ಲಿಲ್ಲಿಯೂಸುತ್ತಲೂ ಸುಖವನ್ನು ಹೊಂದದೆ ಕೂಡುವಸ್ಥಳದಿಂದ ಹಾಸಿಗೆಯನ್ನು ಸೇರಲು ಬಯಸುವನು. ಬಹಳ ದುಃಖಿತನಾದವನಿಗೆ ಅಲ್ಲಿ ನಿದ್ದೆಯು ಹತ್ತುವದು. ಆಮೇಲೆ ತೀವ್ರ ಎಚ್ಚರಾಗದು. ಇದನ್ನು ಅಗ್ನಿವಿಸರ್ಪವೆಂದು ತಿಳಿಯಬೇಕು. ಇದು ಅಸಾಧ್ಯವಾಗಿದೆ. ॥೩೫॥

ಕರ್ದಮ ವಿಸರ್ಪದ ನಿದಾನ ಸಂಪ್ರಾಪ್ತಿಲಕ್ಷಣಗಳನ್ನು ಹೇಳುತ್ತಾರೆ—

**ಕಫಪಿತ್ತಂ ಪ್ರಕುಪಿತಂ ಬಲವತ್ ಸ್ವೇನ ಹೇತುನಾ ॥**
**ವಿಸರ್ಪತ್ಯೇಕದೇಶೇ ತು ಪ್ರಕ್ಲೇದಯತಿ ಚಾಧಿಕಮ್ ॥೩೬॥**

**ತದ್ವಿಕಾರಾಃ ಶೀತಜ್ವರಃ ಶಿರೋರುಗ್ ದಾಹಃ ಸ್ತೈಮಿತ್ಯಮಂಗಾವಸದನಂನಿದ್ರಾತಂದ್ರಾಪ್ರಮೋಹೋಽನ್ನದ್ವೇಷಃ ಪ್ರಲಾಪೋಽಗ್ನಿನಾಶೋ ದೌರ್ಬಲ್ಯಮಸ್ಥಿಭೇದೋ ಮೂರ್ಚ್ಛಾ ಪಿಪಾಸಾ ಸ್ರೋತಸಾಂ ಪ್ರಲೇಪೋ ಜಾಡ್ಯಮಿಂದ್ರಿಯಾಣಾಮಾಮೋಪವೇಶನಮಂಗವಿಕ್ಷೇಪೋಽರತಿಕಾತ್ಸ್ನ್ಯಕ್ಯಂಚೋಪಜಾಯತೆಪ್ರಾಯಶಶ್ಚಾಮಾಶಯೇ ವಿಸರ್ಪತ್ಯೇ**

**ಕದೇಶಗ್ರಾಹೀಚಸ್ಯಾತ್ | ಯಸ್ಮಿಂಶ್ಚಾವಕಾಶೇ ವಿಸರ್ಪೋ ವಿಸರ್ಪತಿ ಸೋಽವಕಾಶೋ ರಕ್ತಪೀತಪಾಂಡುರಪಿಡಕಾಭಿರವಕೀರ್ಣ ಇವ ಮೇಚಕಾಭೋ ಮಲಿನಸ್ನಿಗ್ಧೋ ಬಹೂಷ್ಮಾ ಗುರುಃ ಸ್ತಿಮಿತವೇದನಃ ಶ್ವಯಥುಮಾನ್ ಗಂಭೀರಪಾಕೋ ನಿರಾಸ್ರಾವ: ಶೀಘ್ರಕ್ಲೇದನಶ್ಚ ಭವತಿ | ಸ್ವಿನ್ನಕ್ಲಿನ್ನಪೂತಿಮಾಂಸಶ್ಚ ಕ್ರಮೇಣಾಲ್ಪರುಕ್ ಸಂಜ್ಞಾ ಸ್ಮೃತಿಹಂತಾ ಭವೇತ್ ಪಾದಪೃಷ್ಠಂ ಚಾವದೀರ್ಯತೇ ಸ ಕರ್ದಮ ಇವ ಚೋಪಪೀಡಿತೋಽಂತರಂ ಪ್ರಯಚ್ಛತ್ಯುಪಕ್ಲಿನ್ನಮಾಂಸತ್ಯಾಗೀ ಸಿರಾಸ್ನಾಯುಸಂದರ್ಶೀ ಕುಣಪಗಂಧಿಶ್ಚ ಭವತಿ ತಂ ಕರ್ದಮವಿಸರ್ಪ ಪರೀತಮಚಿಕಿತ್ಸ್ಯಂವಿದ್ಯಾತ್ ॥೩೭॥**

**ಅರ್ಥ—** ತಮ್ಮ ಕಾರಣಗಳಿಂದ ಅತ್ಯಂತ ಕುಪಿತವಾದ ಕಫ ಪಿತ್ತಗಳು ಶರೀರದ ಒಂದು ಭಾಗದಲ್ಲಿ ವಿಸರ್ಪವನ್ನುಂಟುಮಾಡುತ್ತವೆ. ಮತ್ತು ಅಲ್ಲಿ ಹೆಚ್ಚು ಆರ್ದ್ರತೆಯನ್ನುಂಟುಮಾಡುತ್ತವೆ. ॥೩೭॥

ಅಪರ ವಿಕಾರಗಳು— ಚಳಿಜ್ವರ, ತಲೆಶೂಲಿ, ದಾಹ, ನಿತ್ರಾಣ, ನಿದ್ರೆ, ಆಲಸ್ಯ, ಮೋಹ, ಅನ್ನದ್ವೇಷ, ಬಡಬಡಿಸೋಣ, ಅಗ್ನಿನಾಶ,ದೌರ್ಬಲ್ಯ, ಎಲಬು ನೋಯೋಣ, ಮೂರ್ಚ್ಛೆ, ನೀರಡಿಕೆ, ಸ್ರೋತಸ್ಸುಗಳಲ್ಲಿ ಕಫದಲೇಪ, ಇಂದ್ರಿಯಗಳಲ್ಲಿ ಜಡತ್ವ, ಆಮ ಬೀಳೋಣ, ಕೈ–ಕಾಲುಗಳನ್ನು ಅತ್ತಿತ್ತ ಚಲ್ಲೋಣ, ಚೈನವಿಲ್ಲದಿರೋಣ, ಉತ್ಕಂಠೆಗಳುಂಟಾಗುತ್ತವೆ. ಅದು ಬಹಳ ಮಾಡಿ ಆಮಾಶಯದ ಮೇಲೆ ಒಂದು ಪ್ರದೇಶದಲ್ಲಿಯೇ ಉಂಟಾಗುತ್ತದೆ. ಯಾವ ಸ್ಥಳದಲ್ಲಿ ಈ ವಿಸರ್ಪವುಂಟಾಗುವದೋ, ಆ ಸ್ಥಳವು ಕೆಂಪು, ಹಳದಿ, ಬಿಳೀ ಬಕ್ಕೆಗಳಿಂದ ವ್ಯಾಪಿಸಿದಂತೆ ಆಗುವದು. ನವಿಲುಗರಿಯ ಬಣ್ಣ ಬರುವದು. ಹೊಲಸು, ಸ್ನಿಗ್ಧ, ಬಹಳ ಬಿಸಿ, ಜಡ ಇರುವದು. ವೇದನೆಯು ಮಂದವಾಗಿದ್ದು ಬಾವು ಇರುವದು. ಬಹಳ ಒಳಗೆ ಪಾಕವಾಗುವದು. ಸ್ರಾವವಿರುವದಿಲ್ಲ. ತೀವ್ರ ಹಸಿಯಾಗುವದು. ಅಲ್ಲಿಯ ಮಾಂಸವು ಬೆವರು ರಸಿಕೆಗಳಿಂದ ಕೂಡಿ ಹೊಲಸು ನಾರುವದು. ಕ್ರಮದಿಂದ ನೋವು ಕಡಿಮೆಯಾಗುತ್ತ ಸಂಜ್ಞೆ ಸ್ಮೃತಿಗಳನ್ನು ನಾಶಮಾಡುತ್ತದೆ. ಪಾದಗಳ ಮೇಲ್ಭಾಗವು ಸೀಳುತ್ತದೆ. ಅದಕ್ಕೆ ಒತ್ತಲು (ಬಟ್ಟು) ಕೆಸರಿನಂತೆ ಒಳಗೆ ಹೋಗುವದು. ತೊಯ್ದು ಮಾಂಸವು ಬದಿಗಾಗುವದು. ಶಿರೆ ಸ್ನಾಯುಗಳು ಕಾಣು

ವವು. ಹೆಣದ ವಾಸನೆ ಬರುವದು. ಇದು ಕರ್ದಮ ವಿಸರ್ಪವು ಇದು ಅಸಾಧ್ಯವು. ||೩೭||

ಗ್ರಂಥಿವಿಸರ್ಪದ ನಿದಾನ ಸಂಪ್ರಾಪ್ತಿ ಲಕ್ಷಣಗಳನ್ನು ಹೇಳುತ್ತಾರೆ—

**ಸ್ಥಿರಗುರು ಕಠಿನಮಧುರಶೀತಸ್ನಿಗ್ಧಾನ್ನಪಾನಾಭಿಷ್ಯಂದಿಸೇವಿನಾಮವ್ಯಾಯಾಮಸೇವಿನಾಮಪ್ರತಿಕರ್ಮಶೀಲಾನಾಞ್ಚ ಶ್ಲೇಷ್ಮಾ ವಾಯುಶ್ಚ ಪ್ರಕೋಪಮಾಪದ್ಯತೇ | ತಾವುಭೌ ದುಷ್ಟಪ್ರವೃದ್ಧಾವತಿಬಲೌ ಪ್ರದೂಷ್ಯ ದೂಷ್ಯಾನ್ ವಿಸರ್ಪಾಯ ಕಲ್ಪೇತೆ | ತತ್ರ ವಾಯುಃ ಶ್ಲೇಷ್ಮಾಣಮನೇಕಧಾ ಭಿಂದನ್ ಕ್ರಮೇಣ ಗ್ರಂಥಿಮಾಲಾಂ ಕೃಚ್ಛ್ರಪಾಕಾಂ ಕಫಾಶಯೇ ಸಂಜನಯತಿ | ಉತ್ಸನ್ನರಕ್ತಸ್ಯ ವಾ ಪ್ರದೂಷ್ಯ ರಕ್ತಂ ಸಿರಾಸ್ನಾಯುಮಾಂಸತ್ವಗಾಶ್ರಿತಾನಾಂ ಗ್ರಂಥೀನಾಂ ಮಾಲಾಂ ಕುರುತೇ ತೀವ್ರರುಜಾನಾಂ ಗ್ರಂಥೀನಾಂ ಸ್ಥೂಲಾನಾಮಣೂನಾಂ ದೀರ್ಘವೃತ್ತರಕ್ತಾನಾಂ ತದುಪತಾಪಾತ್ ಜ್ವರಾತಿಸಾರಹಿಕ್ಕಾಶ್ವಾಸಕಾಸಶೋಷಪ್ರಮೋಹವೈವರ್ಣ್ಯಾರೋಚಕಾವಿಪಾಕಪ್ರಸೇಕಚ್ಛರ್ದಿಮೂ-ರ್ಛಾಂಗಭಂಗನಿದ್ರಾರತಿಸದನಾನಿ ಪ್ರಾದುರ್ಭವಂತ್ಯುಪದ್ರವಾ ಏತೈರುಪದ್ರವರುಪದ್ರುತಃ ಸ ಚ ಸರ್ವಕರ್ಮಣಾಂ ವಿಷಯಮತಿಪತಿತೋ ವರ್ಜನೀಯೋ ಭವತೀತಿ ಗ್ರಂಥಿವಿಸರ್ಪಃ** ||೩೮||

**ಅರ್ಥ—** ಗಟ್ಟಿ, ಜಡ, ಬಿರಸು, ಮಧುರ, ಶೀತ, ಸ್ನಿಗ್ಧ, ಮತ್ತು ಕಫಕಾರಕ ಅನ್ನಪಾನಗಳನ್ನು ಸೇವಿಸುವವರಿಗೂ ಮತ್ತು ವ್ಯಾಯಾಮ ಮಾಡದವರಿಗೂ ಅದರಿಂದುಂಟಾದ ದೋಷಗಳ ಪ್ರತಿಕಾರವನ್ನು ಮಾಡದವರಿಗೂ ಕಫವಾತಗಳು ಪ್ರಕೋಪಹೊಂದುತ್ತವೆ. ಅವು ಹೆಚ್ಚು ದುಷ್ಟ ಮತ್ತು ಅತಿ ಬಲಿಷ್ಠವಾಗಿರುವದರಿಂದ ದೂಷ್ಯಗಳನ್ನು ದುಷ್ಟವಾಗಿ ವಿಸರ್ಪವನ್ನುಂಟು ಮಾಡುತ್ತವೆ. ಅದರಲ್ಲಿ ವಾಯುವು ಅನೇಕಸಾರೆ ಕಫಾಶಯದಲ್ಲಿದ್ದ ಕಫವನ್ನು ಅನೇಕ ಕಡೆಗೆ ಕತ್ತರಿಸಿ, ಬಹುದಿನಕ್ಕೆ ಪಕ್ವವಾಗುವ ಗಂಟುಗಳ ಸಮೂಹವನ್ನುಂಟುಮಾಡುತ್ತದೆ. ಅಥವಾ ರಕ್ತ ಹೆಚ್ಚಾದವನ ರಕ್ತವನ್ನು ಕೆಡಿಸಿ, ಶಿರಾ, ಸ್ನಾಯು, ಮಾಂಸ, ತ್ವಚೆಗಳಲ್ಲಿ ಗಂಟುಗಳ ಮಾಲೆಯನ್ನುಂಟು ಮಾಡುತ್ತದೆ. ಆ ಗಂಟುಗಳು ಸಣ್ಣ ದೊಡ್ಡವಿದ್ದು, ಕೆಲವು ದುಂಡು ಕೆಲವು ಉದ್ದ ಮತ್ತು ಕೆಂಪಗೆ ಇರುವವು. ನೋವು ಬಹಳವಿರುವದು. ಅದರ

ತಾಪದಿಂದ ಜ್ವರ, ಅತಿಸಾರ, ಬಿಕ್ಕು, ಶ್ವಾಸ, ಕೆಮ್ಮು, ಶೋಷ, ಮೋಹ, ವಿವರ್ಣತೆ, ಅರುಚಿ, ಅಪಚನ, ಬಾಯಿಗೆ ನೀರುಬಿಡೋಣ, ವಾಂತಿ, ಮೂರ್ಛೆ, ಮೈ ನೋಯೋಣ, ನಿದ್ರೆ, ಚೈನವಿಲ್ಲದಿರೋಣ, ನಿತ್ರಾಣ ಈ ಉಪದ್ರವಗಳುಂಟಾಗುವವು. ಈ ಉಪದ್ರವಗಳಿಂದ ಪೀಡಿತನಾದ ಅವನು ಎಲ್ಲ ಚಿಕಿತ್ಸೆಗಳಿಗೆ ಮೀರುವದರಿಂದ ಅಸಾಧ್ಯನಾಗುವನು. ಇದು ಗ್ರಂಥಿವಿಸರ್ಪವು. ||೩೮||

ಉಪದ್ರವಗಳ ಲಕ್ಷಣವನ್ನೂ ಅದರ ಚಿಕಿತ್ಸೆಯ ಕ್ರಮವನ್ನೂ ಹೇಳುತ್ತಾರೆ–

**ಉಪದ್ರವಸ್ತು ರೋಗೋತ್ತರಕಾಲಜೋ ರೋಗಾಶ್ರಯೋ ರೋಗ ಏವಸ್ಥೂಲೋಽಣುರ್ವಾ ರೋಗಾತ್ಪಶ್ಚಾಜ್ಜಾಯತೆ ಇತ್ಯುಪದ್ರವ ಸಂಜ್ಞಃ| ತತ್ರಪ್ರಧಾನಂ ವ್ಯಾಧಿರ್ವ್ಯಾಧೇರ್ಗುಣಭೂತ ಉಪದ್ರವಸ್ತಸ್ಯಪ್ರಾಯಃ ಪ್ರಧಾನಪ್ರಶಮೇಪ್ರಶಮೋಭವತಿ। ಸ ತು ಪೀಡಾಕರತರೋ ಭವತಿ। ಪಶ್ಚಾದುತ್ಪದ್ಯಮಾನೋವ್ಯಾಧಿಪರಿಕ್ಲಿಷ್ಟಶರೀರಧಾತುಕತ್ವಾತ್। ತಸ್ಮಾದುಪದ್ರವಂ ತ್ವರಮಾಣೋಽಭಿಧಾವೇತ್ ||೩೯||**

**ಅರ್ಥ—** ಉಪದ್ರವವು ಸಣ್ಣದೇ ಇರಲಿ, ದೊಡ್ಡದೇ ಇರಲಿ, ರೋಗದನಂತರ ಉಂಟಾದ ರೋಗವನ್ನಾಶ್ರಯಿಸಿದ ಬೇರೊಂದು ರೋಗವೇ ರೋಗೋತ್ಪತ್ತಿಯನಂತರ ಉಂಟಾಗುತ್ತದೆಂಬು ಅದಕ್ಕೆ ಉಪದ್ರವವೆಂದು ಹೆಸರು. ಅದರಲ್ಲಿ ರೋಗವು ಮುಖ್ಯವು; ಉಪದ್ರವವು ಗೌಣವು. ಮುಖ್ಯವಾದ ರೋಗದ ನಾಶವಾಗಲು ಬಹಳವಾಡಿ ಉಪದ್ರವವು ತಾನಾಗಿಯೇ ಅಳಿಯುವದು. ವ್ಯಾಧಿಯಿಂದ ಮೊದಲೇ ಶರೀರ ಧಾತುಗಳು ಪೀಡಿತವಾದ್ದರಿಂದ ಹಿಂದುಗಡೆ ಉತ್ಪನ್ನವಾದ ಉಪದ್ರವವು ಹೆಚ್ಚು ಪೀಡೆಯನ್ನುಂಟುಮಾಡುತ್ತದೆ. ಆದ್ದರಿಂದ ತೀವ್ರವಾಗಿ ಉಪದ್ರವವನ್ನು ಚಿಕಿತ್ಸಿಸಬೇಕು.||೩೯||

ಸನ್ನಿಪಾತಜ ವಿಸರ್ಪವನ್ನು ಹೇಳುತ್ತಾರೆ—

**ಸರ್ವಾಯತನಸಮುತ್ಥಂ ಸರ್ವಲಿಂಗಂ ವ್ಯಾಪಿನಂ ಸರ್ವಧಾತ್ವನುಸರಣಂ ಆಶುಕಾರಿಣಮತ್ಯಯಕಾರಿಣಮಿತಿ ಚ ಮತ್ವಾ ಸನ್ನಿಪಾತವಿಸರ್ಪಂ ಅಚಿಕಿತ್ಸ್ಯಂವಿದ್ಯಾತ್ || ೪೦ ||**

**ಅರ್ಥ—** ಸನ್ನಿಪಾತ ವಿಸರ್ಪವು ಎಲ್ಲ ಕಾರಣಗಳಿಂದ ಉಂಟಾಗಿ ಎಲ್ಲ ಲಕ್ಷಣಗಳನ್ನು ಧರಿಸಿ ಸರ್ವ ಶರೀರವನ್ನು ವ್ಯಾಪಿಸಿ ಎಲ್ಲ ಧಾತುಗಳನ್ನು ಸೇರಿ

ರುವದರಿಂದ ಶೀಘ್ರಕಾರಿಯೂ ಬಹಳ ಅಪಾಯವನ್ನುಂಟುಮಾಡುವದೂ ಆಗಿರುವದರಿಂದ ಅಸಾಧ್ಯವೆಂದು ತಿಳಿಯಬೇಕು. ॥ ೪೦ ॥

ಸಾಧ್ಯಾಸಾಧ್ಯ ವಿಸರ್ಪಗಳನ್ನು ಹೇಳುತ್ತಾರೆ—

**ತತ್ರ ವಾತಪಿತ್ತಶ್ಲೇಷ್ಮನಿಮಿತ್ತಾ ವಿಸರ್ಪಾಸ್ತ್ರಯಃ ಸಾಧ್ಯಾ ಭವಂತ್ಯಗ್ನಿಕರ್ದಮಾಖ್ಯೌ ಪುನರನುಪಸೃಷ್ಟೌ ಮರ್ಮಣ್ಯನುಪಹತೇ ವಾ ಸಿರಾಸ್ನಾಯುಮಾಂಸಕ್ಲೇದೆ ಸಾಧಾರಕ್ರಿಯಾಭಿರುಭಾವೇವಾಭ್ಯಸ್ಯಮಾನೌ ಪ್ರಶಾಂತಿಮಾಪದ್ಯೇಯಾತಾಮ್ । ಅನಾದರೋಪಕ್ರಾಂತಃ ಪುನಸ್ತಯೋರನ್ಯತರೋ ದಹೇದ್ ದೇಹಮಾಶ್ವೇವಾಶೀವಿಷವಿಷವತ್ । ತಥಾ ಗ್ರಂಥಿವಿಸರ್ಪಮಜಾತೋಪದ್ರವಮಾರಭೇತ ಚಿಕಿತ್ಸಿತುಮ್ । ಉಪದ್ರವೇಣೋಪದ್ರುತಂ ತ್ವೇನಂ ಪರಿಹರೇತ್ । ಸನ್ನಿಪಾತಜಂ ತು ಸರ್ವಧಾತ್ವನುಸಾರಿತ್ವಾದಾಶುಕಾರಿತ್ವಾದ್ ವಿರುದ್ಧೋಪಕ್ರಮತ್ವಾಚ್ಚಾಸಾಧ್ಯಂ ವಿದ್ಯಾತ್ । ತತ್ರ ಸಾಧ್ಯಾನಾಂ ಸಾಧನವಿಧಿಮನುವ್ಯಾಖ್ಯಾಸ್ಯಾಮಃ ॥೪೧॥**

**ಅರ್ಥ—** ಅವುಗಳಲ್ಲಿ ವಾತಪಿತ್ತಕಫಗಳಿಂದ ಒಂದೊಂದರಿಂದುಂಟಾದ ಮೂರು ವಿಸರ್ಪಗಳು ಸಾಧ್ಯವಿರುತ್ತವೆ. ಅಗ್ನಿವಿಸರ್ಪ ಕರ್ದಮವಿಸರ್ಪಗಳು ಉಪದ್ರವರಹಿತವಾಗಿದ್ದರೆ ಅಥವಾ ಮರ್ಮದಲ್ಲಿ ಇರದಿದ್ದರೆ ಅಥವಾ ಶಿರಾ-ಸ್ನಾಯುಮಾಂಸಗಳ ಕ್ಲೇದವಿರಲು, ಆರಂಭಕದೋಷಗಳ ಚಿಕಿತ್ಸೆಗಳಿಂದ ಉಪಚಾರಮಾಡಿದರೆ ಎರಡೂ ಶಾಂತಿಯನ್ನು ಹೊಂದುವವು. ಆದರೆ ಅನಾದರದಿಂದ ಚಿಕಿತ್ಸೆಯನ್ನು ಮಾಡಿದರೆ, ಇವು ಸರ್ಪವಿಷದಂತೆ ತೀವ್ರವಾಗಿ ದೇಹವನ್ನು ಸುಡುವವು. ಇದರಂತೆ ಗ್ರಂಥಿಸರ್ಪದಲ್ಲಿ ಉಪದ್ರವವಿಲ್ಲದಿದ್ದರೆ ಅದನ್ನು ಚಿಕಿತ್ಸಬೇಕು. ಉಪದ್ರವದಿಂದ ಕೂಡಿದ್ದರೆ ಬಿಟ್ಟು ಬಿಡಬೇಕು. ಸನ್ನಿಪಾತಜ ವಿಸರ್ಪವಂತೂ ಸರ್ವಧಾತುಗಳಲ್ಲಿ ಸೇರಿರುವದರಿಂದಲೂ ಶೀಘ್ರಕಾರಿಯಾಗಿದ್ದದರಿಂದಲೂ ಪರಸ್ಪರ ವಿರುದ್ಧಚಿಕಿತ್ಸೆ ಮಾಡಬೇಕಾಗಿರುವದರಿಂದಲೂ ಅಸಾಧ್ಯವೆಂದು ತಿಳಿಯಬೇಕು. ॥೪೧॥

ಇನ್ನುಮೇಲೆ ಸಾಧ್ಯವಾದ ವಿಸರ್ಪಗಳ ಚಿಕಿತ್ಸೆಯನ್ನು ಹೇಳುತ್ತಾರೆ—

**ಲಂಘನೋಲ್ಲೇಖನೇ ಶಸ್ತೇ ತಿಕ್ತಕಾನಾಂಚ ಸೇವನಮ್ ॥**
**ಕಫಸ್ಥಾನಗತೇ ಸಾಮೇ ರೂಕ್ಷಶೀತೈಶ್ಚ ಲೇಪನಮ್ ॥ ೪೨ ॥**

ಪಿತ್ತಸ್ಥಾನಗತೇಽಪ್ಯೇತತ್ ಸಾಮೇ ಕುರ್ಯಾಚ್ಚಿಕಿತ್ಸಿತಮ್ ||
ಶೋಣಿತಸ್ಯಾವಸೇಕಂ ಚ ವಿರೇಕಂ ಚ ವಿಶೇಷತಃ || ೪೩ ||

ಮಾರುತಾಶಯಸಂಭೂತೇಽಪ್ಯಾದಿತಃ ಸ್ಯಾದ್ ವಿರೂಕ್ಷಣಮ್
ರಕ್ತಪಿತ್ತಾನ್ವಯೇಽಪ್ಯಾದೌ ಸ್ನೇಹನಂ ನ ಹಿತಂ ಮತಮ್ || ೪೪ ||

ವಾತೋಲ್ಬಣೇ ತಿಕ್ತಘೃತಂ ಪೈತ್ತಿಕೇ ಚ ಪ್ರಶಸ್ಯತೇ ||
ಲಘುದೋಷೇ ಮಹಾದೋಷೇ ಪೈತ್ತಿಕೇ ಸ್ಯಾದ್ವಿರೇಚನಮ್ || ೪೫ ||

ನ ಘೃತಂ ಬಹುದೋಷಾಯ ದೇಯಂ ತಂಚ ವಿರೇಚಯೇತ್ ||
ತೇನ ದೋಷೋ ಹ್ಯವಷ್ಟಬ್ಧಸ್ತ್ವಙ್ಮಾಂಸರುಧಿರಂ ಪಚೇತ್ ||೪೬||

ತಸ್ಮಾದ್ವಿರೇಕಮೇವಾದೌ ಶಸ್ತಂ ದದ್ಯಾದ್ ವಿಸರ್ಪಿಣಃ ||
ಶೋಣಿತಸ್ಯಾವಸೇಕಂಚ ತದ್ಧ್ಯಸ್ಯಾಶ್ರಯಸಂಜ್ಞಿತಮ್ || ೪೭ ||

ಇತಿ ವೀಸರ್ಪಿಣಾಮುಕ್ತಂ ಸಮಾಸೇನ ಚಿಕಿತ್ಸಿತಮ್ ||
ಏತದೇವ ಪುನಃ ಸರ್ವಂ ವ್ಯಾಸತಃ ಸಂಪ್ರವಕ್ಷ್ಯತೇ || ೪೮ ||

**ಅರ್ಥ—** ಅವುಗಳಲ್ಲಿ ಸಾಧ್ಯವಿಸರ್ಪಗಳ ಚಿಕಿತ್ಸೆಯನ್ನು ಹೇಳುವೆವು || ಇವುಗಳಿಗೆ ಲಂಘನ, ವಮನ ಕಹಿ ಪದಾರ್ಥಗಳ ಸೇವನವನ್ನು ಮಾಡಬೇಕು. ವಿಸರ್ಪವು ಕಫಸ್ಥಾನದಲ್ಲಿದ್ದು ಸಾಮವಿದ್ದರೆ ರುಕ್ಷಶೀತ (ಆಲ ಮುಂತಾದವುಗಳ ತೊಟಿ) ದ್ರವ್ಯಗಳಿಂದ ಲೇಪಮಾಡಬೇಕು. || ೪೨ || ಪಿತ್ತಸ್ಥಾನದಲ್ಲಿದ್ದ ಸಾಮವಿಸರ್ಪಕ್ಕೂ ಇದೇ ಚಿಕಿತ್ಸೆ ಮಾಡಬೇಕು. ವಿಶೇಷವಾಗಿ ರಕ್ತಮೋಕ್ಷ ಮತ್ತು ವಿರೇಚನವನ್ನು ಕೊಡಬೇಕು. || ೪೩ || ಪಕ್ವಾಶಯದಲ್ಲಿದ್ದ ವಿಸರ್ಪಕ್ಕೂ ಮೊದಲಿನಿಂದ ರುಕ್ಷ ಚಿಕಿತ್ಸೆಯನ್ನೇ ಮಾಡಬೇಕು. ಮೊದಲಿನಿಂದ ರಕ್ತಪಿತ್ತದ ಅನುಬಂಧವಿದ್ದರೂ ಸ್ನೇಹನವು ಹಿತಕರವಲ್ಲ. || ೪೪ || ಸ್ವಲ್ಪ ದೋಷವುಳ್ಳ ವಾತೋಲ್ಬಣಪಿತ್ತಜವಿಸರ್ಪದಲ್ಲಿ (ಕುಷ್ಠೋಕ್ತ) ತಿಕ್ತ ಘೃತವು ಹಿತಕರವು. ಆದರೆ ಅವರಲ್ಲಿ ಬಹಳ ದೋಷವಿದ್ದರೆ ವಿರೇಚನವನ್ನು ಕೊಡಬೇಕು. || ೪೫ || ಬಹುದೋಷವುಳ್ಳ ವಿಸರ್ಪಕ್ಕೆ ಘೃತವನ್ನು ಕೊಡಬಾರದು. ಏಕಂದರೆ ಅವನಿಗೆ ವಿರೇಚನವು ಅವಶ್ಯವಿದೆ. ಘೃತದಿಂದ ದೋಷವು ಪ್ರತಿಬದ್ಧವಾಗಿ ತ್ವಚೆ ರಕ್ತಮಾಂಸಗಳನ್ನು ಪಕ್ವಮಾಡುವದು. || ೪೬ || ಆದಕಾರಣ ವಿಸರ್ಪಿಗೆ ಒಳ್ಳೆಯ ವಿರೇಚನವನ್ನೇ ಮೊದಲು ಕೊಡಬೇಕು. ಅದರಂತೆ ರಕ್ತಮೋಕ್ಷವನ್ನೂ ಮಾಡಬೇಕು ಏಕಂದರೆ ರಕ್ತವು ವಿಸರ್ಪದ ಆಶ್ರಯ

ವಾಗಿದೆ || ೪೭ || ಈ ಪ್ರಕಾರ ವಿಸರ್ಪದ ಸಂಕ್ಷಿಪ್ತ ಚಿಕಿತ್ಸೆಯು ಹೇಳಲ್ಪಟ್ಟಿತು ಇನ್ನು ಮುಂದೆ ಇದೆಲ್ಲವನ್ನೇ ವಿಸ್ತಾರವಾಗಿ ಹೇಳುತ್ತೇನೆ. || ೪೮ ||

ವಿಸರ್ಪದ ವಿಸ್ತೃತ ಚಿಕಿತ್ಸೆಯನ್ನು ಹೇಳುತ್ತಾರೆ—

ಮದನಂ ಮಧುಕಂ ನಿಂಬಂ ವತ್ಸಕಸ್ಯ ಫಲಾನಿಚ ||
ವಮನಂ ಸಂವಿಧಾತವ್ಯಂ ವಿಸರ್ಪೇ ಕಫಪಿತ್ತಜೇ ||೪೯||

ಪಟೋಲಪಿಚುಮರ್ದಾಭ್ಯಾಂ ಪಿಪ್ಪಲ್ಯಾ ಮದನೇನಚ ||
ವಿಸರ್ಪೇ ವಮನಂ ಶಸ್ತಂ ತಥಾ ಚೇಂದ್ರಯವೈಃ ಸಹ ||೫೦||

ಯಾಂಶ್ಚ ಯೋಗಾನ್ ಪ್ರವಕ್ಷ್ಯಾಮಿ ಕಲ್ಪೇಷು ಕಫಪಿತ್ತಿನಾಮ್ ||
ವಿಸರ್ಪಾಣಾಂ ತು ಯೋಜ್ಯಾಸ್ತೇ ದೋಷನಿರ್ಹರಣಾಃ ಶಿವಾಃ ||೫೧||

ಮುಸ್ತನಿಂಬಪಟೋಲಾನಾಂ ಚಂದನೋತ್ಪಲಯೋರಪಿ ||
ಶಾರಿವಾಮಲಕೋಶೀರಮುಸ್ತಾನಾಂ ವಾ ವಿಚಕ್ಷಣಃ ||೫೨||

ಕಷಾಯಾನ್ ಯೋಜಯೇದ್ ವೈದ್ಯಃ ಸಿದ್ಧಾನ್ ವೀಸರ್ಪನಾಶನಾನ್
ಕಿರಾತತಿಕ್ತಕಂ ಲೋಧ್ರಂ ದುರಾಲಭಾಂ ಸಚಂದನಾಮ್ ||೫೩||

ನಾಗರಂ ಪದ್ಮಕಿಂಜಲ್ಕಮುತ್ಪಲಂ ಸಬಿಭೀತಕಮ್ ||
ಮಧುಕಂ ನಾಗಪುಷ್ಪಞ್ಚ ದದ್ಯಾದ್ ವೀಸರ್ಪಶಾಂತಯೇ ||೫೪||

ಪ್ರಪೌಂಡರೀಕಂ ಮಧುಕಂ ಪದ್ಮಕಿಂಜಲ್ಕಮುತ್ಪಲಮ್ ||
ನಾಗಪುಷ್ಪಂ ಚ ಲೋಧ್ರಂ ಚ ತೇನೈವವಿಧಿನಾಪಿಬೇತ್ ||೫೫||

ದುರಾಲಭಾಂ ಪರ್ಪಟಕಂ ಪುಡುಚೀಂ ವಿಶ್ವಭೇಷಜಮ್ ||
ನಿಶಾಪರ್ಯುಷಿತಂ ದದ್ಯಾತ್ ತೃಷ್ಣಾ ವೀಸರ್ಪನಾಶನಮ್ ||೫೬||

ಪಟೋಲಂ ಪಿಚುಮರ್ದಞ್ಚ ದಾರ್ವೀಂ ಕಟುಕರೋಹಿಣೀಮ್ ||
ಯಷ್ಟ್ಯಾಹ್ವಂ ತ್ರಾಯಮಾಣಾಞ್ಚ ದದ್ಯಾದ್ ವೀಸರ್ಪಶಾಂತಯೇ ||೫೭||

ಪಟೋಲಾದಿಕಷಾಯಂ ವಾ ಸರ್ಪಿಸ್ತ್ರಿವೃತಯಾ ಸಹ ||
ಮಸೂರವಿದಲೈರ್ಯುಕ್ತಂ ಘೃತಮಿಶ್ರಂ ಪ್ರದಾಪಯೇತ್ ||೫೮||

**ಅರ್ಥ—** ಕಫಜ, ಪಿತ್ತಜ ಮತ್ತು ಕಫಪಿತ್ತಜ ವಿಸರ್ಪಗಳಲ್ಲಿ ಮಂಗಾರಿಕಾಯಿ, ಜೇಷ್ಠಮಧು, ಬೇವಿನಬಳಕೊಟೆಗಳ ಕಷಾಯ ಮಾಡಿ ಇಂದ್ರಜವಿ

ಚೂರ್ಣವನ್ನು ಹಾಕಿಕೊಟ್ಟು ವಮನವನ್ನು ಮಾಡಿಸಬೇಕು. ॥ ೪೯ ॥ ಕಹಿಪಡವಲ, ಬೇವಿನತೊಗಟೆಗಳ ಕಷಾಯವನ್ನು ಮಾಡಿ ಮಂಗಾರಿಕಾಯಿಚೂರ್ಣವನ್ನು ಹಾಕಿ ಅಥವಾ ಹಿಪ್ಪಲಿ ಕಷಾಯದಲ್ಲಿ ಅಥವಾ ಇಂದ್ರಜವೆ ಕಷಾಯದಲ್ಲಿ ಮಂಗಾರಿ ಚೂರ್ಣವನ್ನು ಹಾಕಿ ವಮನ ಮಾಡಿಸುವದು ವಿಸರ್ಪದಲ್ಲಿ ಪ್ರಶಸ್ತವು ॥ ೫೦ ॥ ಕಲ್ಪಸ್ಥಾನದಲ್ಲಿ ಕಫಪಿತ್ತ ರೋಗಿಗಳಿಗೆ ಹೇಳಿದ ಯೋಗಗಳನ್ನು ವಿಸರ್ಪಗಳಲ್ಲಿ ಯೋಜಿಸಬೇಕು. ಅವು ದೋಷನಾಶಕ ಮತ್ತು ಮಂಗಲಕಾರಕವಾಗಿವೆ. ॥ ೫೧ ॥ ಜೇಕು, ಬೇವು, ಕಹಿಪಡವಲಗಳ ಅಥವಾ ಚಂದನ ನೀಲಕಮಲಗಳ ಅಥವಾ ಅನಂತಮೂಲ, ನೆಲ್ಲಿ, ಬಾಳದಬೇರು, ಜೇಕುಗಳ ಕಷಾಯಗಳನ್ನು ಪಂಡಿತನಾದ ವೈದ್ಯನು ಯೋಜಿಸಬೇಕು. ॥ ೫೨ ॥ ಇವು ನಿಶ್ಚಿತವಾಗಿ ವಿಸರ್ಪಗಳನ್ನು ನಾಶಮಾಡುತ್ತವೆ. ವಿಸರ್ಪನಾಶಕ್ಕಾಗಿ ಚಿರಾಯತ, ಲೋಧ್ರ, ನೆಲಇಂಗಳ, ಚಂದನ ॥ ೫೩ ॥ ಸುಂಠಿ, ಕಮಲದ ಕೇಸರ, ನೀಲಕಮಲ, ತಾರೀಕಾಯಿ, ಜೇಷ್ಠಮಧು, ನಾಗಕೇಶರಗಳ ಕಷಾಯವನ್ನು ಕೊಡಬೇಕು. ॥ ೫೪ ॥ ಪುಂಡರೀಕಕಾಷ್ಠ, ಜೇಷ್ಠಮಧು, ಕಮಲಕೇಶರ, ನೀಲಕಮಲ, ನಾಗಕೇಶರ, ಲೋಧ್ರಗಳ ಕಷಾಯವನ್ನು ಅದರಂತೆ ಕುಡಿಯಬೇಕು. ॥ ೫೫ ॥ ನೆಲಇಂಗಳ, ಕಲ್ಲುಸಬ್ಬಸಿಗೆ, ಅಮೃತಬಳ್ಳಿ. ಸುಂಠಿ ಇವುಗಳ ಶೀತಕಷಾಯವನ್ನು ಕೊಡಬೇಕು. ಅದು ನೀರಡಿಕೆ ವಿಸರ್ಪಗಳನ್ನು ಕಳೆಯುವದು. ॥ ೫೬ ॥ ಕಹಿಪಡವಲ, ಬೇವು, ಮರಅರಿಷಿಣ, ಕಟುಕರೋಣಿ ಜೇಷ್ಠಮಧು, ತ್ರಾಯಮಾಣ ಇವುಗಳ ಶೀತ ಕಷಾಯವನ್ನೂ ಕೊಡಬೇಕು. ಇದು ವಿಸರ್ಪವನ್ನು ಕಳೆಯುವದು. ॥ ೫೭ ॥ ಮೇಲಿನ ಪಟೋಲಾದಿ ಕಷಾಯದಲ್ಲಿ ನಿಶೋತ್ತರಚೂರ್ಣ ತುಪ್ಪಗಳನ್ನು ಹಾಕಿ ಅಥವಾ ಚನ್ನಂಗಿಬೇಳೆ ಮತ್ತು ತುಪ್ಪವನ್ನು ಹಾಕಿ ಕೊಡಬೇಕು. ॥ ೫೮ ॥

**ಪಟೋಲಪತ್ರಮುದ್ಗಾನಾಂ ರಸಮಾಮಲಕಸ್ಯ ಚ ॥**
**ಪಾಯಯೇತ್ ತು ಘೃತೋನ್ಮಿಶ್ರಂ ನರಂ ವೀಸರ್ಪಪೀಡಿತಮ್ ॥ ೫೯ ॥**

**ಯಚ್ಚ ಸರ್ಪಿರ್ಮಹಾತಿಕ್ತಂ ಪಿತ್ತಕುಷ್ಠನಿಬರ್ಹಣಮ್ ॥**
**ನಿರ್ದಿಷ್ಟಂ ತದಪಿ ಪ್ರಾಜ್ಞೋ ದದ್ಯಾದ್ ವೀಸರ್ಪಶಾಂತಯೇ ॥ ೬೦ ॥**

**ತ್ರಾಯಮಾಣಾಘೃತಂ ಸಿದ್ಧಂ ಗೌಲ್ಮಿಕೇ ಯದುದಾಹೃತಮ್ ॥**
**ವಿಸರ್ಪಾಣಾಂ ಪ್ರಶಾಂತ್ಯರ್ಥಂ ದದ್ಯಾತ್ ತದಪಿ ಬುದ್ಧಿಮಾನ್ ॥ ೬೧ ॥**

ತ್ರಿವೃಚ್ಚೂರ್ಣಂ ಸಮಾಲೋಢ್ಯ ಸರ್ಪಿಷಾ ಪಯಸಾಪಿ ವಾ ||
ಘರ್ಮಾಂಬುನಾ ವಾ ಸಂಯೋಜ್ಯ ಮೃದ್ವೀಕಾನಾಂ ರಸೇನ ವಾ || ೬೨ ||
ವಿರೇಕಾರ್ಥಂ ಪ್ರಯೋಕ್ತವ್ಯಂ ಸಿದ್ಧಂ ವೀಸರ್ಪನಾಶನಮ್ ||
ತ್ರಾಯಮಾಣಾಶೃತಂ ವಾಪಿ ಪಯೋ ದದ್ಯಾದ್ ವಿರೇಚನಮ್ || ೬೩ ||
ತ್ರಿಫಲಾರಸಸಂಯುಕ್ತಂ ಸರ್ಪಿಸ್ತ್ರಿವೃತಯಾ ಸಹ ||
ಪ್ರಯೋಕ್ತವ್ಯಂ ವಿರೇಕಾರ್ಥಂ ವಿಸರ್ಪಜ್ವರಶಾಂತಯೇ || ೬೪ ||
ರಸಮಾಮಲಕಾನಾಂ ವಾ ಘೃತಮಿಶ್ರಂ ಪ್ರದಾಪಯೇತ್ ||
ಸ ಏವ ಗುರುಕೋಷ್ಠಾಯ ತ್ರಿವೃಚ್ಚೂರ್ಣಯುತೋ ಹಿತಃ || ೬೫ ||
ದೋಷೇ ಕೋಷ್ಠಗತೇ ಭೂಯ ಏತತ್ ಕುರ್ಯಾದ್ ಭಿಷಗ್ಜಿತಮ್
|| ೬೬|| ||

**ಅರ್ಥ—** ವಿಸರ್ಪರೋಗಿಗೆ ಕಹಿಪಡವಲಎಲೆ, ಹೆಸರುಗಳ ಕಷಾಯವನ್ನು ಅಥವಾ ನೆಲ್ಲೀ ಕಷಾಯವನ್ನು ತುಪ್ಪಕೂಡಿಸಿ ಕುಡಿಸಬೇಕು || ೫೯ || ಪಿತ್ತಕುಷ್ಠನಾಶಕವಾದ ಹಿಂದೆ ಹೇಳಿದ ಮಹಾತಿಕ್ತಘೃತವನ್ನಾದರೂ ಪಂಡಿತವೈದ್ಯನು ವಿಸರ್ಪನಾಶಕ್ಕಾಗಿ ಕೊಡಬೇಕು. || ೬೦ || ಗುಲ್ಮ ಚಿಕಿತ್ಸೆಯಲ್ಲಿ ಹೇಳಿದ ನಿಶ್ಚಿತಫಲಕೊಡುವ ತ್ರಾಯಮಾಣಾಘೃತವನ್ನಾದರೂ ಬುದ್ಧಿವಂತನು ವಿಸರ್ಪಶಾಂತಿಗಾಗಿಕೊಡಬೇಕು. || ೬೧ || ನಿಶೋತ್ತರ ಚೂರ್ಣವನ್ನು ತುಪ್ಪ ಅಥವಾ ಹಾಲು ಅಥವಾ ಬಿಸಿನೀರು ಅಥವಾ ದ್ರಾಕ್ಷಾರಸದೊಡನೆ ಕೊಟ್ಟು ವಿರೇಚನ ಮಾಡಿಸಬೇಕು. || ೬೨ || ಇದು ನಿಶ್ಚಿತವಾಗಿ ವಿಸರ್ಪವನ್ನು ಕಳೆಯುವದು ಅಥವಾ ತ್ರಾಯಮಾಣದ ಕಲ್ಕವನ್ನು ೪ ಹಾಕಿ ನಾಲ್ಕುಪಾಲು ನೀರಿನಲ್ಲಿ ಸಿದ್ಧಪಡಿಸಿದ ಹಾಲನ್ನು ಕೊಡಬೇಕು. ಇದು ವಿರೇಚನವನ್ನು ಮಾಡುವದು || ೬೩ || ವಿಸರ್ಪದಲ್ಲಿ ಜ್ವರವಿದ್ದರೆ ತ್ರಿಫಳಾರಸದಲ್ಲಿ ತುಪ್ಪ ಮತ್ತು ನಿಶೋತ್ತರಚೂರ್ಣಹಾಕಿ ವಿರೇಚನಕ್ಕಾಗಿ ಕೊಡಬೇಕು || ೬೪ || ಅಥವಾ ನೆಲ್ಲಿ ಕಷಾಯದಲ್ಲಿ ತುಪ್ಪ ಹಾಕಿ ಕೊಡಬೇಕು. ಕೋಷ್ಠವು ಜಡವಿದ್ದರೆ ನಿಶೋತ್ತರಚೂರ್ಣವನ್ನು ಹಾಕಿ ಕೊಡಬೇಕು || ೬೫ || ಕೋಷ್ಠದಲ್ಲಿ ದೋಷವಿದ್ದರೆ ಮೇಲಿನ ಯೋಗವನ್ನು ಹೆಚ್ಚು ಪ್ರಮಾಣದಲ್ಲಿ ಕೊಡಬೇಕು.
|| ೬೬|| ||

ಶಾಖಾದುಷ್ಟವಾದ ರಕ್ತದ ಚಿಕಿತ್ಸೆಯನ್ನು ಹೇಳುತ್ತಾರೆ—

ಶಾಖಾದುಷ್ಟೇ ತು ರುಧಿರೇ ರಕ್ತಮೇವಾದಿತೋ ಹರೇತ್ || ೬೬ ||
ಭಿಷಗ್ ವಾತಾನ್ವಿತಂ ರಕ್ತಂ ವಿಷಾಣೇನಾಭಿನಿರ್ಹರೇತ್ ||
ಪಿತ್ತಾನ್ವಿತಂ ಜಲೌಕಾಭಿರಲಾಬೂಭಿಃ ಕಫಾನ್ವಿತಮ್ || ೬೭ ||
ಯಥಾಸನ್ನಂ ವಿಕಾರಸ್ಯ ವ್ಯಧಯೇದ್ವಾಶು ವಾ ಸಿರಾಮ್ ||
ತ್ವಙ್ಮಾಂಸಸ್ನಾಯುಸಂಕ್ಲೇದೋ ರಕ್ತಕ್ಲೇದಾದ್ಧಿ ಜಾಯತೇ || ೬೮ ||
ಏವಂ ನಿರ್ಹೃತದೋಷಾಣಾಂ ದೋಷೇ ತ್ವಙ್ಮಾಂಸಸಂಶ್ರಿತೇ ||
ಆದಿತೋ ವಾಲ್ಪದೋಷಾಣಾಂ ಕ್ರಿಯಾ ಬಾಹ್ಯಾ ಪ್ರಚಕ್ಷತೇ || ೬೯ ||

**ಅರ್ಥ—** ಶಾಖೆಯಲ್ಲಿದ್ದ ರಕ್ತವು ದುಷ್ಟವಾಗಿದ್ದರೆ ರಕ್ತವನ್ನೇ ಮೊದಲು ತೆಗೆಯಬೇಕು. || ೬೬ || ವೈದ್ಯನು ವಾತದುಷ್ಟರಕ್ತವನ್ನು ವಿಷಾಣದಿಂದಲೂ ಪಿತ್ತದುಷ್ಟರಕ್ತವನ್ನು ಜಿಗಳಿಗಳಿಂದಲೂ ಕಫದುಷ್ಟರಕ್ತವನ್ನು ಕುಂಬಳಕಾಯಿ (ತುಂಬಡಿ) ಗಳಿಂದಲೂ ತೆಗೆಯಬೇಕು. || ೬೭ || ಅಥವಾ ವಿಕಾರದ ಸಮೀಪದಲ್ಲಿದ್ದ ಶಿರೆಯನ್ನು ತೀವ್ರವಾಗಿ ಕತ್ತರಿಸಬೇಕು. ಏಕೆಂದರೆ ರಕ್ತದಲ್ಲಿಯ ಕ್ಲೇದದಿಂದ ತ್ವಚೆ ಮಾಂಸ, ಸ್ನಾಯುಗಳಲ್ಲಿ ಕ್ಲೇದ ಉಂಟಾಗುತ್ತದೆ. || ೬೮ || ಈ ರೀತಿಯಾಗಿ ದೋಷಗಳನ್ನು ತೆಗೆದನಂತರ ತ್ವಚೆ ಮಾಂಸಗಳಲ್ಲಿ ಮಾತ್ರ ದೋಷವುಳಿಯಲು ಅಥವಾ ಶರೀರದಲ್ಲಿ ಆರಂಭದಲ್ಲಿಯೇ ದೋಷಗಳು ಸ್ವಲ್ಪವಿದ್ದರೆ ಅಂಥವರಿಗೆ ಬಾಹ್ಯ ಚಿಕಿತ್ಸೆ (ಲೇಪಚನ ಮುಂತಾದ) ಯನ್ನು ಹೇಳುತ್ತೇವೆ. || ೬೯ ||

ರಕ್ತಪಿತ್ತಾದಿಕ ವಿಸರ್ಪಗಳಿಗೆ ಲೇಪಗಳನ್ನು ಹೇಳುತ್ತಾರೆ—

ಉದುಂಬರತ್ವಙ್ಮಧುಕಂ ಪದ್ಮಕಿಂಜಲ್ಕಮುತ್ಪಲಮ್
ನಾಗಪುಷ್ಪಂ ಪ್ರಿಯಂಗುಶ್ಚ ಪ್ರದೇಹಃ ಸಘೃದೋ ಹಿತಃ || ೭೦ ||
ನ್ಯಗ್ರೋಧಪಾದಾಸ್ತರುಣಾಃ ಕದಲೀಗರ್ಭಸಂಯುತಾಃ ||
ಬಿಸಗ್ರಂಥಿಶ್ಚ ಲೇಪಃ ಸ್ಯಾಚ್ಛತಧೌತ ಘೃತಪ್ಲುತಃ || ೭೧ ||
ಕಾಲೇಯಂ ಮಧುಕಂ ಹೇಮ ವನ್ಯಂ ಚಂದನಪದ್ಮಕೌ ||
ಪತ್ರಂ ಮೃಣಾಲಂ ಫಲಿನೀ ಪ್ರದೇಹಃ ಸ್ಯಾದ್ಘೃತಪ್ಲುತಃ || ೭೨ ||

ಶಾಲೂಕಂಚ ಮೃಣಾಲಂಚ ಶಂಖಂ ಚಂದನಮುತ್ಪಲಮ್ ||
ವೇತಸಸ್ಯ ಚ ಮೂಲಾನಿ ಪ್ರದೇಹಃ ಸ್ಯಾದ್ ಘೃತಪ್ಲುತಃ || ೭೩ ||

ಸಾರಿವಾ ಪದ್ಮಕಿಂಜಲ್ಕಮುಶೀರಂ ನೀಲಮುತ್ಪಲಮ್ ||
ಮಂಜಿಷ್ಠಾ ಚಂದನಂ ಲೋಧ್ರಮಭಯಾ ಚ ಪ್ರಲೇಪನಮ್ || ೭೪ ||

ನಲದಂ ಚ ಹರೇಣುಶ್ಚ ಲೋಧ್ರಂ ಮಧುಕಮುತ್ಪಲಮ್ ||
ದೂರ್ವಾ ಸರ್ಜರಸಶ್ಚೈವ ಸಘೃತಂ ಸ್ಯಾತ್ ಪ್ರಲೇಪನಮ್ || ೭೫ ||

ಯಾವಕಾಃ ಸಕ್ತವಶ್ಚೋಕ್ತಾಃ ಸರ್ಪಿಷಾ ಸಹ ಯೋಜಿತಾಃ ||
ಪ್ರದೇಹಾ ಮಧುಕಂ ವೀರಾ ಸಘೃತಾ ಯವಸಕ್ತವಃ || ೭೬ ||

ಬಲಾಮುತ್ಪಲಶಾಲೂಕಂ ವೀರಾಮಗುರುಚಂದನಮ್ ||
ದದ್ಯಾದಾಲೇಪನಂ ವೈದ್ಯೋ ಮೃಣಾಲಾನಿ ಬಿಸಾನಿ ಚ || ೭೭ ||

ಯವಚೂರ್ಣಂ ಸಮಧುಕಂ ಸಘೃತಂಚ ಪ್ರಲೇಪನಮ್ ||
ಹರೇಣವೋ ಮಸೂರಾಶ್ಚ ಸಮುದ್ಗಾಃ ಶ್ವೇತಶಾಲಯಃ || ೭೮ ||

ಪೃಥಕ್ ಪೃಥಕ್ ಪ್ರದೇಹಾಃ ಸ್ಯುಃ ಸರ್ವೇ ವಾ ಸಹಸರ್ಪಿಷಾ ||
ಪದ್ಮಿನೀಕರ್ದಮಃ ಶೀತೋ ಮೌಕ್ತಿಕಂ ಪಿಷ್ಟಮೇವ ಚ || ೭೯ ||

ಶಂಖಃ ಪ್ರವಾಲಾಃ ಶುಕ್ತಿರ್ವಾ ಗೈರಿಕೋ ವಾ ಘೃತಪ್ಲುತಃ ||
ಪೃಥಗೇತೇ ಪ್ರದೇಹಾಶ್ಚ ಹಿತಾ ಜ್ಞೇಯಾ ವಿಸರ್ಪಿಣಾಮ್ || ೮೦ ||

ಪ್ರಪೌಂಡರೀಕಂ ಮಧುಕಂ ಬಲಾ ಶಾಲೂಕಮುತ್ಪಲಮ್ ||
ನ್ಯಗ್ರೋಧಪತ್ರಂ ದುಗ್ಧೀಕಾ ಸಘೃತಂ ಸ್ಯಾತ್ ಪ್ರಲೇಪನಮ್ || ೮೧ ||

ಬಿಸಾನಿ ಚ ಮೃಣಾಲಾನಿ ಸಘೃತಾಶ್ಚ ಕಶೇರುಕಾಃ ||
ಶತಾವರೀ ವಿದಾರ್ಯೋಶ್ಚ ಕಂದೌ ಧೌತಘೃತಂ ತಥಾ || ೮೨ ||

ನ್ಯಗ್ರೋಧೋದುಂಬರಾಶ್ವತ್ಥವೇತಸಪ್ಲಕ್ಷಜಾಂಬವಃ ||
ತ್ವಕ್‌ಕಲ್ಕೈರ್ಬಹುಸರ್ಪಿರ್ಭಿಃ ಶೀತೈರಾಲೇಪನಂ ಹಿತಮ್ || ೮೩ ||

ಶೈವಾಲಂ ನಲಮೂಲಾನಿ ಗೋಜಿಹ್ವಾ ವೃಷಕರ್ಣಿಕಾ ||
ಇಂದ್ರಾಣಿಶಾಕಂ ಸಘೃತಂ ದೇಯಂ ವಾ ದಾಹಶಾಂತಯೇ || ೮೪ ||

ಪ್ರದೇಹಾಃ ಸರ್ವಏವೈತೇ ರಕ್ತಪಿತ್ತೋಲ್ಬಣೇಹಿತಾಃ || ೮೫|| ||

**ಅರ್ಥ—** ಅತ್ತಿಯ ತೊಗಟೆ, ಜೇಷ್ಠಮಧು, ಕಮಲದಕೇಶರ, ನೀಲ ಕಮಲ, ನಾಗಕೇಶರ (ಗಹ್ವಲಾ) ಇವುಗಳ ಚೂರ್ಣವನ್ನು ತುಪ್ಪದಲ್ಲಿ ಹಚ್ಚಿದರೆ ಹಿತವಾಗುವದು ||೭೦|| ಆಲದ ಎಳೇಜಡೆ ಬಾಳೀಗಿಡದ ಕೆಚ್ಚು ಕಮಲದ ದೇಟೀನ ಗಂಟು ಇವುಗಳ ಕಲ್ಕವನ್ನು ಶತಧೌತ ತುಪ್ಪದಲ್ಲಿ ಕಲಿಸಿ ಲೇಪವಮಾಡಬೇಕು. ||೭೧|| ಕಾಲೇಯಕಾಷ್ಠ ಜೇಷ್ಠಮಧು, ನಾಗಕೇಸರ, ಅಡವಿಜೇಕು, ಚಂದನ, ಪದ್ಮಕಾಷ್ಠ, ತಮಾಲಪತ್ರ, ಕಮಲದದೇಟು, ಗಹ್ವಲಾ ಇವುಗಳಕಲ್ಕವನ್ನೂ ತುಪ್ಪದಲ್ಲಿ ಕಲಿಸಿ ಲೇಪವಮಾಡಬೇಕು ||೭೨|| ಕಮಲ ದಕಂದ, ದೇಟು, ಶಂಖ, ಚಂದನ, ನೀಲಕಮಲ, ವೇತಸ (ಪೆಬ್ಬಿಜಾತಿ) ಬೇರು ಇವುಗಳ ಕಲ್ಕವನ್ನು ತುಪ್ಪದಲ್ಲಿ ಕಲಿಸಿ ಲೇಪವಮಾಡಬೇಕು. ||೭೩|| ಅನಂತ ಮೂಲ, ಕಮಲದ ಕೇಶರ, ಬಾಳದಬೇರು, ನೀಲಕಮಲ, ಮಂಜಿಷ್ಠೆ, ಚಂದನ ಲೋಧ, ಅಣಲೆ ಇವುಗಳ ಚೂರ್ಣವನ್ನು ತುಪ್ಪದಲ್ಲಿ ಲೇಪವಮಾಡಬೇಕು||೭೪|| ಬಾಳದಬೇರು, ರೇಣುಕಬೀಜ, ಲೋಧ, ಜೇಷ್ಠಮಧು, ನೀಲಕಮಲ, ಕರಿಕೆ, ರಾಳ, ಇವುಗಳಲ್ಲಿ ತುಪ್ಪಹಾಕಿ ಲೇಪವಮಾಡಬೇಕು. ||೭೫|| ಜವಸಕ್ತುವಿನಲ್ಲಿ ತುಪ್ಪಕಲಿಸಿ ಲೇಪವಮಾಡಬೇಕು. ಜೇಷ್ಠಮಧು, ಒಂದೆಲೆ ಹೊನ್ನೆ ಜವಸಕ್ತು ಗಳ ಕಲ್ಕದಲ್ಲಿ ತುಪ್ಪಕಲಿಸಿ ಲೇಪವಮಾಡಬೇಕು. ||೭೬|| ಕಳ್ಳಂಗಡ್ಲೆ, ನೀಲಕ ಮಲದಗಡ್ಡೆ, ಒಂದೆಲೆಹೊನ್ನೆ, ಅಗುರುಚಂದನಗಳ ಕಲ್ಕವನ್ನು ತುಪ್ಪದೊಡನೆ ಲೇಪವಮಾಡಬೇಕು. ಅದರಂತೆ ಕಮಲದದೇಟು, ಬಿಸ ( ಕಮಲದದೊಡ್ಡ ದೇಟು) ಗಳ ಕಲ್ಕವನ್ನೂ ತುಪ್ಪದೊಡನೆ ಲೇಪವಮಾಡಬೇಕು. ||೭೭|| ಜವೆಯ ಮತ್ತು ಜೇಷ್ಠಮಧುವಿನಚೂರ್ಣಗಳನ್ನು ತುಪ್ಪದೊಡನೆ ಲೇಪವಮಾಡಬೇಕು. ರೇಣುಕಬೀಜ ಚನ್ನಂಗಿಬೇಳೆ ಹೆಸರು ಬಿಳೀ ಅಕ್ಕಿಗಳ ಕಲ್ಕವನ್ನು || ೭೮ || ಬೇರೆಬೇರೆಯಾಗಿ ಅಥವಾ ಒಟ್ಟಿಗೆ ತುಪ್ಪದೊಡನೆ ಲೇಪವಮಾಡಬೇಕು. ಕಮಲ ದಬಳ್ಳಿಯ ಕೆಳಗಿನ ತಣ್ಣನ ಕೆಸರು ಅಥವಾ ಮುತ್ತಿನಚೂರ್ಣ ||೭೯|| ಶಂಖ, ಪ್ರವಾಳ, ಮುತ್ತಿನಸಿಂಪಿ, ಅಥವಾ ಕಾವಿ, ಇವುಗಳ ಚೂರ್ಣಗಳಲ್ಲಿ ತುಪ್ಪ ಕಲಿಸಿ ಮಾಡಿದ ಲೇಪಗಳು ವಿಸರ್ಪ ರೋಗಿಗಳಿಗೆ ಹಿತಕರವಾಗಿವೆ. || ೮೦ || ಪುಂಡರೀಕಕಾಷ್ಟ, ಜೇಷ್ಠಮಧು, ಕಲಂಗಡ್ಲೆ, ಕಮಲದಗಡ್ಡೆ, ನೀಲಕಮಲ, ಆಲದಎಲೆ, ದುಗ್ಧಿಕಾ ( ಮಧಿ ) ಇವುಗಳ ಕಲ್ಕವನ್ನು ತುಪ್ಪದಲ್ಲಿ ಲೇಪ ಮಾ ಡಬೇಕು. ||೮೧|| ಬಿಸ (ಕಮಲದ ದೊಡ್ಡ ದೇಟು) ಮೃಣಾಲ (ಕಮಲದ ಸಣ ದೇಟು) ಕಶೇರುಕಾ (ಕೊತ್ತೀಗಡ್ಡೆ) ಶತಾವರೀ, ನೆಲಗುಂಬಳಗಳ ಕಂದಗಳ ಚೂರ್ಣವನ್ನು ಶತಧೌತದೊಡನೆ ಲೇಪವಮಾಡಬೇಕು. ||೮೨|| ಆಲ, ಅತ್ತಿ,

ಅರಳಿ, ನೇತಸ, (ಹೆಬ್ಬೀಜಾತಿ) ಬಸರಿ, ನೇರಲಗಿಡಗಳ ತ್ವಚೆಯಕಲ್ಕದಲ್ಲಿ ಬಹಳ ತುಪ್ಪವನ್ನು ಕೂಡಿಸಿ ತಣ್ಣಗಿರುವ ಅದರಿಂದ ಲೇಪಮಾಡಬೇಕು. ||೮೩ ದಾಹದ ಶಾಂತಿಗಾಗಿ ಹಾಂಸೆ ನಲ(ಕಾಡುಹೊಗೆಸೊಪ್ಪು)ದಬೇರು, ಗೋಜಿಹ್ವೆ (ಹತ್ತರಿಕೆ) ವೃಷಕರ್ಣಿಕೆ (ಮೂಷಕಪರ್ಣೀ) ಲಕ್ಕಿಯ ಎಲೆ ಇವುಗಳ ಚೂರ್ಣ ವನ್ನು ತುಪ್ಪದಲ್ಲಿ ಕಲಿಸಿ ಲೇಪಮಾಡಬೇಕು. ||೮೪|| ಇವೆಲ್ಲ ಲೇಪಗಳು ರಕ್ತ ಪಿತ್ತಾಧಿಕವಿಸರ್ಪದಲ್ಲಿ ಹಿತಕರವಾಗಿವೆ. || ೮೪|| ||

ಕಫಜ ವಿಸರ್ಪಗಳಲ್ಲಿ ಲೇಪಗಳನ್ನು ಹೇಳುತ್ತಾರೆ—

**ಕಫಜೇ ತು ಪ್ರವಕ್ಷ್ಯಾಮಿ ಪ್ರದೇಹಾದಿಪರಾನ್ ಹಿತಾನ್ || ೮೫ ||**
**ತ್ರಿಫಲಾ ಪದ್ಮಕೋಶೀರಂ ಸಮಂಗಾ ಕರವೀರಕಮ್ ||**
**ನಲಮೂಲಾನ್ಯನಂತಾ ಚ ಪ್ರದೇಹಮುಪಕಲ್ಪಯೇತ್ || ೮೬ ||**
**ಖದಿರಂ ಸಪ್ತಪರ್ಣಂಚ ಮುಸ್ತಮಾರಗ್ವಧಂ ಧವಮ್ ||**
**ಕುರಂಟಕಂ ದೇವದಾರು ದದ್ಯಾದಾಲೇಪನಂ ಹಿತಮ್ || ೮೭ ||**
**ಆರಗ್ವಧಸ್ಯ ಪತ್ರಾಣಿ ತ್ವಚಃ ಶ್ಲೇಷ್ಮಾತಕಸ್ಯ ಚ ||**
**ಇಂದ್ರಾಣಿಶಾಕಂ ಕಾಕಾಹ್ವಾಂ ಶಿರೀಷಕುಸುಮಾನಿ ಚ || ೮೮ ||**
**ಶೈವಾಲಂ ನಲಮೂಲಾನಿ ವೀರಾಂ ಗಂಧಪ್ರಿಯಂಗುಕಾಮ್ ||**
**ತ್ರಿಫಲಾಂ ಮಧುಕಂ ವೀರಾಂ ಶಿರೀಷಕುಸುಮಾನಿ ಚ || ೮೯ ||**
**ಪ್ರಪೌಂಡರೀಕಂ ಹ್ರೀಬೇರಂ ದಾರ್ವೀತ್ವಗಭಯಂ ಬಲಾಮ್ ||**
**ಪೃಥಗಾಲೇಪನಂ ದದ್ಯಾದ್ ದ್ವಂದ್ವಶಃ ಸರ್ವಶೋಽಪಿವಾ || ೯೦ ||**
**ಪ್ರದೇಹಾಃ ಸರ್ವ ಏವೈತೇ ದೇಯಾಃ ಸ್ವಲ್ಪಘೃತಪ್ಲುತಃ || ೯೧|| ||**

**ಅರ್ಥ—** ಕಫಜ ವಿಸರ್ಪಗಳಲ್ಲಿ ಹಿತಕರವಾದ ಬೇರೆ ಲೇಪಗಳನ್ನು ಹೇಳುವೆನು. || ೮೫ || ತ್ರಿಫಳೆ, ಪದ್ಮಕಾಷ್ಠ, ಬಾಳದಬೇರು, ಮಂಜಿಷ್ಠ, ಕಣಿಗಲ, ನಲದಬೇರು (ಕಾಡುಹೊಗೆಸೊಪ್ಪು) ಅನಂತಮೂಲ ಇವುಗಳ ಚೂರ್ಣ ವನ್ನು (ಸ್ವಲ್ಪ ತುಪ್ಪದಲ್ಲಿ ಕಲಿಸಿ) ಲೇಪಮಾಡಬೇಕು || ೮೬ || ಖದಿರತೋಟಿ ಸಪ್ತಪರ್ಣ, ಜೇಕು, ಕಕ್ಕೆ, ಧವ (ದಿಂಡಿಲಮರ) ದೇವದಾರುಗಳ ಕಲ್ಕವನ್ನು ಸ್ವಲ್ಪ ತುಪ್ಪದಲ್ಲಿ ಕಲಿಸಿ ಲೇಪ ಮಾಡಬೇಕು || ೮೭ || ಕಕ್ಕೇಎಲೆ ಮತ್ತು ತೋಟಿ ಮತ್ತು ಚಳ್ಳದಎಲೆ ತೋಟಿ ಇವುಗಳ ಅಥವಾ ಲಕ್ಕೀಎಲೆ ಕರೇಅತ್ತಿ

ಸಿರಸಲಹೂವು ಇವುಗಳ ಅಥವಾ || ೮೮ || ಹಾವಸೆ (ಕಾಡುಹೊಗೆಸೊಪ್ಪು) ಒಂಪೆಲೆಪೊನ್ನೆ ಗಂಧ ಪ್ರಿಯಂಗು ಇವುಗಳ ಅಥವಾ ತ್ರಿಫಳೆ ಜೇಷ್ಠ ಮಧು ಒಂಪೆಲೆಹೊನ್ನೆ ಸಿರಸಲಹೂವು ಇವುಗಳ || ೮೯ || ಅಥವಾ ಪುಂಡ ರೀಕಕಾಷ್ಠ ಬಾಳದಬೇರು ಮರಳರಿಷಿಣದ ತೋಟಿ ಅಣಲೆ ಕಳ್ಳಂಗಡ್ಲೆ ಇವು ಗಳ ಲೇಪಗಳನ್ನು ಒಂದೊಂದೇಆಗಲಿ ಎರಡೆರಡುಕೂಡಿಯಾಗಲಿ ಎಲ್ಲವನ್ನು ಕೂಡಿಸಿಯಾಗಲೀ ಮಾಡಬೇಕು || ೯೦ || ಈ ಎಲ್ಲ ಲೇಪಗಳನ್ನು ಸ್ವಲ್ಪ ಘೃತವನ್ನು ಕೂಡಿಸಿಯೇ ಮಾಡಬೇಕು. || ೯೦|| ||

ಪ್ರಸಂಗತಃ ಮತ್ತೆ ವಾತಪಿತ್ತಾಧಿಕ ವಿಸರ್ಪದ ಯೋಗಗಳನ್ನು ಹೇಳುತ್ತಾರೆ.

**ವಾತಪಿತ್ತೋಲ್ಬಣೇ ಯೇತು ಪ್ರದೇಹಾಸ್ತೇ ಘೃತಾಧಿಕಾಃ ||೯೧||**

**ಘೃತೇನ ಶತಧೌತೇನ ಪ್ರದಿಹ್ಯಾತ್ ಕೇವಲೇನ ವಾ ||**
**ಘೃತಮಂಡೇನ ಶೀತೇನ ಪಯಸಾ ಮಧುಕಾಂಬುನಾ ||೯೨||**

**ಪಂಚವಲ್ಕ ಕಷಾಯೇಣ ಸೇಚಯೇಚ್ಛೀತಲೇನ ವಾ ||**
**ವಾತಾಸೃಕ್ ಪಿತ್ತಬಹುಲಂ ವೀಸರ್ಪಂ ಬಹುಶಃ ಪೃಥಕ್ ||೯೩||**

**ಸೇಚನಾ ಯೇ ಪ್ರದೇಹಾಸ್ತೇ ತ ಏವ ಘೃತಸಾಧನಾಃ ||**
**ತಚ್ಚೂರ್ಣಯೋಗಾ ವೀಸರ್ಪವ್ರಣಾನಾಮವಚೂರ್ಣನಾಃ ||೯೪||**

**ದೂರ್ವಾಸ್ವರಸಸಂಸಿದ್ಧಂ ಘೃತಂ ಸ್ಯಾದವ್ರಣರೋಪಣಮ್ ||**
**ದಾರ್ವೀತ್ವಚ್ ಮಧುಕಂ ಲೋಧ್ರಂ ಕೇಶರಂಚಾವಚೂರ್ಣಿತಮ್ ||೯೫**

**ಪಟೋಲಂ ಪಿಚುಮರ್ದಶ್ಚ ತ್ರಿಫಲಾ ಮಧುಕೋ ತ್ಪಲಮ್ ||**
**ಏತತ್ ಪ್ರಕ್ಷಾಲನಂ ಸರ್ಪಿರ್ವ್ರಣೇ ಚೂರ್ಣಂ ಪ್ರಲೇಪನಮ್ ||೯೬||**

**ಪ್ರದೇಹಾಃ ಸರ್ವ ಏವೈತೇ ಕರ್ತವ್ಯಾಃ ಸಂಪ್ರಧಾವನಾಃ ||**
**ಕ್ಷಣೇ ಕ್ಷಣೇ ಪ್ರಯೋಕ್ತವ್ಯಾಃ ಸರ್ವಮುದ್ಧೃತ್ಯ ಲೇಪನಮ್ ||೯೭||**

**ಅಧಾವನೋದ್ಧೃತೇ ಪೂರ್ವೇ ಪ್ರದೇಹಾ ಬಹುಶೋऽಘನಾಃ**
**ದೇಯಾಃ ಪ್ರದೇಹಾಃ ಕಫಜೇ ಪರ್ಯಾಧಾನೋದ್ಧೃತೇ ಘನಾಃ ||೯೮**

**ಅರ್ಥ—** ಆದರೆ ವಾತಪಿತ್ತಾಧಿಕ ವಿಸರ್ಪಗಳಲ್ಲಿ ಹೇಳಿದ ಲೇಪಗಳಲ್ಲಿ ತುಪ್ಪವು ಹೆಚ್ಚಿಗೆ ಇರಬೇಕು. || ೯೧ || ಅಥವಾ ವಾತಪಿತ್ತರಕ್ತಗಳು ಬಹಳ

ವಿದ್ದ ವಿಸರ್ಪಗಳಿಗೆ ಕೇವಲ್ಲ ಶತಧೌತಘೃತದ ಲೇಪ ಮಾಡಬೇಕು. ಅಥವಾ ತುಪ್ಪದ ಕೆನೆಯಿಂದ ಅಥವಾ ತಣ್ಣಗಿನ ಹಾಲಿನಿಂದ ಅಥವಾ ಜೇಷ್ಠಮಧು ವಿನ ಕಷಾಯದಿಂದ ॥ ೯೨ ॥ ಅಥವಾ ಪಂಚವಲ್ಕಲ (ಆಲ ಅತ್ತಿ ಅರಳಿ ಬಸರಿ ವೇತಸ) ಗಳ ಶೀತವಾದ ಕಷಾಯದಿಂದ ಆಗಾಗ್ಗೆ ಸೇಚನ ಮಾಡ ಬೇಕು. ॥ ೯೩ ॥ ಸೇಚನಕ್ಕಾಗಿ ಹೇಳಿದ ದ್ರವ್ಯಗಳಿಂದಲೇ ಲೇಪಗಳನ್ನೂ ಘೃತಗಳನ್ನೂ ಮಾಡಬೇಕು. ಅವುಗಳ ಚೂರ್ಣಗಳನ್ನು ವಿಸರ್ಪದ ವ್ರಣ ಗಳಮೇಲೆ ಉದುರಿಸಬೇಕು. ॥ ೯೪ ॥ ಳಪಾಲು ಕರಿಕೆಯ ರಸದಲ್ಲಿ ಸಿದ್ಧಮಾ ಡಿದ ಘೃತವು ವ್ರಣವನ್ನು ಮಾಯಿಸುವದು. ಮರಅರಿಷಿಣದತೋಟಿ ಜೇಷ್ಠ ಮಧು ಲೋಧ ನಾಗಕೇಶರಗಳ ಚೂರ್ಣವು ವ್ರಣವನ್ನು ಮಾಯಿಸುವದು. ॥ ೯೫ ॥ ಅದರಂತೆ ಕಹಿಪಡವಲ ಬೇವು ತ್ರಿಫಳೆ ಜೇಷ್ಠಮಧು ನೀಲಕಮಲ ಇವುಗಳ ಕಷಾಯದಿಂದ ಮಾಡಿದ ಪ್ರಕ್ಷಾಲನ ಘೃತ ಮತ್ತು ಚೂರ್ಣ ಲೇಪ ಗಳು ವ್ರಣರೋಪಕವಾಗಿವೆ. ॥ ೯೬ ॥ ಆಯಾ ವಿಸರ್ಪಗಳ ಲೇಪಕ್ಕಾಗಿ ಹೇಳಿದ ದ್ರವ್ಯಗಳನ್ನು ಕುದಿಸಿ ಆಯಾ ವಿಸರ್ಪಗಳ ಧಾವನ ಜಲವನ್ನು ಸಿದ್ಧ ಮಾಡಿ ಹಚ್ಚಿದ ಲೇಪವನ್ನು ತೆಗೆದು ಮೇಲಿಂದಮೇಲೆ ಪ್ರಯೋಗಿಸಬೇಕು. ॥ ೯೭ ॥ ಮೊದಲಿನ ಲೇಪವನ್ನು ಧಾವನದಿಂದ ತೆಗೆಯದೆಯಿದ್ದರೆ ಅದರಮೇಲೆ ತೆಳುವಾದ ಲೇಪವನ್ನು ಅನೇಕಸಾರೆ ಮಾಡಬೇಕು. ಕಫಜವಿಸರ್ಪದಲ್ಲಿ ಒಣ ಗಿದ ಲೇಪವನ್ನು ತೆಗೆದು ದಪ್ಪಾದ ಲೇಪವನ್ನು ಮಾಡಬೇಕು. ॥ ೯೮ ॥

ಅವತಾ— ವಿಸರ್ಪರೋಗಿಯ ಅನ್ನಪಾನವನ್ನು ಹೇಳುತ್ತಾರೆ

**ಅನ್ನಪಾನಾನಿ ವಕ್ಷ್ಯಾಮಿ ವಿಸರ್ಪಾಣಾಂ ನಿವೃತ್ತಯೇ ॥**
**ಲಂಘಿತೇಭ್ಯೋ ಹಿತೋ ಮಂಥೋ ರೂಕ್ಷಃ ಸಕ್ಷೌದ್ರಶರ್ಕರಃ ॥೯೯॥**

**ಮಧುರಃ ಕಿಂಚಿದಮ್ಲೋ ವಾ ದಾಡಿಮಾಮಲಕಾನ್ವಿತಃ ॥**
**ಸಪರೂಷಕಮೃದ್ವೀಕಃ ಸಖರ್ಜೂರಃ ಶೃತಾಂಬುನಾ ॥೧೦೦॥**

**ತರ್ಪಣೈರ್ಯವಶಾಲೀನಾಂ ಸಸ್ನೇಹಾ ಚಾವಲೇಹಿಕಾ ॥**
**ಜೀರ್ಣೇ ಪುರಾಣಶಾಲೀನಾಂ ಯೂಷೈರ್ಭುಂಜೀತ ಭೋಜನಮ್ ॥೧೦೧॥**

**ಮುದ್ಗಾನ್ ಮಸೂರಾಂಶ್ಚಣಕಾನ್ ಯೂಷಾರ್ಥಮುಪಕಲ್ಪಯೇತ್**
**ಅನಮ್ಲಾನ್ ದಾಡಿಮಾಮ್ಲಾನ್ವಾ ಪಟೋಲಾಮಲಕೈಃಸಹ ॥೧೦೨॥**

ಜಾಂಗಲಾನಾಞ್ಚ ಮಾಂಸಾನಾಂ ರಸಾಂಸ್ತಸ್ಯೋಪಕಲ್ಪಯೇತ್॥
ರೂಕ್ಷಾನ್‌ಪರೂಷಕದ್ರಾಕ್ಷಾದಾಡಿಮಾಮಲಕಾನ್ವಿತಾನ್ ॥೧೦೩॥
ರಕ್ತಾಃ ಶ್ವೇತಾ ಮಹಾಹ್ವಾಶ್ಚ ಶಾಲಯಃ ಷಷ್ಟಿಕೈಃ ಸಹ॥
ಭೋಜನಾರ್ಥೇ ಪ್ರಶಸ್ಯಂತೇ ಪುರಾಣಾಃ ಸುಪರಿಪ್ಲುತಾಃ ॥ ೧೦೪ ॥
ಯವಗೋಧೂಮಶಾಲೀನಾಂ ಸಾತ್ಮ್ಯಮೇವ ಪ್ರದಾಪಯೇತ್ ॥
ಯೇಷಾಂ ನಾತ್ಯುಚಿತಃ ಶಾಲಿರ್ನರಾ ಯೇ ಚ ಕಫಾದಿಕಾಃ ॥ ೧೦೫ ॥
ವಿದಾಹೀನ್ಯನ್ನಪಾನಾನಿ ವಿರುದ್ಧಂ ಸ್ವಪನಂ ದಿವಾ ॥
ಕ್ರೋಧವ್ಯಾಯಾಮಸೂರ್ಯಾಗ್ನಿಪ್ರವಾತಾಂಶ್ಚ ವಿವರ್ಜಯೇತ್
॥ ೧೦೬ ॥

**ಅರ್ಥ—** ವಿಸರ್ಪದ ನಾಶಕ್ಕಾಗಿ ಅನ್ನಪಾನಗಳನ್ನು ಹೇಳುತ್ತೇವೆ. ಲಂಘನ ಮಾಡಿಸಿ ಸ್ನೇಹ ಹಾಕದ ಜೇನು ಸಕ್ಕರೆ ಕೂಡಿಸಿದ ಸಕ್ತುವಿನ ಮಂಥವನ್ನು ಕೊಡಬೇಕು. ॥ ೯೯ ॥ ಅದರಂತೆ ಮಧುರ ದ್ರವ್ಯಗಳಿಂದ ಮಾಡಿದ ಅಥವಾ ದಾಳಿಂಬನೆಲ್ಲಿಗಳನ್ನು ಹಾಕಿ ಸ್ವಲ್ಪ ಹುಳಿಮಾಡಿದ ಮಂಥವನ್ನು ಕೊಡಬೇಕು. ಪರೂಷಕ (ಧಡ್ಸಾಲಹಣ್ಣು) ದ್ರಾಕ್ಷೆ ಖರ್ಜೂರಗಳ ಚೂರ್ಣಹಾಕಿದ ಸಕ್ತು ಸಿಕ್ತುವಿನಮಂಥವನ್ನು ಕೊಡಬೇಕು. ॥ ೧೦೦ ॥ ಜವೆ ಮತ್ತು ಅಕ್ಕಿಗಳಿಂದ ಮಾಡಿದ ಸಕ್ತುಗಳಲ್ಲಿ ತುಪ್ಪಹಾಕಿ ನೆಕ್ಕಬೇಕು. ಅದು ಜೀರ್ಣವಾಗಲು ಹಳೇಅಕ್ಕಿಯ ಅನ್ನವನ್ನು ಕಟ್ಟಿನೊಡನೆ ತಿನ್ನಬೇಕು. ॥ ೧೦೧ ॥ ಹುಳಿ ಇಲ್ಲದ ಅಥವಾ ದಾಳಿಂಬಹಾಕಿ ಹುಳಿಮಾಡಿದ ಹೆಸರು ಚೆನ್ನಂಗಿ ಕಡ್ಲೆಗಳ ಕಟ್ಟುಗಳನ್ನು ಕಹಿಪಡವಲ ನೆಲ್ಲಿಗಳೊಡನೆ ತಕ್ಕೊಳ್ಳಬೇಕು. ॥ ೧೦೨ ॥ ಜಾಂಗಲಪ್ರಾಣಿಗಳ ಮಾಂಸರಸಗಳನ್ನು ಪರೂಷಕ (ಧಡಸಲ ಹಣ್ಣು) ದ್ರಾಕ್ಷೆ ದಾಳಿಂಬ ನೆಲ್ಲಿಗಳನ್ನು ಕೂಡಿಸಿ ತುಪ್ಪಹಾಕದೆ ಕೊಡಬೇಕು. ॥ ೧೦೩ ॥ ಸಾಕಷ್ಟು ನೀರುಹಾಕಿ ಕುದಿಸಿದ ಹಳೆಯವಾದ ಕೆಂಪು ಬಿಳೀ ದೊಡ್ಡಅಕ್ಕಿ ಷಷ್ಟಿಕಅಕ್ಕಿಗಳು ಊಟಕ್ಕೆ ಪ್ರಶಸ್ತವಾಗಿವೆ. ॥ ೧೦೪ ॥ ಯಾರಿಗೆ ಅಕ್ಕಿಯು ಯೋಗ್ಯವಾಗಿಲ್ಲವೋ ಮತ್ತು ಯಾರಲ್ಲಿ ಕಫವು ಹೆಚ್ಚಿದೆಯೋ ಅವರಿಗೆ ಜವೆ, ಗೋದಿ, ಅಕ್ಕಿಗಳಲ್ಲಿ ಯಾತರ ಅಭ್ಯಾಸವಿರುವದೋ ಅದನ್ನು ಕೊಡಬೇಕು. ॥ ೧೦೫ ॥ ವಿದಾಹಿ ಅನ್ನಪಾನಗಳನ್ನು ವಿರುದ್ಧ ಆಹಾರವನ್ನು ಹಗಲು ನಿದ್ದೆಯನ್ನು, ಸಿಟ್ಟು, ವ್ಯಾಯಾಮ, ಬಿಸಲು ಬೆಂಕಿ, ಬಿರುಗಾಳಿಗಳನ್ನು ಸೇವಿಸಬಾರದು. ॥ ೧೦೬ ॥

ದೋಷಭೇದದಿಂದ ಚಿಕಿತ್ಸಾಭೇದವನ್ನು ಹೇಳುತ್ತಾರೆ—

ಕುರ್ಯಾಚ್ಚಿಕಿತ್ಸಿತಾದಸ್ಮಾಚ್ಛೀತಪ್ರಾಯಾಣಿಪೈತ್ತಿಕೇ ||
ರೂಕ್ಷಪ್ರಾಯಾಣಿಕಫಜೇಸ್ನೈಹಿಕಾನ್ಯನಿಲಾತ್ಮಕೇ ||೧೦೭||
ವಾತಪಿತ್ತಪ್ರಶಮನಮಗ್ನಿವೀಸರ್ಪಿಣೇಹಿತಮ್ ||
ಕಫಪಿತ್ತಪ್ರಶಮನಂಪ್ರಾಯಃಕರ್ದಮಸಂಜ್ಞಕೇ ||೧೦೮||

**ಅರ್ಥ—** ಪಿತ್ತಾಧಿಕದಲ್ಲಿ ಶೀತಬಹುಲವಾದ, ಕಫಾಧಿಕದಲ್ಲಿ ರೂಕ್ಷಬಹುಲವಾದ, ವಾತಾಧಿಕದಲ್ಲಿ ಸ್ನಿಗ್ಧಬಹುಲವಾದ ಅನ್ನಪಾನಾದಿಗಳನ್ನು ಕೊಡಬೇಕು. ||೧೦೭|| ಅಗ್ನಿವಿಸರ್ಪಕ್ಕೆ ವಾತಪಿತ್ತಶಾಮಕ, ಕರ್ದಮವಿಸರ್ಪಕ್ಕೆ, ಕಫಪಿತ್ತನಾಶಕ ಚಿಕಿತ್ಸೆಯು ಪ್ರಾಯಃ ಹಿತಕರವಿರುತ್ತದೆ. ||೧೦೮||

ಗ್ರಂಥಿವಿಸರ್ಪದ ಚಿಕಿತ್ಸೆಯನ್ನು ಹೇಳುತ್ತಾರೆ—

ಶಕ್ತಪಿತ್ತೋಲ್ಬಣಂ ಜ್ಞಾತ್ವಾ ಗ್ರಂಥಿವೀಸರ್ಪಮಾದಿತಃ ||
ವಿರೂಕ್ಷಣೈರ್ಲಂಘನೈಶ್ಚ ಪ್ರದೇಹೈಃ ಪಾಂಚವಲ್ಕಲೈಃ ||೧೦೯||
ಸಿರಾಮೋಕ್ಷೈರ್ಜಲೌಕಾಭಿರ್ವಮನೈಃ ಸವಿರೇಚನೈಃ ||
ಘೃತೈಃ ಕಷಾಯತಿಕ್ತೈಶ್ಚ ಕಾಲಜ್ಞಃ ಸಮುಪಾಚರೇತ್ ||೧೧೦||
ಊರ್ಧ್ವಂ ಚಾಧಶ್ಚ ಶುದ್ಧಾಯ ರಕ್ತೇ ಚಾಪ್ಯವಸೇಚಿತೇ ||
ವಾತಶ್ಲೇಷ್ಮಹರಂ ಕರ್ಮ ಗ್ರಂಥಿವೀಸರ್ಪಿಣೇ ಹಿತಮ್ ||೧೧೧||
ಉತ್ಕಾರಿಕಾಭಿರುಷ್ಣಾಭಿರುಪನಾಹಃ ಪ್ರಶಸ್ಯತೇ ||
ಸ್ನಿಗ್ಧಾಭಿರ್ವೇಶವಾರೈರ್ವಾ ಗ್ರಂಥಿವೀಸರ್ಪಶೂಲಿನಾಮ್ ||೧೧೨||
ದಶಮೂಲೋಪಸಿದ್ಧೇನ ತೈಲೇನೋಷ್ಣೇನ ಸೇಚಯೇತ್ ||
ಕುಷ್ಠತೈಲೇನ ಚೋಷ್ಣೇನ ಪಕ್ವಕ್ಷಾರಯುತೇನವಾ ||೧೧೩||
ಗೋಮೂತ್ರೈಃ ಪತ್ರನಿರ್ಯೂಹೈಃ ರೂಕ್ಷೋಷ್ಣೈಃ ಪರಿಷೇಚಯೇತ್
ಸುಖೋಷ್ಣಯಾ ಪ್ರದಿಹ್ಯಾದ್ವಾ ಪಿಷ್ಟಯಾ ಚಾಶ್ವಗಂಧಯಾ||೧೧೪||
ಶುಷ್ಕಮೂಲಕಕಲ್ಕೇನ ನಕ್ತಮಾಲಸ್ಯ ಚಾಥವಾ ||
ಬಿಭೀತಕಸ್ಯ ವಾ ಗ್ರಂಥಿಂ ಕಲ್ಕೇನೋಷ್ಣೇನ ಲೇಪಯೇತ್ ||೧೧೫||
ಬಲಾಂ ನಾಗಬಲಾಂ ಪಥ್ಯಾಂ ಭೂರ್ಜಗ್ರಂಥಿಂ ಬಿಭೀತಕಮ್ ||
ವಂಶಪತ್ರಾಣ್ಯಗ್ನಿಮಂಥಂ ದದ್ಯಾದ್ ಗ್ರಂಥಿವಿಲೇಪನಮ್ ||೧೧೬||

ದಂತೀಚಿತ್ರಕಮೂಲತ್ವಕ್ ಸುಧಾರ್ಕಪಯಸೀ ಗುಡಃ ||
ಭಲ್ಲಾತಕಾಸ್ಥಿ ಕಾಸೀಸಂ ಲೇಪೋ ಭಿಂದ್ಯಾಚ್ಛಿಲಾಮಪಿ ||೧೧೭||

ಬಹಿರ್ಮಾರ್ಗಾಶ್ರಿತಂ ಗ್ರಂಥಿಂ ಕಿಂ ಪುನಃ ಕಫಸಂಭವಮ್ ||
ದೀರ್ಘಕಾಲಸ್ಥಿತಗ್ರಂಥಿಂ ಭಿಂದ್ಯಾದ್ ವಾ ಭೇಷಜೈರಿಮೈಃ ||೧೧೮||

ಮೂಲಕಾನಾಂ ಕುಲತ್ಥಾನಾಂ ಯೂಷೈಃ ಸಕ್ಷಾರದಾಡಿಮೈಃ ||
ಗೋಧೂಮಾನ್ನೈರ್ಯವಾನ್ನೈಶ್ಚ ಸಸೀಧುಮಧುಶರ್ಕರೈಃ ||೧೧೯||

ಸಕ್ಷೌದ್ರೈರ್ವಾರುಣೀಮಂಡೈರ್ಮಾತುಲುಂಗರಸಾನ್ವಿತೈಃ ||
ಫಲಾಯಾಃ ಪ್ರಯೋಗೈಶ್ಚ ಪಿಪ್ಪಲೀಕ್ಷೌದ್ರಸಂಯುತೈಃ ||೧೨೦||

ದೇವದಾರುಪಟುವ್ಯೋಷಪ್ರಯೋಗೈರ್ಗೈರಿಕಸ್ಯ ಚ ||
ಮುಸ್ತಭಲ್ಲಾತಸಕ್ತೂನಾಂ ಪ್ರಯೋಗೈರ್ಮಾಕ್ಷಿಕಸ್ಯ ಚ ||೧೨೧||

ಧೂಮೈರ್ವಿರೇಕೈಃ ಶಿರಸಃ ಪೂರ್ವೋಕ್ತೈರ್ಗುಲ್ಮಭೇದನೈಃ ||
ಅಯೋಲವಣಪಾಷಾಣಹೇಮತಪ್ತಪ್ರಪೀಡನೈಃ ||೧೨೨||

ಕ್ರಿಯಾಭಿರಾಭಿಃ ಸಿದ್ಧಾಭಿರ್ವಿವಿಧಾಭಿರ್ಬಲೀ ಸ್ಥಿತಃ ||
ಗ್ರಂಥಿಃ ಪಾಷಾಣಕಠಿನೋ ಯದಿ ನೈವೋಪಶಾಮ್ಯತಿ ||೧೨೩||

ಅಥಾಸ್ಯ ದಾಹಃ ಕ್ಷಾರೇಣ ಶರೈರ್ಹೇಮ್ನಾಥವಾ ಹಿತಃ ||
ಪಾಕಿಭಿಃ ಪಾಚಯಿತ್ವಾ ವಾ ಪಾಟಯಿತ್ವಾ ಸಮುದ್ಧರೇತ್ ||೧೨೪||

ಮೋಕ್ಷಯೇದ್ ಬಹುಶಶ್ಚಾಸ್ಯ ರಕ್ತಮುತ್ಕ್ಲೇಶಮಾಗತಮ್ ||
ಪುನರಸ್ಯ ಹೃತೇ ರಕ್ತೇ ವಾತಶ್ಲೇಷ್ಮಜಿದೌಷಧಮ್ ||೧೨೫||

ಧೂಮೋ ವಿರೇಕಃ ಶಿರಸಃ ಸ್ವೇದನಂ ಪರಿಮರ್ದನಮ್ ||
ಅಪ್ರಶಾಮ್ಯತಿ ದೋಷೇ ಚ ಪಾಚನಂ ವಾ ಪ್ರಶಸ್ಯತೇ ||೧೨೬||

ಪ್ರಕ್ಲಿನ್ನಂ ದಾಹಪಾಕಾಭ್ಯಾಂ ಭಿಷಕ್ ಶೋಧನರೋಪಣೈಃ ||
ಬಾಹ್ಯೈಶ್ಚಾಭ್ಯಂತರೈರ್ವಾಪಿ ವ್ರಣವತ್ ಸಮುಪಾಚರೇತ್ ||೧೨೭||

ಕಂಪಿಲ್ಲಿಕವಿಡಂಗಾನಿ ತ್ವಚೋ ದಾರ್ವ್ಯಾಸ್ತಥೈವ ಚ ||
ಪಿಷ್ಟ್ವಾ ತೈಲಂ ವಿಪಕ್ತವ್ಯಂ ಗ್ರಂಥಿವ್ರಣಚಿಕಿತ್ಸಿತಮ್ ||೧೨೮||

ದ್ವಿವ್ರಣೀಯೋಪದಿಷ್ಟೇನ ಕರ್ಮಣಾವಾಪ್ಯುಪಾಚರೇತ್ ||
ದೇಶಕಾಲವಿಭಾಗಜ್ಞೋ ವ್ರಣಾನ್ ವೀಸರ್ಪಜಾನ್ ಬುಧಃ ||೧೨೯||

**ಅರ್ಥ—** ಗ್ರಂಥಿವಿಸರ್ಪದಲ್ಲಿ ರಕ್ತಪಿತ್ತಗಳ ಆಧಿಕ್ಯವಿದ್ದರೆ ಕಾಲಜ್ಞನಾದ ವೈದ್ಯನು ರುಕ್ಷಣ, ಲಂಘನ, ಪಂಚವಲ್ಕಲಗಳ ಲೇಪ ||೧೯|| ರಕ್ತಮೋಕ್ಷ, ಜಿಗಳೆ ಹಚ್ಚೋಣ, ವಮನ ವಿರೇಚನ, ಕಹಿಒಗರು ಔಷಧಗಳ ಕಷಾಯಪಾನಗಳನ್ನು ಮಾಡಿಸಬೇಕು. ||೧೧೦|| ಹೀಗೆ ಮೇಲು ಮತ್ತು ಕೆಳಭಾಗಗಳು ಶುದ್ಧವಾಗಲು, ದುಷ್ಟರಕ್ತವು ಹೋಗಲು, ಗ್ರಂಥಿವಿಸರ್ಪಕ್ಕೆ ವಾತಕಫನಾಶಕ ಚಿಕಿತ್ಸೆಯನ್ನು ಮಾಡಬೇಕು. ||೧೧೧|| ಗ್ರಂಥಿವಿಸರ್ಪದಲ್ಲಿ ಶೂಲವಿದ್ದರೆ, ಸ್ನಿಗ್ಧ, ಉಷ್ಣವಾದ ಗೋದೀಹಿಟ್ಟು ತುಪ್ಪ ಹಾಲು ಹಾಕಿ ಮಾಡಿದ ರೊಟ್ಟಿಗಳಿಂದ ಉಪನಾಹ (ಪೋಟೀಸ) ಮಾಡಬೇಕು. ಅದರಂತೆ ಕುಟ್ಟಿದ ಮಾಂಸದ ಉಪನಾಹವನ್ನು ಮಾಡಬೇಕು. ||೧೧೨|| ಅಥವಾ ದಶಮೂಲ ಕಷಾಯದಿಂದ ಸಿದ್ಧಮಾಡಿದ ಉಷ್ಣತೈಲದಿಂದ ಅಥವಾ ಷಡ್ಗುಣ ಜಲದಲ್ಲಿ ಸ್ರಾವಿತವಾದ ಕ್ಷಾರದಿಂದಕೂಡಿದ, ಉಷ್ಣಕುಷ್ಠ ತೈಲದಿಂದ||೧೧೩|| ಅಥವಾ ಗೋಮೂತ್ರದಿಂದ ಅಥವಾ ರುಕ್ಷ ಉಷ್ಣವಾದ ಪತ್ರಗಳ ಕಷಾಯದಿಂದ ಸೇಚನಮಾಡಬೇಕು. ಅಥವಾ ಹಿರೇಮದ್ದಿನಬೇರನ್ನು ನೀರಿನಲ್ಲಿತೇದು ಬಿಸಿಮಾಡಿ ಲೇಪಮಾಡಬೇಕು.೧೧೪|| ಅಥವಾ ಒಣಮೂಲಂಗಿಯ ಕಲ್ಕದಿಂದ, ಹುಲಗಲ ಕಲ್ಕದಿಂದ ಅಥವಾ ತಾರೀಕಾಯಿಯ ಉಷ್ಣ ಕಲ್ಕದಿಂದ ಗ್ರಂಥಿಯನ್ನು ಲೇಪಿಸಬೇಕು. ||೧೧೫|| ಕಳ್ಳಿಂಗಡ್ಲೆ, ನಾಗಬಲಾ, ಅಣಲೆ, ಭೂರ್ಜಗ್ರಂಥಿ (ಭೂರ್ಜಗಿಡದ ಗಂಟು) ತಾರೀಕಾಯಿ, ಬಿದರಿನ ಎಲೆ, (ಹೂಸಲಕ್ಕಿ) ಇವುಗಳ ಕಲ್ಕದಿಂದ ಗ್ರಂಥಿವಿಸರ್ಪಕ್ಕೆ ಲೇಪ ಮಾಡಬೇಕು. ||೧೧೬|| ದಂತೀ ಮತ್ತು ಚಿತ್ರಕಮೂಲದ ತೋಟೆ, ಮೂರೇಣಿನ ಕಳ್ಳಿ, ಎಕ್ಕೆ ಇವುಗಳ ಹಾಲು ಬೆಲ್ಲ, ಕೇರಿನಮಜ್ಜ, ಹಿರೇಕಸ, ಇವುಗಳ ಲೇಪವು ಕಲ್ಲನ್ನು ಕೂಡ ಒಡೆಯುವದು. ಅಂದಮೇಲೆ ಹೊರಮುಗ್ಗಲಿರುವ ಕಫಜ ಗ್ರಂಥಿಯನ್ನು ಒಡಿಯುವದೆಂದು ಬೇರೆ ಹೇಳಬೇಕಾಗಿಲ್ಲ. ಅಥವಾ ಮುಂದೆ ಹೇಳಿದ ಈ ಔಷಧಗಳಿಂದ ಬಹಳ ದಿವಸದ ಗಂಟನ್ನು ಒಡಿಯಬೇಕು ||೧೧೮|| ೧ ಜವಖಾರ ಮತ್ತು ದಾಳಿಂಬ ರಸ ಕೂಡಿಸಿದ ಮೂಲಂಗಿ, ಹುರುಳಿಗಳ ಕಟ್ಟುಗಳಿಂದ ೨ ಕಬ್ಬಿನ ಮದ್ಯ ಜೇನು ಸಕ್ಕರೆಗಳನ್ನು ಹಾಕಿ ಕುದಿಸಿದ ಗೋದಿ ಮತ್ತು ಜವೆಯ ಅನ್ನಗಳಿಂದಲೂ ||೧೧೯|| ೩ ಮಾಳುಂಗದ ರಸ ಮತ್ತು ಜೇನು ಹಾಕಿದ ಮದ್ಯದ ತಿಳಿಯಿಂದಲೂ, ೪ ಹಿಪ್ಪಲಿ ಮತ್ತು ಜೇನು ಕೂಡಿಸಿದ ತ್ರಿಫಳಾ ಕಷಾಯದಿಂದಲೂ ||೧೨೦|| ೫ ದೇವದಾರು, ಸೈಂಧವ, ತ್ರಿಕಟು ಮತ್ತು ಕಾವಿಗಳ ಕಲ್ಕದಿಂದಲೂ, ೬ ಜೇಕು, ಕೇರು, ಸಕ್ತು, ಜೇನುಗಳ ಪ್ರಯೋಗಗಳಿಂದಲೂ

ಹಿಂದೆ ಹೇಳಿದ ಧೂಮಪಾನ, ಶಿರೋವಿರೇಚನ, ಗುಲ್ಮಭೇದಕ ಔಷಧ ಗಳಿಂದಲೂ ಲೋಹ, ಉಪ್ಪು, ಕಲ್ಲು, ಭಂಗಾರಗಳನ್ನು ಕಾಸಿ ಒತ್ತುವದ ರಿಂದಲೂ, ಒಡಿಯಬೇಕು. ||೧೨೨|| ಈ ವಿವಿಧ ಅನುಭೂತಚಿಕಿತ್ಸೆಗಳಿಂದಲೂ ಕಲ್ಲಿನಂತೆ ಗಟ್ಟಿಯಾದ ಬಲಿಷ್ಠವಾಗಿ ಕೂತ ಗಂಟು ಕರಗದಿದ್ದರೆ ||೧೨೩|| ಕ್ಷಾರದಿಂದ ಅಥವಾ ಬಾಣಗಳಿಂದ ಅಥವಾ ಭಂಗಾರದಿಂದ ಸುಡಬೇಕು. ಅಥವಾ ಪಕ್ವಮಾಡುವ ಔಷಧಗಳಿಂದ ಪಕ್ವಮಾಡಿ ಶಸ್ತ್ರದಿಂದ ಶೀಳಿ ತೆಗೆಯ ಬೇಕು. ||೧೨೪|| ಬಂದ ಎಲ್ಲ ರಕ್ತವನ್ನು ಆಗಾಗ್ಗೆ ತೆಗೆಯಬೇಕು. ಅದರ ರಕ್ತವನ್ನೆಲ್ಲ ತೆಗೆದಮೇಲೆ ವಾತಕಫನಾಶಕ ಔಷಧ ಕೊಡಬೇಕು. ||೧೨೫|| ಧೂಮ, ಶಿರೋವಿರೇಚನ, ಕಾಸೋಣ, ಒತ್ತೋಣಗಳನ್ನು ಮಾಡಬೇಕು. ಇದರಿಂದ ದೋಷವು ಶಾಂತವಾಗದಿದ್ದರೆ, ಗಂಟನ್ನು ಪಕ್ವ ಮಾಡಬೇಕು. ||೧೨೬|| ದಾಹಪಾಕಗಳಿಂದ ಗಂಟು ಒಡೆದು ಸೋರಲು ವ್ರಣದಂತೆ ಒಳ ಹೊರಗೆ ಶೋಧನ ರೋಪಣಗಳನ್ನು ಮಾಡಬೇಕು. ||೧೨೭|| ಕಪಿಲೆ, ವಾವ ಡಿಂಗ ಮರಅರಿಷಿಣದ ತೋಟಿಗಳ ಕಲ್ಕ | ಹಾಕಿ ೪ ಪಾಲು ನೀರಿನಲ್ಲಿ ತೈಲ ವನ್ನು ಸಿದ್ಧಮಾಡಿ ಗ್ರಂಥಿ ವ್ರಣಕ್ಕೆ ಉಪಯೋಗಿಸಬೇಕು. ||೧೨೮|| ಅಥವಾ ದೇಶಕಾಲದ ಭೇದವನ್ನು ಬಲ್ಲ ವೈದ್ಯನು 'ದ್ವಿವ್ರಣೀಯ' ಅಧ್ಯಾಯದಲ್ಲಿ ಹೇಳಿದ ಚಿಕಿತ್ಸೆಯನ್ನು ವಿಸರ್ಪದ ವ್ರಣಕ್ಕೆ ಮಾಡಬೇಕು. ||೧೨೯||

ಗಲಿಗಂಡದ ಚಿಕಿತ್ಸೆಯನ್ನು ಹೇಳುತ್ತಾರೆ—

**ಯ ಏವ ವಿಧಿರುದ್ದಿಷ್ಟೋ ಗ್ರಂಥೀನಾಂ ವಿನಿವೃತ್ತಯೇ ||**
**ಸ ಏವ ಗಲಗಂಡಾನಾಂ ಕಫಜಾನಾಂ ನಿವೃತ್ತಯೇ ||೧೩೦||**

**ಗಲಗಂಡಾಸ್ತು ವಾತೋತ್ಥಾ ಯೇ ಕಫಾನುಬಲಾ ನೃಣಾಮ್ ||**
**ಕ್ಷತಕ್ಷೀರಕಷಾಯಾಣಾಮಭ್ಯಾಸಾನ್ನ ಭವನ್ತಿ ತೇ ||೧೩೧||**

**ಅರ್ಥ—** ಗ್ರಂಥಿಗಳ ನಾಶಕ್ಕಾಗಿ ಹೇಳಿದ ವಿಧಿಯೇ ಕಫಜ ಗಲಗಂಡ ಗಳ ನಾಶಕ್ಕಾಗಿಯೂ ಉಪಯುಕ್ತವಾಗಿದೆ. ||೧೩೦|| ಕಫಾನುಬಂಧವುಳ್ಳ ವಾತಜ ಗಲಗಂಡಗಳು ಘೃತ, ಕ್ಷೀರ, ಕಷಾಯಗಳನ್ನು ಆಗಾಗ್ಗೆ ತಕ್ಕೊಳ್ಳು ತ್ತಿದ್ದರೆ ನಿಲ್ಲುವದಿಲ್ಲ. ||೧೩೧||

**ಯಾನೀಹ ಕರ್ಮಾಣ್ಯುಕ್ತಾನಿ ವಿಸರ್ಪಾಣಾಂ ನಿವೃತ್ತಯೇ ||**
**ಏಕತಸ್ತಾನಿ ಸರ್ವಾಣಿ ರಕ್ತಮೋಕ್ಷಣಮೇಕತಃ ||೧೩೨||**

**ವಿಸರ್ಪೋ ನಹ್ಯಸಂಸ್ಪೃಷ್ಟೋ ರಕ್ತಪಿತ್ತೇನ ಲಕ್ಷ್ಯತೇ ||**
**ತಸ್ಮಾತ್ ಸಾಧಾರಣಂ ಸರ್ವಮೇತದುಕ್ತಂ ಚಿಕಿತ್ಸಿತಮ್ || ೧೩೩ ||**
**ವಿಶೇಷದೋಷವೈಶೇಷ್ಯಾನ್ನ ಚ ನೋಕ್ತಃ ಸಮಾಸತಃ ||**
**ಸಮಾಸವ್ಯಾಸನಿರ್ದೇಶೈರುಕ್ತಂ ಚೈತತ್ ಚಿಕಿತ್ಸಿತಮ್ || ೧೩೪ ||**

**ಅರ್ಥ—** ವಿಸರ್ಪನಾಶಕ್ಕಾಗಿ ಹೇಳಿದ ಎಲ್ಲ ಚಿಕಿತ್ಸೆಗಳು ಒಂದುಕಡೆಗೆ ರಕ್ತಮೋಕ್ಷವು ಒಂದುಕಡೆಗೆ || ೧೩೨ || (ಅಂದರೆ ರಕ್ತಮೋಕ್ಷವು ಮುಖ್ಯ ಚಿಕಿತ್ಸೆಯು) ರಕ್ತಪಿತ್ತಗಳು ಕೂಡದೆ ವಿಸರ್ಪವು ಉಂಟಾದದ್ದು ಕಂಡುಬರುವದಿಲ್ಲ ಆದ್ದರಿಂದ ವಾತ, ಪಿತ್ತ, ಕಫ, ರಕ್ತ ಇವುಗಳಿಗೆ ಸಾಮಾನ್ಯವಾದ ಚಿಕಿತ್ಸೆಯು ಹೇಳಲ್ಪಟ್ಟಿತು || ೧೩೩ || ವಿಶಿಷ್ಟ ದೋಷಗಳು ಇರುವದರಿಂದ ಭಿನ್ನವಾಗಿರುವದೇ ಹೇಳದೆ ಈ ಪ್ರಕಾರ ಸಂಕ್ಷೇಪ ವಿಸ್ತಾರಗಳಿಂದ ಈ ಚಿಕಿತ್ಸೆಯು ಹೇಳಲ್ಪಟ್ಟಿತು || ೧೩೪ ||

**ತತ್ರಶ್ಲೋಕಾಃ**

**ನಿರುಕ್ತಾ ನಾಮಭೇದಾಶ್ಚ ದೋಷಾ ದೂಷ್ಯಾಶ್ಚ ಹೇತವಃ ||**
**ಆಶ್ರಯೋ ಮಾರ್ಗತಶ್ಚೈವ ವಿಸರ್ಪಗುರುಲಾಘವಮ್ || ೧೩೫ ||**
**ಲಿಂಗಾನ್ಯುಪದ್ರವಾ ಯೇಚ ಯಲ್ಲಕ್ಷಣ ಉಪದ್ರವಃ ||**
**ಸಾಧ್ಯತ್ವಂ ನ ಚ ಸಾಧ್ಯತ್ವಂ ಸಾಧನಂಚ ಯಥಾಕ್ರಮಮ್ || ೧೩೬ ||**
**ಇತಿ ಪಿಪ್ರಕ್ಷವೇ ಸಿದ್ಧಮಗ್ನಿವೇಶಾಯ ಧೀಮತೇ ||**
**ಪುನರ್ವಸುರುವಾಚೇದಂ ವೀಸರ್ಪಾಣಾಂ ಚಿಕಿತ್ಸಿತಮ್ || ೧೩೭ ||**

**ಅರ್ಥ—** ಬುದ್ಧಿವಂತನಾದ ಕೇಳಲಿಚ್ಛಿಸುವ ಅಗ್ನಿವೇಶನಿಗೆ ಪುನರ್ವಸು ಋಷಿಗಳು ವಿಸರ್ಪದ ನಿರುಕ್ತಿ ಅವರ ಬೇರೆಬೇರೆ ಹೆಸರು, ದೋಷ, ದೂಷ್ಯ, ಕಾರಣ, ಸ್ಥಾನ ಅವರ ಮಾರ್ಗ ಮತ್ತು ಅವುಗಳ ತಾರತಮ್ಯ || ೧೩೫ || ಲಕ್ಷಣ ಮತ್ತು ಉಪದ್ರವ, ಉಪದ್ರವಗಳ ಲಕ್ಷಣ, ವಿಸರ್ಪಗಳ ಸಾಧ್ಯಾಸಾಧ್ಯ ಭೇದ, ಅವುಗಳ ಅನುಭೂತ ಚಿಕಿತ್ಸೆ ಇವನ್ನೆಲ್ಲ ಕ್ರಮದಿಂದ ಈ ವಿಸರ್ಪಚಿಕಿತ್ಸಾಧ್ಯಾಯದಲ್ಲಿ ಹೇಳಿದರು. || ೧೩೬ ||

**ಇತ್ಯಗ್ನಿವೇಶಕೃತೇ ತಂತ್ರೇ ದೃಢಬಲಪ್ರತಿಸಂಸ್ಕೃತೇ ಚಿಕಿತ್ಸಿತಸ್ಥಾನೇ ವಿಸರ್ಪಚಿಕಿತ್ಸಿತಂ ನಾಮ ಏಕವಿಂಶೋಧ್ಯಾಯಃ**

ಶ್ರೀ ಮದಾದ್ಯ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ **ಚರಕ 'ಚಿಕಿತ್ಸಾ ಬೋಧಿನಿ'** ಎಂಬ ಚರಕ ಸಂಹಿತೆಯ ಟಿಪ್ಪಣಿಯಲ್ಲಿ **ವಿಸರ್ಪಚಿಕಿತ್ಸೆ** ಎಂಬ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.

# ೨೨ ನೆಯ ಅಧ್ಯಾಯವು

## ತೃಷ್ಣಾ ಚಿಕಿತ್ಸೆ

ವಿಸರ್ಪದಿಂದ ತೃಷ್ಣೆಯೆಂಬ ಉಪದ್ರವವಾಗುವದರಿಂದ ವಿಸರ್ಪಚಿಕಿತ್ಸೆಯ ನಂತರ ತಷ್ಣಾಚಿಕಿತ್ಸೆಯನ್ನು ಹೇಳುತ್ತಾರೆ—

**ಅಥಾತಸ್ತೃಷ್ಣಾಚಿಕಿತ್ಸಿತಂ ವ್ಯಾಖ್ಯಾಸ್ಯಾಮಃ**

**ಅರ್ಥ—** ಇನ್ನುಮೇಲೆ ತೃಷ್ಣಾ ಚಿಕಿತ್ಸೆಯನ್ನು ಹೇಳುವೆವು.

**ಇತಿಹ ಸ್ಮಾಹ ಭಗವಾನಾತ್ರೇಯಃ** ॥ ೧ ॥

**ಅರ್ಥ—** ಪೂಜ್ಯರಾದ ಆತ್ರೇಯ ಋಷಿಗಳು ಹೀಗೆ ಹೇಳಿದರು.

**ಜ್ಞಾನಪ್ರಶಮತಪೋಭಿಃ ಖ್ಯಾತೋಽತ್ರಿಸುತೋಜಗದ್ಧಿತೇಽಭಿರತಃ ॥**
**ತೃಷ್ಣಾನಾಂ ಪ್ರಶಮಾರ್ಥಂ ಚಿಕಿತ್ಸಿತಂ ಪ್ರಾಹ ಪಂಚಾನಾಮ್ ॥ ೨ ॥**

**ಅರ್ಥ—** ಜಗತ್ತಿನ ಕಲ್ಯಾಣದಲ್ಲಿ ತೊಡಗಿದ ಶಾಂತಿ ತಪಸ್ಸುಗಳಿಂದ ಪ್ರಖ್ಯಾತರಾದ ಆತ್ರೇಯಋಷಿಗಳು ಐದೂ ತೃಷ್ಣಾರೋಗಗಳ ಶಾಂತಿಗಾಗಿ ಅದರ ಚಿಕಿತ್ಸೆಯನ್ನು ಹೇಳುತ್ತಾರೆ. ॥ ೨ ॥

ತೃಷ್ಣೆಯ ಕಾರಣ ಸಂಪ್ರಾಪ್ತಿಗಳನ್ನು ಹೇಳುತ್ತಾರೆ—

**ಕ್ಷೋಭಾದ್ ಭಯಾಚ್ಛ್ರಮಾದಪಿ ಶೋಕಾತ್ ಕ್ರೋಧಾದ್ ವಿಲಂಘನಾನ್ಮದ್ಯಾತ್ ॥**
**ಕ್ಷಾರಾಮ್ಲಲವಣಕಟುಕೋಷ್ಣರೂಕ್ಷಶುಷ್ಕಾನ್ನಸೇವಾಭಿಃ ॥ ೩ ॥**
**ಧಾತುಕ್ಷಯಗದಕರ್ಷಣವಮನಾದ್ಯತಿಯೋಗಸೂರ್ಯಸಂತಾಪೈಃ ॥**
**ಪಿತ್ತಾನಿಲೌಪ್ರವೃದ್ಧೌ ಸೌಮ್ಯಂ ಧಾತುಂ ವಿಶೋಷಯತಃ ॥ ೪ ॥**

**ರಸವಾಹಿನೀಶ್ಚ ಧಮನೀರ್ಜಿಹ್ವಾಮೂಲಗಲತಾಲುಕಕ್ಲೋಮ್ನಃ ॥**
**ಸಂಶೋಷ್ಯ ನೃಣಾಂ ದೇಹೇ ಕುರುತಸ್ತೃಷ್ಣಾಮತಿಬಲಾಂ ತೌ ॥ ೫ ॥**
**ಪೀತಂ ಪೀತಂ ಹಿ ಜಲಂ ಶೋಷಯತಸ್ತಾವತಿಬಲೌ ನ ಯಾತಿ ಶಮಂ ॥**
**ಘೋರಾ ವ್ಯಾಧಿಕೃಶಾನಾಂ ಪ್ರಭವತ್ಯುಪಸರ್ಗಭೂತಾ ಸಾ ॥ ೬ ॥**

**ಅರ್ಥ—** ಮನಸ್ಸು ಶರೀರಗಳ ಕ್ಷೋಭದಿಂದ ಭಯ, ಶ್ರಮ, ಶೋಕ, ಕ್ರೋಧ, ಲಂಘನ, ಮದ್ಯಗಳಿಂದ, ಕ್ಷಾರ, ಹುಳಿ, ಉಪ್ಪು, ಕಾರ, ಉಷ್ಣ, ರೂಕ್ಷ ಮತ್ತು ಒಣಗಿದ ಅನ್ನಗಳ ಸೇವನೆಗಳಿಂದ ॥ ೩ ॥ ಧಾತುಕ್ಷಯ ರೋಗ ಯಿಂದ ಕೃಶವಾಗೋಣ, ವಮನಾದಿ ಪಂಚಕರ್ಮಗಳ ಅತಿಯೋಗ, ಬಿಸಿಲು ಇವುಗಳಿಂದ ಪಿತ್ತ ವಾತಗಳು ಹೆಚ್ಚಾಗಿ ಸೌಮ್ಯ ಧಾತುಗಳಾದ ಕಫರಸಾದಿ ಗಳನ್ನು ಒಣಗಿಸುವವು. ॥೪॥ ಅವು ರಸವಾಹಕ ಧಮನಿ, ನಾಲಿಗೆಯಮೂಲ ಕಂಠ, ಅಂಗಳ, ಕ್ಲೋಮ ಇವುಗಳನ್ನು ಒಣಗಿಸಿ ಮನುಷ್ಯನ ದೇಹದಲ್ಲಿ ಅತಿ ಪ್ರಬಲವಾದ ತೃಷ್ಣೆಯನ್ನುಂಟುಮಾಡುತ್ತವೆ. ॥೫॥ ಅತಿ ಪ್ರಬಲವಾದ ಅವು ಕುಡಿ ಕುಡಿದಂತೆ ನೀರನ್ನು ಒಣಗಿಸುವವು. ನೀರಡಿಕೆಯು ಶಾಂತವಾಗುವದಿಲ್ಲ ಅದು ವ್ಯಾಧಿಯಿಂದ ಕ್ಷೀಣರಾದವರಿಗೆ ಭಯಂಕರವಾದ ಉಪದ್ರವವಾಗಿ ಕೂಡುತ್ತವೆ. ॥೬॥

ಅದರ ಪೂರ್ವರೂಪವನ್ನು ಹೇಳುತ್ತಾರೆ—

**ಪ್ರಾಗ್ರೂಪಂ ಮುಖಶೋಷಃ ಸ್ವಲಕ್ಷಣಂ ಸರ್ವದಾಂಬುಕಾಮಿತ್ವಮ್ ॥**
**ತೃಷ್ಣಾನಾಂ ಸರ್ವಾಸಾಂ ಲಿಂಗಾನಾಂ ಲಾಘವಮಪಾಯಃ ॥ ೭ ॥**

**ಅರ್ಥ—** ಬಾಯಿ ಒಣಗೋಣ ಇದು ಪೂರ್ವರೂಪವು, ಯಾವಾಗಲೂ ನೀರಿನ ಅಪೇಕ್ಷೆ ಇದು ಅದರ ಲಕ್ಷಣವು ಎಲ್ಲ ಲಕ್ಷಣಗಳು ಕಡಿಮೆಯಾಗೋಣ ಇಮು ಅವುಗಳ ಶಾಂತಿಯ ಲಕ್ಷಣವು. ॥ ೭ ॥

ತೃಷ್ಣಾರೋಗದ ಸಾಮಾನ್ಯ ಲಕ್ಷಣಗಳನ್ನು ಹೇಳುತ್ತಾರೆ—

**ಮುಖಶೋಷಸ್ವರಭೇದಭ್ರಮಸಂತಾಪಪ್ರಲಾಪಸಂಸ್ತಂಭಾನ್ ॥**
**ತಾಲ್ವೋಷ್ಠಕಂಠಜಿಹ್ವಾಕರ್ಕಶತಾಂ ಚಿತ್ತನಾಶಂಚ ॥ ೮ ॥**
**ಜಿಹ್ವಾನಿರ್ಗಮಮರುಚಿಂ ಬಾಧಿರ್ಯಂಮರ್ಮದೂಯನಂಸಾದಮ್॥**
**ತೃಷ್ಣೋದ್ಭೂತಾ ಕುರುತೇ ಪಂಚವಿಧಾ ಲಿಂಗತಃ ಶೃಣು ತಾಃ ॥ ೯ ॥**

**ಅರ್ಥ—** ತೃಷ್ಣಾರೋಗವು ಮುಖಶೋಷ, ಸ್ವರಭೇದ, ಸಂತಾಪ, ಭ್ರಮ, ಪ್ರಲಾಪ, ಕಟಿಯೋಣ, ತಂಗಳು, ತುಟಿ, ಕಂಠ, ನಾಲಿಗೆಗಳಲ್ಲಿ ಕರ್ಕಶತ್ವ ಪಸ್ಮೃತಿ, ॥ ೮ ॥ ನಾಲಿಗೆ ಹೊರಗೆಬೀಳೋಣ, ಅರುಚಿ, ಕಿವುಡುತನ, ಮರ್ಮಗಳಲ್ಲಿ ನೋವು, ನಿತ್ರ್ಯಗಳನ್ನುಂಟುಮಾಡುತ್ತದೆ. ಅದು ಐದುವಿಧವಾಗಿದೆ. ಅವುಗಳ ಲಕ್ಷಣಗಳನ್ನು ಹೇಳುತ್ತೇನೆ ಕೇಳಿರಿ. ॥ ೯ ॥

**ವಾತಜ ತೃಷಾ ರೋಗದ ಲಕ್ಷಣವನ್ನು ಹೇಳುತ್ತಾರೆ—**

**ಅಬ್ಧಾತುಂ ದೇಹಸ್ಯ ಕುಪಿತಃ ಪವನೋ ಯದಾ ವಿಶೋಷಯತಿ ॥**
**ತಸ್ಮಿನ್ ಶುಷ್ಕೇ ಶುಷ್ಯತ್ಯಬಲಸ್ತ್ರೃತ್ಯಥ ವಿಶುಷ್ಯನ್ ॥೧೦॥**

**ನಿದ್ರಾನಾಶಃ ಶಿರಸೋ ಭ್ರಮಸ್ಥಥಾ ಶುಷ್ಕವಿರಸಮುಖತಾ ಚ ॥**
**ಸ್ರೋತೋಽವರೋಧ ಇತಿ ಚ ಸ್ಯಾಲ್ಲಿಂಗಂ ವಾತತೃಷ್ಣಾಯಾಃ ॥೧೧॥**

**ಅರ್ಥ—** ಕುಪಿತವಾದ ವಾತವು ದೇಹದ ಜಲಧಾತುವನ್ನು ಒಣಗಿಸುವದು. ಅದು ಒಣಗಲು, ಅವನು ಒಣಗುವನು ಒಣಗಿದಂತೆ ಅಶಕ್ತನಾಗಿ ನೀರಡಿಸಹತ್ತುವನು ॥೧॥ ನಿದ್ರಾನಾಶ, ತಲೆ ತಿರುಗೋಣ ಬಾಯಿ ಹೊಲಸು ಮತ್ತು ಒಣಗೋಣ, ಸ್ರೋತಸ್ಸುಗಳ ಪ್ರತಿಬಂಧ ಈ ಲಕ್ಷಣಗಳುಂಟಾಗುವವು ॥೧೧॥

ಪಿತ್ತಜ ತೃಷ್ಣಾರೋಗದ ಲಕ್ಷಣಗಳನ್ನು ಹೇಳುತ್ತಾರೆ—

**ಪಿತ್ತಂ ಮತಮಾಗ್ನೇಯಂ ಕುಪಿತಂ ಚೇತ್ತಾಪಯತ್ಯಬ್ಧಾತುಮ್ ॥**
**ಸಂತಪ್ತಃ ಸಂಜನಯೇತ್ ತೃಷ್ಣಾಂ ದಾಹೋಲ್ಬಣಾಂ ನೃಣಾಮ್ ॥೧೨॥**
**ತಿಕ್ತಾಸ್ಯತ್ವಂ ಶಿರಸೋ ದಾಹಃ ಶೀತಾಭಿನಂದತಾ ಮೂರ್ಚ್ಛಾ ॥**
**ಪೀತಾಕ್ಷಿಮೂತ್ರವರ್ಚಸ್ತ್ವಮಾಕೃತಿಃ ಪಿತ್ತತೃಷ್ಣಾಯಾಃ ॥೧೩॥**

**ಅರ್ಥ—** ಪಿತ್ತವು ಆಗ್ನೇಯವಾಗಿದೆ. ಆದ್ದರಿಂದ ಅದು ಕುಪಿತವಾಗಲು ಜಲಧಾತುವನ್ನು ತಪ್ತಮಾಡುವದು. ತಪ್ತವಾದ ಅದು ಮನುಷ್ಯರಿಗೆ ಬಹಳ ದಾಹವುಳ್ಳ ತೃಷ್ಣೆಯನ್ನುಂಟುಮಾಡುವದು. ॥೧೨॥ ಬಾಯಿ ಕಹಿಯಾಗೋಣ, ತಲೆಯಲ್ಲಿ ದಾಹ, ಶೈತ್ಯಬೇಕಾಗೋಣ, ಮೂರ್ಛೆ, ಕಣ್ಣು–ಮಲ–ಮೂತ್ರಗಳು ಹಳದಿಯಾಗೋಣ, ಇವು ಪಿತ್ತಜತೃಷ್ಣಾರೋಗದ ಲಕ್ಷಣಗಳು. ॥೧೩॥

ಆಮಜ ತೃಷ್ಣಾರೋಗದ ಲಕ್ಷಣವನ್ನು ಹೇಳುತ್ತಾರೆ—

**ತೃಷ್ಣಾ ಽಽಮಪ್ರಭವಾ ಸಾಪ್ಯಾಗ್ನೇಯ್ಯಾಮ ಪಿತ್ತಜನಿತತ್ವಾತ್ ||**
**ಲಿಂಗಂ ತಸ್ಯಾಶ್ಚಾರುಚಿರಾಧ್ಮಾನಕಫಪ್ರಸೇಕೌ ಚ ||೧೪||**

**ಅರ್ಥ—** ಆಮಜ ತೃಷ್ಣೆಯು ಕೂಡ ಆಗ್ನೇಯವೇ ಆಗಿದೆ ಯಾಕೆಂದರೆ ಅದು ಆಮದ ಪ್ರತಿಬಂಧದಿಂದ ಹೆಚ್ಚಾದ ಪಿತ್ತದಿಂದಲೇ ಉಂಟಾಗಿರುತ್ತದೆ. ಅದರಲ್ಲಿ ಅರುಚಿ, ಹೊಟ್ಟೆಯುಬ್ಬೋಣ, ಬಾಯಿಗೆ ನೀರುಬಿಡೋಣ ಈ ಲಕ್ಷಣಗಳಿರುತ್ತವೆ. || ೧೪ ||

ರಸಜ ತೃಷ್ಣಾರೋಗದ ಲಕ್ಷಣವನ್ನು ಹೇಳುತ್ತಾರೆ—

**ದೇಹೋ ರಸಜೋಂಽಬುಭವೋ ರಸಶ್ಚ ತಸ್ಯ ಕ್ಷಯಾಚ್ಚ ತೃಷ್ಯೇದ್ಧಿ ||**
**ದೀನಸ್ವರಃ ಪ್ರತಾಮ್ಯನ್ ಸಂಶುಷ್ಕಹೃದಯಗಲತಾಲುಃ || ೧೫ ||**

**ಅರ್ಥ—** ದೇಹವು ರಸಧಾತುವಿನಿಂದುಂಟಾಗಿರುತ್ತದೆ. ಆ ರಸಧಾತುವು ಶರೀರದಲ್ಲಿಯ ನೀರಿನಿಂದ ಉಂಟಾಗುತ್ತದೆ. ಅದರ ಕ್ಷಯದಿಂದ ಮನುಷ್ಯನು ನೀರಡಿಸುತ್ತಾನೆ, ಅವನ ಸ್ವರವು ಸಣ್ಣದಾಗಿರುವದು, ಚಡಪಡಿಸುವನು ಎದೆ, ಕಂಠ, ತಾಲುಗಳು ಒಣಗುವವು. || ೧೫ ||

ಉಪದ್ರವವಾದ ತೃಷ್ಣೆಯ ಲಕ್ಷಣವನ್ನು ಹೇಳುತ್ತಾರೆ—

**ಭವತಿ ಖಲು ಯೋಽಪಸರ್ಗಾತ್ ತೃಷ್ಣಾ ಸಾ ಶೋಷಿಣೀ ಕಷ್ಟಾ ||**
**ಜ್ವರಮೋಹಕ್ಷಯಕಾಸಶ್ವಾಸಾದ್ಯುಪಸೃಷ್ಟದೇಹಾನಾಮ್ || ೧೬ ||**

**ಸರ್ವಾಸ್ತ್ವತಿಪ್ರಸಕ್ತಾ ರೋಗಕೃಶಾನಾಂ ವಮಿಪ್ರಸಕ್ತಾನಾಮ್ ||**
**ಘೋರೋಪದ್ರವಯುಕ್ತಾ ತೃಷ್ಣಾ ಮರಣಾಯ ವಿಜ್ಞೇಯಾ || ೧೭ ||**

**ನಾಗ್ನೇರ್ವಿನಾ ಹಿ ತರ್ಷಃ ಪವನಾದ್ ವಾ ತೌ ಹಿ ಶೋಷಣೇ ಹೇತೂ ||**
**ಅಬ್ಧಾತೋರತಿವೃದ್ಧಾವಪಾಂ ಕ್ಷಯೇ ತೃಷ್ಯತೇ ನರೋ ಹಿ || ೧೮ ||**

**ಗುರ್ವನ್ನಪಯಃಸ್ನೇಹೈಃ ಸಮ್ಮೂರ್ಚ್ಛದ್ಭಿರ್ವಿದಾಹಕಾಲೇ ಚ ||**
**ಯಸ್ತೃಷ್ಯೇದ್ ವೃತಮಾರ್ಗೇ ತತ್ರಾಪ್ಯನಿಲಾನಲೌ ಹೇತೂ || ೧೯ ||**

**ಅರ್ಥ—** ಉಪದ್ರವರೂಪವಾದ ತೃಷ್ಣೆಯು ಶರೀರವನ್ನು ಕೃಶವಮಾಡುವದು. ಜ್ವರ, ಮೋಹ, ಕ್ಷಯ, ಕೆಮ್ಮು, ದಮ್ಮು ರೋಗಿಗಳಿಗೆ ಕಷ್ಟದಾಯಕವೂ ಕಷ್ಟಸಾಧ್ಯವೂ ಆಗಿದೆ. ॥ ೧೬ ॥ ರೋಗದಿಂದ ಕೃಶರಾದವರ ಬಹಳ ವಾಂತಿಯಾಗುವ ರೋಗಿಗಳಿಗೆ ಉಂಟಾದ ಅತಿಯಾದ ತೃಷ್ಣೆಯು ಅಥವಾ ಉಪದ್ರವಗಳಿಂದ ಕೂಡಿದ ಭಯಂಕರ ತೃಷ್ಣೆಯು ಮರಣವನ್ನುಂಟುಮಾಡುವದು. ॥ ೧೭ ॥ ಅಗ್ನಿ ಮತ್ತು ವಾಯುಗಳ ಹೊರತಾಗಿ ನೀರಡಿಕೆಯಾಗುವದಿಲ್ಲ ಏಕಂದರೆ ಅವು ಜಲಧಾತುವು ವೃದ್ಧಿಯಾಗಲು ಅವನ್ನು ಶೋಷಿಸುವವು; ಜಲಧಾತುವಿನ ಕ್ಷಯವಾಗಲು, ಮನುಷ್ಯನು ನೀರಡಿಸುವನು. ॥ ೧೮ ॥ ಪಾಕಕಾಲದಲ್ಲಿ ಒಂದರೊಳಗೊಂದು ಕೂಡುವ ಜಠಾನ್ನ, ಹಾಲು, ಸ್ನೇಹಗಳಿಂದ ಮಾರ್ಗವು ಪ್ರತಿಬಂಧಿಸಲ್ಪಡಲು ಆಗುವ ನೀರಡಿಕೆಯಲ್ಲಿಯೂ ಅಗ್ನಿವಾಯುಗಳೇ ಕಾರಣವಾಗಿವೆ. ॥ ೧೯ ॥

ಮದ್ಯಜ ತೃಷ್ಣಾರೋಗದ ಲಕ್ಷಣವನ್ನು ಹೇಳುತ್ತಾರೆ—

**ತೀಕ್ಷ್ಣೋಷ್ಣರೂಕ್ಷಭಾವಾನ್ಮದ್ಯಂ ಪಿತ್ತಾನಿಲೌ ಪ್ರಕೋಪಯತಿ ॥**
**ಶೋಷಯತೋಽಪಾಂ ಧಾತುಂ ತಾವೇವ ಹಿ ಮದ್ಯಶೀಲಾನಾಮ್ ॥೨೦**
**ತಪ್ತಾಸ್ವಿವ ಸಿಕತಾಸು ಹಿಮೋಯಮಾಶುಷ್ಯತಿಕ್ಷಿಪ್ತಮ್ ॥**
**ತೇಷಾಂ ಸಂತಪ್ತಾನಾಂ ಹಿಮಜಲಪಾನಾದ್ ಭವತಿ ಶರ್ಮ ॥ ೨೧ ॥**

**ಅರ್ಥ—** ಮದ್ಯವು ತನ್ನಲ್ಲಿರುವ ತೀಕ್ಷ್ಣ-ಉಷ್ಣ-ರುಕ್ಷ ಸ್ವಭಾವದಿಂದ ಪಿತ್ತವಾತಗಳನ್ನು ಕುಪಿತಮಾಡುತ್ತದೆ. ಅವೇ ಮದ್ಯಕುಡಿಯುವವರ ಜಲಧಾತುವನ್ನು ಒಣಗಿಸುತ್ತವೆ. ॥೨೦॥ ಕಾದ ಉಸುಕಿನಲ್ಲಿ ಚೆಲ್ಲಿದ ನೀರಿನಂತೆ ಅವರು ಕುಡಿದ ನೀರು ಒಣಗುತ್ತವೆ. ನೀರಡಿಕೆಯಿಂದ ಸಂತಪ್ತರಾದ ಅವರಿಗೆ ತಣ್ಣೀರು ಕುಡಿಯುವದರಿಂದ ಸುಖವಾಗುವದು ॥೨೧॥

ತಣ್ಣೀರಸ್ನಾನದಿಂದುಂಟಾಗುವ ತೃಷ್ಣೆಯನ್ನು ಹೇಳುತ್ತಾರೆ

**ಶಿಶಿರಸ್ನಾತಸ್ಯೋಷ್ಮೋ ರುದ್ಧಃ ಕೋಷ್ಠಂಪ್ರಪದ್ಯ ತರ್ಷಯತಿ ॥**
**ತಸ್ಮಾದ್ ಭಜೇತ ಸಹಸಾ ನೋಷ್ಣಾಃ ಸ್ನಾನೇ ಜಲಂ ಶೀತಮ್ ॥೨೨॥**

**ಅರ್ಥ—** ತಣ್ಣೀರು ಸ್ನಾನ ಮಾಡುವದರಿಂದ ಉಷ್ಣತೆಯು ಪ್ರತಿಬಂಧಿಸಲ್ಪಟ್ಟು ಕೋಷ್ಠವನ್ನು ಸೇರಿ ನೀರಡಿಕೆಯನ್ನುಂಟುಮಾಡುವದು. ಆದ್ದರಿಂದ

(ಯಾವಕಾರಣದಿಂದಾದರೂ) ತಪ್ತನಾದ ಮನುಷ್ಯನು ಒಮ್ಮೆಲೆ ತಣ್ಣೀರಿನಿಂದ ಸ್ನಾನವನ್ನು ಮಾಡಬಾರದು ||೨೨||

ಎಲ್ಲತೃಷ್ಣೆಗಳ ಸಾಮಾನ್ಯ ಲಕ್ಷಣ ಮತ್ತು ಚಿಕಿತ್ಸೆಯನ್ನು ಹೇಳುತ್ತಾರೆ.

ಲಿಂಗಂ ಸರ್ವಾಸ್ವೇತಾ ಸ್ವನಿಲಕ್ಷಯಾತ್ ಪಿತ್ತಜಂ ಭವತ್ಯಥ ತು ||
ಪೃಥಗಾಗಮಾಚ್ಚಿಕಿತ್ಸಿತಮತಃ ಪ್ರವಕ್ಷ್ಯಾಮಿ ತೃಷ್ಣಾನಾಮ್ ||೨೩||

ಅಪ್‌ಸಂಕ್ಷಯಾದ್ಧಿ ತೃಷ್ಣಾ ಸಂಶೋಷ್ಯ ನರಂ ಮಾರಯೇದಾಶು ||
ತಸ್ಮಾದ್ಯೈಂದ್ರಂ ತೋಯಂ ಸಮಧು ಪಿಬೇದ್ ತದ್ಗುಣಂ ವಾನ್ಯತ್ ||೨೪

ಕಿಂಚಿತ್ತುವರಾನುರಸಂ ತನುಲಘುಶೀತಂ ಸುಗಂಧಿ ಸುರಸಂಚ ||
ಅನಭಿಷ್ಯಂದಿ ಚ ಯತ್ ತತ್ ಕ್ಷಿತಿಸ್ಥಿತಮಥ್ಯೈಂದ್ರವಜ್‌ಜ್ಞೇಯಮ್||೨೫

ಶೃತಶೀತಂ ಸಸಿತೋಪಲಮಥವಾ ಶರಪೂರ್ವಪಂಚಮೂಲೇನ್ ||
ಲಾಜಾನಾಂ ಸಕ್ತೂನಾಂ ಸಮಧುಸಿತಂ ಮಂಥಮೈಂದ್ರೇಣ ||೨೬||

ವಾಟ್ಯಂಚಾಮಯವಾನಾಂ ಶೀತಂ ಮಧುಶರ್ಕರಾಯುತಂದದ್ಯಾತ್||
ಪೇಯಾಂ ವಾ ಶಾಲೀನಾಂ ದದ್ಯಾದ್ ವಾ ಕೋರದೂಷಾಣಾಮ್||೨೭

ಪಯಸಾ ಶೃತೇನ ಭೋಜನಮಥವಾ ಮಧುಶರ್ಕರಾಯುತಂ ಯೋಜ್ಯಮ್ ||
ಪಾರಾವತಾದಿಕರಸೈರ್ಘೃತಭೃಷ್ಟೈರ್ವಾಪ್ಯ ಲವಣಾಮ್ಲೈಃ ||೨೮||

ತೃಣಪಂಚಮೂಲಮುಂಜಾತಕೈಃಪಿಯಾಲಜೈಶ್ಚ ಜಾಂಗಲಾಃ ಸುಕೃತಾಃ
ಶಸ್ತಾ ರಸಾಃ ಪಯೋವಾ ತೈಃ ಸಿದ್ಧಂ ಶರ್ಕರಾ ಮಧುಮತ್|| ೨೯ ||

ಶತಧೌತಘೃತೇನಾಕ್ತಃ ಪಯಃ ಪಿಬೇಚ್ಛೀತತೋಯಮವಗಾಹ್ಯ ||
ಮುದ್ಗಮಸೂರಚಣಕಜಾ ರಸಾಶ್ಚ ಘೃತಭರ್ಜಿತಾ ದೇಯಾಃ ||೩೦||

ಮಧುರೈಃ ಸಜೀವನೀಯೈಃ ಶೀತೈಶ್ಚ ಸತಿಕ್ತಕೈಃ ಶೃತಶ್ಚ ಕ್ಷೀರಮ್ ||
ಪಾನಾಭ್ಯಂಜನಯೋಗೇಷ್ವಿಷ್ಟಂ ಮಧುಶರ್ಕರಾಯುತಮ್ || ೩೧ ||

ತಜ್ಜಂ ವಾ ಘೃತಮಿಷ್ಟಂ ಪಾನಾಭ್ಯಂಗೇಷು ನಸ್ಯಮಪಿ ಚಸ್ಯಾತ್ ||
ನಾರೀಪಯಃ ಸಶರ್ಕರಮುಷ್ಟ್ರ್ಯಾ ಅಪಿ ನಸ್ಯಮಿಕ್ಷುರಸಃ ||೩೨||

ಕ್ಷೀರೇಕ್ಷುರಸಗುಡೋದಕ ಸಿತೋಪಲಾಕ್ಷೌದ್ರಸೀಧುಮಾಧ್ವೀಕೈಃ ||
ವೃಕ್ಷಾಮ್ಲಮಾತುಲುಂಗೈರ್ಗಂಡೂಷಾಸ್ತಾಲುಶೋಷಘ್ನಾಃ ||೩೩||

**ಜಂಬ್ವಾಮ್ರಾತಕಬದರೀ ವೇತಸಪಂಚವಲ್ಕಲೈಶ್ಚಾಮ್ಲಾಃ ॥**
**ಹೃನ್ಮುಖಶಿರಃಪ್ರದೇಹಾಃ ಸಂಶ್ರಿತಮೂರ್ಛಾಭ್ರಮತೃಷ್ಣಾಘ್ನಾಃ ॥೩೪॥**
**ದಾಡಿಮದಧಿತ್ಥಲೋಧ್ರೈಃ ಸವಿದಾರೀಬೀಜಪೂರಕೈಃ ಶಿರಸಃ ॥**
**ಲೇಪೋ ಗೌರಾಮಲಕೈರ್ಘೃತಾರನಾಲಯುತೈಶ್ಚ ಹಿತಃ ॥೩೫॥**
**ಶೈವಲಪಂಕಾಂಬುರುಹೈಃ ಸಾಮ್ಲೈಃ ಸಘೃತೈಶ್ಚ ಸಕ್ತುಭಿರ್ಲೇಪಾಃ॥**
**ಮಸ್ತ್ವಾರನಾಲಾರ್ದ್ರವಸನಕಮಲಮಣಿಹಾರಸಂಸ್ಪರ್ಶಾಃ ॥೩೬॥**
**ಶಿಶಿರಾಂಬುಚಂದನಾಪ್ರಸ್ತನತಟಪಾಣಿತಲಗಾತ್ರಸಂಸ್ಪರ್ಶಾಃ ॥**
**ಮೌಕ್ತಿಕಕ್ಷೌಮಾರ್ದ್ರನಿವಸನಾನಾಂ ವರಾಂಗನಾನಾಂ ಪ್ರಿಯಾಣಾಂಚ ॥೩೭॥**
**ಹಿಮವದ್ದರೀವನಸರಿತ್ಸರೋಽಂಬುಜವನೋಪವನಪಾದಪಶಿಶಿರಾಣಾಂ॥**
**ರವ್ಯೋದಕಯುಕ್ತಾನಾಂ ಸ್ಮರಣಂ ಕಥಾಶ್ಚ ತೃಷ್ಣಾಘ್ನಾಃ ॥೩೮॥**

**ಅರ್ಥ—** ಎಲ್ಲ ತೃಷ್ಣೆಗಳಲ್ಲಿ ವಾತಕ್ಷಯಾನಂತರ ಪಿತ್ತದ ಲಕ್ಷಣಗಳು ಕಂಡು ಬರುತ್ತವೆ. ಇನ್ನುಮೇಲೆ ಎಲ್ಲ ತೃಷ್ಣೆಗಳಿಗೆ ಸಾಮಾನ್ಯ ಮತ್ತು ವಿಶೇಷವಾಗಿ ಶಾಸ್ತ್ರೋಕ್ತವಾದ ಚಿಕಿತ್ಸೆಗಳನ್ನು ಹೇಳುವೆವು. ॥ ೨೩ ॥ ತೃಷ್ಣಾ ರೋಗವು ಜಲಧಾತುವನ್ನು ಶೋಷಣಮಾಡಿ ಮನುಷ್ಯನನ್ನು ಒಣಗಿಸಿ ತೀವ್ರವಾಗಿ ಕೊಲ್ಲುವದು. ಆದ್ದರಿಂದ ಮಳೆಯ ನೀರನ್ನು ಅಥವಾ ಅದರಂತೆ ಬೇರೆ ನೀರನ್ನು ಜೇನು ಹಾಕಿ ಕುಡಿಯಬೇಕು. ॥ ೨೪ ॥ ಸ್ವಲ್ಪ ಒಗರು ಅನುರಸವಾಗಿವುಳ್ಳ ತೆಳ್ಳಗಿನ, ಹಗುರು, ಶೀತ, ಸುಗಂಧ, ರುಚಿಯಾದ, ಕಫಕಾರಕವಲ್ಲದ ಭೂಮಿಯಲ್ಲಿರುವ ನೀರನ್ನು ಮಳೆನೀರಿನಂತೆಯೇ ತಿಳಿಯಬೇಕು. ॥ ೨೫ ॥ ಕಾದಾರಿದ ಅಥವಾ ಶರ (ಶರ, ಇಕ್ಷು, ದರ್ಭ, ಕುಶ, ಕಾಸ) ಪಂಚಮೂಲದಿಂದ ಸಿದ್ಧಮಾಡಿ ಆರಿಸಿದ ನೀರನ್ನು ಸಕ್ಕರೆಹಾಕಿ ಕುಡಿಯಬೇಕು. ಮಳೆನೀರಿನಿಂದ ಮಾಡಿದ ಭತ್ತದರಳು ಸಕ್ತುಗಳ ಮಂಥವನ್ನು ಸಕ್ಕರೆ ಜೇನು ಹಾಕಿ ಕೊಡಬೇಕು. ॥ ೨೬ ॥ ಹುರಿಯದ ಜವೆಗಳ ಮಂಡವನ್ನು ಆರಿಸಿ ಜೇನು ಸಕ್ಕರೆ ಕೂಡಿಸಿ ಕೊಡಬೇಕು ಅಕ್ಕಿಯ ಅಥವಾ ಹಾರಕ ಧಾನ್ಯಗಳ ಪೇಯವನ್ನು ಕೊಡಬೇಕು. ॥೨೭॥ ಮರಳಿಸಿದ ಹಾಲಿನೊಡನೆ ಜೇನು ಸಕ್ಕರೆಗಳನ್ನು ಕೂಡಿಸಿಅನ್ನವನ್ನು ತಿನ್ನಬೇಕು ಅಥವಾ ತುಪ್ಪದಲ್ಲಿಕರಿದು ಪಾರಿವಾಳಮುಂತಾದವುಗಳ ಮಾಂಸರಸದಲ್ಲಿ ಉಪ್ಪು ಹುಳಿಗಳನ್ನುಹಾಕದೆ ಅವರೊಡನೆ ಅನ್ನವನ್ನು ತಿನ್ನಬೇಕು ॥೨೮॥ ತೃಣಪಂಚಮೂಲ, ಮುಂಜಾತಕ (ಕಣಗರ), ಪಿಯಾಲಜ (ಚಾರೆಪೊಪ್ಪು) ಇವುಗಳ ಕಷಾಯದಲ್ಲಿ ಮಾಡಿದ ಜಾಂಗಲ ಮಾಂಸರಸ

ಗಳು ಅಥವಾ ಆ ಕಷಾಯಗಳಿಂದ ಸಿದ್ಧವಾದ ಜೇನುಸಕ್ಕರೆಗಳನ್ನು ಹಾಕಿದ ಹಾಲು ಪ್ರಶಸ್ತವಾಗಿವೆ ||೨೯|| ಶತಧೌತಘೃತವನ್ನು ಮೈಗೆ ತೊಡೆದು ಕೊಂಡು, ತಣ್ಣೀರಿನಲ್ಲಿ ಮುಣಗಿ, ಸ್ನಾನಮಾಡಿ ಹಾಲನ್ನು ಕುಡಿಯ ಬೇಕು ಹೆಸರು. ಚೆನ್ನಂಗಿ, ಕಡ್ಲೆಗಳ ಕಟ್ಟನ್ನು ತುಪ್ಪದ ಒಗ್ಗರಣೆ ಹಾಕಿ ಕೊಡಬೇಕು ||೩೦|| ಜೀವನೀಯ ಮಧುರ ದ್ರವ್ಯಗಳಿಂದ, ಶೀತವೀರ್ಯದ ಕಹಿದ್ರವ್ಯಗಳಿಂದ, ಸಿದ್ಧಮಾಡಿದ ಹಾಲಿನಲ್ಲಿ ಜೇನು ಸಕ್ಕರೆಗಳನ್ನು ಹಾಕಿ ಪಾನ ಅಭ್ಯಂಗಗಳಲ್ಲಿ ಉಪಯೋಗಿಸಬೇಕು ||೩೧|| ಅಥವಾ ಆ ಕ್ಷೀರದಲ್ಲಿ ಸಿದ್ಧಮಾಡಿದ ಘೃತವನ್ನು ಪಾನ-ಅ ೧ಗ-ನಸ್ಯಗಳಲ್ಲಿ ಉಪಯೋಗಿಸ ಬೇಕು ಹೆಂಗಸರ ಹಾಲಿನಲ್ಲಿ ಅಥವಾ ಒಂಟೆಯ ಹಾಲಿನಲ್ಲಿ ಸಕ್ಕರೆಯನ್ನು ಹಾಕಿ ಅದನ್ನು ಅಥವಾ ಕಬ್ಬಿನರಸವನ್ನು ನಸ್ಯಕ್ಕಾಗಿ ಉಪಯೋಗಿಸಬೇಕು ||೩೨|| ಹಾಲು, ಕಬ್ಬಿನರಸ, ಬೆಲ್ಲದ ನೀರು ಕಲ್ಲುಸಕ್ಕರೆ ಜೇನು (ಕಬ್ಬಿನ ಮದ್ಯ) ದ್ರಾಕ್ಷಾಸವ, ಹುಣಸೇಹಣ್ಣು, ಮಾದಾಳ, ಇವುಗಳಿಂದ ಮಾಡಿದ ಗಂಡೂಷಗಳು ಅಂಗಳದ ಶೋಷವನ್ನು ಕಳೆಯುವವು ||೩೩|| ನೇರಿಲ, ಆಮ್ರಾತಕ (ಅಮಟೆ), ಬೋರೆ, ವೇತಸ (ಪೆಬ್ಬೇಜಾತಿ) ಪಂಚ ವಲ್ಕಲ (ಆಲ, ಅರಳಿ ಮುಂ.) ಗಳಿಂದ ಮಾಡಿದ ಹುಳಿಯಾದ ಲೇಪಗಳನ್ನು ಹೃದಯ ನೋರೆ-ತಲೆಗಳಿಗೆ ಮಾಡಬೇಕು. ಅವು ಮೂರ್ಛೆ-ಭ್ರಮು-ನೀರಡಿಕೆಗಳನ್ನು ಕಳೆಯುವವು ||೩೪|| ಅದರಂತೆ ದಾಳಿಂಬ, ಬೆಳವಲ, ಲೋಧ್ರ, ನೆಲ ಗುಂಬಳ, ಮಾದಾಳಗಳ ಲೇಪವನ್ನು ತಲೆಗೆ ಮಾಡಬೇಕು ಅದರಂತೆ ಅರಿಷಿಣ ನೆಲ್ಲೀಕಾಯಿಗಳನ್ನು ತುಪ್ಪದ ಅಂಬಲಿಗಳಲ್ಲಿ ಅರೆದು ತಲೆಗೆ ಲೇಪಮಾಡ ಬೇಕು. ||೩೫|| ಹಾವ್ರುಸೆ, ಕೆಸರು, ಕಮಲ, ಆಮ್ಲಪದಾರ್ಥ, ಘೃತ, ಸಕ್ತು ಗಳ ಬೇರೆ ಬೇರೆ ಲೇಪಗಳನ್ನು ಮಾಡಬೇಕು. ಮೊಸರಿನ ಮೇಲಿನನೀರು ಅಂಬಲಿಗಳಿಂದ ತೊಯಿಸಿದ ವಸ್ತ್ರ, ಕಮಲ, ರತ್ನ, ಮುತ್ತಿನಹಾರಗಳನ್ನು ಹಾಕಿಕೊಳ್ಳಬೇಕು. ||೩೬|| ತಣ್ಣಗಿನ ನೀರಿನಲ್ಲಿ ಅರೆದ ಗಂಧವನ್ನು ತೊಡೆದ ಸ್ತನ, ಅಂಗೈ,' ಶರೀರಗಳ ಸಂಸ್ಪರ್ಶಗಳೂ ಮತ್ತು ಉತ್ತಮ ವಸ್ತ್ರ, ಒಡಿವೆ ಗಳನ್ನು ಧರಿಸಿದಪ್ರಿಯಸ್ತ್ರೀಯರ ಸ್ಪರ್ಶಗಳೂ ನೀರಡಿಕೆಯನ್ನು ಕಳೆಯುವವು. ||೩೭|| ಹಿಮಾಲಯದ ಕಂದರ, ವನ, ನದೀ, ಸರೋವರ, ಕಮಲವನ, ಉಪ ವನ, ಗಿಡಗಳಿಂದ ತಂಪಾದ ರಮ್ಯವಾದ ನೀರುಳ್ಳ ಸ್ಥಳಗಳ ಸ್ಮರಣ, ಸಂಭಾ ಷಣಗಳು ನೀರಡಿಕೆಯನ್ನು ಕಳೆಯುವವು. ||೩೮

ಬೇರೆ ಬೇರೆ ತೃಷ್ಣೆಗಳಿಗೆ ಬೇರೆ ಬೇರೆ ಔಷಧಗಳನ್ನು ಹೇಳುತ್ತಾರೆ—

ವಾತಘ್ನಮನ್ನಂಪಾನಂ ಮೃದು ಲಘು ಶೀತಞ್ಚ ವಾತತೃಷ್ಣಾಯಾಃ ||
ಕ್ಷಯಕಾಸನುದ್ ಘೃತಂ ಕ್ಷೀರಮೂರ್ಧ್ವಂ ವಾತತೃಷ್ಣಾಘ್ನಮ್ ||೩೯||

ಸ್ಯಾಜ್ಜೀವನೀಯಸಿದ್ಧಂ ಕ್ಷೀರಂ ಘೃತಂ ವಾತಪಿತ್ತಜೇ ತರ್ಷೇ ||
ಪೈತ್ತೇ ದ್ರಾಕ್ಷಾಚಂದನಖರ್ಜೂರೋಶೀರಮಧುಯುತಂ ತೋಯಮ್ ||೪೦||

ಲೋಹಿತಾಶಾಲಿಪ್ರಸ್ಥಃ ಸಲೋಧ್ರಮಧುಕಾಂಜನೋತ್ಪಲಃ ಕ್ಷುಣ್ಣಃ ||
ಪಕ್ತ್ವಾಮಲೋಷ್ಟಮಧುಜಲಸಮಾಯುತೋ ಮೃನ್ಮಯೇ ಪೇಯಃ ||೪೧||

ವಟಮಾತುಲುಂಗವೇತಸಪಲ್ಲವಕುಶಕಾಶಮೂಲಯಷ್ಟ್ಯಾಹ್ವೈಃ ||
ಸಿದ್ಧೇಽಂಭಸ್ಯಗ್ನಿನಿಭಾಂ ಕೃಷ್ಣಾಂ ಮೃದಂ ಕೃಷ್ಣಸಿಕತಾಂ ವಾ ||೪೨||

ತಪ್ತಾನಿ ನವಕಪಾಲಾನ್ಯಥವಾ ನಿರ್ವಾಪ್ಯ ಪಾಯಯೇತಾಚ್ಛಮ್ ||
ಅಲ್ಪಾ ಪಕ್ವಶರ್ಕರಾಮೃತವಲ್ಲೀಜಲಂ ವಾ ತೃಷಂ ಹಂತಿ ||೪೩||

ಕ್ಷೀರವತಾಂ ಮಧುರಾಣಾಂ ಶೀತಾನಾಂ ಶರ್ಕರಾಮಧುಮಿಶ್ರಾಃ ||
ಶೀತಕಷಾಯಾ ಮೃದ್‌ಭೃಷ್ಟಸಂಯುಕ್ತಾಃ ಕ್ಷಯತೃಷ್ಣಾಘ್ನಾಃ ||೪೪||

ವ್ಯೋಷವಚಾಭಲ್ಲಾತಕತಿಕ್ತಕಷಾಯಾಸ್ತಥಾಮತೃಷ್ಣಾಘ್ನಾಃ ||
ಯಚ್ಚೋಕ್ತಂ ಕಫಜಾಯಾಂ ಛರ್ದ್ಯಾಂ ತಚ್ಚೈವ ಕಾರ್ಯಂ ಸ್ಯಾತ್ ||೪೫||

ಸ್ತಂಭಾರುಚ್ಯವಿಪಾಕಾಲಸ್ಯಛರ್ದಿಷು ಕಫಾನುಗಾಂ ತೃಷ್ಣಾಮ್ ||
ಜ್ಞಾತ್ವಾ ದಧಿಮಧುತರ್ಪಣಲವಣೋಷ್ಣಜಲೈರ್ವಮನಮಿಷ್ಟಂ || ೪೬ ||
ದಾಡಿಮಮದನಫಲಂ ವಾಪ್ಯನ್ಯತಮಕಷಾಯಮಥ ಲೇಹಮ್ ||
ಪೇಯಮಥವಾ ಪ್ರದದ್ಯಾದ್ ರಜನೀಮಧುಶರ್ಕರಾಯುತಂ || ೪೭ ||

**ಅರ್ಥ—** ವಾತದ ತೃಷ್ಣೆಯಲ್ಲಿ ವಾತನಾಶಕಗಳಾದ ಮತ್ತು ಮೃದು, ಹಗುರು, ಶೀತಗಳಾದ ಅನ್ನಪಾನಗಳನ್ನು ಕೊಡಬೇಕು. ಕ್ಷಯಕಾಸನಾಶಕವಾದ ಘೃತವನ್ನು ಕೊಟ್ಟು ಮೇಲೆ ಹಾಲು ಕುಡಿಸಬೇಕು. ಇದು ವಾತತೃಷ್ಣೆಯನ್ನು ಕಳೆಯುವದು. || ೩೯ || ವಾತಜ ಪಿತ್ತಜ ವಾತಪಿತ್ತಜ ನೀರಡಿಕೆಗ

ಳಲ್ಲಿ ಜೀವನೀಯ ಔಷಧಗಳಿಂದ ಸಿದ್ಧವಾದ ಕ್ಷೀರ ಘೃತಗಳನ್ನು ತ್ರಿಪಿಜ ನೀರಡಿಕೆಯಲ್ಲಿ ದ್ರಾಕ್ಷೆ ಚಂದನ ಉತ್ತತ್ತಿ ಬಾಳದಬೇರು ಇವುಗಳಿಂದ ಸಿದ್ಧ ಮಾಡಿದ ನೀರಿನಲ್ಲಿ ಜೇನುಹಾಕಿ ಕುಡಿಯಬೇಕು. ‖ ೪೦ ‖ ೬೪ ತೊಲೆ ಕೆಂಪ ಕ್ಕಿಗಳಲ್ಲಿ ಸ್ವಲ್ಪ ಲೋಧ, ಜೇಷ್ಠಮಧು, ರಸಾಂಜನ, ನೀಲಕಮಲ ಇವುಗಳನ್ನು ಹಾಕಿ ಸ್ವಲ್ಪ ಕುಟ್ಟಿ ನೀರುಹಾಕಿ ಮಣ್ಣಿನಪಾತ್ರೆಯಲ್ಲಿ ಬೇಯಿಸಿ ಅರ್ಧ ನೀರು ಉಳಿಯಲು ಆರಿಸಿ ಅದರಲ್ಲಿ ಸುಡದ ಮಣ್ಣಿನ ಹೆಂಟೆ, ಜೇಷ್ಠಮಧು ನೀರು ಕೂಡಿಸಿ ಮಣ್ಣಿನ ಪಾತ್ರೆಯಿಂದ ಕುಡಿಯಬೇಕು. ‖ ೪೧ ‖ ಆಲ ಮಾದಾಳ ವೇತಸ [ಹೆಬ್ಬೇಜಾತಿ] ಗಳ ಎಲೆ ದರ್ಭೆ [ಕರ್ಕೀಹುಲ್ಲು] ಗಳ ಬೇರು ಜೇಷ್ಠ ಮಧು ಇವುಗಳಿಂದ ಸಿದ್ಧವಾದ ನೀರಿನಲ್ಲಿ ಕರೇ ಮಣ್ಣನ್ನು ಅಥವಾಕರೇ ಉಸಕನ್ನು ‖ ೪೨ ‖ ಅಥವಾ ಕೆಂಪಗೆ ಕಾಸಿದ ಹೊಸ ಮಣ್ಣಿನ ಬಗ್ಗರಿಗಳನ್ನು ಅದರಲ್ಲಿಹಾಕಿ ಆರಿಸಿ ತಿಳಿಯಾದಮೇಲೆ ಅದನ್ನು ಕುಡಿಸಬೇಕು. ಅಥವಾ ಕಾದ ಸಣ್ಣ ಉಸಕನ್ನು ಹಾಕಿದ ಅಥವಾ ಅಮೃತಬಳ್ಳಿಯನ್ನು ಹಾಕಿ ಕುದಿ ಸಿದ ನೀರು ನೀರಡಿಕೆಯನ್ನು ಕಳೆಯುತ್ತದೆ. ‖ ೪೩ ‖ ಕ್ಷೀರಿವೃಕ್ಷಗಳತೋಟೆ ಗಳ ಶೀತಕಷಾಯದಲ್ಲಿ ಕಾದ ಮಣ್ಣಿನ ಹೆಂಟೆಯನ್ನು ಹಾಕಿ ಆರಿಸಿ ಸಕ್ಕರೆ ಜೇನು ಬೆರೆಸಿ ಕುಡಿಯಲು ಕೊಡಬೇಕು ಇದರಂತೆ ಜೀವನೀಯ ದ್ರವ್ಯಗಳ ಮತ್ತು ಶೀತವೀರ್ಯದ [ನೆಲ್ಲೀಕಾಯಿ ಮುಂತಾದ] ದ್ರವ್ಯಗಳ ಶೀತಕಷಾಯದಲ್ಲಿ ಕಾದ ಹೆಂಟೆಯನ್ನುಹಾಕಿ ಆರಿಸಿ ಸಕ್ಕರೆ ಜೇನು ಬೆರೆಸಿ ಕುಡಿಯಲು ಕೊಡ ಬೇಕು ಇವು ಕ್ಷಯಜ ನೀರಡಿಕೆಯನ್ನು ಕಳೆಯುವವು. ‖ ೪೪ ‖ ತ್ರಿಕಟು ಬಜಿ ಕೇರು, ಮತ್ತು ಕಟುಔಷಧಗಳ ಕಷಾಯಗಳು ಆಮಜತೃಷ್ಣೆಯನ್ನು ನಾಶ ಮಾಡುತ್ತವೆ. ಕಫಜವಾಂತಿಯಲ್ಲಿ ಹೇಳಿದ ಚಿಕಿತ್ಸೆಯನ್ನು ಆಮಜತೃಷ್ಣೆಯಲ್ಲಿ ಮಾಡತಕ್ಕದ್ದು. ‖೪೫‖ ಶಟೆ, ಅರುಚಿ, ಅಜೀರ್ಣ, ಆಲಸ್ಯ, ವಾಂತಿಗಳಿಂದ ಕಫಜ ತೃಷ್ಣೆಯನ್ನು ಕಂಡುಹಿಡಿದು ಅದರಲ್ಲಿ ಮೊಸರು ಜೇನು ಸತುವಿಸಮುಂಡ ಉಪ್ಪು, ಬಿಸಿನೀರುಗಳನ್ನು ಕುಡಿಸಿ ವಾಂತಿಮಾಡಿಸಬೇಕು. ‖೪೬‖ ಅಥವಾ ದಾಳಿಂಬ ಮಂಗಾರೀಕಾಯಿ ಅಥವಾ ಅರಿಷಿಣ ಜೇನು ಸಕ್ಕರೆಬೆರಿಸಿದ ಬೇರೆ ಯಾವದಾದರೂ ವಾಮಕಲೇಹ ಅಥವಾ ಕಷಾಯವನ್ನು ಕೊಡಬೇಕು.‖೪೭‖

**ಕ್ಷಯಕಾಸದ ಉಪದ್ರವವಾದ ತೃಷ್ಣಾ ಚಿಕಿತ್ಸೆಯನ್ನು ಹೇಳುತ್ತಾರೆ**

**ಕ್ಷಯಕಾಸೇನ ತುಲ್ಯಾ ಕ್ಷಯತೃಷ್ಣಾ ಸಾ ಗರೀಯಸೀ ನೃಣಾಮ್ ‖**
**ಕ್ಷೀಣಕ್ಷತಶೋಷ ಹಿತೈಸ್ತಸ್ಮಾತ್ ತಾಂ ಭೇಷಜೈಃ ಶಮಯೇತ್ ‖೪೮‖**

**ಅರ್ಥ—** ಕ್ಷಯಕಾಸದಿಂದ ಉಂಟಾದ ಕ್ಷಯತೃಷ್ಣೆಯು ರೋಗಿಗಳಿಗೆ ಕ್ಷಯಕಾಸದಷ್ಟೇ ತಾಪದಾಯಕವಾದ ಆದ್ದರಿಂದ ಅದನ್ನು ಕ್ಷೀಣ, ಕ್ಷತ, ಶೋಷ ರೋಗಗಳಿಗೆ ಕೊಡುವ ಔಷಧಗಳನ್ನು ಕೊಟ್ಟು ಶಮನವಾಡಬೇಕು.

ಮದ್ಯಪಾನದಿಂದುಟಾದ ತೃಷ್ಣೆಯ ಚಿಕಿತ್ಸೆಯನ್ನು ಹೇಳುತ್ತಾರೆ

**ಪಾನತೃಡಾರ್ತಃ ಪಾನಂ ತ್ವರ್ಧೋದಕಮಮ್ಲಲವಣಗಂಧಾಢ್ಯಮ್ ||**
**ಶಿಶಿರಸ್ನಾತಃ ಪಾನಂ ಮದ್ಯಾಂಬು ಗುಡಾಂಬು ವಾ ತೃಷಿತಃ || ೪೯ ||**

**ಅರ್ಥ—** ಮದ್ಯಪಾನದ ತೃಷ್ಣೆಯಿಂದ ಪೀಡಿತನಾದವನು ಅರ್ಧನೀರು ಕೂಡಿಸಿದ, ಹುಳಿ-ಉಪ್ಪು-ಸುಗಂಧ ದ್ರವ್ಯಹಾಕಿದ ಮದ್ಯವನ್ನೂ ಕುಡಿಯ ಬೇಕು. ಅಥವಾ ತಣ್ಣೀರಿನಿಂದ ಸ್ನಾನಮಾಡಿ ಮದ್ಯಕೂಡಿಸಿದ ನೀರನ್ನು ಅಥವಾ ಬೆಲ್ಲದ ನೀರು ಕುಡಿಯಬೇಕು. || ೪೯ ||

ಅನ್ನದ ಉಪದ್ರವವಾದ ತೃಷ್ಣೆಯ ಚಿಕಿತ್ಸೆಯನ್ನು ಹೇಳುತ್ತಾರೆ.

**ಭಕ್ತೋಪರೋಧತೃಷಿತಃಸ್ನೇಹತೃಷ್ಣಾರ್ತೋSಥವಾ ತನುಂಯವಾಗೂಂ**
**ಪ್ರಪಿಬೇದ್ ಗುರುಣಾ ತೃಷಿತೋ ಭಕ್ತೇನ ತದುದ್ಧರೇದ್ ಭಕ್ತಮ್||೫೦**
**ಮದ್ಯಾಂಬು ವಾಂಬು ಚೋಷ್ಣಂ ಬಲವಾನ್ ತೃಷಿತಃ ಸಮುಲ್ಲಿಖೇತ್**
**ಪೀತ್ವಾ ||**
**ಮಾಗಧಿಕಾವಿಶದಮುಖಃ ಸಶರ್ಕರಂ ವಾ ಪಿಬೇನ್ಮಂಥಮ್ ||೫೧||**

**ಅರ್ಥ—** ಉಪವಾಸದಿಂದುಂಟಾದ ನೀರಡಿಕೆಯಲ್ಲಿ ಅಥವಾ ಸ್ನೆಹಪಾನದಿಂದುಂಟಾದ ನೀರಡಿಕೆಯಲ್ಲಿ ತೆಳ್ಳಗಿನ ಗಂಜಿಯನ್ನು ಕುಡಿಯಬೇಕು. ಜಡ ಆಹಾರದಿಂದ ನೀರಡಿಕೆಯಾದರೆ ತಿಂದ ಅನ್ನವನ್ನು ಕಾರಿಸಬೇಕು. ||೫೦|| (ಹೇಗಂದರೆ) ಬಹಳ ನೀರಡಿಸಿದವನು ಮದ್ಯಕೂಡಿದನೀರನ್ನು ಅಥವಾ ಬಿಸಿ ನೀರನ್ನು ಕುಡಿದು ಕಾರಬೇಕು. ಅಥವಾ ಹಿಪ್ಪಲಿಯನ್ನು ತಿಂದು, ಸಕ್ಕರೆಹಾಕಿದ ಮಂಥವನ್ನು ಕುಡಿಯಬೇಕು.

ಬೇರೆ ಬೇರೆ ತೃಷ್ಣೆಗಳ ಚಿಕಿತ್ಸೆಯನ್ನು ಹೇಳುತ್ತಾರೆ.

**ಬಲವಾಂಸ್ತು ತಾಲುಶೋಷಾ ಪಿಬೇದ್ ಘೃತಂ ವೃಷ್ಯಮನು ಮದ್ಯಮ್||**
**ಸರ್ಪಿರ್ಜುಷ್ಟಂ ಕ್ಷೀರಂ ಮಾಂಸರಸಾಂಶ್ಚಾಬಲಃ ಸ್ನಿಗ್ಧಾನ್ ||೫೨||**

ಅತಿರೂಕ್ಷದುರ್ಬಲಾನಾಂ ತೃಷ್ಣಾಂ ಶಮಯೇನ್ನೃಣಾಮಥಾಶು ಪಯಃ||
ಛಾಗೋ ವಾ ಘೃತಭೃಷ್ಟಃ ಶೀತೋ ಮಧುರೋರಸೋ ಹೃದ್ಯಃ ||೫೩||
ಸ್ನಿಗ್ಧೇಽನ್ನೇ ಭುಕ್ತೇ ಯಾ ತೃಷ್ಣಾ ಸ್ಯಾತ್ ತಾಂ ಗುಡಾಂಬುನಾ ಶಮಯೇತ್ ||
ತರ್ಷಂ ಮೂರ್ಚ್ಛಾಭಿಹತಸ್ಯ ರಕ್ತಪಿತ್ತಾಪಹೈರ್ಹನ್ಯಾತ್ ||೫೪||
ಛರ್ದ್ಯಮ್ಲದಾಹ ಮೂರ್ಚ್ಛಾಭ್ರಮಕ್ಲಮಮದಾತ್ಯಯಾಸ್ರವಿಷಪಿತ್ತೇ ||
ಶಸ್ತಂ ಸ್ವಭಾವಶೀತಂ ಶೃತಶೀತಂ ಸನ್ನಿಪಾತೇಽಂಭಃ ||೫೫||
ಹಿಕ್ಕಾಶ್ವಾಸನವಜ್ವರ ಪೀನಸ ಘೃತಪೀತ ಪಾರ್ಶ್ವಗಲರೋಗೇ ||
ಕಫವಾತಕೃತೇ ಸ್ತ್ಯಾನೇ ಸದ್ಯಃ ಶುದ್ಧೇ ಚ ಹಿತಮುಷ್ಣಮ್ ||೫೬||
ಪಾಂಡೂದರಪೀನಸ ಮೇಹಗುಲ್ಮ ಮಂದಾನಿಲಾತಿಸಾರೇಷು ||
ಪ್ಲೀಹ್ನಿ ಚ ತೋಯಂ ನ ಹಿತಂ ಕಾಮಮಶಕ್ಯೇ ಪಿಬೇದಲ್ಪಮ್||೫೭||
ಪೂರ್ವಾಮಯಾತುರಃ ಸನ್ ದೀನಸ್ತೃಷ್ಣಾರ್ದಿತೋ ಜಲಂ ಕಾಂಕ್ಷನ್||
ನ ಲಭೇತ ಚೇನ್ಮರಣಮಾಶ್ವೇವ ಚಾಪ್ನುಯಾದ್ದೀರ್ಘರೋಗಂ ವಾ ||೫೮
ತಸ್ಮಾದ್ಧಾನ್ಯಾಂಬು ಪಿಬೇತ್ತೃಷ್ಯನ್ ರೋಗೀ ಸಶರ್ಕರಾಕ್ಷೌದ್ರಮ್||
ಯದ್ವಾ ತಸ್ಯಾನ್ಯತ್ ಸ್ಯಾತ್ ಸಾತ್ಮ್ಯಂ ರೋಗಸ್ಯ ತಚ್ಚೇಷ್ಟಂ ||೫೯||
ತಸ್ಯಾಂ ವಿನಿವೃತ್ತಾಯಾಂ ತಜ್ಜ್ಞೋಽನ್ಯ ಉಪದ್ರವಃ ಸುಖಂಜೇತುಮ್||
ತಸ್ಮಾದ್‌ತ್ ಪೂರ್ವಂ ತೃಷ್ಣಾಂ ಜಯೇದ್ ಬಹುಭ್ಯೋಽಪಿ ರೋಗೇಭ್ಯಃ ||೬೦||

**ಅರ್ಥ—** ರೋಗಿಯು ಬಲಿಷ್ಠನಿದ್ದರೆ ತಾಲುಶೋಷದಲ್ಲಿ ವೃಷ್ಯವಾದಂಥ ಘೃತವನ್ನು ಕುಡಿದು ಮೇಲೆ ಮದ್ಯವನ್ನು ಕುಡಿಯಬೇಕು. ಆದರೆ ಅವನು ಅಶಕ್ತನಿದ್ದರೆ ತುಪ್ಪಹಾಕಿದ ಹಾಲನ್ನು ಅಥವಾ ಸ್ನಿಗ್ಧವಾದ ಮಾಂಸರಸಗಳನ್ನು ಕುಡಿಯಬೇಕು. ||೫೨|| ಅತಿಶಯರುಕ್ಷ ಮತ್ತು ದುರ್ಬಲರಿದ್ದವರ ನೀರಡಿಕೆಯನ್ನು ಹಾಲು ಅಥವಾ ತುಪ್ಪದಲ್ಲಿ ಕರಿದ ಶೀತ, ಮಧುರ, ರುಚಿಕರವಾದ ಆಡಿನ ಮಾಂಸರಸವು ತೀವ್ರವಾಗಿ ಕಳೆಯುವದು. ||೫೩|| ಸ್ನಿಗ್ಧ ಆಹಾರವನ್ನು ಮಾಡಲು ಉಂಟಾದ ತೃಷ್ಣೆಯನ್ನು ಬೆಲ್ಲದ ನೀರಿನಿಂದ, ಮೂರ್ಛಿತನ ನೀರಡಿಕೆಯನ್ನು ರಕ್ತಪಿತ್ತನಾಶಕ ದ್ರವ್ಯಗಳಿಂದ ಕಳೆಯಬೇಕು. ||೫೪|| ವಾಂತಿ ಹುಳಿಸುಡೋಣ, ದಾಹ, ಮೂರ್ಛೆ ಭ್ರಮ, ಕ್ಲಮ, ಮದಾತ್ಯಯ, ರಕ್ತಪಿತ್ತ, ವಿಷ, ಪಿತ್ತವಿಕಾರಗಳಲ್ಲಿ ಉಂಟಾದ ತೃಷ್ಣೆಯಲ್ಲಿ ಸ್ವಾಭಾವಿಕವಾಗಿಯೇ ತಂಣಗಾದ ನೀರು ಮತ್ತು ಸನ್ನಿಪಾತದಲ್ಲಿ ಉಂಟಾದ ನೀರಡಿಕೆಯಲ್ಲಿ ಕುದಿಸಿ

ಆರಿಸಿದನೀರು ಹಿತಕರವು, ||೫೫|| ಬಿಕ್ಕು, ಶ್ವಾಸ, ನವಜ್ವರ, ನೆಗಡಿ, ಘೃತ ಪಾನ ಪಾರ್ಶ್ವಶೂಲ, ಕಂಠರೋಗಗಳಲ್ಲಿ ಅಥವಾ ಕಫವಾತವಿಕಾರಗಳಲ್ಲಿ ಮತ್ತು ಕಫವು ಗಟ್ಟಿಯಿದ್ದಾಗ್ಗೆ, ಶೋಧನ ತಕ್ಕೊಂಡಕೂಡಲೇ ಉಂಟಾದ ನೀರಡಿಕೆಗಳಲ್ಲಿ ಬಿಸಿನೀರು ಹಿತಕರವು. ||೫೬|| ಪಾಂಡು, ಉದರ, ಪೀನಸ, ಮೇಹ. ಗುಲ್ಮ, ಮಂದಾಗ್ನಿ, ಅತಿಸಾರಗಳಲ್ಲಿಯೂ ಪ್ಲೀಹರೋಗದಲ್ಲಿಯೂ ನೀರು ಕುಡಿಯಬಾರದು ಆದರೆ ತಡೆಯುವದು ಅಶಕ್ಯವಾದರೆ ಸ್ವಲ್ಪ ಕುಡಿಯ ಬೇಕು. ||೫೭|| ಮೊದಲಿನ ಬೇನೆಯಿಂದ ಪೀಡಿತನಾಗಿ ದೀನನಾದ, ನೀರನ್ನು ಅಪೇಕ್ಷಿಸುವ ತೃಷ್ಣಾರೋಗಿಗೆ ನೀರು ಸಿಗದಿದ್ದರೆ ತೀವ್ರವೇ ಮರಣವು. ಅಥವಾ ದೀರ್ಘರೋಗವು ಬರುವದು. ||೫೮||ಆದ್ದರಿಂದ ಆರೋಗಿಯು ಹವೀ ಜಹಾಕಿ ಕುದಿಸಿದ ಅಥವಾ ಸಕ್ಕರೆ ಜೇನುಹಾಕಿದ ನೀರನ್ನು ಕುಡಿಯಬೇಕು. ಅಥವಾ ಆಯಾರೋಗಕ್ಕೆ ಯೋಗ್ಯವಾದ ನೀರನ್ನು ಕುಡಿಯಬೇಕು. ||೫೯|| ತೃಷೆಯುಹೋಗಲು ಆ ರೋಗದ ಬೇರೆ ಉಪದ್ರವು ಸುಲಭವಾಗಿ ಕಳೆಯಲು ಶಕ್ಯವಾಗುವದು. ಆದ್ದರಿಂದ ಎಲ್ಲ ರೋಗಕ್ಕಿಂತ ಮೊದಲು ತೃಷ್ಣೆಯನ್ನು ಕಳೆಯಬೇಕು. ||೬೦||

## ಭವತಿ ಚಾತ್ರ

**ಹೇತೂ ಯಥಾಗ್ನಿಪವನೌ ಕುರುತಃ ಸೋಪದ್ರವಾಂಪಂಚಾನಾಮ್**
**ತೃಷ್ಣಾನಾಂ ಪೃಥಗಾಕೃತಿರಸಾಧ್ಯತಾ ಸಾಧನಂ ಚೋಕ್ತಮ್ ||೬೧||**

**ಅರ್ಥ—** ಕಾರಣಗಳಾದ ಅಗ್ನಿ ಮತ್ತು ವಾತಗಳು ಉಪದ್ರವಯುಕ್ತವಾದ ತೃಷ್ಣೆಯನ್ನು ಹೇಗೆ ಉಂಟುಮಾಡುತ್ತವೆ. ಎಂಬುದು ಮತ್ತು ಐದು ತೃಷ್ಣೆಗಳ ಬೇರೆ ಬೇರೆ ಲಕ್ಷಣ ಅವುಗಳ ಸಾಧ್ಯಾಸಾಧ್ಯತೆ ಮತ್ತು ಚಿಕಿತ್ಸೆಯು ಹೇಳಲ್ಪಟ್ಟಿತು. ||೬೧||

**ಇತ್ಯಗ್ನಿವೇಶಕೃತೇ ತಂತ್ರೇ ದೃಢಬಲಪ್ರತಿಸಂಸ್ಕೃತೇ ಚಿಕಿತ್ಸಿತಸ್ಥಾನೇ ತಷ್ಣಾರೋಗಚಿಕಿತ್ಸಿತಂನಾಮ ದ್ವಾವಿಂಶೋಽಧ್ಯಾಯಃ ||**

ಶ್ರೀ ಮದಾದ್ಯ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ **ಚರಕ 'ಚಿಕಿತ್ಸಾ ಬೋಧಿನಿ'** ಎಂಬ ಚರಕ ಸಂಹಿತೆಯ ಟಿಪ್ಪಣಿಯಲ್ಲಿ ತೃಷ್ಣಾ ಚಿಕಿತ್ಸೆ ಎಂಬ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.

# ೨೩ನೆಯ ಅಧ್ಯಾಯ

## ವಿಷಚಿಕಿತ್ಸೆ

ವಿಸರ್ಪದಂತೆಯೇ ಶೀತದಿಂದ ಉಪಶಮನವಾಗುವದರಿಂದ ವಿಸರ್ಪದನಂತರ ವಿಷಚಿಕಿತ್ಸೆಯನ್ನು ಹೇಳುತ್ತಾರೆ.

**ಅಥಾತೋ ವಿಷಚಿಕಿತ್ಸಿತಂ ವ್ಯಾಖ್ಯಾ ಸ್ಯಾಮಃ**

**ಅರ್ಥ—** ಇನ್ನು ವಿಷಚಿಕಿತ್ಸೆಯನ್ನು ಹೇಳುವೆವು.

**ಇತಿಹಸ್ಮಾಹ ಭಗವಾನಾತ್ರೇಯಃ ॥ ೧ ॥**

**ಅರ್ಥ—** ಪೂಜ್ಯರಾದ ಆತ್ರೇಯ ಋಷಿಗಳು ಹೀಗೆ ಹೇಳಿದರು. ॥ ೧ ॥

**ಪ್ರಾಗುತ್ಪತ್ತಿಂ ಗುಣಾನ್ ಯೋನಿಂ ವೇಗಾನ್ ಸಿದ್ಧಾನು ಪಕ್ರಮಾನ್ ॥**
**ವಿಷಸ್ಯ ಬ್ರುವತಃ ಸಮ್ಯಗಗ್ನಿವೇಶ ನಿಬೋಧ ಮೇ ॥೨॥**

**ಮಥ್ಯಮಾನೇ ಜಲನಿಧಾವಮೃತಾರ್ಥಂ ಸುರಾಸುರೈಃ ॥**
**ಜಜ್ಞೇಪ್ರಾಗಮೃತೋತ್ಪತ್ತೇಃ ಪುರುಷೋ ಘೋರದರ್ಶನಃ ॥೩॥**

**ದೀಪ್ತತೇಜಾಶ್ಚತುರ್ದಂಷ್ಟ್ರೋ ಹರಿಕೇಶೋ ನಲೇಕ್ಷಣಃ ॥**
**ಜಗದ್ವಿಷಣ್ಣಂ ತದ್ ದೃಷ್ಟ್ವಾ ವಿಷಂ ತತ್ತು ವಿಷಾದನಾತ್ ॥೪॥**
**ಜಂಗಮಸ್ಥಾವರಾಯಾಂ ತು ಯೋನೌ ಬ್ರಹ್ಮಾ ನ್ಯಯೋಜಯತ್ ॥**
**ತದಂಬುಸಂಭವಂ ತಸ್ಮಾದ್ ದ್ವಿವಿಧಂ ಪಾವಕೋಪಮಮ್ ॥೫॥**
**ಅಷ್ಟವೇಗಂ ದಶಗುಣಂ ಚತುರ್ವಿಂಶತ್ಯುಪಕ್ರಮಮ್ ॥**
**ತದ್ವರ್ಷಾಸ್ವಂಬುಯೋನಿತ್ವಾತ್ ಸಂಕ್ಲೇದಂ ಗುಡವದ್ ಗತಮ್ ॥೬॥**
**ಸರ್ಪತ್ಯಂಬುಧರ್‌ಪಾಯೇ ತದಗಸ್ತ್ಯೋ ನಿಹಂತಿ ಚ ॥**
**ಪ್ರಯಾತಿ ಮಂದವೀರ್ಯತ್ವಂ ವಿಷಂತಸ್ಮಾದ್ ಘನಾತ್ಯಯೇ ॥೭॥**

**ಅರ್ಥ—** ಅಗ್ನಿವೇಶನೇ! ನಾನು ವಿಷದ ಮೂಲ ಉತ್ಪತ್ತಿಯನ್ನೂ ಅವರ ಗುಣಗಳನ್ನೂ ಸ್ಥಾನಗಳನ್ನೂ ವೇಗಗಳನ್ನೂ ಗುಣಕಾರಿ ಚಿಕಿತ್ಸೆಗಳನ್ನೂ ಹೇಳುತ್ತೇನೆ ಚನ್ನಾಗಿ ಕೇಳು ||೨|| ಅಮೃತಕ್ಕಾಗಿ ದೇವದಾನವರು ಸಮುದ್ರ ಮಥನವನ್ನು ಮಾಡಹತ್ತಲು ಅಮೃತಕ್ಕಿಂತಮೊದಲು ||೩|| ಪ್ರದೀಪವಾದ ತೇಜ, ನಾಲ್ಕುಕೋರೆ, ಹಸರು ಕೂದಲು, ಕಿಡಿಯಂತೆ ಕಣ್ಣುಗಳುಳ್ಳ ಭಯಂಕರ ಕಾಣುವ ಒಬ್ಬ ಪುರುಷನು (ವಸ್ತುವು) ಹುಟ್ಟಿದನು. ಅವನ್ನು ನೋಡಿ ಜಗತ್ತು ವಿಷಣ್ಣ (ದುಃಖಿತ) ವಾಯಿತು. ವಿಷಾದವನ್ನುಂಟುಮಾಡುವದರಿಂದ ಅದು ವಿಷವೆಂದು ಕರೆಯಲ್ಪಡುತ್ತದೆ. ||೪|| ಬ್ರಹ್ಮನು ಅದನ್ನು ಜಂಗಮ ಮತ್ತು ಸ್ಥಾವರಯೋನಿಗಳಲ್ಲಿ ಇಟ್ಟದ್ದರಿಂದ ಅದು ಸ್ಥಾವರ ಜಂಗಮವೆಂದು ಎರಡು ವಿಧವಾಗಿವೆ. ಅದು ನೀರಿನಿಂದ ಹುಟ್ಟಿದ್ದರೂ ಬೆಂಕಿಯಂತೆ ಪ್ರಖರವಾಗಿದೆ. ||೫|| ಅವರ ವೇಗಗಳು ಎಂಟು, ಗುಣಗಳು ಹತ್ತು, ಉಪಾಯಗಳು ಇಪ್ಪನಾಲ್ಕು ಇವೆ. ಇದು ನೀರಿನಿಂದ ಹುಟ್ಟಿದ್ದರಿಂದ ಮಳೆಗಾಲದಲ್ಲಿ ಬೆಲ್ಲದಂತೆ ಒಸರಿಸಿ ಪಸರಿಸುವದು. ||೬|| ಶರತ್ಕಾಲದಲ್ಲಿ ಅಗಸ್ತ್ಯನು (ಅಗಸ್ತ್ಯ ನಕ್ಷತ್ರದ ಉದಯವಾಗಲು) ಅದನ್ನು ನಾಶಮಾಡುವನು. ಆದ್ದರಿಂದ ಶರತ್ಕಾಲದಲ್ಲಿ ವಿಷದ ವೀರ್ಯವು ಮಂದವಾಗುತ್ತದೆ. ||೭||

ಜಂಗಮ ವಿಷವನ್ನು ಹೇಳುತ್ತಾರೆ.

**ಸರ್ಪಾಃ ಕೀಟೋಂದುರಾ ಲೂತಾ ವೃಶ್ಚಿಕಾ ಗೃಹಗೋಧಿಕಾಃ ||**
**ಜಲೌಕಾ ಮತ್ಸ್ಯಮಂಡೂಕಾಃ ಶಲಭಾಃ ಸರ್ಪಕಂಟಿಕಾಃ ||೮||**
**ಶ್ವಸಿಂಹವ್ಯಾಘ್ರಗೋಮಾಯು ತರಕ್ಷುನಕುಲಾದಯಃ ||**
**ದಂಷ್ಟ್ರಿಣೋ ಯೇ ವಿಷಂ ತೇಷಾಂ ದಂಷ್ಟ್ರೋತ್ಥಂ ಜಂಗಮಂ ಮತಮ್ ||೯||**

**ಅರ್ಥ—** ಹಾವು, ಕೀಟ. ಇಲಿ. ಲೂತ (ಜಾಡಿ) ಚೇಳು. ಹಲ್ಲಿ ಜಿಗಳಿ, ಮೀನ, ಕಪ್ಪೆ, ಜಿಟ್ಟೆ, ಸರ್ಪಕಂಟಿಕ ||೮|| ನಾಯಿ, ಸಿಂಹ, ಹುಲಿ, ನರಿ, ತರಕ್ಷು ಮುಂಗಲಿ ಮುಂತಾದ ದವಡೆಯುಳ್ಳ ಪ್ರಾಣಿಗಳ ದವಡೆಯಿಂದ ಹುಟ್ಟಿದ ವಿಷಕ್ಕೆ ಜಂಗಮ ವಿಷವೆಂಬ ಹೆಸರು ||೯||

ಸ್ಥಾವರ ವಿಷವನ್ನು ಹೇಳುತ್ತಾರೆ—

**ಮುಸ್ತಕಂ ಪುಷ್ಪಕಂ ಕೌಂಚವತ್ಸನಾಭಂ ಬಲಾಹಕಮ್ ||**
**ಕರ್ಕಟಂ ಕಾಲಕೂಟಞ್ಚ ಕರವೀರಕಸಂಜ್ಞಕಮ್ ||೧೦||**
**ಪಾಲಕೇಂದ್ರಾಯುಧಂ ತೈಲಂ ಮೇಘಕಂ ಕುಶಪುಷ್ಪಕಮ್ ||**
**ರೋಹಿಷಂ ಪುಂಡರೀಕಂಚ ಲಾಂಗಲಕಾಂಜನಾಭಕಮ್ ||೧೧||**
**ಸಂಕೋಚಂ ಮರ್ಕಟಂ ಶೃಂಗೀವಿಷಂ ಹಾಲಾಹಲಂ ತಥಾ ||**
**ಏವಮಾದೀನಿ ಚಾನ್ಯಾನಿ ಮೂಲಜಾನಿ ಸ್ಥಿರಾಣಿ ಚ ||೧೨||**

**ಅರ್ಥ—** ಮುಸ್ತಕ, ಪುಷ್ಪಕ, ಕ್ರೌಂಚ, ಬಚನಾಗ, ಬಲಾಹಕ, ಕರ್ಕಟ, ಕಾಲಕೂಟ, (ಕಣಿಗಲು) ||೧೦|| ಪಾಲಕ, ಇಂದ್ರಾಯುಧ, ತೈಲ, ಮೇಚಕ, ಕುಶಪುಷ್ಪಕ, ರೋಹಿಷ, ಪುಂಡರೀಕ, ಕೋಳಿಕುಕ್ಕನಗಡ್ಡೆ ಅಂಜನಾಭಕ ||೧೧|| ಸಂಕೋಚ, ಮರ್ಕಟ, ಶೃಂಗೀವಿಷ, ಹಾಲಾಹಲ ಇವು ಮತ್ತು ಇದೇ ರೀತಿಯಾಗಿ ಬೇರೆ ಮೂಲ ವಿಷಗಳು ಸ್ಥಾವರ ವಿಷಗಳು. ||೧೨|| ಸುಶ್ರುತದಲ್ಲಿ ಮೂಲಂ, ಪತ್ರಂ, ಫಲಂ ಪುಷ್ಪಂ ತ್ವಕ್ಕ್ಷೀರಂ ಸಾರವವಚ ನಿರ್ಯಾಸೊಧಾತವಶ್ಚೈವ ಕಂದಶ್ಚ ದಶಮಂ ಸ್ಮೃತಃ ಎಂದು ಹತ್ತುಸ್ಥಾವರ ವಿಷದ ಭೇದಗಳೆಂದು ಹೇಳಿದ್ದಾರೆ ||೧೨||

ಗರವೆಂಬ ವಿಷವನ್ನು ಹೇಳುತ್ತಾರೆ—

**ಗರಂ ಸಂಯೋಗಜಂಚಾನ್ಯತ್ ಸಂಜ್ಞಂ ಗದಪ್ರಗರಮ್ ||**
**ಕಾಲಾಂತರವಿಪಾಕಿತ್ವಾನ್ನ ತದಾಶು ಹರೇದಸೂನ್ ||೧೩||**

**ಅರ್ಥ—** ಎರಡು ದ್ರವ್ಯಗಳ ಸಂಯೋಗದಿಂದ ಗರವೆಂಬ ಬೇರೊಂದು ವಿಷಉಂಟಾಗುತ್ತದೆ. ಅದು ರೋಗವನ್ನುಂಟು ಮಾಡುತ್ತದೆ. ಅದರ ವಿಷ ಕವು ಬಹಳ ದಿವಸಕ್ಕೆ ಆಗುವದರಿಂದ ಅದು ತೀವ್ರವಾಗಿ ಪ್ರಾಣವನ್ನು ಕಳೆ ಯದು. ಎರಡೂ ದ್ರವ್ಯಗಳು ನಿರ್ವಿಷವಿದ್ದರೆ ಗರ ಎಂದೂ ಅವುಗಳಲ್ಲಿ ಒಂದು ಅಥವಾ ಎರಡೂ ವಿಷ ವಿದ್ದರೆ ಕೃತ್ರಿಮವಿಷವೆಂದೂ ಹೇಳುವರು. || ೧೩ ||

ಜಂಗಮ ಸ್ಥಾವರ ವಿಷಗಳ ಸಾಮಾನ್ಯಕಾರ್ಯಗಳನ್ನು ಹೇಳುತ್ತಾರೆ.—

**ನಿದ್ರಾಂ ತಂದ್ರಾ ಕ್ಲಮಂ ದಾಹಮಪಾಕಂ ಲೋಮಹರ್ಷಣಮ್ ||**
**ಶೋಥಂ ಚೈವಾತಿಸಾರಂ ಚ ಕುರುತೇ ಜಂಗಮಂ ವಿಷಮ್ ||೧೪||**

**ಸ್ಥಾವರಂ ತು ಜ್ವರಂ ಹಿಕ್ಕಾಂ ದಂತಹರ್ಷಂ ಗಲಗ್ರಹಮ್ ||**
**ಫೇನವಮ್ಯರುಚಿಶ್ವಾಸಾನ್ ಮೂರ್ಚ್ಛಾಂಚ ಜನಯೇದ್ಭೃಶಮ್ ||೧೫**

**ಅರ್ಥ—** ಜಂಗಮ ವಿಷವು ನಿದ್ರೆ, ತಂದ್ರಿ, ಗ್ಲಾನಿ, ದಾಹ, ಅಪಚನ ರೋಮಾಂಚ, ಬಾವು, ಅತಿಸಾರಗಳನ್ನುಂಟುಮಾಡುತ್ತದೆ. ||೧೪|| ಸ್ಥಾವರ ವಿಷವು ಜ್ವರ, ಬಿಕ್ಕು, ಹಲ್ಲು ಜುಮ್ಮೆನ್ನೋಣ, ಗಲಗ್ರಹ, ಬುರುಗು, ವಾಂತಿ, ಅರುಚಿ, ಶ್ವಾಸ, ಮೂರ್ಛೆಗಳನ್ನು ಅತಿಶಯವಾಗಿ ಉಂಟುಮಾಡುವದು ||೧೫

ಜಂಗಮ ಸ್ಥಾವರವಿಷಗಳ ಗತಿಭೇದಗಳನ್ನು ಹೇಳುತ್ತಾರೆ—

**ಜಂಗಮಂ ಸ್ಯಾದೂರ್ಧ್ವಭಾಗಮಧೋಭಾಗಂ ತು ಮೂಲಜಮ್ ||**
**ತಸ್ಮಾದ್ದಂಷ್ಟ್ರಾವಿಷಂ ಮೌಲಂ ಹಂತಿ ಮೂಲಂ ಚ ದಂಷ್ಟ್ರಿಜಂ || ೧೬ ||**

**ಅರ್ಥ—** ಜಂಗಮವಿಷದ ಗತಿಯು ಮೇಲಕ್ಕೂ, ಮೂಲವಿಷದ ಗತಿಯು ಕೆಳಕ್ಕೂ, ಇರುವದರಿಂದ ಜಂಗಮ ವಿಷವು ಮೂಲವಿಷವನ್ನೂ ಮೂಲವಿಷವು ಜಂಗಮ ವಿಷವನ್ನೂ ನಾಶಮಾಡುತ್ತದೆ. || ೧೬ ||

ಟಿಪ್ಪಣಿ– ಪರಸ್ಪರ ವಿರುದ್ಧಗತಿಯುಳ್ಳವು ಪರಸ್ಪರ ನಾಶಕವಾಗುತ್ತವೆ ಎಂಬ ನಿಯಮವು ಕಂಡುಬರುವದಿಲ್ಲ. ಹಾಗಿದ್ದರೆ ಊರ್ಧ್ವಗತಿಯುಳ್ಳ ಮದನಫಲ ಮುಂತಾದ ವಾಮಕ ಔಷಧಗಳು ದಂಷ್ಟ್ರಾವಿಷವನ್ನೂ ಅಧೋಗತಿಯುಳ್ಳ ನಿಶೋತ್ತರ ಮುಂತಾದ ರೇಚಕ ದ್ರವ್ಯಗಳು ಮೂಲಜ ವಿಷವನ್ನು ಕಳೆಯಬೇಕಾದೀತು ಹಾಗೆ ಕಂಡುಬರುವದಿಲ್ಲ ಕಾರಣ ಇದಕ್ಕೆ ಗತಿಭೇದವು ಕಾರಣವಾಗಿರದೆ "ಆತ್ರೇಯಭದ್ರಕಾಪ್ಯೀಯ" ಅಧ್ಯಾಯದಲ್ಲಿ "ವಿಷಂ ವಿಷಘ್ನಮುಕ್ತಂ ಯತ್ ಪ್ರಭಾವಸ್ತತ್ರ ಕಾರಣಂ" ಎಂದು ಹೇಳಿದಂತೆ ಪ್ರಭಾವವೇ ಕಾರಣವಿದ್ದು ಅದಕ್ಕೆ ವಿರುದ್ಧಗತಿಯುಳ್ಳವು ಸ್ವಲ್ಪ ಕಾರಣವಾಗಿದೆ. ||೧೬||

**ಪೂರ್ವದಲ್ಲಿ ಸಾಮಾನ್ಯವಾಗಿ ಹೇಳಿದ (ಮನುಷ್ಯರಿಗುಂಟಾಗುವ) ಎಂಟು ವೇಗಗಳನ್ನು ಹೇಳುತ್ತಾರೆ—**

**ತೃಣ್ಮೋಹದಂತಹರ್ಷಪ್ರಸೇಕವಮಥುಕ್ಲಮಾ ಭವಂತ್ಯಾದ್ಯೇ ||**
**ವೇಗೇ ರಸಪ್ರದೋಷಾದಸೃಕ್ಪ್ರದೋಷಾದ್ ದ್ವಿತೀಯೇ ತು || ೧೭ ||**

**ವೈವರ್ಣ್ಯಭ್ರಮವೇಪಥು ಜೃಂಭಾಮೂರ್ಚ್ಛಾಂಗಭಂಗಚಿಮಿಚಿಮಾತಂಕಾಃ || ೧೮ ||**

**ವಾತಾದಿಜಾಶ್ಚತುರ್ಥೇ ದಾಹಚ್ಛರ್ದ್ಯಂಗಶೂಲಮೂರ್ಚ್ಛಾದ್ಯಾಃ ॥**
**ನೀಲಾದೀನಾಂ ತಮಸಶ್ಚ ದರ್ಶನಂ ಪಂಚಮೇ ವೇಗೇ ॥ ೧೯ ॥**

**ಷಷ್ಠೇ ಹಿಕ್ಕಾ ಭಂಗಃ ಸ್ಕಂಧೇ ಸ್ಯಾತ್ತು ಸಪ್ತಮೇಽಷ್ಟಮೇ ಮರಣಂ ॥**
**ನೃಣಾಂ ಚತುಷ್ಪದಾಂ ಸ್ಯಾಚ್ಚತುರ್ವಿಧಃ ಪಕ್ಷಿಣಾಂ ತ್ರಿವಿಧಃ ॥ ೨೦ ॥**

**ಅರ್ಥ—** ಸ್ಥಾವರ ವಿಷದ ಮೊದಲನೇ ವೇಗದಲ್ಲಿ ರಸಧಾತುವಿನ ದುಷ್ಟತೆಯಿಂದ ನೀರಡಿಕೆ, ಮೋಹ, ದಂತಹರ್ಷ, ಬಾಯಿಗೆ ನೀರುಬಿಡೋಣ ವಾಂತಿ, ದಣಿವುಗಳುಂಟಾಗುವವು. ಎರಡನೇ ವೇಗದಲ್ಲಿ ರಕ್ತದುಷ್ಟಿಯಿಂದ ॥ ೧೭ ॥ ವಿವರ್ಣತೆ, ಭ್ರಮ, ನಡಗು, ಆಕಳಿಕೆ, ಮೂರ್ಛೆ, ಮೈಮುರಿಯೋಣ, ಚಿನಿಚಿನಿ (ಜುಣಜುಣ) ಮೂರನೇವೇಗದಲ್ಲಿ ಮಾಂಸದುಷ್ಟಿಯಿಂದ ಮೈಮೇಲೆ ಕೆಂಪು ಗಂದರಿ, ತಿಂಡಿ, ಶೀತಪಿತ್ತಗಳ ಗಾದರಿಗಳುಂಟಾಗುತ್ತವೆ. ॥ ೧೮ ॥ ನಾಲ್ಕನೇ ವೇಗದಲ್ಲಿ ವಾತಾದಿಗಳು ದುಷ್ಟವಾಗುವದರಿಂದ ದಾಹ, ವಾಂತಿ, ಅಂಗಶೂಲಿ, ಮೂರ್ಛೆ ಮುಂತಾದವುಗಳಾಗುವವು. ಪಂಚಮ ವೇಗದಲ್ಲಿ ಎಲ್ಲ ಪದಾರ್ಥಗಳೂ ಕಪ್ಪಗೆ ಕಾಣುವವು. ಕಣ್ಣಿಗೆ ಕತ್ತಲ ಬರುವದು. ॥ ೧೯ ॥ ಆರನೇ ವೇಗದಲ್ಲಿ ಬಿಕ್ಕು ಬರುವದು. ಏಳನೇ ವೇಗದಲ್ಲಿ ಹೆಗಲು ನೋಯುವದು. ಎಂಟನೇ ವೇಗದಲ್ಲಿ ಮರಣ ಬರುವದು. ಹೀಗೆ ಮನುಷ್ಯರಿಗೆ ಎಂಟು ವೇಗಗಳು ಬರುವವು. ಆದರೆ ಚತುಷ್ಪಾದಗಳಿಗೆ ನಾಲ್ಕು ಪಕ್ಷಿಗಳಿಗೆ ಮೂರು ವೇಗಗಳು ಬರುವವು. ॥ ೨೦ ॥

**ಹಿಂದೆ ಸಾಮಾನ್ಯವಾಗಿ ಹೇಳಿದ ಚತುಷ್ಪಾದಿಗಳ ನಾಲ್ಕು, ಪಕ್ಷಿಗಳ ಮೂರು ವೇಗಗಳನ್ನು ಹೇಳುತ್ತಾರೆ—**

**ಆದ್ಯೇ ಭ್ರಮತಿ ಚತುಷ್ಪದೋಽವಸೀದತಿ ತತಃ ಶೂನ್ಯಂ ॥**
**ಮಂದಾಹಾರೋ ಮ್ರಿಯತೇ ಶ್ವಾಸೇನ ಚತುರ್ಥವೇಗೇ ತು ॥ ೨೧ ॥**

**ಧ್ಯಾಯತ್ಯಾದ್ಯೇ ವೇಗೇ ಪಕ್ಷೀ ಪ್ರಭ್ರಾಮ್ಯತಿ ದ್ವಿತೀಯೇ ತು ॥**
**ಸ್ರಸ್ತಾಂಗಶ್ಚ ತೃತೀಯೇ ವಿಷವೇಗೇ ಯಾತಿ ಪಂಚತ್ವಮ್ ॥ ೨೨ ॥**

**ಅರ್ಥ—** ಚತುಷ್ಪದಪ್ರಾಣಿಯು ವಿಷದ ಮೊದಲನೇ ವೇಗದಲ್ಲಿ ಗರಗರ ತಿರುಗುವದು. ಎರಡನೇ ವೇಗದಲ್ಲಿ ನಿತ್ರಾಣವಾಗುವದು. ಮೂರನೇ ವೇಗದಲ್ಲಿ ಸ್ತಬ್ಧವಾಗಿ ಆಹಾರವನ್ನು ಬಿಡುವದು. ನಾಲ್ಕನೇ ವೇಗದಲ್ಲಿ ಶ್ವಾಸ

ಪುಷ್ಟಿ ಸಾಯುವದು. || ೨೧ || ಪಕ್ಷಿಯು ಮೊದಲನೇ ವೇಗದಲ್ಲಿ ಚಿಂತಾಕ್ರಾಂತವಾದಂತೆ ಕಾಣುವದು. ಎರಡನೇ ವೇಗದಲ್ಲಿ ತನ್ನ ಸುತ್ತಲೂ ತಿರುಗುತ್ತುವದು; ನಿತ್ರಾಣವಾಗುವದು. ಮೂರನೇ ವಿಷವೇಗದಲ್ಲಿ ಸಾಯುವದು. || ೨೨ ||

ಹಿಂದೆ ಸಾಮಾನ್ಯವಾಗಿ ಹೇಳಿದ ವಿಷದ ಹತ್ತು ಗುಣಗಳನ್ನೂ ಆ ಗುಣಗಳ ಕಾರ್ಯಗಳನ್ನೂ ಹೇಳುತ್ತಾರೆ—

**ಲಘು ರೂಕ್ಷಮಾಶು ವಿಶದಂ ವ್ಯವಾಯಿ ತೀಕ್ಷ್ಣಂ ವಿಕಾಸಿ ಸೂಕ್ಷ್ಮಂ ಚ**
**ಉಷ್ಣಮನಿರ್ದೇಶ್ಯರಸಂ ದಶಗುಣಮುಕ್ತಂ ವಿಷಂ ತಜ್ಞೈಃ || ೨೩ ||**
**ರೌಕ್ಷ್ಯಾದ್ವಾತಮುಷ್ಣ್ಯಾತ್ ಪಿತ್ತಂ ಸೌಕ್ಷ್ಮ್ಯಾದಸೃಕ್ಪ್ರಕೋಪಯತಿ ||**
**ಕಫಮವ್ಯಕ್ತರಸತ್ವಾದನ್ನರಸಾಂಶ್ಚಾನುವರ್ತೇತ || ೨೪ ||**
**ಶೀಘ್ರಂ ವ್ಯವಾಯಿಭಾವಾದಾಶು ವ್ಯಾಪ್ನೋತಿ ಕೇವಲಂ ಕಾಯಮ್ ||**
**ತೀಕ್ಷ್ಣತ್ವಾನ್ಮರ್ಮಘ್ನಂ ಪ್ರಾಣಘ್ನಂ ತದ್ವಿಕಾಶಿತ್ವಾತ್ || ೨೫ ||**
**ದುರುಪಕ್ರಮಂ ಲಘುತ್ವಾದ್ವೈಶದ್ಯಾತ್ಸ್ಯಾದಸಕ್ತಗತಿದೋಷಾತ್ ||**

**ಅರ್ಥ—** ಲಘು, ರೂಕ್ಷ, ಆಶು, (ಆಶುಕಾರಿತ್ವ) ವಿಶದ(ಜಿಗಟಿಲ್ಲದ್ದು) ವ್ಯವಾಯಿ, ತೀಕ್ಷ್ಣ, ವಿಕಾಶಿ, ಸೂಕ್ಷ್ಮ, ಉಷ್ಣ, ಅನಿರ್ದೇಶ್ಯರಸ (ಇಂಥದೇ ಎಂದು ಹೇಳಲಿಕ್ಕಾಗದ) ಎಂದು ಹತ್ತು ಗುಣಗಳು ವಿಷದಲ್ಲಿ ಉಂಟೆಂದು ವಿಷಶಾಸ್ತ್ರಜ್ಞರು ಹೇಳುತ್ತಾರೆ. || ೨೩ || ರೌಕ್ಷ್ಯಗುಣದಿಂದ ವಾತವನ್ನೂ ಉಷ್ಣ ಗುಣದಿಂದ ಪಿತ್ತವನ್ನೂ ಸೂಕ್ಷ್ಮತ್ವಗುಣದಿಂದ ರಕ್ತವನ್ನೂ ಅವ್ಯಕ್ತ ರಸದಿಂದ ಕಫವನ್ನೂ ಕುಪಿತಮಾಡುವದು. ಅನ್ನ ರಸಗಳನ್ನು ಶೀಘ್ರವಾಗಿಯೇ ಸೇರುವದು. ||೨೪|| ಶೀಘ್ರ ಮತ್ತು ವ್ಯವಾಯಿ (ದೇಹವನ್ನು ವ್ಯಾಪಿಸಿ ಪಾಕಮಾಡುವ) ಗುಣದಿಂದ ಎಲ್ಲ ಶರೀರವನ್ನು ಶೀಘ್ರವಾಗಿ (ನೀರಲ್ಲಿ ಬಿದ್ದ ತೈಲದಂತೆ) ವ್ಯಾಪಿಸುವದು. ತೀಕ್ಷ್ಣಗುಣದಿಂದ ಮರ್ಮಪೀಡಕವೂ ವಿಕಾಸ (ಸಂಧಿಬಂಧಗಳನ್ನು ಶಿಥಿಲಮಾಡುವ) ಗುಣದಿಂದ ಪ್ರಾಣನಾಶಕವೂ ಆಗಿದೆ. ||೨೫|| ಲಘುತ್ವ (ಚಾಂಚಲ್ಯ) ಗುಣದಿಂದ ಮತ್ತು ವೈಶದ್ಯಗುಣವಿರುವದರಿಂದ, ಅದರ ಗತಿಯು ಅಸ್ಥಿರವಿರುವದರಿಂದ ಚಿಕಿತ್ಸಿಸಲು ಕಠಿಣವಾಗಿದೆ. || ೨೫|| ||

ಸ್ಥಾನವಿಶೇಷದಿಂದ ಉಂಟಾಗುವ ಲಕ್ಷಣ ವಿಶೇಷಗಳನ್ನು ಹೇಳುತ್ತಾರೆ—

ದೋಷಸ್ಥಾನಪ್ರಕೃತೇಃ ಪ್ರಾಪ್ಯಾನ್ಯತಮಂ ಹ್ಯುದೀರಯೇತ್ ॥ ೨೬ ॥
ಸ್ಯಾದ್ವಾತಿಕಸ್ಯ ವಾತಸ್ಥಾನೇ ಕಫಪಿತ್ತಲಿಂಗಮೀಷತ್ತು ॥
ತೃಣ್ಮೋಹಾರತಿಮೂರ್ಛಾಗಲಗ್ರಹಚ್ಛರ್ದಿಫೇನಾದಿ ॥ ೨೭ ॥
ಪಿತ್ತಾಶಯಸ್ಥಿತಂ ಪೈತ್ತಿಕಸ್ಯ ಕಫವಾತಯೋರ್ವಿಷಂ ತದ್ವತ್ ॥
ತೃಟ್‌ಕಾಸಜ್ವರವಮಥುಕ್ಲಮದಾಹತಮೋಽತಿಸಾರಾದಿ ॥ ೨೮ ॥
ಕಫದೇಶಗತಂ ಕಫಾದಿಕಸ್ಯ ವಾತಪಿತ್ತಯೋಶ್ಚ ದರ್ಶಯತಿ ॥
ಲಿಂಗಂ ಶ್ವಾಸಗಲಗ್ರಹಕಂಡೂಲಾಲಾವಮಥ್ವಾದಿ ॥ ೨೯ ॥
ದೂಷೀವಿಷಂಚ ಶೋಣಿತದುಷ್ಟ್ಯರುಃಕಿಟಿಭಕೋಠಲಿಂಗಂಚ ॥
ವಿಷಮೇಕೈಕಂ ದೋಷಂ ಸಂದೂಷ್ಯ ಹರತ್ಯಸೂನೇವಮ್ ॥ ೩೦ ॥
ಕ್ಷರತಿ ವಿಷತೇಜಸಾಸೃಕ್ ತತ್ ಖಾನಿನಿರುಧ್ಯ ಮಾರಯತಿ ಜಂತುಮ್ ॥
ಪೀತಂ ಮೃತಸ್ಯ ಹೃದಿ ತಿಷ್ಠತಿ ದಷ್ಟವಿದ್ಧಯೋರ್ದಂಶದೇಶೇ ಸ್ಯಾತ್
॥ ೩೧ ॥

**ಅರ್ಥ—** ವಿಷವು (ತ್ರಿದೋಷಕೋಪಕವಾಗಿದ್ದರೂ) ದೋಷ, ಸ್ಥಾನ, ಪ್ರಕೃತಿಗಳ ಸಂಬಂಧದಿಂದ ಬೇರೆಬೇರೆ ದೋಷಗಳ ಕೋಪವನ್ನು ಹೆಚ್ಚಾಗಿ ಮಾಡುತ್ತದೆ. ॥ ೨೬ ॥ ವಾತಪ್ರಕೃತಿಯುಳ್ಳವನ ವಾತಸ್ಥಾನದಲ್ಲಿ ಹೋತು ನೀರಡಿಕೆ ಮೋಹ, ಅರತಿ, ಮೂರ್ಛೆ, ಗಲಗ್ರಹ, ವಾಂತಿ, ಬುರುಗು ಮುಂತಾದ ಹೆಚ್ಚಾಗಿ ವಾತದ ಲಕ್ಷಣಗಳನ್ನು ಸ್ವಲ್ಪ ಕಫ ಪಿತ್ತಗಳ ಲಕ್ಷಣಗಳನ್ನುಂಟುಮಾಡುವದು. ॥ ೨೭ ॥ ಇದರಂತೆ ಪಿತ್ತಪ್ರಕೃತಿಯುಳ್ಳವನ ಪಿತ್ತಾಶಯದಲ್ಲಿದ್ದುಕೊಂಡು ನೀರಡಿಕೆ ಕೆಮ್ಮು, ಜ್ವರ, ವಾಂತಿ, ದಣಿವು, ದಾಹ, ಕಣ್ಣಿಗೆ ಕತ್ತಲಿಬರೋಣ, ಅತಿಸಾರ ಮುಂತಾದ ಹೆಚ್ಚಾಗಿ ಪಿತ್ತದ ಲಕ್ಷಣಗಳನ್ನೂ ಸ್ವಲ್ಪ ಕಫವಾತಗಳ ಲಕ್ಷಣಗಳನ್ನೂ ಉಂಟುಮಾಡುವದು. ॥ ೨೮ ॥ ಕಫಪ್ರಕೃತಿಯುವನ ಕಫದೇಶದಲ್ಲಿದ್ದುಕೊಂಡು ಶ್ವಾಸ, ಗಲಗ್ರಹ, ಕಂಡೂ, ಲಾಲಾಸ್ರಾವ, ವಾಂತಿ ಮುಂತಾದ ಹೆಚ್ಚಾಗಿ ಕಫದ ಲಕ್ಷಣಗಳನ್ನೂ ಸ್ವಲ್ಪ ವಾತಪಿತ್ತಗಳ ಲಕ್ಷಣಗಳನ್ನೂ ಉಂಟುಮಾಡುವದು. ॥ ೨೯ ॥ ದೂಷೀ ವಿಷವು ರಕ್ತವನ್ನು ಕೆಡಿಸಿ, ಬಕ್ಕೆ ಕಿಟಿಭ (ಕುಷ್ಠವಿಶೇಷ) ಗಾದರಿ ಮುಂತಾದ ಲಕ್ಷಣಗಳನ್ನುಂಟುಮಾಡುವದು. ವಿಷವು ಈ ಪ್ರಕಾರ ಒಂದೊಂದು ದೋಷವನ್ನು ಕೆಡಿಸಿ, ಪ್ರಾಣಗಳನ್ನು ತೆಕ್ಕೊಳ್ಳು

ವಸು. ॥ ೩೦ ॥ ವಿಷದ ಉಷ್ಣತೆಯಿಂದ ರಕ್ತವು ಒಸರಿ ಆ ಸ್ರೋತಸ್ಸುಗಳನ್ನು ಪ್ರತಿಬಂಧಿಸಿ ಪ್ರಾಣಿಯನ್ನು ಕೊಲ್ಲುವದು. ಕುಡಿದ ವಿಷವು ಸತ್ತವನ ಎದೆಯಲ್ಲಿಯೂ ಕಡಿದ ಅಥವಾ ಚುಚ್ಚಿಹಾಕಿದ ವಿಷವು ಚುಚ್ಚಿದ ಭಾಗದಲ್ಲಿಯೂ ಇರುತ್ತದೆ. ॥ ೩೧ ॥

ಮರಣ ಚಿನ್ಹಗಳನ್ನು ಹೇಳುತ್ತಾರೆ—

**ನೀಲೋಷ್ಠದಂಶದಂತಶೈಥಿಲ್ಯಕೇಶಪತನಾಂಗಭಂಗವಿಕ್ಷೇಪಾಃ ॥**
**ಶಿಶಿರೈರ್ನ ಲೋಮಹರ್ಷೋ ನಾಭಿಹತೇ ದಂಡರಾಜೀ ಸ್ಯಾತ್ ॥ ೩೨ ॥**
**ಕ್ಷತಜಂ ಕ್ಷತಾಚ್ಚ ನಾಯಾತ್ಯೇತಾನಿ ಭವಂತಿ ಮರಣಲಿಂಗಾನಿ ॥**

**ಅರ್ಥ—** ತುಟಿ ಕಪ್ಪಗಾಗೋಣ, ಕಡಿದಗಾಯ ಕಪ್ಪಗಾಗೋಣ, ಹಲ್ಲು ಸಡಿಲಾಗೋಣ, ಕೂದಲು ಉದರೋಣ, ಮೈಸೋಯೋಣ, ಕೈಕಾಲು ಅತ್ತಿತ್ತ ಚಲ್ಲೋಣ, ಅತಿ ಶೀತಪದಾರ್ಥದಿಂದಲೂ ಮೈ ರೋಮಾಂಚ ಏಳದಿರೋಣ ಬಡಿದರೂ ಮೈಮೇಲೆ ಬಾರು ಏಳದಿರೋಣ, ॥೩೨॥ ಗಾಯದಿಂದ ರಕ್ತ ಬರದಿರೋಣ, ಇವು ಮರಣದ ಚಿನ್ಹಗಳು ॥ ೩೩॥ ॥

ಇಲ್ಲಿಯವರೆಗೆ ವಿಷದ ಗುಣ ಮತ್ತು ವೇಗಗಳನ್ನು ಹೇಳಿ ಇನ್ನುಮೇಲೆ ಇಪ್ಪತ್ತನಾಲ್ಕು ಉಪಕ್ರಮಗಳನ್ನು ಹೇಳುತ್ತಾರೆ—

**ಏಭ್ಯೋಽನ್ಯಥಾ ಚಿಕಿತ್ಸಾ ತೇಷಾಂ ಚೋಪಕ್ರಮಾನ್ ಶೃಣು ಮೇ ॥೩೩॥**
**ಮಂತ್ರಾರಿಷ್ಟೋತ್ಕರ್ತನನಿಷ್ಪೀಡನಚೂಷಣಾಗ್ನಿಪರಿಷೇಕಾಃ ॥**
**ಅವಗಾಹನರಕ್ತಮೋಕ್ಷಣವಮನವಿರೇಕೋಪಧಾನಾನಿ ॥ ೩೪ ॥**
**ಹೃದಯಾವರಣಾಂಜನನಸ್ಯಧೂಮಲೇಹೌಷಧಪ್ರಧಮನಾನಿ ॥**
**ಪ್ರತಿಸಾರಣಂ ಪ್ರತಿವಿಷಂ ಸಂಜ್ಞಾಸಂಸ್ಥಾಪನಂಲೇಪಃ ॥ ೩೫ ॥**
**ಮೃತಸಂಜೀವನಮೇವ ಚ ವಿಂಶತಿರೇತೇ ಚತುರ್ಭಿರಧಿಕಾಃ ॥**
**ಸ್ಯುರುಪಕ್ರಮಾ ಯಥಾ ಯೇ ಯತ್ರ ಯೋಜ್ಯಾಃ ಶೃಣು ತಥಾ ತಾನ್ ॥ ೩೬ ॥**

**ಅರ್ಥ—** ಮೇಲೆ ಹೇಳಿದ ಈ ಅಸಾಧ್ಯ ಲಕ್ಷಣಗಳಿಲ್ಲದಿದ್ದರೆ ಅವುಗಳ ಚಿಕಿತ್ಸೆಯನ್ನು ಮಾಡಬೇಕು. ಅವುಗಳ ಉಪಕ್ರಮವನ್ನು ಹೇಳುತ್ತೇನೆ

ಕೇಳಿರಿ. || ೩೩ || ೧ ಮಂತ್ರ ೨ ಅರಿಷ್ಟ (ಕಟ್ಟೋಣ) ೩ ವಿಷಸ್ಥಾನವನ್ನು ಕೊಯ್ಯೋಣ ೪ ವಿಷವನ್ನು ಹಿಂಡಿ ತೆಗೆಯೋಣ ೫ ಬಾಯಿಂದಹೀರಿತೆಗೆಯೋಣ ೬ ವಿಷಸ್ಥಾನವನ್ನು ಸುಡೋಣ ೭ ಅದರಮೇಲೆ ಔಷಧ ಸುರುವೋಣ (ಔಷಧ ದಲ್ಲಿ ಎದ್ದಿ ಅರಿವೆ ಗಳಿಗೆಗಳನ್ನು ಇಡುವದು) ೮ ಔಷಧದಲ್ಲಿ ಕಚಿದ ಸ್ಥಾನ ವನ್ನು ಮುಣಗಿಸಿ ಇಡೋಣ ೯ ರಕ್ತತೆಗೆಯೋಣ, ೧೦ ವಮನ ಮಾಡಿ ಸೋಣ ೧೧ ವಿರೇಚನ ಕೊಡೋಣ ೧೨ ಉಪಧಾನ (ತಲೆಯಲ್ಲಿ ಕೆದರಿ ಔಷದ ಹಾಕೋಣ) ೧೩ ಹೃದಯಾವರಣ (ಹೃದಯ ರಕ್ಷಕ ಔಷಧ) ೧೪ ಅಂಜನ ೧೫ ನಸ್ಯ, ೧೬ ಧೂಪ, ೧೭ ಲೇಹ, ೧೮ ಔಷಧ ೧೯ ಪ್ರಧ ಮನ ನಸ್ಯ ೨೦ ಪ್ರತಿಸಾರಣ (ಚೂರ್ಣದಿಂದ ತಿಕ್ಕೋಣ) ೨೧ ವಿರುದ್ಧ ವಿಷ ಕೊಡೋಣ, ೨೨ ಸಂಜ್ಞಾಸಂಸ್ಥಾಪನ (ಎಚ್ಚರಿಕೆ ಯಿಂದಲೇ ಇರಿಸೋಣ) ೨೩ ಲೇಪ, ೨೪ ಮೃತಸಂಜೀವನ ಹೀಗೆ ಇಪ್ಪತ್ತನಾಲ್ಕು ಉಪಾಯಗಳು ಇರುತ್ತವೆ. ಇವುಗಳಲ್ಲಿ ಯಾವದನ್ನು ಎಲ್ಲಿ ಉಪಯೋ ಗಿಸಬೇಕು ಅವುಗಳನ್ನು ಹೇಳುತ್ತೇನೆ ಕೇಳು ||೩೬||

ಈ ಉಪಾಯಗಳನ್ನು ಎಲ್ಲಿ ಯಾವಾಗ್ಗೆ ಮಾಡಬೇಕೆಂಬದನ್ನು ಹೇಳುತ್ತಾರೆ.

**ದಂಶಾತ್ತು ವಿಷಂ ದಷ್ಟಸ್ಯಾ ವಿಸೃತಂ ವೇಣಿಕಾಂ ಭಿಷಗ್ ಬದ್ಧ್ವಾ ||**
**ನಿಷ್ಪೀಡಯೇದ್ ದ್ರುತಂ ದಂಶಮುದ್ಧರೇನ್ಮರ್ಮವರ್ಜಿಂ ವಾ || ೩೭ ||**
**ತಂ ದಂಶಂ ವಾ ಚೂಷೇನ್ ಮುಖೇನ್ ಯುವಚೂರ್ಣಪಾಂಶು ಪೂರ್ಣೇನ ||**
**ಪ್ರಚ್ಛನ್ ಶೃಂಗ್ಜಲೌಕೋವ್ಯಧನೈಃ ಸ್ರಾವ್ಯಂ ತತೋ ರಕ್ತಮ್ ||೩೮||**
**ರಕ್ತೇ ವಿಷಪ್ರದುಷ್ಟೇ ದುಷ್ಯೇತ್ ಪ್ರಕೃತಿಸ್ತತಸ್ತ್ಯಜೇತ್ ಪ್ರಾಣಾನ್ ||**
**ತಸ್ಮಾತ್ ಪ್ರಘರ್ಷಣೈರಸೃಗವರ್ತಮಾನಂ ಪ್ರವರ್ತ್ಯಂಸ್ಯಾತ್ || ೩೯ ||**
**ತ್ರಿಕಟು ಗೃಹಧೂಮರಜನೀ ಪಂಚಲವಣಾಃ ಸವಾರ್ತಾಕಾಃ ಘರ್ಷಣಮ್ || ೩೯|| ||**

**ಅರ್ಥ—** ಕಡಿಸಿಕೊಂಡವನ ಗಾಯದಿಂದ ವಿಷವು ಪಸರಿಸಿಲ್ಲವೆಂಬು ದನ್ನು ತಿಳಿದು ಗಾಯದಮೇಲೆ ಹಗ್ಗವನ್ನುಕಟ್ಟಿ ವಿಷವನ್ನು ತೀವ್ರವಾಗಿ ಹಿಂಡಿ ತೆಗೆಯಬೇಕು ಅದು ಮರ್ಮಸ್ಥಾನದಲ್ಲಿಲ್ಲದಿದ್ದರೆ ಗಾಯವನ್ನೇ ಕತ್ತ ರಿಸಿ ತೆಗೆಯಬೇಕು ||೩೭|| ಅಥವಾ ಬಾಯಿಯಲ್ಲಿ ಜವೆಯ ಹಿಟ್ಟನ್ನು

ಅಥವಾ ಮಣ್ಣಿನ ಹುಡಿಯನ್ನು ತುಂಬಿಕೊಂಡು ಬಾಯಿಯಿಂದ ಹೀರಬೇಕು. ಅಥವಾ ಕಚ್ಚು ಹಾಕಿ ತುಂಬಡಿ ಜಿಗಳಿಗಳಿಂದ ಅಥವಾ ಶಿರೆಯನ್ನು ಕತ್ತರಿಸುವದರಿಂದ ರಕ್ತಸ್ರಾವ ಮಾಡಬೇಕು. ॥ ೩೮ ॥ ರಕ್ತವು ವಿಷದಿಂದ ದುಷ್ಟವಾಗಲು ಪ್ರಕೃತಿಯು ಕೆಡುವದು ಅದರಿಂದ ಪ್ರಾಣವನ್ನು ಬಿಡುವನು. ಆದಕಾರಣ ರಕ್ತಸ್ರಾವವಾಗುತ್ತಿದ್ದಿಲ್ಲವಾದರೆ ತ್ರಿಕಟು ಇಲ್ಲಣ ಅರಿಷಿಣ ಪಂಚಲವಣ, ವಾರ್ತಾಕ (ಬದನೆ) ಇವುಗಳ ಚೂರ್ಣದಿಂದ ತಿಕ್ಕಿ ರಕ್ತಸ್ರಾವವನ್ನು ಪ್ರಾರಂಭಿಸಬೇಕು. ॥ ೩೯ ॥

**ಅತಿಪ್ರವೃತ್ತೇ ವಟಾದಿಭಿಃ ಶೀತಲಃ ಪ್ರಲೇಪಃ ॥ ೪೦ ॥**
**ರಕ್ತಂ ಹಿ ವಿಷಾಧಾನಂ ವಾಯುರಿವಾಗ್ನೇಃ ಪ್ರದೇಹಸೇಕೈಸ್ತತ್ ॥**
**ಶೀತೈಃ ಸ್ಕಂದತಿ ತಸ್ಮಿನ್ ಸ್ಕನ್ನೇ ವ್ಯಪಯಾತಿ ವಿಷವೇಗಃ ॥ ೪೧ ॥**
**ವಿಷವೇಗಾನ್ಮದಮೂರ್ಚ್ಛಾವಿಷಾದಹೃದಯದ್ರವಾಃ ಪ್ರವರ್ತಂತೇ ॥**
**ಶೀತೈರ್ನಿವರ್ತಯೇತ್ ತಾನ್ ವೀಕ್ಷ್ಯಾಶ್ಚ ಲೋಮಹರ್ಷಾತ್ ಸ್ಯಾತ್ ॥೪೨**
**ತರುರಿವ ಮೂಲಚ್ಛೇದಾದ್ ದಂಶಚ್ಛೇದಾನ್ನ ವೃದ್ಧಿಮೇತಿವಿಷಮ್ ॥**
**ಆಚೂಷಣಮಾನಯನಂ ಜಲಸ್ಯ ಸೇತುರ್ಯಥಾ ತಥಾರಿಷ್ಟಾಃ ॥೪೩॥**
**ತ್ವಙ್ಮಾಂಸಗತೋ ದಾಹೋ ದಹತಿವಿಷಂಸ್ರಾವಣಂಹರತಿರಕ್ತಾತ್॥**

**ಅರ್ಥ—** ರಕ್ತಸ್ರಾವವು ಬಹಳ ಆಗಹತ್ತಿದರೆ ಆಲ ಅರಳಿ ಮುಂತಾದವುಗಳ ತೊಗಟೆಗಳಿಂದ ಶೀತ ಲೇಪವನ್ನು ಮಾಡಬೇಕು. ॥ ೪೦ ॥ ಅಗ್ನಿಗೆ ವಾಯುವು ಆಧಾರವಾಗಿರುವಂತೆ ರಕ್ತವು ವಿಷಕ್ಕೆ ಆಧಾರವಾಗಿದೆ. ಆದ್ದರಿಂದ ಅದು ಶೀತ ಲೇಪಸೇಚನಗಳಿಂದ ಗಟ್ಟಿಯಾಗುತ್ತದೆ. ಅದು ಗಟ್ಟಿಯಾಗಲು ವಿಷದ ವೇಗವು ಹೋಗುವದು. ॥ ೪೧ ॥ ವಿಷದ ವೇಗದಿಂದ ಮದ, ಮೂರ್ಛೆ ದುಃಖ, ಎದೆಯಡವಡಿಕೆ ಸ್ತೋಣ ಇವು ಉಂಟಾಗುತ್ತವೆ. ಶೀತೋಪಚಾರದಿಂದ ಅವುಗಳನ್ನು ಕಳೆಯಬೇಕು. ರೋಮಾಂಚ ಏಳುವವರೆಗ ತಣ್ಣಗಿನ ಗಾಳಿ ಬೀಸಬೇಕು. ॥ ೪೨ ॥ ಬೊಡ್ಡೆ ಕಡಿಯಲು ಗಿಡವು ಹೇಗೆ ಬೆಳೆಯಲಾರದೋ ಹಾಗೆ ದಂಶಸ್ಥಾನವನ್ನು ಕಡಿಯಲು ವಿಷವು ಬೆಳೆಯಲಾರದು, ರಕ್ತ ಹೀರುವದರಿಂದ ವಿಷವು ಹೊರಹೊರಡುವದು. ಅರಿಷ್ಟ ಬಂಧನಗಳು ನೀರಿಗೆ ಒಡ್ಡುಹಾಕಿದಂತೆ ವಿಷವನ್ನು ಪ್ರತಿಬಂಧಿಸುತ್ತವೆ. ॥ ೪೩ ॥ ತ್ವಚೆ ಮಾಂಸಗಳನ್ನು ಸುಡ್ಡರೆ ಅದು ವಿಷವನ್ನು ಸುಡುವದು. ರಕ್ತಸ್ರಾವವು ರಕ್ತದಲ್ಲಿದ್ದ ವಿಷವನ್ನು ಕಳೆಯುವದು. ॥ ೪೪ ॥

ವಿಷದ ವೇಗಾನುಸಾರವಾಗಿ ಚಿಕಿತ್ಸೆಯನ್ನು ಹೇಳುತ್ತಾರೆ—

**ಪೀತಂ ವಮನೈಃ ಸದ್ಯೋ ಹರೇದ್ ವಿರೇಕೈರ್ದ್ವಿತೀಯೇ ತು ||೪೪||**
**ಆದೌ ಹೃದಯಂ ರಕ್ಷ್ಯಂ ತಸ್ಯಾವರಣಂ ಪಿಬೇದ್ ಯಥಾಲಾಭಮ್ ||**
**ಮಧುಸರ್ಪಿರ್ಮಜ್ಜಾನಂ ಗೈರಿಕಮಥ ಗೋಮಯರಸಂ ವಾ ||೪೫||**
**[illegible]ಕ್ಷುಂ ಸುಪಕ್ವಮಥವಾ ಕಾಕಂ ನಿಷ್ಪೀಡ್ಯ ತದ್ರಸಂ ವಾ [illegible]ಲಮ್ ||**
**[illegible]ಾಗಾದೀನಾಂ ವಾಸೃಗ್ ಭಸ್ಮ ಮೃದಂ ವಾ ಪಿಬೇದಾಶು ||೪೬||**
**[illegible]ಕ್ಷಾರೋಽಗದಸ್ತೃತೀಯೇ ಶೋಥಹರಂ ಛರ್ದನಂ ಸಮಧ್ವಂಬು ||**
**[illegible]ೋಮಯರಸಶ್ಚತುರ್ಥೇ ವೇಗೇ ಸಕಪಿತ್ಥಮಧುಸರ್ಪಿರ್ಭಿಃ ||೪೭||**
**[illegible]ಾಂಡಶಿರೀಷಾಭ್ಯಾಂ ಸ್ವರಸೇನಾಶ್ಚ್ಯೋತನಾಂಜನೇ ನಸ್ಯಮ್ ||**
**ಸ್ಯಾತ್ ಪಂಚಮೇಽಥ ಷಷ್ಠೇ ಸಂಜ್ಞಾಸಂಸ್ಥಾಪನಂ ಕಾರ್ಯಮ್ ||೪೮||**
**ಗೋಪಿತ್ತಯುಕ್ತರಜನೀಮಂಜಿಷ್ಠಾಮರಿಚಪಿಪ್ಪಲೀಪಾನಮ್ ||**
**[illegible]ಷಪಾನಂ ನಷ್ಟಾನಾಂ ವಿಷಪೀತೇ ದಂಶನಂ ಚಾಂತೇ ||೪೯||**

**ಅರ್ಥ—** ಕುಡಿದ ವಿಷವನ್ನು ವಮನಕೊಟ್ಟು ತೆಗೆಯಬೇಕು. ದ್ವಿತೀಯ ವೇಗದಲ್ಲಿ ವಿರೇಚನದಿಂದ ವಿಷವನ್ನು ತೆಗೆಯಬೇಕು. || ೪೪ || ಮೊದಲು ಹೃದಯವನ್ನು ರಕ್ಷಿಸತಕ್ಕದ್ದು. ಅದರ ಆವರಣ (ರಕ್ಷಿಸುವ ಔಷಧ) ಔಷಧ ಗಳಲ್ಲಿ ಸಿಕ್ಕದ್ದನ್ನು ಕುಡಿಯಬೇಕು. ಜೇನು, ತುಪ್ಪ, ಮಜ್ಜೆಗೆ, ಕಾವಿ ಅಥವಾ [illegible]ೋಮಯದರಸ || ೪೫ || ಅಥವಾ ಕಬ್ಬು ಅಥವಾ ಕಾಗೆಯನ್ನು ಜೇಯಿಸಿ [illegible]ದರ ಸ್ವಚ್ಛ ರಕ್ತವನ್ನು ಅಥವಾ ಆಡು ಮುಂತಾದವುಗಳ ರಕ್ತವನ್ನು, ಬೂದಿ [illegible]ನ್ನು ಅಥವಾ ಮಣ್ಣನ್ನು ತೀವ್ರವಾಗಿ ಕುಡಿಯಬೇಕು. || ೪೬ || ಮೂರನೇ ವೇಗದಲ್ಲಿ ಕ್ಷಾರ, ಅಗದ, ಶೋಥನಾಶಕವಾದ ನೀರು ಜೇನು ಹಾಕಿದ ವಮನ [illegible]ನ್ನು ಕೊಡಬೇಕು. ನಾಲ್ಕನೇ ವಿಷವೇಗದಲ್ಲಿ ಬೆಳವಲತಿಳಲು ಜೇನು ಮತ್ತು ತುಪ್ಪಹಾಕಿದ ಗೋಮಯರಸವನ್ನು ಕೊಡಬೇಕು. || ೪೭ || ಐದನೇ ವೇಗ [illegible] ಕಾಕಾಂಡ (ಕಾಕತಿಂಡಿ) ಶಿರೀಷರಸದಿಂದ ಕಣ್ಣಲ್ಲಿ ಆಶ್ಚ್ಯೋತನ ಅಂಜನ ಗಳನ್ನು ಮತ್ತು ನಸ್ಯವನ್ನೂ ಮಾಡಬೇಕು. ಆರನೇ ವೇಗದಲ್ಲಿ ಸಂಜ್ಞಾ ಸಂಸ್ಥಾಪನ (ಸಿದ್ಧೆಹತ್ತದಂತೆಮಾಡುವ) ಔಷಧಿಗಳನ್ನು ಕೊಡಬೇಕು. || ೪೮ || ಗೋರೋಚನ, ಅರಿಷಿಣ, ಮಂಜಿಷ್ಠಾ, ಮೆಣಸು, ಹಿಪ್ಪಲಿಗಳ ಕಷಾಯಪಾನ ವನ್ನು ಮಾಡಬೇಕು. ಹಾವು ಕಡಿದವರಿಗೆ ಮೂಲಜ ವಿಷವನ್ನು ಕುಡಿಸ [illegible], ಕಡೆಗೆ ವಿಷಪಾನಮಾಡಿದವನಿಗೆ ಹಾವನ್ನು ಕಡಿಸಬೇಕು. || ೪೯ ||

ಶಿಖಿಪಿತ್ತಾರ್ದ್ಧಯುತಂ ಸ್ಯಾತ್‌ಪಲಾಶಬೀಜಮಗದೋ ಮೃತೇಷು ವರಃ||
ವಾರ್ತಾಕಫಾಣಿತಾಗಾರಧೂಮಗೋಪಿತ್ತನಿಂಬಂ ವಾ ||೫೦||
ಗೋಪಿತ್ತಯುತ್ತೈರ್ಗುಡಿಕಾ ಸುರಸೋಗ್ರಾ ದ್ವಿರಜನೀಮಧುಕಕುಷ್ಠೈಃ
ಶಸ್ತಾ ಮೃತೇನ ತುಲ್ಯಾ ಶಿರೀಷಪುಷ್ಪಕಾಕಾಂಡರಸೈರ್ವಾ ||೫೧||
ಕಾಕಾಂಡಸುರಸಗವಾಕ್ಷೀಪುನರ್ನವಾವಾಯಸೀಶಿರೀಷಫಲೈಃ ||
ಉದ್ಬಂಧವಿಷಜಲಮೃತೇ ಲೇಪೌಷಧನಸ್ಯಪಾನಾನಿ ||೫೨||

**ಅರ್ಥ—** ವಿಷದಿಂದ ಸತ್ತಂತೆ ಬಿದ್ದವನಿಗೆ ನವಿಲಿನ ಪಿತ್ತವನ್ನು ಅರ್ಧ ಪ್ರಮಾಣಹಾಕಿಕೊಟ್ಟ ಮುತ್ತುಲ ಬೀಜವು ಉತ್ತಮ ಔಷಧವಾಗಿದೆ ಅಥವಾ ಹೆಬ್ಬಗುಳ್ಳ, ಕಾಕಂಬಿ, ಇಲ್ಲಣ, ಗೋರೋಚನ, ಬೇವು ಇವುಗಳ ಕಷಾಯವೂ ಉತ್ತಮವಾಗಿದೆ. || ೫೦ || ಅದರಂತೆ ತುಳಸಿ, ಬಜೆ, ಅರಿಷಿಣ, ಮರಅರಿಷಿಣ ಜೇಷ್ಠಮಧು, ಕೋಷ್ಠ, ಇವುಗಳ ಚೂರ್ಣದಲ್ಲಿ ಅಥವಾ ಶಿರೀಷಪುಷ್ಪ, ಕಾಕಾಂಡ (ಕಾಕತಿಂಡಿ) ದರಸದಲ್ಲಿ ಗೋರೋಚನವನ್ನು ಕೂಡಿಸಿ ಮಾಡಿದ ಗುಳಿಗೆಗಳು ಅಮೃತತುಲ್ಯವಾಗಿವೆ. || ೫೧ || ಉರಲುಹಾಕುವದು ವಿಷ ತಿನ್ನುವದು ನೀರಲ್ಲಿ ಮುಳುಗುವದು ಇವುಗಳಿಂದ ಸತ್ತಂತೆ ಬಿದ್ದವರಿಗೆ ಕಾಕಾಂಡ (ನಸುಗುನ್ನಿ) ತುಳಸಿ, ಕಾಡಕವಡಿ, ಬಿಳೀಗಣಜಲಬೇರು, ವಾಯಸೀ (ಎಲಬು ಸಂದಕ) ಶಿರೀಷ ಫಲಗಳ ಚೂರ್ಣದಲ್ಲಿ ಗೋರೋಚನ ಹಾಕಿ ಗುಳಿಗೆಮಾಡಿ ಅವುಗಳಿಂದ ಲೇಪ, ನಸ್ಯ, ಪಾನಗಳನ್ನು ಮಾಡಿಸಬೇಕು. || ೫೨ ||

ಮೃತಸಂಜೀವನ ಔಷಧವನ್ನು ಹೇಳುತ್ತಾರೆ—

ಸ್ಪೃಕ್ಕಾಪ್ಲವಸ್ಥೌಣೇಯಕಾಕ್ಷೀಶೈಲೇಯರೋಚನಾತಗರಮ್ ||
ಧ್ಯಾಮಕಕುಂಕುಮಮಾಂಸೀಸುರಸಾಗ್ರೈಲಾಲಕುಷ್ಠಘ್ನಮ್ ||೫೩||
ಬೃಹತೀಶಿರೀಷಪುಷ್ಪಶ್ರೀವೇಷ್ಟಪದ್ಮಚಾರಟೀವಿಶಾಲಾಃ ||
ಸುರದಾರುಪದ್ಮಕೇಶರಸಾವರಕಮನಃಶಿಲಾಕೌಂತ್ಯಃ ||೫೪||
ಜಾತ್ಯರ್ಕಪುಷ್ಪರಸರಜನೀದ್ವಯಹಿಂಗುಪಿಪ್ಪಲೀಲಾಕ್ಷಾಃ ||
ಜಲಮುದ್ಗಪರ್ಣಿಚಂದನಮದನಮಧುಕಸಿಂಧುವಾರಾಶ್ಚ ||೫೫||
ಶಂಪಾಕಲೋಧ್ರಮಯೂರಕಗಂಧಫಲೀನಾಕುಲೀವಿಡಂಗಾಶ್ಚ ||
ಪುಷ್ಯೇ ಸಂಹೃತ್ಯ ಸಮಂ ಪಿಷ್ಟ್ವಾ ಗುಟಿಕಾ ವಿಧೇಯಾಃ ಸ್ಯುಃ ||೫೬||

**ಸರ್ವವಿಷಘ್ನೋ ಜಯಕೃದ್ವಿಷಮೃತಸಂಜೀವನೋ ಜ್ವರನಿಹನ್ತಾ ||**
**ಘ್ರೇಯವಿಲೇಪನಧಾರಣಧೂಮಗ್ರಹಣೈರ್ಗೃಹಸ್ಥಶ್ಚ ||೫೭||**
**ಭೂತವಿಷಜಂತ್ವಲಕ್ಷ್ಮೀಕಾರ್ಮಣಮಂತ್ರಾಗ್ನ್ಯಶನ್ಯರೀನ್ ಹನ್ಯಾತ್ ||**
**ದುಃಸ್ವಪ್ನಸ್ತ್ರೀದೋಷಾನಕಾಲಮರಣಾಂಬುಚೌರಭಯಮ್ ||೫೮||**
**ಧನಧಾನ್ಯಕಾರ್ಯಸಿದ್ಧಿಶ್ರೀಪುಷ್ಟ್ಯಾಯುರ್ವಿವರ್ಧನೋ ಧನ್ಯಃ ||**
**ಮೃತಸಂಜೀವನ ಏಷ ಪ್ರಾಗಮೃತಾದ್ ಬ್ರಹ್ಮಣಾ ವಿಹಿತಃ ||೫೯||**

**ಅರ್ಥ—** ಸ್ಪೃಕ್ಕಾ (ಗಂಧದ್ರವ್ಯವಿಶೇಷ ಪಿಂಡಿಶಾಕ) ಅಡವೀಜೇಕು, ಸ್ಥೌಣೇಯ (ಗಡೋನಾ) ಪಟಿಕ, ಕಲ್ಲುಹೂವು, ಗೋರೋಚನ, ತಗರ, ರೋಹಿಸಹುಲ್ಲು, ಕೇಶರ, ಜಟಾಮಾಂಸಿ, ತುಳಸೀಮಂಜರಿ, ಯಾಲಕಿ, ಹರತಾಳ, ಬಾವಂಚಿ, || ೫೩ || ಹೆಬ್ಬಗುಳ್ಳ, ಶಿರೀಷಪುಷ್ಪ, ಗಂಧಾಬಿಶೋಜಾ, ಸ್ಥಲಕಮಲಿಸೀ, ಕಾಡಕವಡೀಬೇರು, ದೇವದಾರು, ಕಮಲಕೇಶರ; ಬಿಳೀ ಲೋಧ್ರ, ಮನಶಿಳಾ, ರೇಣುಕಬೀಜ, || ೫೪ || ಮಲ್ಲಿಗೆ ಮತ್ತು ಎಕ್ಕೆಹೂವಿನರಸ, ಅರಿಷಣ, ಮರಅರಿಷಿಣ, ಇಂಗು, ಹಿಪ್ಪಲಿ,ಅರಗು ಬಾಳದಬೇರು, ಅಡವೀಉದ್ದು, ಚಂದನ, ಮಂಗಾರಿಕಾಯಿ, ಜೇಷ್ಠಮಧು, ಲಕ್ಕಿ || ೫೫ || ಕಕ್ಕಿ, ಕೆಂಪುಲೋಧ್ರ, ಉತ್ತರಾಣಿ, ಪ್ರಿಯಂಗು, ನಾಕುಲೀ (ರಾಸ್ನಾ) ಮಾವಡಿಂಗ ಇವುಗಳನ್ನೆಲ್ಲ ಪುಷ್ಯನಕ್ಷತ್ರದಮೇಲೆ ತಕ್ಕೊಂಡುಬಂದು ಸಮನಾಗಿ ಪುಡಿಮಾಡಿ ಗುಳಿಗೆಗಳನ್ನು ಮಾಡಬೇಕು. || ೫೬ || ಇದು ವಿಷಮೃತಸಂಜೀವನೀ ಎಂಬ ಔಷಧವು. ಮೂಸೋಣ, ಲೇಪನ, ಧಾರಣ ಅಥವಾ ಹೊಗೆ ತಕ್ಕೊಳ್ಳೋಣ ಇವುಗಳಿಂದ ಇದು ಎಲ್ಲ ವಿಷವನ್ನೂ ಜ್ವರಗಳನ್ನೂ ಕಳೆಯುವದು. ಜಯವನ್ನು ಕೊಡುವದು. || ೫೭ || ಇದು ಮನೆಯೊಳಗೆ ಇದ್ದರೆ ಭೂತ, ವಿಷ. ಜಂತು ದಾರಿದ್ರ್ಯ, ಮಾಟ, ಬೆಂಕಿ, ಸಿಡಿಲು, ಶತ್ರುಗಳನ್ನು ನಾಶಮಾಡುವದು ದುಃಸ್ವಪ್ನ, ಸ್ತ್ರೀದೋಷ, (ಹೆಂಗಸರು ಕೊಟ್ಟಮದ್ದು) ಅಕಾಲ ಮರಣ, ನೀರು, ಕಳ್ಳರ ಭಯವನ್ನು ಕಳೆಯುವದು. || ೫೮ || ಧನ, ಧಾನ್ಯ, ಕಾರ್ಯಸಿದ್ಧಿ, ಲಕ್ಷ್ಮಿ, ಪುಷ್ಟಿ, ಆಯುಷ್ಯಗಳನ್ನು ಹೆಚ್ಚಿಸುವದು. ಧನ್ಯವೂ ಆಗಿದೆ. ಬ್ರಹ್ಮನು ಅಮೃತಕ್ಕಿಂತ ಮೊದಲು ಇದನ್ನು ಹುಟ್ಟಿಸಿದ್ದಾನೆ. || ೫೯ ||

**ಚಿಕಿತ್ಸಾಕ್ರಮವನ್ನು ಹೇಳುತ್ತಾರೆ—**

**ಮಂತ್ರೈರ್ಥಮನೀಬಂಧೋಽಸಾಮಾರ್ಜನಂ ಕಾರ್ಯಮಾತ್ರ ರಕ್ಷಣಂ**

ದೋಷಸ್ಯ ವಿಷಂ ಯಸ್ಯ ಸ್ಥಾನೇ ಸ್ಯಾತ್ತಂ ಜಯೇತ್‌ಪೂರ್ವಮ್ ||೬೦||
ವಾತಸ್ಥಾನೇ ಸ್ವೇದೋ ದಧ್ನಾ ನತಕುಷ್ಠಕಲ್ಕಪಾನಂ ಚ ||
ಮಧುಘೃತಪಯೋಽಂಬುಪಾನಾವಗಾಹಸೇಕಾಶ್ಚ ಪಿತ್ತಸ್ಥೇ ||೬೧||
ಕ್ಷಾರೋಽಗದಃ ಕಫಸ್ಥಾನಗತೇ ಸ್ವೇದಸ್ತಥಾ ಸಿರಾವ್ಯಧನಮ್ ||
ದೂಷೇವಿಷೇಽಥ ರಕ್ತಸ್ಥಿತೇ ವಿಜ್ಞಾಯ ಕರ್ಮ ಪಂಚವಿಧಮ್ ||೬೨||
ಭೇಷಜಮೇವಂ ಕಲ್ಪ್ಯಂ ಭಿಷಜಾ ವಿಜ್ಞಾಯ ಸರ್ವದಾ ಸರ್ವಮ್ ||
ಸ್ಥಾನಂ ಜಯೇತ್‌ಪೂರ್ವಂ ಸ್ಥಾನಸ್ಥಸ್ಯಾವಿರುದ್ಧಞ್ಚ ||೬೩||

**ಅರ್ಥ—** (ವಿಷವು ಏರಬಾರದೆಂದು) ವಿಷನಾಶಕ ಮಂತ್ರಗಳಿಂದ (ದಂಶದಮೇಲೆ ನಾಲ್ಕು ಅಂಗುಲ ಬಿಟ್ಟು) ಧಮನೀಬಂಧನವನ್ನು ಮಾಡಬೇಕು. ಮತ್ತು ಆತ್ಮರಕ್ಷಣಮಾಡುವ ಅಪಾಮಾರ್ಜನ (ಮಂತ್ರದಿಂದ ನೀರು ಸಿಂಪಡಿಸಿಕೊಳ್ಳೋಣ) ವನ್ನು ಮಾಡಿಕೊಳ್ಳಬೇಕು. ಯಾವ ದೋಷದ ಸ್ಥಾನದಲ್ಲಿ ವಿಷವಿದೆಯೋ ಅದನ್ನು ಮೊದಲು ಕಳೆಯಬೇಕು. ||೬೦|| ವಾತ ಸ್ಥಾನದಲ್ಲಿ ವಿಷವಿದ್ದರೆ ಸ್ವೇದ ಮತ್ತು ತಗರಕೋಷ್ಠಗಳ ಕಲ್ಕದ ಪಾನವನ್ನು ಮೊಸರಿನೊಡನೆ ಮಾಡಬೇಕು. ಪಿತ್ತಸ್ಥಾನದಲ್ಲಿ ವಿಷವಿದ್ದರೆ ಜೇನು ಘೃತ ಹಾಲು ನೀರುಗಳನ್ನು ಕುಡಿಯಬೇಕು. ಅವಗಾಹನಗಳನ್ನೂ ಸ್ನಾನಗಳನ್ನೂ ಮಾಡಬೇಕು. ||೬೧|| ಕಫಸ್ಥಾನದಲ್ಲಿ ವಿಷವಿದ್ದರೆ ಕ್ಷಾರೌಷಧ, ಸ್ವೇಧ, ಶಿರಾವೇಧಗಳನ್ನು ಮಾಡಬೇಕು. ರಕ್ತದಲ್ಲಿ ಇದ್ದದೂಷೀವಿಷವನ್ನು ಕಂಡು ಪಂಚಕರ್ಮಗಳನ್ನು ಮಾಡಬೇಕು. ||೬೨|| ವೈದ್ಯನು ಯಾವಾಗಲೂ ಎಲ್ಲವನ್ನೂ ತಿಳಿದುಕೊಂಡು ಈಪ್ರಕಾರ ಔಷಧವನ್ನು ಕೊಡಬೇಕು. ಮೊದಲು ಸ್ಥಾನಗೆದೆಯಬೇಕು. ಮತ್ತು ಆಸ್ಥಾನದೋಷದ ಅವಿರುದ್ಧವಾದ ಚಿಕಿತ್ಸೆಯನ್ನು ಮಾಡಬೇಕು. ||೬೩||

ವಿಷದೂಷಿತ ಕಫಮಾರ್ಗ ಸ್ರೋತಃಸಂರೋಧರುದ್ಧವಾಯುಸ್ತು ||
ಮೃತ ಇವಶ್ಚಸೇನ್ಮರ್ತ್ಯಃ ಸಾಧ್ಯಲಿಂಗೈರ್ವಿಹೀನಶ್ಚ ||೬೪||
ಚರ್ಮಕಷಾಯಾಃ ಕಲ್ಕಂ ಬಿಲ್ವಸಮಂ ಮೂರ್ಧ್ನಿ ಕಾಕಪದಮಸ್ಯ ||
ಕೃತ್ವಾ ದದ್ಯಾತ್ ಕಟಭೀ ಕಟು ಕಟ್‌ಫಲಪ್ರಧಮನಞ್ಚ || ೬೫ ||
ಭಾಗಗವ್ಯಮಾಹಿಷಾವಿಕ ಕೌಕ್ಕುಟಾಬ್ಜಮಾಂಸಮ್ ||

**ದದ್ಯಾತ್ ಕಾಕಪದೋಪರಿ ಮುಕ್ತೇ ವಿಷೇಣೈವ ಸಹಸಾ || ೬೬ ||**
**ನಾಸಾಕ್ಷಿಕರ್ಣಜಿಹ್ವಾಕಂಠನಿರೋಧೇಷು ಕಟುಕ ನಸ್ತಃ ಸ್ಯಾತ್ ||**
**ವಾರ್ತಾಕಬೀಜಪೂರಕಜ್ಯೋತಿಷ್ಮತ್ಯಾದಿಭಿಃ ಪಿಷ್ಟೈಃ || ೬೭ ||**
**ಅಂಜನಮಕ್ಷ್ಯವಿರೋಧೇ ಕರ್ತವ್ಯಂ ಬಸ್ತಮೂತ್ರಪಿಷ್ಟೈಸ್ತು ||**
**ದಾರುವ್ಯೋಷ ಹರಿದ್ರಾಕರವೀರಕರಂಜನಿಂಬಸುರಸೈಸ್ತು ||೬೮||**

**ಅರ್ಥ—** ವಿಷದಿಂದ ದೂಷಿತವಾದ ಕಫದಿಂದ ವಾಯುವಿನ ಮಾರ್ಗವಾದ ಸ್ರೋತಸ್ಸಿನ ಪ್ರತಿಬಂಧದಿಂದ ವಾಯುವು ಪ್ರತಿಬದ್ಧವಾಗಲು ಮನುಷ್ಯನು ಸಾಯುವವನಂತೆ ಶ್ವಾಸ ಬಿಡಹತ್ತುವನು. ಆದರೆ ಅಸಾಧ್ಯ (ಹಿಂದೆ ಹೇಳಿದ ಕರೇತುಟಿ ಮುಂತಾದ) ಲಕ್ಷಣಗಳು ಇರುವದಿಲ್ಲ || ೬೪ || ಅವನ ತಲೆಯಮೇಲೆ ಕಾಗೆಯ ಕಾಲಿನಂತೆ (ಗೂರುಗೆರೆಯ) ವ್ರಣವನ್ನು ಮಾಡಿ ನಾಲ್ಕು ತೊಲೆಯಷ್ಟು ಸೀಗೇಕಾಯಿ ಅಥವಾ ಕಟುಕರೋಹಿಣಿಯ ಕಲ್ಕವನ್ನು ಇಡಬೇಕು. ಕಟಭೀ (ಗಿರಿಕರ್ಣಿಕ) ಕಟು (ಮೆಣಸು ತ್ರಿಕಟು) ಕಿರಿತಿಗಳನ್ನು ಚೂರ್ಣದ ಪ್ರಧಮನ ನಸ್ಯವನ್ನು ಕೊಡಬೇಕು. || ೬೫ || ವಿಷದಿಂದ ಒಮ್ಮೆಲೇ ಮತ್ತನಾದರೆ ಆ ಕಾಕಪದದಮೇಲೆ ಆಡು, ಆಕಳು, ಕೋಣ, ಕುರಿ, ಕೋಳಿ ಅಥವಾ ಜಲಜಂತುಗಳ ಮಾಂಸವನ್ನು ಇಡಬೇಕು. || ೬೬ || ಮೂಗು, ಕಣ್ಣು ಕಿವಿ, ನಾಲಿಗೆ, ಕಂಠಗಳಲ್ಲಿ ಪ್ರತಿಬಂಧವಿದ್ದರೆ ಗುಳ್ಳ, ಮಾದಾಳ, ಗಾಲಕಾಂ ಗೋಣಿ ಮುಂತಾದವುಗಳ ಚೂರ್ಣದಿಂದ ನಸ್ಯವನ್ನು ಕೊಡಬೇಕು. || ೬೭ || ಕಣ್ಣಿಗೆ ಪ್ರತಿಬಂಧವಿರಲು ದೇವದಾರು, ತ್ರಿಕಟು, ಅರಿಷಿಣ, ಕಣಿಗಲ, ಹುಲಗಲಿ, ಬೇವು, ತುಳಸಿಗಳನ್ನು ಆಡಿನ ಮೂತ್ರದಲ್ಲಿ ಅರೆದು ಅಂಜನಮಾಡಬೇಕು || ೬೮ ||

**ಗಂಧ ಹಸ್ತಿ ಎಂಬ ಆಗದವನ್ನು ಹೇಳುತ್ತಾರೆ.**

**ಶ್ವೇತಾವಚಾಶ್ಚಗಂಧಾ ಹಿಂಗ್ವಮೃತಾ ಕುಷ್ಠಸೈಂಧವಂ ಲಶುನಮ್ ||**
**ಸರ್ಷಪಕಪಿತ್ಥಮಧ್ಯಂ ಟುಂಟುಕಮೂಲಕರಂಜಬೀಜಾನಿ || ೬೯ ||**
**ವ್ಯೋಷಂ ಶಿರೀಷಪುಷ್ಪಂ ದ್ವೇ ಚ ನಿಶೇ ವಂಶಲೋಚನಂಚ ಸಮಮ್||**
**ಪಿಷ್ಟ್ವಾಥ ಬಸ್ತಮೂತ್ರೇಣ ಚ ಗೋಶ್ಚ ಪಿತ್ತೇನ ಸಪ್ತಾಹಮ್ ||೭೦||**
**ವ್ಯತ್ಯಾಸಭಾವಿತೋಽಯಂ ನಿಹಂತಿ ಶಿರಸಿ ಸ್ಥಿತಂ ವಿಷಂ ಕ್ಷಿಪ್ರಮ್ ||**
**ಸರ್ವಜ್ವರಭೂತಗ್ರಹವಿಷೂಚಿಕಾಜೀರ್ಣಮೂರ್ಛಾರ್ತಿ || ೭೧ ||**

**ಉನ್ಮಾದಾಪಸ್ಮಾರೌ ಕಾಚಪಟಲನೀಲಿಕಾಶಿರೋದೋಷಾನ್ ||**
**ಶುಷ್ಕಾಕ್ಷಿಪಾಕಪಿಲ್ಲಾರ್ಬುದಾರ್ಮಕಂಡೂತಮೋದೋಷಾನ್ || ೨೨ ||**
**ಕ್ಷಯದೌರ್ಬಲ್ಯಮದಾತ್ಯಯಪಾಂಡುಗದಾಂಶ್ಚಾಂಜನಾತ್ತಥಾ ಮೋಹಾನ್ ||**
**ಲೇಪಾದ್ದಿಗ್ಧಕ್ಷತಲೀಢದಷ್ಟಾದ್ಯಷ್ಟವಿಧವಿಷಘಾತೀ || ೨೩ ||**

**ಅರ್ಶಃಸ್ವಾನದ್ಧೇಷು ಚ ಗುದಲೇಪೋ ಯೋನಿಲೇಪನಂಚ ಸ್ತ್ರೀಣಾಂ ||**
**ಮೂಢೇ ಗರ್ಭೇದುಷ್ಟೇ ಲಲಾಟಲೇಪಃ ಪ್ರತಿಶ್ಯಾಯೇ || ೨೪ ||**

**ವೃದ್ಧೌ ಕಿಟಿಭೌ ಕುಷ್ಠೇ ಶ್ವಿತ್ರೇ ವಿಚರ್ಚಿಕಾದಿಷು ಲೇಪಃ ||**
**ಗಜ ಇವ ತರೂನ್ವಿಷಗದಾನ್ನಿಹಂತ್ಯಗದೋ ಗಂಧಹಸ್ತೇಷಃ ||೨೫||**

**ಅರ್ಥ—** ಬೇಲಬೇರು, ಅಶ್ವಗಂಧಾ, ಇಂಗು, ಅಮೃತಬಳ್ಳಿ, ಕೋಷ್ಠ ಸೈಂಧವ, ಬಳ್ಳೊಳ್ಳಿ, ಸಾಸಿವೆ, ಜೇಳವಲಹಣ್ಣಿನ ತಿಳಲು, ಹೆಮ್ಮರದ ಬೇರು, ಹುಲಗಲೀಬೀಜ, || ೧೯ || ತ್ರಿಕಟು, ಶಿರಸಲ ಹೂವು, ಅರಿಷಿಣ, ವಂಶಲೋಚನ, ಇವುಗಳನೆಲ್ಲ ಸಮನಾಗಿ ತಕ್ಕೊಂಡು ಆಡಿನ ಮೂತ್ರದಲ್ಲಿ ಆ ಮೇಲೆ ಒಮ್ಮೆ ಗೋರಜನದ ಆ ಮೇಲೆ ಆಡಿನ ಮೂತ್ರದ ಹೀಗೆ ಏಳು ದಿವಸ ಏಳು ಭಾವನೆಯನ್ನು ಕೊಟ್ಟು || ೨೦ || ಸಿದ್ಧಮಾಡಿ ಕೊಟ್ಟರೆ ತೀವ್ರವಾಗಿ ತಲೆಯಲ್ಲಿಯ ವಿಷವನ್ನೂ, ಎಲ್ಲ ಜ್ವರ, ಭೂತ, ಗ್ರಹ, ವಿಷೂಚಿಕೆ ಅಜೀರ್ಣ, ಮೂರ್ಛಾರೋಗ || ೨೧ || ಉನ್ಮಾದ, ಅಪಸ್ಮಾರ, ಕಾಚ, ಪಟಲ, ನೀಲಿಕೆ ( ಕಣ್ಣುರೋಗ )ಗಳನ್ನೂ ಶಿರೋರೋಗಗಳನ್ನೂ ಶುಷ್ಕಾಕ್ಷಿಪಾಕ, ಪಿಲ್ಲ, ಅರ್ಬುದ, ಅರ್ಮ, ಕಂಡೂ, ಕಣ್ಣಿಗೆ ಕತ್ತಲೆ ಬರೋಣ || ೨೨ || ಕ್ಷಯ, ದೌರ್ಬಲ್ಯ, ಮದಾತ್ಯಯ ಪಾಂಡು, ರೋಗಗಳನ್ನು ಅಂಜನದಿಂದ ಮೋಹವನ್ನು ಲೇಪದಿಂದ ದಿಗ್ಧ ( ತೋಡೆದ ) ಕ್ಷತ ಗಾಯದಲ್ಲಿ ವಿಷ, ಲೀಢ (ನೆಕ್ಕಿದ) ದಷ್ಟ (ಕಡಿದ) ಪೀತ(ಕುಡಿದ) ವಿದ್ಧ (ಚುಚ್ಚಿದ) ದೂಷೀವಿಷ, ಗರ ಎಂಬ ಎಂಟು ತರದ ವಿಷಗಳನ್ನು ಕಳೆಯುವದು || ೨೩ || ಮೂಲವ್ಯಾಧಿ ಮತ್ತು ಆನಾಹಗಳಲ್ಲಿ ಗುದಕ್ಕೂ ಮೂಢಗರ್ಭದಲ್ಲಿ ಸ್ತ್ರೀಯರ ಯೋನಿಗೂ ಲೇಪಮಾಡಬೇಕು. ದುಷ್ಟನೆಗಡಿಯಲ್ಲಿ ಲಲಾಟಕ್ಕೆ ಲೇಪಮಾಡಬೇಕು. || ೨೪ || ಅಂಡವೃದ್ಧಿ, ಕಿಟಿಭ, ಶ್ವಿತ್ರ, ವಿಚರ್ಚಿಕಾ ಮುಂತಾದ ರೋಗಗಳಲ್ಲಿಯೂ ಇದರ ಲೇಪಮಾಡಬೇಕು. ಮತ್ತು ಆನೆಯು ಗಿಡಗಳನ್ನು

ಮುರಿದು ಒಗೆಯುವಂತೆ ಈ ಗಂಧಹಸ್ತಿ ಎಂಬ ಅಗದವು ವಿಷರೋಗಗಳನ್ನು ನಾಶವಗಾಡುತ್ತದೆ. || ೭೫ ||

ಮಹಾಗಂಧಹಸ್ತಿ ಎಂಬ ಅಗದವನ್ನು ಹೇಳುತ್ತಾರೆ.

ಪತ್ರಾಗುರು ಮುಸ್ತೈಲಾ ನಿರ್ಯಾಸಾಃ ಪಞ್ಚ ಚಂದನಂತಥಾ ಸ್ಪೃಕ್ಕಾ ||
ತ್ವಜ್‌ನಲದೋತ್ಪಲ ಬಾಲಕಹರೇಣು ಕೋಶೀರವ್ಯಾಘ್ರನಖಾಃ ||೭೬||
ಸುರದಾರುಕನಕಕುಂಕುಮಧ್ಯಾಮುಕುಷ್ಠ ಪ್ರಿಯಂಗವಸ್ತಗರಮ್ |
ಪಞ್ಚಾಂಗಾನಿ ಶಿರೀಷಾತ್ ವ್ಯೋಷಾಲಮನಃಶಿಲಾಜಾಜ್ಯಃ || ೭೭ ||
ಶ್ವೇತಾ ಕಟಭೀ ಕರಂಜೋ ರಕ್ಷೋಘ್ನಃ ಸಿಂಧುವಾರಿಕಾ ರಜನೀ ||
ಸುರಸಾಂಜನಗೈರಿಕಮಂಜಿಷ್ಠಾ ನಿಂಬಪತ್ರನಿರ್ಯಾಸಾಃ || ೭೮ ||
ವಂಶತ್ವಗಶ್ವಗಂಧಾಹಿಂಗುದಧಿತ್ಥಾಮ್ಲವೇತಸಂ ವೃಕ್ಷಾಃ ||
ಮಧುಮಧುಕಸೋಮರಾಜೀವಚಾರುಹಾರೋಚನಾತಗರಮ್ ||೭೯||
ಅಗದೋಽಯಂ ವೈಶ್ರವಣಾಯಾಖ್ಯಾತಸ್ತ್ರ್ಯಂಬಕೇಣ ಷಷ್ಟ್ಯಂಗಃ ||
ಅಪ್ರತಿಹತಪ್ರಭಾವಃ ಸ್ಮೃತೋ ಮಹಾಗಂಧಹಸ್ತೀತಿ ||೮೦||
ಪಿತ್ತೇನ ಗವಾಂ ಪೇಷ್ಯಾ ಗುಡಿಕಾ ಸಿದ್ಧಾ ತು ಪುಷ್ಯಯೋಗೇಣ ||
ಪಾನಾಂಜನಪ್ರಲೇಪೈಃ ಪ್ರಸಾಧಯೇತ್ ಸರ್ವಕರ್ಮಾಣಿ || ೮೧ ||
ಪಿಲ್ಲಂ ಕಂಡೂಂ ತಿಮಿರಂ ರಾತ್ರ್ಯಂಧಂ ಕಾಚಮರ್ಬುದಂ ಪಟಲಮ್
ಹಂತಿ ಸತತಪ್ರಯೋಗಾದ್ಧಿತಮಿತಪಥ್ಯಾಶಿನಾಂ ಪುಂಸಾಮ್ || ೮೨ ||
ವಿಷಮಜ್ವರಾನಜೀರ್ಣಾನ್ ದದ್ರುಕಂಡುವಿಸೂಚಿಕಾಪಮಾಃ ||
ಕುಷ್ಠಂ ಕಿಟಿಭಂ ಶ್ವಿತ್ರಂ ವಿಚರ್ಚಿಕಾಂ ಚೋಪಾಹಂತಿ ನೃಣಾಮ್ || ೮೩ ||
ವಿಷಮೂಷಿಕಲೂತಾನಾಂ ಸರ್ವೇಷಾಂ ಪನ್ನಗಾನಾಂಚ ||
ಆಶು ವಿಷಂ ನಾಶಯತೇ ಮೂಲಜಮಥ ಕಂದಜಂ ಸರ್ವಮ್ || ೮೪ ||
ಏತೇನ ಲಿಪ್ತಗಾತ್ರಃ ಸರ್ಪಾನ್ ಗೃಹ್ಣಾತಿ ಭಕ್ಷಯೇಚ್ಚ ವಿಷಮ್ ||
ಕಾಲಪರೀದೋಽಪಿ ನರೋ ಜೀವತಿ ನಿತ್ಯತಂ ನಿರಾತಂಕಃ || ೮೫ ||
ಅನದ್ದೇ ಗುದಲೇಪೋ ಯೋನಿಲೇಪಶ್ಚ ಮೂಢಗರ್ಭಾಣಾಮ್ || ೮೬ ||

ಮೂರ್ಛಾರ್ತಿಷು ಲಲಾಟೇ ಲೇಪನ ಮಾಹುಃ ಪ್ರಧಾನತಮಮ್ ॥ ೮೬ ॥
ಭೇರೀಮೃದಂಗಪಟಹಾನ್ ಛತ್ರಾಣ್ಯಮುನಾ ತಥಾಧ್ವಜಪತಾಕಾಃ ॥
ಲಿಪ್ತ್ವಾರಹಿವಿಷನಿರಸ್ತ್ಯೈ ಪ್ರಧ್ವಸಯೇದ್ ದರ್ಶಯೇನ್ಮತಿಮಾನ್ ॥ ೮೭ ॥
ಯತ್ರ ಚ ಸನ್ನಿಹಿತೋಽಯಂ ನ ತತ್ರ ಬಾಲಗ್ರಹಾ ನ ರಕ್ಷಾಂಸಿ ॥
ನ ಚೈವ ಕಾರ್ಮಣಮಂತ್ರಾ ಭಜಂತಿ ನಾಥರ್ವಣೋ ಮಂತ್ರಾಃ ॥ ೮೮ ॥
ಸರ್ವಗ್ರಹಾ ನ ತತ್ರ ಪ್ರಭವಂತಿ ನಚಾಗ್ನಿಶಸ್ತ್ರನೃಪಚೌರಾಃ ॥
ಲಕ್ಷ್ಮೀಶ್ಚ ತತ್ರ ಭಜತೇ ಯತ್ರ ಮಹಾಗಂಧಹಸ್ತ್ಯಸ್ತಿ ॥ ೮೯ ॥
ಸಂಪಿಷ್ಯಮಾಣೇ ಚಾತ್ರೇಮಂ ಸಿದ್ಧಮಂತ್ರಮುದಾಹರೇತ್ ॥
ಮಮ ಮಾತಾ ಜಯಾನಾಮ ಜಯೋ ನಾಮೇತಿ ಮೇ ಪಿತಾ ॥ ೯೦ ॥
ಸೋಽಹಂ ಜಯಜಯಾಪುತ್ರೋ ವಿಜಯೋಽಥ ಜಯಾಮಿ ಚ ॥
ನಮಃ ಪುರುಷಸಿಂಹಾಯ ವಿಷ್ಣವೇ ವಿಶ್ವಕರ್ಮಣೇ ॥ ೯೧ ॥
ಸನಾತನಾಯ ಕೃಷ್ಣಾಯ ಭವಾಯ ವಿಭವಾಯ ಚ ॥
ತೇಜೋ ವೃಷಾಕಪೇಃ ಸಾಕ್ಷಾತ್ ತೇಜೋ ಬ್ರಹ್ಮೇಂದ್ರಯೋರ್ಯಮೇ ॥ ೯೨ ॥
ಯಥಾಹಂ ನಾಭಿಜಾನಾಮಿ ವಾಸುದೇವಪರಾಜಯಮ್ ॥
ಮಾತುಶ್ಚ ಪಾಣಿಗ್ರಹಣಂ ಸಮುದ್ರಸ್ಯ ಚ ಶೋಷಣಮ್ ॥ ೯೩ ॥
ಅನೇನ ಸತ್ಯವಾಕ್ಯೇನ ಸಿಧ್ಯತಾಮಗದೋ ಹ್ಯಯಮ್ ॥
ನಿಹಿ ನಿಹಿ ಮಿನಿ ಮಿನಿ ಸಂಸೃಷ್ಟೇ ರಕ್ಷ ಸರ್ವಂ ಭೇಷಜೋತ್ತಮೇ ಸ್ವಾಹಾ ॥ ೯೪ ॥

**ಅರ್ಥ—** ತಮಾಲಪತ್ರ, ಅಗುರು, ಚೇಕು, ಯಾಲಕ್ಕಿ, ಐದು ತರದ (ರಾಳ, ಗುಗ್ಗುಳು, ಅಪ್ಪು, ಶಿಲ್ಲಕ, ಲೋಬಾನ) ಅಂಟುಗಳು, ಕೆಂಪು ಚಂದನ, ಸ್ಪೃಕ್ಕಾ (ಗಂಧದ್ರವ್ಯವಿಶೇಷ) ದಾಲಚಿನ್ನಿ, ಜಟಾಮಾಂಸಿ, ನೀಲ ಕಮಲ ಬಾಳದಬೇರು, ರೇಣುಕಬೀಜ, ಕರೇಬಾಳದಬೇಳು, ವ್ಯಾಘ್ರನಖ, ॥ ೮೬ ॥ ದೇವದಾರು, ನಾಗಕೇಸರ, ಕೇಶರ (ಗಂಜಳಿಗೆ ಹುಲ್ಲು) ಕೋಷ್ಟ, ಗವ್ಹಲಾ, ತಗರ, ಶಿರಸಲದ ಪಂಚ [ ಬೇರು ತೋಟಿ, ಎಲೆ, ಹೂವು, ಕಾಯಿ,] ಅಂಗಗಳು, ತ್ರಿಕಟು, ಮನಸಿಲಾ, ಜೀರಿಗೆ, ಹರಿತಾಳ, ॥ ೮೭ ॥ ಬಿಳೀ ಉತ್ತರಾಣಿ, ಕಟಭೀ (ಸಣ್ಣ ಸಿರಸಲ) ಹುಲಗಲಿ, ಸಾಸಿವೆ ಲಕ್ಕಿ, ಅರಿಷಿಣ, ತುಳಸಿ, ರಸಾಂಜನ, ಕಾವಿ, ಮಂಜಿಷ್ಠ, ಬೇವಿನ ಎಲೆ ಮತ್ತು

ಅಂಟು, ॥ ೭೮ ॥ ಬಿವರಿನ ತೊಗಟಿ, ಅಶ್ವಗಂಧ, ಇಂಗು, ಬಿಳಿವಲ ತಿಳಿಲು, ಆಮ್ಲವೇತಸ, ಕಿಣ್ಣಿ, ಜೇನು ಜೇಷ್ಠಮಧು, ಬಾವಂಚಿ. ಬಜಿ, ಗರಿಕೆ, ಹಳದೀತಗರ, ॥ ೭೯ ॥ ಈ ಅರವತ್ತು ದ್ರವ್ಯಗಳಿಂದ ಕೂಡಿದ ಔಷಧವು ಸಾಕ್ಷಾತ್ ಶಂಕರನಿಂದ ಕುಬೇರನಿಗೆ ಹೇಳಲ್ಪಟ್ಟಿದೆ. ಇದರ ಪ್ರಭಾವವು. ಅಪ್ರತಿಹತವಾದದ್ದಿದ್ದು ಇದರ ಹೆಸರು ಮಹಾಗಂಧಹಸ್ತಿ, ಎಂದು ಇದೆ. ॥ ೮೦ ॥ ಇವುಗಳನ್ನು ಗೋರೋಚನದೊಡನೆ ಅರೆದು ಪುಷ್ಯನಕ್ಷತ್ರದ ಮೇಲೆ ಗುಳಿಗೆಗಳನ್ನು ಕಟ್ಟಬೇಕು. ಇದು ಪಾನ ಅಂಜನ, ಲೇಪಗಳಿಂದ ಉಪಯೋಗಿಸಿದರೆ ಎಲ್ಲ ಕಾರ್ಯಗಳನ್ನು ಮಾಡುವದು. ॥ ೮೧ ॥ ಹಿತ, ಮಿತ, ಪಥ್ಯ ಆಹಾರವನ್ನು ಮಾಡುತ್ತಾ ಇದನ್ನು ಸತತವಾಗಿ ಉಪಯೋಗಿಸಿದರೆ ಪಿಲ್ಲಿ, (ನೇತ್ರರೋಗ) ಕಂಡೂ, ತಿಮಿರ, ಇರಳಗಣ್ಣು, ಕಾಚ, ಅರ್ಬುದ, ಪಟಲ, ॥ ೮೦ ॥ ಜನರ ವಿಷಮಜ್ವರ, ಅಜೀರ್ಣ, ದದ್ರು (ಕುಷ್ಠ ವಿಶೇಷ) ಕಂಡೂ, ವಿಷೂಚಿಕೆ, ದುರುಕು, ಕುಷ್ಠ, ಕಿಟಿಭ, ಶ್ವಿತ್ರ, ವಿಚರ್ಚಿಕೆಗಳನ್ನು ಕಳೆಯುವದು. ॥ ೮೩ ॥ ವಿಷದ ಇಲಿ ಮತ್ತು ಲೂತ (ಜಾಡ) ಗಳ ಮತ್ತು ಎಲ್ಲ ಹಾವುಗಳ ವಿಷವನ್ನು ಮತ್ತು ಮೂಲಜ ಮತ್ತು ಕಂದಜ ವಿಷವನ್ನು ತೀವ್ರವಾಗಿ ನಾಶ ಮಾಡುತ್ತದೆ. ॥ ೮೪ ॥ ಶರೀರಕ್ಕೆ ಇದರ ಲೇಪ ಮಾಡಿಕೊಂಡವನು ಹಾವುಗಳನ್ನು ಹಿಡಿಯುವನು ವಿಷವನ್ನು ತಿನ್ನುವನು ಮರಣ ಕಾಲವು ಬಂದಿದ್ದರೂ ಇದರಿಂದ ನಿರ್ಭಯವಾಗಿ ಬಹಳ ದಿವಸ ಬದುಕುವನು ॥ ೮೫ ॥ ಆನಾಹದಲ್ಲಿ ಗುದಕ್ಕೂ, ಮೂಢಗರ್ಭದಲ್ಲಿ ಯೋನಿಗೂ, ಮೂರ್ಛಾರೋಗದಲ್ಲಿ ಹಣೆಗೂ, ಮುಖ್ಯವಾಗಿ ಲೇಪಮಾಡಬೇಕು. ॥ ೮೬ ॥ ಭೇರಿ, ಮೃದಂಗ ಪಟಹಗಳಿಗೆ ಇದರ ಲೇಪಮಾಡಿ ಬಾರಿಸಲು ಹಾವಿನ ವಿಷವು ನಾಶವಾಗುವದು. ಅದರಂತೆ ಬುದ್ಧಿವಂತನು ಛತ್ರ, ಧ್ವಜ, ಪತಾಕಿಗಳಿಗೆ ಲೇಪ ಮಾಡಿ ವಿಷರೋಗಿಗೆ ತೋರಿಸಲು ವಿಷವು ನಾಶವಾಗುವದು. ॥ ೮೭ ॥ ಎಲ್ಲಿ ಈ ಔಷಧವಿರುವದೋ, ಅಲ್ಲಿ ಬಾಲಗ್ರಹಗಳು ರಾಕ್ಷಸರ ಪರದ್ರೋಹಕರ ಮಂತ್ರಗಳ ಅಥರ್ವಣ ಮಂತ್ರಗಳ ಆಟ ಸಾಗದು. ॥ ೮೮ ॥ ಎಲ್ಲಿ ಮಹಾಗಂಧಹಸ್ತಿ, ಎಂಬ ಈ ಔಷಧವು ಇರುತ್ತದೋ ಅಲ್ಲಿ ಎಲ್ಲ ಗ್ರಹಗಳ ಆಟ ಸಾಗದು ಅದರಂತೆ ಬೆಂಕಿ, ಶಸ್ತ್ರ, ಅರಸು. ಕಳ್ಳರ, ಆಟವೂ ಸಾಗದು ಅಲ್ಲಿ ಲಕ್ಷ್ಮಿಯು ವಾಸವಾಗುತ್ತಾಳೆ. ॥ ೮೯ ॥ ಅದನ್ನು

ಅರೆಯುವಾಗ್ಗೆ ಈ ಸಿದ್ಧಿಮಂತ್ರವನ್ನು ಅನ್ನಜೇಕು. ನನ್ನ ತಾಯಿಯು ಜಯಾ ಎಂಬುವಳು ಜಯ ಎಂಬುವನು ನಮ್ಮ ತಂದೆಯು ॥ ೯೦ ॥ ಹೀಗೆ ನಾನು ಜಯೆ ಮತ್ತು ಜಯಾ ಇಬ್ಬರ ಮಗನಾಗಿದ್ದು ನನ್ನ ಹೆಸರು ವಿಜಯ ನಾನು ಎಲ್ಲವನ್ನು ಗೆಲ್ಲುವೆನು. ಪುರುಷಸಿಂಹನಾದ ವಿಶ್ವವನ್ನು ಹುಟ್ಟಿಸುವ ವಿಷ್ಣುವಿಗೆ ನಮಸ್ಕಾರವು. ॥ ೯೧ ॥ ಸನಾತನನಾದ ಸೃಷ್ಟಾ ಕಪಿಯ ತೇಜನಾದ, ಬ್ರಹ್ಮ ಇಂದ್ರ ಯಮರಲ್ಲಿ ಇದ್ದ, ಸಾಕ್ಷಾತ್ ತೇಜ ನಾದ ಭವ–ವಿಭವ ಎಂಬ ಹೆಸರುಳ್ಳ ಕೃಷ್ಣನಿಗೆ ನಮಸ್ಕಾರವು. ॥ ೯೨ ॥ ನಾನು ವಾಸುದೇವನ ಪರಾಜಯವನ್ನು ತಾಯಿಯ ಪಾಣಿಗ್ರಹಣವನ್ನು, ಸಮುದ್ರದ ಶೋಷವನ್ನು ಅರಿತಿಲ್ಲ. ॥ ೯೩ ॥ ಈ ಸತ್ಯವಾಕ್ಯದಿಂದ ನನ್ನ ಈ ಔಷಧವು ಸಿದ್ಧವಾಗಲಿ, ಹಿಲಿಹಿಲಿ ಮಿಲಿಮಿಲಿ ಬಂದಂಥಾ ಭೇಷಜೋತ್ತಮಳೇ ಎಲ್ಲವನ್ನು ರಕ್ಷಿಸು. ಸ್ವಾಹಾ ॥ ೯೪ ॥

ವಿಷದ ಉಪದ್ರವಗಳಾದ ಶ್ವಾಸವುಂಟಾದವುಗಳ ಚಿಕಿತ್ಸೆಯನ್ನು ಹೇಳುತ್ತಾರೆ

**ಋಷಭಕಜೀವಕಯಷ್ಟೀಮಧುಕೋತ್ಪಲಧಾನ್ಯಕೇಸರಾಜಾಜ್ಯಃ ॥**
**ಸಸಿತಗಿರಿಕೋಲಮಧ್ವಾಃ ಪೇಯಾಃ ಶ್ವಾಸಜ್ವರಾದಿಹರಾಃ ॥ ೯೫ ॥**

**ಹಿಂಗು ಚ ಕೃಷ್ಣಾಯುಕ್ತಂ ಕಪಿತ್ಥರಸಯುಕ್ತಮುಗ್ರಲವಣಂ ಚ ॥**
**ಸಮಧುಸಿತೌ ಪಾತವ್ಯೌ ಜ್ವರಹಿಕ್ಕಾಕಾಸಶ್ವಾಸಘ್ನೌ ॥ ೯೬ ॥**

**ಲೇಹಃ ಕೋಲಾಸ್ಥ್ಯಂಜನಲಾಜೋತ್ಪಲಘೃತೈರ್ವಮಿಂ ಹಂತಿ ॥**
**ಬೃಹತೀದ್ವಯಾ ಢಕೀಪತ್ರಧೂಮವರ್ತಿಸ್ತು ಹಿಕ್ಕಾಘ್ನೀ ॥ ೯೭ ॥**

**ಶಿಖಿಬರ್ಹಬಲಾಕಾಸ್ಥೀನಿ ಸರ್ಪಪಾಶ್ಚಂದನಂ ಚ ಘೃತಯುಕ್ತಮ್ ॥**
**ಧೂಮೋ ಗೃಹಶಯನಾಸನವಸ್ತ್ರಾದಿಷು ಶಸ್ಯತೇ ವಿಷಜಿತ್ ॥ ೯೮ ॥**

**ಘೃತಯುಕ್ತೇ ನತಕುಷ್ಠೇ ಭುಜಗಪತಿಶಿರಃ ಶಿರೀಷಕುಸುಮಂ ವಾ ॥**
**ಧೂಮೋಽಗದಃ ಸ್ಮೃತೋಽಯಂ ಸರ್ವವಿಷಘ್ನಃ ಶ್ವಯಥುಹೃಚ್ಚ ॥ ೯೯**

**ಜತುಸೇವ್ಯಪತ್ರಗುಗ್ಗುಲುಭಲ್ಲಾತಕಕಕುಭಪುಷ್ಪಸರ್ಜರಸಾಃ ॥**
**ಶ್ವೇತಾ ಧೂಮಾ ಉರಗಾಖುಕೀಟವಸ್ತ್ರಕ್ರಿಮಿಹರಾಃ ಸ್ಯುಃ ॥೧೦೦॥**

**ಅರ್ಥಃ—** ಋಷಭಕ, ಜೀವಕ, ಜೇಷ್ಠಮಧು, ನೀಲಕಮಲ, ಹವೀಜ, ನಾಗಕೇಶರ, ಜೀರಿಗೆ, ಬಿಳೇಉತ್ತರಾಣಿ, ಬೋರೆ, ಇವುಗಳ ಕಷಾಯವು ಶ್ವಾಸ,

ಜ್ವರ ಮುಂತಾದವುಗಳನ್ನು ಕಳೆಯುವದು. ||೯೫|| ೧ ಹಿಪ್ಪಲಿ, ಮತ್ತು ಇಂಗು ೨ ಬೆಳವಲರಸ ಮತ್ತು ಕಾಚಲವಣ, ೩ ಸಕ್ಕರೆ ಮತ್ತು ಜೇನು ಇವು ಜ್ವರ ಬಿಕ್ಕುಕೆಮ್ಮು ದಮ್ಮುಗಳನ್ನು ಕಳೆಯುವವು. ||೯೬|| ಜೋಳ, ರಸಾಂಜನ, ಭತ್ತ ರಳು, ನೀಲಕಮಲ, ಘೃತಗಳಿಂದ ಮಾಡಿದ ಲೇಹವು ವಾಂತಿ ಕಳೆಯುವದು. ನೆಲಗುಳ್ಳ, ಹೆಬ್ಬಗುಳ್ಳ, ತೊಗರಿ ಇವುಗಳ ಎಲೆಯಿಂದ ಮಾಡಿದ ಧೂಮವರ್ತಿಯು ಬಿಕ್ಕನ್ನು ಕಳೆಯುವದು. ||೯೭|| ನವಿಲಿನಗರಿ, ಬಲಾಕಾಪಕ್ಷಿಯ ಎಲವು ಸಾಸಿವೆ, ಚಂದನ, ಇವುಗಳ ಚೂರ್ಣದಲ್ಲಿ ಸ್ವಲ್ಪ ತುಪ್ಪ ಕೂಡಿಸಿ ಬೆಂಕಿಯ ಮೇಲೆ ಹಾಕಿ, ಅದರ ಹೊಗೆಯನ್ನು ಮನೆ, ಹಾಸಿಗೆ, ಆಸನ, ವಸ್ತ್ರಾದಿಗಳಿಗೆ ಕೊಟ್ಟರೆ ವಿಷವನ್ನು ನಾಶಮಾಡುವದು. ||೯೮|| ೧ ಗರ ಮತ್ತು ಕೋಷ್ಠ ೨ ಹಾವಿನತಲೆ ಮತ್ತು ಶಿರೀಷಪುಷ್ಪ ಇವುಗಳಿಗೆ ತುಪ್ಪಹಚ್ಚಿ ಬೆಂಕಿಯಮೇಲೆ ಇಡಲು ಹೊರಟ ಹೊಗೆಯು ಸರ್ಪ ವಿಷವನ್ನು ಬಾವನ್ನೂ ಕಳೆಯುವದು. ||೯೯|| ಅರಗು, ಬಾಳದಬೇರು, ತಮಾಲಪತ್ರ, ಗುಗ್ಗುಳು, ಕೇರು, ಮತ್ತಿಯ ಹೂವು, ರಾಳ, ಬಿಳೇಉತ್ತರಾಣಿ ಇವುಗಳ ಧೂಮವು ಹಾವು, ಇಲಿ, ಕೀಟ ವಸ್ತ್ರದಲ್ಲಿರುವ ಕ್ರಿಮಿ (ವಸ್ತ್ರದಲ್ಲಿರುವ ಕೂರಿ) ಗಳನ್ನು ನಾಶಮಾಡುವದು. || ೧೦೦ ||

ಕ್ಷಾರಗುಟಿಕೆಗಳನ್ನು ಹೇಳುತ್ತಾರೆ.

**ತರುಣಪಲಾಶಕ್ಷಾರಂ ಸ್ರುತಂ ಪಚೇಚ್ಚೂರ್ಣಿತೈಃ ಸಹ ಸಮಾಂಶೈಃ ||**
**ಲೋಹಿತಮೃದ್ರಜನೀದ್ವಯ ಮಧುಕಸುರಸಶುಕ್ಲ ಮಂಜರೀಭಿಃ ||೧೦೧||**

**ಲಾಕ್ಷಾಸೈಂಧವಮಾಂಸೀಹರೇಣುಹಿಂಗುದ್ವಿಸಾರಿವಾಕುಷ್ಠೈಃ||**
**ಸವ್ಯೋಕ್ಷಬಾಹ್ಲೀಕೈರ್ದರ್ವೀಲೇಪೇನ ಘಟ್ಟಯೇದ್ ಯಾವತ್ ||೧೦೨||**

**ಸರ್ವವಿಷಶೋಥಗುಲ್ಮತ್ವಗ್ದೋಷಾರ್ಶೋಭಗಂದರಪ್ಲೀಹ್ನಃ||**
**ಶೋಥಾಪಸ್ಮಾರಕ್ರಿಮಿಭೂತಸ್ವರಭೇದಕಂಡುಪಾಂಡುಗದಾನ್ ||೧೦೩||**

**ಮಂದಾಗ್ನಿತ್ವಂ ಕಾಸಂ ಸೋನ್ಮಾದಂ ನಾಶಯೇಯುರಥ ಪುಂಸಾಮ್||**
**ಗುಟಿಕಾಚ್ಛಾಯಾಶುಷ್ಕಾಃ ಕೋಲಸಮಾ ಸ್ತಾಃ ಸಮುಪಯುಕ್ತಾಃ || ೧೦೪ ||**

**ಅರ್ಥ—** ತರುಣಮುತ್ತಲಗಿಡವನ್ನು ಸುಟ್ಟು, ಸೋಸಿ, ಕ್ಷಾರವನ್ನು ತ ಕ್ಕೊಂಡು, ಅದರಲ್ಲಿ ಕಾವಿ, ಅರಿಷಿಣ, ಮರಅರಿಷಿಣ, ಜೇಷ್ಠಮಧು, ಬಿಳೇತುಳ

ಸಿಯುತ್ತೆನೆ||೧೦೧|| ಅರಗು, ಸೈಂಧವ, ಜಟಾಮಾಂಸಿ, ರೇಣುಕಬೀಜ. ಇಂಗು, ಕರೀಮತ್ತು ಬಿಳೀ ಅನಂತಮೂಲ, ಕೋಷ್ಠ, ತ್ರಿಕಟು, ಇಂಗುಗಳ ಚೂರ್ಣವನ್ನು ಹಾಕಿ ಕುದಿಸಿ ಸವುಟಕ್ಕೆ ಹತ್ತುವ ವರೆಗೆ ಗಟ್ಟಿಸಬೇಕು. ||೧೦೨|| ಅದರಿಂದ ಬೋರೆಕಾಯಿಯಷ್ಟು ಗುಳಿಗೆಗಳನ್ನು ಮಾಡಿ, ನೆರಳಲ್ಲಿ ಒಣಗಿಸಿ ಉಪಯೋಗಿಸಿವರೆ ಎಲ್ಲ ವಿಷದಬಾವು, ಗುಲ್ಮ, ತ್ವಚಾರೋಗ, ಮೂಲವ್ಯಾಧಿ, ಭಗಂದರ, ಪ್ಲೀಹ, ಬಾವು, ಅಪಸ್ಮಾರ, ಕ್ರಿಮಿ, ಭೂತ. ಸ್ವರಭೇದ, ಕಂಡೂ, ಪಾಂಡುರೋಗ ||೧೦೩|| ಅಗ್ನಿಮಾಂದ್ಯ, ಕೆಮ್ಮು, ಉನ್ಮಾದಗಳನ್ನು ನಾಶಮಾಡುವವು ||೧೦೪||

**ಪೀತವಿಷದಷ್ಟವಿದ್ಧೇಷ್ವೇತದ್ವಿಷೇ ಚ ವಾಚ್ಯಮುದ್ದಿಷ್ಟಮ್ ||**
**ಸಾಮಾನ್ಯತಃ ಪೃಥಕ್ತ್ವಾನ್ನಿರ್ದೇಶಮತಃ ಶೃಣು ಯಥಾವತ್ ||೧೦೫||**
**ರಿಪುಪ್ರಯುಕ್ತೇಭ್ಯೋ ನಭ್ಯಃ ಸ್ವೇಭ್ಯಃ ಸ್ತ್ರೀಭ್ಯೋಽಥವಾ ಭಯಂ ನೃಪತೇಃ ||**
**ಆಹಾರವಿಹಾರಗತಂ ತಸ್ಮಾತ್ ಪ್ರೇಷ್ಯಾನ್ ಪರೀಕ್ಷೇತ || ೧೦೬ ||**

ಅರ್ಥ— ಇಲ್ಲಿಯವರೆಗೆ ಕುಡಿದ, ಕಡಿದ, ಚುಚ್ಚಿದ ವಿಷಗಳ ವಿಷಯವಾಗಿ ಸಾಮಾನ್ಯತಃ ಹೇಳಬೇಕಾದ್ದನ್ನು ಹೇಳಿದೆವು. ಇನ್ನುಮೇಲೆ ಬೇರೆ ಬೇರೆಯಾಗಿ ಹೇಳುವದನ್ನು ಕೇಳಿರಿ. || ೧೦೫ || ಅರಸನಿಗೆ ಶತ್ರುಗಳು ಒಡಕೊಂಡ ತನ್ನ ಜನರಿಂದಲೂ ಅಥವಾ ಸ್ತ್ರೀಯರಿಂದಲೂ ಆಹಾರವಿಹಾರಗಳಲ್ಲಿ ವಿಷದ ಭಯವಿರುತ್ತದೆ. ಆದ್ದರಿಂದ ಸೇವಕರನ್ನು ಪರೀಕ್ಷಿಸಬೇಕು. || ೧೦೬ ||

ಸೇವಕ ಮತ್ತು ಅನ್ನದ ಪರೀಕ್ಷಾವಿಧಿಯನ್ನು ಹೇಳುತ್ತಾರೆ--

**ಅಂತ್ಯರ್ಥಶಂಕಿತಃ ಸ್ಯಾದ್ ಬಹುವಾಗಥವಾಲ್ಪವಾಗ್ ವಿಗತಲಕ್ಷ್ಮೀಃ ||**
**ಪ್ರಾಪ್ತಃ ಪ್ರಕೃತಿವಿಕಾರಂ ವಿಷಪ್ರದಾತಾ ನರೋ ಜ್ಞೇಯಃ || ೧೦೭ ||**
**ದೃಷ್ಟ್ವೈವಂ ನ ತು ಸಹಸಾ ಭೋಜ್ಯಂ ನ್ಯಸೇತ್ ತದನ್ನಮಗ್ನೌ ತು ||**
**ಸವಿಷಂ ಹಿ ಪ್ರಾಪ್ಯಾನ್ನಂ ಬಹೂನ್ ವಿಕಾರಾನ್ ಭಜತ್ಯಗ್ನಿಃ || ೧೦೮ ||**
**ಶಿಖಿಬರ್ಹವಿಚಿತ್ರಾರ್ಚಿಸ್ತೀಕ್ಷ್ಣಃ ಸರೂಕ್ಷಕುಣಪಗಂಧಿಶ್ಚ ||**
**ಸ್ಫುಟತಿ ಸಶಬ್ದಮೇಕಾವರ್ತೋ ವಿಹತಾರ್ಚಿರಪಿ ಚ ಸ್ಯಾತ್ || ೧೦೯ ||**
**ಪಾತ್ರಸ್ಥಂ ಚ ವಿವರ್ಣಂ ಭೋಜ್ಯಂ ಸ್ಯಾನ್ಮಕ್ಷಿಕಾಶ್ಚ ಮಾರಯತಿ ||**
**ಕ್ಷಾಮಸ್ವರಂ ಚ ಕಾಕಂ ಕುರ್ಯಾದ್ ವಿರಜೇಚ್ಚ ಕೋರಾಕ್ಷಿ || ೧೧೦ ||**

**ಪಾನೇ ನೀಲಾ ರಾಜೀ ವೈವರ್ಣ್ಯಂ ಸ್ವಾಂ ಚ ನೇಕ್ಷತೇ ಚ್ಛಾಯಾಮ್ ||**
**ವಿಕೃತಾಮಥವಾ ಪಶ್ಯತಿ ಲವಣಾಕ್ತೇ ಫೇನಮಾಲಾ ಸ್ಯಾತ್ || ೧೧೧ ||**

**ಅರ್ಥ—** ವಿಷವನ್ನು ಕೊಡುವ ಮನುಷ್ಯನು ಬಹಳ ಅಂಜಿರುವನು. ಬಹಳ ಮಾತಾಡುವನು ಅವನ ಕಾಂತಿಯು ಕುಂದಿರುವದು, ಸ್ವಭಾವದಲ್ಲಿ ಬದಲಾವಣೆಯಾಗಿರುವದು. ಇಂಥವನು ವಿಷ ಕೊಟ್ಟವನೆಂದು ತಿಳಿಯಬೇಕು || ೧೦೭ || ಇವನ್ನೆಲ್ಲ ವಿಚಾರಮಾಡಿ ತಿನ್ನತಕ್ಕ ಅನ್ನವನ್ನು ಒಮ್ಮೆಲೆ ತಿನ್ನದೆ ಬೆಂಕಿಯಲ್ಲಿ ಹಾಕಬೇಕು. ಅನ್ನದಲ್ಲಿ ವಿಷವಿದ್ದರೆ ಬೆಂಕಿಯಲ್ಲಿ ಅನೇಕ ವಿಕಾರಗಳು ಕಂಡು ಬರುತ್ತವೆ. || ೧೦೮ || ಅವರ ಉರಿಗಳು ನವಿಲಿನ ಗರಿಗಳಂತೆ ತರತರದ ಬಣ್ಣದವು ಹೊರಡುತ್ತವೆ. ಬೆಂಕಿಯು ತೀಕ್ಷ್ಣವಾಗುವದು ರುಕ್ಷವಾದ ಹೆಣದ ನಾತ ಬರುವದು. ಚಟಚಟಎಂದು ಒಡೆದಂತೆ ಶಬ್ದವಾಗುವದು. ಒಂದೇ ಕಡೆಗೆ ಉರಿಏಳುವದು. ಮತ್ತು ಆರುವದು. || ೧೦೯ || ಅದನ್ನು ತಿಂದ ಕಾಗಿಯ ಸ್ವರವು ಕುಗ್ಗುವದು. ಚಕೋರ ಪಕ್ಷಿಯ ಕಣ್ಣು ಕಾಂತಿಹೀನವಾಗುವದು. ಪಾತ್ರೆಯಲ್ಲಿ ಇಟ್ಟ ವಿಷಯುಕ್ತ ಅನ್ನದ ಬಣ್ಣವು ಬೇರೆಯಾಗುವದು. ಮತ್ತು ಅದರ ಮೇಲೆ ಕೂತ ನೊಣಗಳು ಸಾಯುವವು. || ೧೧೦|| ದ್ರವಪದಾರ್ಥಗಳಲ್ಲಿ ವಿಷವಿದ್ದರೆ. ಅವರ ಬಣ್ಣವು ಬೇರೆಯಾಗಿ ಅವದಲ್ಲಿ ನೀಲಗೆರೆಗಳು ಕಾಣುವವು. ಅದರಲ್ಲಿ ಉಪ್ಪು ಕೂಡಿಸಲು ಬಹಳ ಬರುಗು ಬರುವದು. || ೧೧೧ ||

ವಿಷದಿಂದ ಆಯಾ ಇಂದ್ರಿಯುಗಳಮೇಲೆ ಆಗುವ ಪರಿಣಾಮುಗಳನ್ನು ಹೇಳುತ್ತಾರೆ.

**ಪಾನಾನ್ನಯೋಃ ಸವಿಷಯೋರ್ಗಂಧೇನ ಶಿರೋರುಜಾ ಹಲದಿ ಚ ಮೂರ್ಚ್ಛಾ ಚ ||**
**ಸ್ಪರ್ಶೇನ ಪಾಣಿಶೋಥಃ ಸುಪ್ತ್ಯಂಗುಲಿದಾಹತೋದನಖಭೇದಾಃ ||೧೧೨||**

**ಮುಖತಾಲ್ವೋಷ್ಠ ಚಿಮಿಚಿಮಾ ಜಿಹ್ವಾ ಶೂನವತೀಜಡಾವಿವರ್ಣಾ ಚ||**
**ದ್ವಿಜಹರ್ಷಹನುಸ್ತಂಭಾಸ್ಯದಾಹನಾನಾಗಲವಿಕಾರಾಃ ||೧೧೩||**

**ಆಮಾಶಯಂ ಪ್ರವಿಷ್ಟೇ ವೈವರ್ಣ್ಯಂ ಸ್ವೇದಸದನಮುತ್ಕ್ಲೇದಃ ||**
**ದೃಷ್ಟಿಹೃದಯೋಪರೋಧೋ ಬಿಂದುಶಚ್ಛೀಯತೇ ಚಾಂಗಮ್||೧೧೪||**

ಪಕ್ವಾಶಯಂತು ಯಾತೇ ಮೂರ್ಛಾಮದದಾಹಮೋಹಬಲನಾಶಾಃ
ತಂದ್ರಾ ಕಾರ್ಶ್ಯಂ ಚ ವಿಷೇ ಪಾಂಡುತ್ವಂ ಚೋದರಸ್ಥೇ ಸ್ಯಾತ್||೧೧೫||

ದಂತೌಷ್ಠಮಾಂಸಶೋಥಾಃ ಶೀರ್ಯಂತೇ ದಂತಪವನೇ ಕೂರ್ಚಾಸ್ತು||
ಕೇಶಚ್ಯುತಿಃ ಶಿರೋರುಕ್ ಗ್ರಂಥಯೋ ವಿಶೀರ್ಣಶ್ಚ ಕೂರ್ಚಃ ಸ್ಯಾತ್
||೧೧೬||

ದುಷ್ಟೇಽಂಜನೇಽಕ್ಷಿದಾಹಃ ಸ್ರಾವೋಽತ್ಯುಪದೇಹಶೋಥರಾಗಾಶ್ಚ ||
ಆದ್ಯೈರಾದೌ ಕೋಷ್ಠಃ ಸ್ಪೃಶ್ಯೈಸ್ತ್ವಗ್ ದಹ್ಯತೇ ದುಷ್ಟೈಃ ||೧೧೭||
ಸ್ನಾನಾಭ್ಯಂಗೋತ್ಸಾದನವಸ್ತ್ರಾಲಂಕಾರವರ್ಣಕೈರ್ದುಷ್ಟೈಃ ||
ಕಂಡ್ವರ್ತಿಕೋಠಪಿಡಕಾರೋಮೋದ್ಗಮಚಿಮಿಚಿಮಾಃ ಶೋಥಾಃ
||೧೧೮||

ಏತೇ ಚ ಕರಚರಣತೋದದಾಹಕ್ಲಮಾವಿಪಾಕಾಶ್ಚ ||
ಭೂಪಾದುಕಾಶ್ವಗಜಚರ್ಮಕೇತುಶಯನಾಸನೈರ್ದುಷ್ಟೈಃ ||೧೧೯||

ಮಾಲ್ಯಮನುಗಂಧಂ ಮ್ಲಾಯತಿ ಶಿರೋರುಜಾರೋಮಹರ್ಷಕರಮ್ ||
ಸ್ತಂಭಯತಿ ಖಾನಿ ನಾಸಾಮುಪಹಂತ್ಯಥ ದರ್ಶನೇ ಧೂಮಃ ||೧೨೦||

ಕೂಪತಡಾಗಾದಿಜಲಂ ದುರ್ಗಂಧಂ ಸಕಲುಷಂ ವಿವರ್ಣಞ್ಚ ||
ಪೀತಂ ಶ್ವಯಥುಂ ಕೋಠಾನ್ ಪಿಡಕಾಶ್ಚ ಕರೋತಿ ಮರಣಞ್ಚ ||೧೨೧||

ಆದೌ ಚಾಮಾಶಯಗೇ ವಮನಂ ತ್ವಕ್ಸ್ಥೇ ಪ್ರದೇಹಸೇಕಾದಿ ||
ಕುರ್ಯಾದ್ ಭಿಷಕ್ ಚಿಕಿತ್ಸಾಂ ದೋಷಬಲಂ ಚೈವ ಹಿ ಸಮೀಕ್ಷ್ಯ
||೧೨೨||

ಇತಿಮೂಲವಿಷವಿಶೇಷಾಃ ಪ್ರೋಕ್ತಾಃ....................

**ಅರ್ಥ—** ವಿಷಯುಕ್ತ ಅನ್ನಪಾನಗಳ ವಾಸನೆಯಿಂದ ತಲೆನೋವು, ಎದೆನೋವು, ಮೂರ್ಛೆರಿಳುಂಟಾಗುವವು. ಅದರ ಸ್ಪರ್ಶದಿಂದ ಕೈಗೆಬಾವು, ಸ್ಪರ್ಶಜ್ಞಾನನಾಶ, ಬಟ್ಟುಗಳಿಗೆದಾಹ, ಚುಚ್ಚುವಿಕೆ, ಉಗುರುಶೀರ್ಣೋಣ || ೧೧೨ || ಬಾಯಿ-ಅಂಗಳ-ತುಟಿಗಳು ಜುಣುಜುಣು ಅನ್ನೋಣ, ನಾಲಿಗೆಯ ಬಣ್ಣವು ಬದಲಾಗಿ ಅದಕ್ಕೆ ಜಡತ್ವ ಮತ್ತು ಬಾವು ಉಂಟಾಗುವದು. ದಂತ ಹರ್ಷ, ಹನುಸ್ತಂಭ, ಮುಖದಾಹ ಮತ್ತು ಅನೇಕತರದ ಕಂಠವಿಕಾರಗಳು ಉಂಟಾಗುವವು.|| ೧೧೩ || ವಿಷವು ಆಮಾಶಯದಲ್ಲಿ ಹೋಗಲು ವಿವರ್ಣತೆ ಬೆವರು ನಿರ್ವಿಣ್ಣತೆ ಕಿಚಿಕಿಚಿ ಕಣ್ಣುಮಂದವಾಗುವದು, ಎದೆಯಲ್ಲಿ ಏನಾ

ವರೂ ಕೂತಂತೆ ಅನಿಸುವದು, ಮೈಮೇಲೆ ಟಿಬಿಕಿಗಳು ಏಳುವವು. ‖ ೧೧೪ ‖ ವಿಷವು ಪಕ್ವಾಶಯಕ್ಕೆ ಹೋಗಲು ಮೂರ್ಛಾ, ಮದ, ದಾಹ, ಮೋಹ ಬಲ ನಾಶಗಳುಂಟಾಗುವವು. ವಿಷವು ಉದರಕ್ಕೆ ಹೋಗಲು ತಂದ್ರಿ ಕಾರ್ಶ್ಯ ಬಿಳೀ ಬಣ್ಣಗಳು ಉಂಟಾಗುವವು. ‖ ೧೧೫ ‖ ಹಲ್ಲುಕಡ್ಡಿಯಲ್ಲಿ ವಿಷವಿದ್ದರೆ ಹಲ್ಲು; ತುಟಿ, ವಸಡಿಗಳಲ್ಲಿ ಬಾವು ಬರುವದು. ಕಡ್ಡೀಎಸಳುಗಳು ಉದರುವವು. ವಿಷವು ತಲೆಗೆ ಹತ್ತಲು ಕೂದಲು ಉದರುವವು. ತಲೆಯಲ್ಲಿನೋವುಗಳುಂಟಾಗುವವು. ಕೂರ್ಚವು (ಕುಂಚವು) ಉದರುವದು. ‖ ೧೧೬ ‖ ಅಂಜನವು ವಿಷಯುಕ್ತವಿದ್ದರೆ ಕಣ್ಣುಉರಿಯೋಣ, ಸ್ರಾವ, ಮೆತ್ತೋಣ ಬಾವು ಕೆಂಪುಬಣ್ಣಗಳು ಬರುತ್ತವೆ. ವಿಷಯುಕ್ತ ತಿನ್ನುವ ಪದಾರ್ಥಗಳಿಂದ ಮೊದಲು ಕೋಷ್ಠದ ದಾಹವಾಗುತ್ತದೆ. ‖ ೧೧೭ ‖ ಸ್ನಾನ, ಅಭ್ಯಂಗದ್ರವ್ಯ, ಉತ್ಸಾದನದ್ರವ್ಯ, ವಸ್ತ್ರ, ಅಲಂಕಾರ, ಗಂಧಗಳು ವಿಷಯುಕ್ತವಾಗಿದ್ದರೆ ಕಂಡೂ ನೋವು, ಗಾದರಿ, ಬಕ್ಕೆ, ರೋಮಾಂಚ, ಜುಣುಜುಣುಅನ್ನೋಣ, ಬಾವುಗಳು ಉಂಟಾಗುವವು. ‖ ೧೧೮ ‖ ಭೂಮಿ, ಪಾದುಕ, ಕುದುರೆ, ಆನೆ, ತೊಗಲು, ಧ್ವಜ, ಹಾಸಿಗೆ, ಆಸನಗಳು ವಿಷದಿಂದಯುಕ್ತವಾಗಿದ್ದರೆ ಮೇಲಿನ ವಿಕಾರಗಳಲ್ಲದೆ ಕೈಕಾಲುಚುಚ್ಚೋಣ, ದಾಹ, ಕ್ಲಮ, ಅಜೀರ್ಣಗಳುಂಟಾಗುವವು. ‖ ೧೧೯ ‖ ವಿಷಯುಕ್ತ ಮಾಲೆಯು ಗಂಧರಹಿತವಾಗಿ ಬಾಡುವದು ತಲೆನೋವು, ರೋಮಾಂಚಗಳುಂಟಾಗುವವು. ವಿಷಯುಕ್ತ ಧೂಮವು ಶರೀರದ ಎಲ್ಲ ಛಿದ್ರಗಳನ್ನು ಕಟಿಸುವದು ಘ್ರಾಣೇಂದ್ರಿಯ ಮತ್ತುಕಣ್ಣುಗಳನ್ನು ನಾಶಮಾಡುವದು ‖ ೧೨೦ ‖ ಕೆರೆ, ಬಾವಿ, ಮುಂತಾದವುಗಳ ನೀರು ವಿಷದುಷ್ಟವಾದರೆ ಅದರ ಬಣ್ಣವು ತಿರಗುವದು; ಹೊಲಸಾಗುವದು ಮತ್ತು ನಾರುವದು ಅದನ್ನು ಕುಡಿದರೆ ಬಾವು, ಗಾದರಿ, ಬಕ್ಕಿ, ಮರಣವನ್ನುಂಟುಮಾಡುವದು. ‖ ೧೨೧ ‖ ವಿಷವು ಆಮಾಶಯದಲ್ಲಿರಲು ಮೊದಲು ವಮನವನ್ನು, ತ್ವಚೆಯಲ್ಲಿರಲು ಮೊದಲು ಲೇಪ-ಸೇಚನವನ್ನುಮಾಡಿ ಆಮೇಲೆ ವೈದ್ಯನು ದೋಷಬಲವನ್ನು ವಿಚಾರಿಸಿ ಚಿಕಿತ್ಸೆಯನ್ನು ಮಾಡಬೇಕು. ‖ ೧೨೨ ‖ ಇಲ್ಲಿಯವರೆಗೆ ಮೂಲ ವಿಷದ ಲಕ್ಷಣಗಳು ಹೇಳಲ್ಪಟ್ಟವು.

**ಜಂಗಮ ವಿಷದ ಲಕ್ಷಣ ಚಿಕಿತ್ಸೆಗಳನ್ನು ಹೇಳುತ್ತಾರೆ ಅದಕ್ಕಾಗಿ ಮೊದಲು ಸರ್ಪ ಮುಂತಾದ ಪ್ರಾಣಿಗಳ ಭೇದಲಕ್ಷಣಗಳನ್ನು ಹೇಳುತ್ತಾರೆ—**

**ಶೃಣು ಜಂಗಮಸ್ಯಾತಃ ‖**
**ಸವಿಶೇಷಚಿಕಿತ್ಸಿತಮೇವಾದೌ ತತ್ರೋಚ್ಯತೇ ತು ಸರ್ಪಾಣಾಮ್ ‖೧೨೩‖**

ದರ್ವೀಕರಾ ಮಂಡಲಿನೋ ರಾಜಿಮಂತಸ್ತಥೈವ ಚ ||
ಸರ್ಪಾ ಯಥಾಕ್ರಮಂ ವಾತಪಿತ್ತಶ್ಲೇಷ್ಮಪ್ರಕೋಪಣಾಃ ||೧೨೪||

ದರ್ವೀಕರಃ ಫಣೀ ಜ್ಞೇಯೋ ಮಂಲಲೀ ಮಂಡಲಾಃ ಫಣಾಃ ||
ಬಿಂದುಲೇಖೋ ಹಿ ಚಿತ್ರಾಂಗಃ ಪನ್ನಗಃ ಸ್ಯಾತ್ ಸ ರಾಜಿಮಾನ್ ||೧೨೫

ವಿಶೇಷಾತ್ ಕಟುಕಂ ರೂಕ್ಷಮುಷ್ಣಂ ಸ್ವಾದು ಶೀತಲಮ್ ||
ವಿಷಂ ಯಥಾಕ್ರಮಂ ತೇಷಾಂತಸ್ಮಾದ್ ವಾತಾದಿಕೋಪನಮ್ ||೧೨೬||

ದರ್ವೀಕರಕೃತೋ ದಂಶಃ ಸೂಕ್ಷ್ಮದಂಷ್ಟ್ರಾಪದೋಽಸಿತಃ ||
ನಿರುದ್ಧರಕ್ತಃ ಕೂರ್ಮಾಭೋ ವಾತವ್ಯಾಧಿಕರೋ ಮತಃ ||೧೨೭||

ಪೃಥ್ವರ್ಪಿತಃ ಸಶೋಫಶ್ಚ ದಂಶೋ ಮಂಡಲಿಭಿಃ ಕೃತಃ ||
ಪೀತಾಭಃ ಪೀತರಕ್ತಶ್ಚ ಪಿತ್ತರಕ್ತವಿಕಾರಕೃತ್ ||೧೨೮||

ರಾಜಿಮದ್ಭಿಃ ಕೃತೋ ದಂಶಃ ಪಿಚ್ಛಿಲಃ ಸ್ಥಿರಶೋಫಕೃತ್ ||
ಸ್ನಿಗ್ಧಃ ಪಾಂಡುಶ್ಚ ಸಾಂದ್ರಾಸೃಕ್ ಶ್ಲೇಷ್ಮವ್ಯಾಧಿಸಮೀರಣಃ ||೧೨೯||

ವೃತ್ತಭೋಗೋ ಮಹಾಕಾಯಃ ಶ್ವಸನ್ ಊರ್ಧ್ವೇಕ್ಷಣಃ ಪುಮಾನ್ ||
ಸಮಾಂಗಃ ಶಿರಸಾ ಸ್ಥೂಲಃ ಸ್ತ್ರೀತ್ವತಃ ಸ್ಯಾದ್ ವಿಪರ್ಯಯಾತ್ ||೧೩೦||

ಕ್ಲೀಬಃ ಪ್ರಸ್ತ ಸ್ತ್ವಧೋದೃಷ್ಟಿಃ ಸ್ವರಹೀನಃ ಪ್ರಕಂಪತೇ ||
ಸ್ತ್ರೀಯಾ ದಷ್ಟೋ ವಿಪರ್ಯಸ್ತೈರೇಭಿಃ ಪುಂಸಾ ನರೋಮತಃ ||೧೩೧||

ವ್ಯಾಮಿಶ್ರಲಿಂಗೈರೇತೈಸ್ತು ಷಂಢದಷ್ಟಂ ವದೇನ್ನರಮ್ ||
ಇತ್ಯೇತದುಕ್ತಂ ಸರ್ಪಾಣಾಂ ಸ್ತ್ರೀಪುಂಕ್ಲೀಬನಿದರ್ಶನಮ್ ||೧೩೨||

ಪಾಂಡುವಕ್ತ್ರಸ್ತು ಗರ್ಭಿಣ್ಯಾ ಶೂನೌಷ್ಠೋಽಪ್ಯಸಿತೇಕ್ಷಣಃ ||
ಜೃಂಭಾಕ್ರೋಧೋಪಜಿಹ್ವಾರ್ಥೋ ಲೂತಯಾ ರಕ್ತಮೂತ್ರವಾನ್ ||೧೩೩||

ಸರ್ಪೋ ಗೌಧೇರಕೋ ನಾಮ ಗೋಧಾಯಾಃ ಸ್ಯಾಚ್ಚತುಷ್ಪದಃ ||
ಕೃಷ್ಣಸರ್ಪೇಣ ತುಲ್ಯಃ ಸ್ಯಾನ್ನಾನಾ ಸ್ಯುರ್ಮಿಶ್ರಜಾತಯಃ ||೧೩೪||

ಗೂಢಸಂಪಾದಿತಂ ವೃತ್ತಂ ಪೀಡಿತಂ ಲಂಬಿತಾರ್ಪಿತಮ್ ||
ಸರ್ಪಿತಂ ಚ ಭೃಶಾವಾಢಂ ದಂಶಾ ಯೇಽನ್ಯೇ ನ ತೇ ಭೃಶಾಃ ||೧೩೫||

**ತರುಣಾಃ ಕೃಷ್ಣಸರ್ಪಾಸ್ತು ಗೋನಸಾಃ ಸ್ಥವಿರಾಸ್ತಥಾ ॥**
**ರಾಜಿಮಂತೋ ವಯೋಮಧ್ಯೇ ಭವಂತ್ಯಾಶೀವಿಷೋಪಮಾಃ ॥೧೩೬॥**

**ಅರ್ಥ—** ಇನ್ನು ಮೇಲೆ ಜಂಗಮವಿಷದ ಲಕ್ಷಣಗಳು ಹೇಳಲ್ಪಡುತ್ತವೆ ಕೇಳಿರಿ. ಅವುಗಳಲ್ಲಿ ಮೊದಲು ಹಾವುಗಳ ಲಕ್ಷಣ ಚಿಕಿತ್ಸೆಗಳನ್ನೇ ಹೇಳುವೆವು. ॥ ೧೨೩ ॥ ದರ್ವೀಕರ (ಹೆಡೆಯುಳ್ಳ ಹಾವು) ಮಂಡಲಿ (ದುಂಡಹೆಡೆಯ ಸಾವಕಾಶವಾಗಿ ಹೋಗುವ ದೊಡ್ಡ ಹಾವು) ರಾಜಮಾನ್ (ಮೇಲೆ ಗೆರೆಗಳುಳ್ಳ) ಹೀಗೆ ಮೂರು ತರದ ಹಾವುಗಳಿರುತ್ತವೆ. ಅವು ಕ್ರಮವಾಗಿ ವಾತ ಪಿತ್ತ ಕಫಗಳ ಪ್ರಕೋಪವಾಡುತ್ತವೆ. ॥ ೧೨೪ ॥ ದರ್ವೀಕರಕ್ಕೆ ಹೆಡೆಯಿರುವದು ಮಂಡಲಿಗೆ ದುಂಡುಹೆಡೆಯಿರುವದು ರಾಜಮಂತಕ್ಕೆ ಮೈಮೇಲೆ ಟಿಚಿಕೆಗಳೂ ಗೆರೆಗಳೂ ಬೇರೆಬೇರೆ ಬಣ್ಣಗಳೂ ಇರುವವು. ॥ ೧೨೫ ॥ ಅವುಗಳ ವಿಷವು ಕ್ರಮದಿಂದ ಹೆಚ್ಚು ಕಾರ ಮತ್ತು ರೌಕ್ಷ ಹುಳಿ ಉಷ್ಣ, ಮಧುರ, ಶೀತವಾಗಿರುವದರಿಂದ ಕ್ರಮವಾಗಿ ವಾತಪಿತ್ತಕಫಗಳನ್ನೂ ಪ್ರಕೋಪಿಸುವವು. ॥ ೧೨೬ ॥ ದರ್ವೀಕರವು ಕಡಿದ ಗಾಯದಲ್ಲಿ ದವಡೆಯ ಹೆಜ್ಜೆಯು ಸಣ್ಣದೂ ಕಪ್ಪು ಆವಿಯಂತೆ ಮೇಲೆ ಉಬ್ಬಿದ್ದೂ ಇದ್ದು ಅದರಿಂದ ರಕ್ತವು ಬರುತ್ತಿರುವದಿಲ್ಲ. ಇದು ವಾತವ್ಯಾಧಿಯನ್ನು ಉಂಟುಮಾಡುತ್ತದೆ. ॥ ೧೨೭ ॥ ಮಂಡಲಿಯ ದಂಶವು ದೊಡ್ಡದಿದ್ದು ಅದರಲ್ಲಿ ಬಾವು ಹಳದಿ ಅಥವಾ ಹಳದಿಕೆಂಪು ಬಣ್ಣವಿರುತ್ತದೆ. ಅದು ಪಿತ್ತರಕ್ತ ವಿಕಾರವನ್ನುಂಟುಮಾಡುವದು. ॥ ೧೨೮ ॥ ರಾಜಿಮಂತದಿಂದ ಉಂಟಾದ ಗಾಯವು ಜಿಗಟು ಗಟ್ಟಿಯಾದ ಬಾವುಳ್ಳದ್ದು, ಸ್ನಿಗ್ಧ, ಬಿಳೀ ಗಟ್ಟಿ ರಕ್ತವುಳ್ಳದ್ದು ಇದ್ದು ಕಫವ್ಯಾಧಿಯನ್ನು ಹೆಚ್ಚಿಸುವದು. ॥ ೧೨೯ ॥ ಇವುಗಳಲ್ಲಿ ದುಂಡನಹೆಡೆಯುಳ್ಳ ದೊಡ್ಡಶರೀರದ ಶ್ವಾಸಬಿಡುವ, ಮೇಲಕ್ಕೆನೋಡುವ, ಸಮವಾದ ಅಂಗವುಳ್ಳ, ದೊಡ್ಡತಲೆಯ ಹಾವು ಗಂಡುಎಂದೂ ಇದರ ವಿಪರೀತ ಲಕ್ಷಣಗಳುಳ್ಳ ಹಾವು ಹೆಣ್ಣುಎಂದೂ ತಿಳಿಯಬೇಕು. ॥ ೧೩೦ ॥ ಇವೆರಡೂ ತರದ ಲಕ್ಷಣಗಳಿಲ್ಲದ್ದು ಷಂಡಹಾವೆಂದು ತಿಳಿಯಬೇಕು. ಹೆಣ್ಣುಹಾವಿನಿಂದ ಕಡಿಯಲ್ಪಟ್ಟವನ ಗತಿಯೇ ನಿಲ್ಲುವದು ದೃಷ್ಟಿಯು ಕೆಳಗಾಗುವದು ಸ್ವರಭಂಗವಿದ್ದು ನಡಗುವನು. ಗಂಡುಹಾವಿನಿಂದ ಕಡಿಯಲ್ಪಟ್ಟವನಲ್ಲಿ ಇದರ ವಿಪರೀತ ಲಕ್ಷಣಗಳಿರುವವು. ॥ ೧೩೧ ॥ ಮಿಶ್ರಲಕ್ಷಣಗಳಿದ್ದರೆ ಷಂಡಹಾವಿನಿಂದ ಕಡಿಯಲ್ಪಟ್ಟವನೆಂದು ತಿಳಿಯಬೇಕು ಈ ಪ್ರಕಾರ ಹಾವುಗಳ ಗಂಡು, ಹೆಣ್ಣು, ನಪುಂಸಕಗಳ ಲಕ್ಷಣಗಳು ಹೇಳಲ್ಪಟ್ಟವು ॥ ೧೩೨ ॥ ಗರ್ಭಿಣೀ ಹಾವಿನಿಂದ

ಕಡಿಯಲ್ಪಟ್ಟವನ ಮೋರೆಯು ಬೆಳ್ಳಗೆ, ತುಟಿಯು ಬಾತಿದ್ದು, ಕಣ್ಣು ಕರ್ರಗಿರುವವು. ಲೂತ (ಜೇಡ) ಯಿಂದ ಕಡಿಯಲ್ಪಟ್ಟ ಮನುಷ್ಯನಲ್ಲಿ ಆಕಳಿಕೆ ಕ್ರೋಧ ಉಪಜಿಹ್ವಗಳಿದ್ದು ಮೂತ್ರವು ಕೆಂಪಾಗಿರುತ್ತದೆ. ॥ ೧೩೩ ॥ ಗೋಧಾ (ಉಡ) ದಿಂದ ನಾಲ್ಕುಕಾಲಿನ ಗೌಧೇರಕವೆಂಬ ಸರ್ಪವು ಹುಟ್ಟುತ್ತದೆ ಅದು ಕೃಷ್ಣ ಸರ್ಪದಂತೆ ಇರುತ್ತದೆ ಹಾವಿನಲ್ಲಿ ಮಿಶ್ರಜಾತಿಗಳು ಅನೇಕವಿರುತ್ತವೆ. ॥ ೧೩೪ ॥ ತಿಳಿಯದಂತೆ ಉಂಟಾದ ದುಂಡನ್ನು ಹಿಂಡಿದಂತೆ ಇರುವ ಜೋತಾಡುವ, ಪಸರಿಸಿದ ದಂಶದಲ್ಲಿ ನೋವು ಬಹಳ ಇರುತ್ತದೆ ಉಳಿದ ದಂಶಗಳಲ್ಲಿ ಇಷ್ಟು ನೋವಿರುವದಿಲ್ಲ ॥ ೧೩೫ ॥ ಕೃಷ್ಣಸರ್ಪಗಳು ತಾರುಣ್ಯದಲ್ಲಿ, ಮಂಡಲ ಸರ್ಪಗಳು ವಾರ್ಧಕ್ಯದಲ್ಲಿ, ರಾಜಿಮಂತಗಳು ಮಧ್ಯವಯಸ್ಸಿನಲ್ಲಿ, ಆಶೀವಿಷ (ತೀವ್ರವಿಷವುಳ್ಳವು) ದಂತೆ ತೀಕ್ಷ್ಣವಾಗುವವು. ॥೧೩೬॥

ಸರ್ಪಗಳ ಹಲ್ಲುಗಳನ್ನು ಅವುಗಳಲ್ಲಿರುವ ವಿಷಪ್ರಮಾಣವನ್ನೂ ಹೇಳುತ್ತಾರೆ.

**ಸರ್ಪದಂಷ್ಟ್ರಾಶ್ಚತಸ್ರಸ್ತು ತಾಸಾಂ ವಾಮಾಧರಾಸಿತಾ ॥**
**ಪೀತಾ ವಾಮೋತ್ತರಾದಂಷ್ಟ್ರಾ ರಕ್ತಾ ಶ್ಯಾವಾಧರೋತ್ತರಾ ॥೧೩೭॥**
**ಯನ್ಮಾತ್ರಃ ಪತತೇ ಬಿಂದುರ್ಗೋಃಬಾಲಾತ್ ಸಲಿಲೋಧೃತಾತ್ ॥**
**ವಾಮಾಧರಾಯಾಂ ದಂಷ್ಟ್ರಾಯಾಂ ತನ್ಮಾತ್ರಂ ಸ್ಯಾದಹೇರ್ವಿಷವ್ ॥೧೩೮॥**
**ಏಕದ್ವಿತ್ರಿಚತುರ್ವೃದ್ಧಿ ರ್ವಿಷಭಾಗೋತ್ತರೋತ್ತರಾ ॥**
**ಸವರ್ಣಾಸ್ತತ್ಕೃತಾ ದಂಶಾ ಬಹೂತ್ತರವಿಷಾ ಭೃಶಾಃ ॥೧೩೯॥**

**ಅರ್ಥ—** ಹಾವುಗಳಿಗೆ ನಾಲ್ಕು ದೊಡ್ಡ ಹಲ್ಲಿನ ದವಡೆಗಳಿರುತ್ತವೆ. ಅವುಗಳಲ್ಲಿ ಎಡಕಿನ ಕೆಳಭಾಗದ ದವಡೆಯು ಕಪ್ಪು. ಎಡಕಿನ ಮೇಲ್ದವಡೆಯು ಹಳದಿ. ಲಭಾಗದ ಕೆಳದವಡಿಯು ಕೆಂಪು. ಮೇಲ್ದವಡಿಯು ಕಪ್ಪು ಇರುವದು. ॥೧೩೭॥ ಆಕಳ ಬಾಲದ ಕೂದಲನ್ನು ನೀರಿನಲ್ಲಿ ಎದ್ದಿ ತೆಗೆಯಲು ಬೀಳುವ ಹನಿಯಷ್ಟು ವಿಷವು ಎಡಕಿನ ಕೆಳಗಿನ ಹಾವಿನ ದವಡೆಯಲ್ಲಿ ಇರುತ್ತದೆ. ॥೧೩೮॥ ಎಡಕಿನ ಕೆಳಗಿನ ದವಡೆಯಲ್ಲಿ ವಿಷವು ಒಂದು ಹನಿ, ಎಡಕಿನ ಮೇಲಿನ ದವಡೆಯಲ್ಲಿ ಎರಡು ಹನಿ, ಬಲಕಿನ ಕೆಳದವಡೆಯಲ್ಲಿ ಮೂರು ಹನಿ, ಬಲಕಿನ ಮೇಲಿನ ದವಡೆಯಲ್ಲಿ ನಾಲ್ಕು ಹನಿಯಿರುತ್ತದೆ. ದಂಶದ ಬಣ್ಣವು ಯಾವ ಹಲ್ಲಿನಿಂದ ಕಡಿದಿರುತ್ತದೋ ಅದರಂತೆ ಇರುತ್ತದೆ. ಮತ್ತು ಕ್ರಮದಿಂದ ಹಿಂದಿನಕ್ಕಿಂತ ಮುಂದಿನದಲ್ಲಿ ಹೆಚ್ಚು ಹೆಚ್ಚು ವಿಷವಿರುತ್ತದೆ ॥೧೩೯॥

ಇನ್ನು ಮೇಲೆ ಕೀಟಗಳನ್ನು ಹೇಳುತ್ತಾರೆ—

**ಸರ್ಪಾಣಾಮೇವ ವಿಣ್ಮೂತ್ರಾತ್ ಕೀಟಾಃ ಸ್ಯುಃ ಕೀಟಸಮ್ಮತಾಃ ||**
**ದೂಷೀವಿಷಾಃ ಪ್ರಾಣಹರಾ ಇತಿ ಸಂಕ್ಷೇಪತೋ ಮತಾಃ ||೧೪೦||**

**ಗಾತ್ರಂ ರಕ್ತಂ ಸಿತಂ ಕೃಷ್ಣಂ ಶ್ಯಾವಂ ವಾ ಪಿಡಕಾಯುತಮ್ ||**
**ಸಕಂಡೂರಾಗವೀಸರ್ಪ ಪಾಕಿ ಸ್ಯಾತ್ ಕುಥಿತಂ ತಥಾ ||೧೪೧||**

**ಕೀಟೈರ್ದೂಷೀವಿಷೈರ್ದಷ್ಟಂ ಲಿಂಗಂ ಪ್ರಾಣಹರಂ ಶೃಣು ||**
**ಸರ್ಪದಷ್ಟೇ ತಥಾ ಶೋಥೋ ವರ್ಧತೇ ಸೋಗ್ರಗಂಧ್ಯಸೃಕ್ ||೧೪೨||**

**ದಂಶೇಽಕ್ಷಿಗೌರವಂ ಮೂರ್ಚ್ಛಾ ಸ ರುಗಾರ್ತಃ ಶ್ವಸಿತ್ಯಪಿ ||**
**ತೃಷ್ಣಾರುಚಿಪರೀತಶ್ಚ ಭವೇದ್ ದೂಷೀವಿಷಾರ್ದಿತಃ ||೧೪೩||**

**ಅರ್ಥ—** ಹಾವುಗಳ ಮಲಮೂತ್ರಗಳಿಂದ 'ಕೀಟ'ವೆಂದು ಕರೆಯಲ್ಪಡುವ ಸವಿಷ ಪ್ರಾಣಿಗಳು ಹುಟ್ಟುತ್ತವೆ. ಅವುಗಳಲ್ಲಿ ಸಂಕ್ಷೇಪವಾಗಿ ದೂಷೀವಿಷ (ಮಂದವಿಷವುಳ್ಳ) ಪ್ರಾಣಹರ (ತೀಕ್ಷ್ಣವಿಷವುಳ್ಳ) ವೆಂದು ಎರಡು ಭೇದವಿದೆ ||೧೪೦|| ದೂಷೀವಿಷ ಕೀಟಗಳಿಂದ ಕಡಿಯಲ್ಪಟ್ಟ ಶರೀರವು ಕೆಂಪು ಅಥವಾ ಬಿಳೀ ಅಥವಾ ಕಪ್ಪು ಅಥವಾ ನಸುಗಪ್ಪು ಇದ್ದು ಮೇಲೆ ಬಕ್ಕೆಗಳಿರುತ್ತವೆ. ಮತ್ತು ತಿಂಡಿ, ಕೆಂಪುಬಣ್ಣ, ವಿಸರ್ಪ, ಪಾಕ, ಕೊಳೆಯೋಣ ಇವುಗಳು ಇರುತ್ತವೆ ||೧೪೧|| ಇನ್ನುಮೇಲೆ ಪ್ರಾಣಹರ ಕೀಟದ ದಂಶಲಕ್ಷಣವನ್ನು ಹೇಳುತ್ತೇನೆ, ಕೇಳಿರಿ. ಹಾವು ಕಡಿದರೆ ಆಗುವಂತೆ ಬಾವು ಮತ್ತು ರಕ್ತದಲ್ಲಿ ಉಗ್ರವಾದ ವಾಸನೆಯು ಇರುತ್ತದೆ. ||೧೪೨|| ದೂಷೀವಿಷ ಪ್ರಾಣಹರ ಕೀಟವು ಕಡಿಯಲು ಕಣ್ಣು ಜಡವಾಗುವದು ಮೂರ್ಚ್ಛೆ ಬರುವದು, ಪೀಡೆಯಿಂದ ದುಃಖಿತನಾಗಿ ಉಸಿರುಗರೆಯುವನು. ಇದಲ್ಲದೆ ನೀರಡಿಕೆ ಅರುಚಿಗಳುಂಟಾಗುವವು. ||೧೪೩||

ಬೇರೆ ದೂಷೀವಿಷ ಕೀಟಗಳು ಕಡಿದ ಲಕ್ಷಣಗಳನ್ನು ಹೇಳುತ್ತಾರೆ—

**ದಂಶಮಧ್ಯೇತು ಯತ್ ಕೃಷ್ಣಂ ಶ್ಯಾವಂ ವಾ ಜಾಲಕಾನ್ವಿತಮ್ ||**
**ದಗ್ಧಾಕೃತಿ ಭೃಶಂ ಪಾಕಕ್ಲೇದಕೋಥಜ್ವರಾನ್ವಿತಮ್ ||೧೪೪||**

**ದೂಷೀವಿಷಾಭಿರ್ಲೂತಾಭಿಸ್ತಂ ದಷ್ಟಮಿತಿ ನಿರ್ದಿಶೇತ್ ||**
**ಸರ್ವಾಸಾಮೇವ ತಾಸಾಂ ಚ ದಂಶೇ ಲಕ್ಷಣಮುಚ್ಯತೇ ||೧೪೫||**

ಶೋಫಃ ಶ್ವೇತಾ ಸಿತಾ ರಕ್ತಾ ಪೀತಾ ವಾ ಪಿಡಕಾ ಜ್ವರಃ ||
ಪ್ರಾಣಾಂತಕೋ ಭವೇದ್ ದಾಹಃ ಶ್ವಾಸಹಿಕ್ಕಾಶಿರೋಗ್ರಹಾಃ ||೧೪೬||
ಆದಂಶಾಚ್ಛೋಣಿತಂ ಪಾಂಡು ಮಂಡಲಾನಿ ಜ್ವರೋಽರುಚಿಃ ||
ರೋಮಹರ್ಷಶ್ಚ ದಾಹಶ್ಚಾಪ್ಯಾಖುದೂಷೀವಿಷಾರ್ದಿತೇ ||೧೪೭||
ಮೂರ್ಛಾಂಗಶೋಥವೈವರ್ಣ್ಯಕ್ಲೇದಶಬ್ದಾ ಕೃತಿಜ್ವರಾಃ ||
ಶಿರೋಗುರುತ್ವಂ ಲಾಲಾಸೃಕ್‌ಛರ್ದಿಶ್ಚಾಸಾಧ್ಯಮೂಷಿಕೈಃ ||೧೪೮||
ಕಾರ್ಷ್ಣ್ಯಂ ಶ್ಯಾವತ್ವಮಥವಾ ನಾನಾವರ್ಣತ್ವಮೇವ ಚ ||
ಮೋಹೋಽಥ ವರ್ಚಸೋ ಭೇದೋ ದಷ್ಟೇ ಸ್ಯಾತ್ ಕೃಕಲಾಸಕೈಃ
ದಹತ್ಯಗ್ನಿರಿವಾದೌ ತು ಭಿನತ್ತ್ಯೂರ್ಧ್ವಮಾಶು ಚ ||
ವೃಶ್ಚಿಕಸ್ಯ ವಿಷಂ ಯಾತಿ ದಂಶೇ ಪಶ್ಚಾತ್ ತು ತಿಷ್ಠತಿ ||೧೫೦||
ದಷ್ಟೋಽಸಾಧ್ಯಸ್ತು ಹೃದ್‌ಘ್ರಾಣರಸನೋಪಹತೋ ನರಃ ||
ಮಾಂಸೈಃ ಪತದ್ಭಿರತ್ಯರ್ಥಂ ವೇದನಾರ್ತೋ ಜಹಾತ್ಯಸೂನ್ ||೧೫೧||
ವಿಸರ್ಪಃ ಶ್ವಯಥುಃ ಶೂಲಂ ಜ್ವರಶ್ಛರ್ದಿರಥಾಪಿ ಚ ||
ಲಕ್ಷಣಂ ಕಣಭೈರ್ದಷ್ಟೇ ದಂಶಶ್ಚೈವ ವಿಶೀರ್ಯತೇ ||೧೫೨||
ಹೃಷ್ಟರೋಮೋಚ್ಚಿಟಿಂಗೇನ ಸ್ತಬ್ಧಲಿಂಗೋ ಭೃಶಾರ್ತಿಮಾನ್ ||
ದಷ್ಟಃ ಶೀತೋದಕೇನೈವ ಸಿಕ್ತಾನ್ಯಂಗಾನಿ ಮನ್ಯತೇ ||೧೫೩||
ಏಕದಂಷ್ಟ್ರಾರ್ದಿತಃ ಶೂನಃ ಸಪೀತಃ ಸರುಜಸ್ತಥಾ ||
ಛರ್ದಿರ್ನಿದ್ರಾ ಚ ಸವಿಷೈರ್ಮಂಡೂಕೈರ್ದಷ್ಟಲಕ್ಷಣಮ್ ||೧೫೪||
ಮತ್ಸ್ಯಾಸ್ತು ಸವಿಷಾಃ ಕುರ್ಯುರ್ದಾಹ ಶೋಥರುಜಸ್ತಥಾ ||
ಕಂಡೂಂ ಶೋಥಂ ಜ್ವರಂ ಮೂರ್ಛಾಂ ಸವಿಷಾಸ್ತು ಜಲೌಕಸಃ ||೧೫೫||
ವಿದಾಹಂ ಶ್ವಯಥುಂ ತೋದಂ ಸ್ವೇದಂ ತು ಗೃಹಗೋಧಿಕಾ ||
ದಂಶೇ ಸ್ವೇದಂ ರುಜಂ ದಾಹಂ ಕುರ್ಯಾಚ್ಛತಪದೀವಿಷಮ್ ||೧೫೬||
ಕಂಡೂಮಾನ್ ಮಶಕೈರೀಷಚ್ಛೋಥಃ ಸ್ಯಾನ್ಮಂದವೇದನಃ ||
ಅಸಾಧ್ಯಕೀಟಸದೃಶಮಸಾಧ್ಯಮಶಕಕ್ಷತಮ್ ||೧೫೭||
ಸದ್ಯಃ ಪ್ರಸ್ರಾವಿಣೀ ಶ್ಯಾವಾ ದಾಹಮೂರ್ಛಾಜ್ವರಾನ್ವಿತಾ ||
ಪಿಡಕಾ ಮಕ್ಷಿಕಾದಂಶೇ ತಾಸಾಂ ತು ಸ್ಥಗಿಕಾಽಸುಹೃತ್ ||೧೫೮||

ಅರ್ಥ— ದಂಶದಲ್ಲಿ ಕಪ್ಪು ಅಥವಾ ನಸುಗಪ್ಪು ಬಣ್ಣ, ಜಾಳಿಗೆ ಮತ್ತು ದದ್ರು (ಕುಷ್ಠವಿಶೇಷ) ಇನಂತೆ ಆಕಾರ, ಬಹಳಪಾಕ, ಕ್ಲೇದ, (ಕಿಚಿ

ಕಿಚಿ) ಕೊಳೆ ಜ್ವರಗಳು ||೧೪೪|| ಇದ್ದರೆ ದೂಷೀವಿಷ ಲೂತೆಗಳಿಂದ ಕಡಿಯ ಲ್ಪಟ್ಟಿರುವನೆಂದು ತಿಳಿಯಬೇಕು. ಇವೆಲ್ಲವುಗಳ ದಂಶವಾಗಲು ಉಂಟಾಗುವ ಲಕ್ಷಣವನ್ನು ಹೇಳುತ್ತೇವೆ. ||೧೪೫|| ಬಾವು, ಬಿಳೀ, ನಸುಬಿಳೀ, ಕೆಂಪು, ಅಥವಾ ಹಳದಿ ಬಕ್ಕೆಗಳು, ಜ್ವರ, ಪ್ರಾಣವನ್ನು ತಕ್ಕೊಳ್ಳುವಂತಿರುವ ದಾಹ, ಶ್ವಾಸ, ಬಿಕ್ಕು, ತಲೆಶೂಲಿಗಳು ಇರುತ್ತವೆ ||೧೪೬|| ದೂಷೀವಿಷ, ಇಲಿಯು ಕಡಿದರೆ ಗಾಯ ಮೊದಲುಗೊಂಡು ಎಲ್ಲ ಶರೀರದಲ್ಲಿಯ ರಕ್ತವು ಬೆಳ್ಳಗಾಗು ವದು. ಗಾದರಿಗಳು ಏಳುವವು. ಜ್ವರ, ಅರುಚಿ, ರೋಮಾಂಚ, ದಾಹ ಗಳುಂಟಾಗುವವು. ||೧೪೭|| ಅಸಾಧ್ಯ ಇಲಿಗಳು ಕಡಿದರೆ ಮೂರ್ಛೆ, ಮೈ ಬಾವು, ವಿವರ್ಣತೆ, ಕ್ಲೇದ, ಬಾಧಿರ್ಯ, (ಕಿವುಡತನ) ಜ್ವರ, ತಲೆ ಜಡ ವಾಗೋಣ, ಜೊಲ್ಲುಸೋರೋಣ, ರಕ್ತವಾಂತಿಗಳುಂಟಾಗುವವು ||೧೪೮|| ಕೃಕಲಾಸಕ ( ಓತಿಕಾಟ ? ) ಗಳು ಕಡಿದರೆ ಕಪ್ಪು ಅಥವಾ ನಸುಗಪ್ಪು ಬಣ್ಣ ಅಥವಾ ತರತರದ ಬಣ್ಣ, ಮೂರ್ಛೆ ಅತಿಸಾರ ಇವು ಉಂಟಾಗುವವು ||೧೪೯|| ಚೇಳಿನ ವಿಷವು ಬೆಂಕಿಯಂತೆ ಮೊದಲು ಸುಡುವದು, ಕೂಡಲೆ ಮೇಲಕ್ಕೆ ಹೋಗಿ ಚುಚ್ಚುವದು. ಹಿಂದುಗಡೆ ಗಾಯದಲ್ಲಿ ಉಳಿಯುವದು ||೧೫೦|| ಹೃದಯ, ಮೂಗು, ನಾಲಿಗೆ ಈ ಇಂದ್ರಿಯಗಳು ನಾಶವಾದರೆ ಮಾಂಸವು ಉದುರುತ್ತಿದ್ದರೆ, ಅದು ಅಸಾಧ್ಯವೆಂದು ತಿಳಿಯಬೇಕು. ಅವನು ವೇದನೆ ಗಳಿಂದ ಪೀಡಿತನಾಗಿ ಪ್ರಾಣವನ್ನು ಬಿಡುವನು ||೧೫೧|| ಕಣಭಗಳಿಂದ ಕಡಿ ಯಲ್ಪಟ್ಟರೆ, ವಿಸರ್ಪ ಬಾವು ಶೂಲ, ಜ್ವರ, ವಾಂತಿಗಳು ಉಂಟಾಗುವವು. ದಂಶದ ಮಾಂಸವು ಉದರುವದು. ||೧೫೨|| ಉಚ್ಚಿಡಿಂಗ (ಇಂಗಳ) ದಿಂದ ರೋಮಾಂಚಗಳೇಳುವವು. ಶಿಶ್ನವು ಸೆಟೆಯುವದು ಬಹಳ ನೋವಾಗುವದು, ಮೈಮೇಲೆ ತಣ್ಣೀರು ಸುರಿದಂತೆ ಆಗುವದು. ||೧೫೩|| ವಿಷಯುಕ್ತ ಕಪ್ಪೆ ಗಳಿಂದ ಕಡಿಯಲ್ಪಟ್ಟರೆ, ಒಂದು ಹಲ್ಲು ಮೂಡಿರುವದು. ಬಾವು ಹಳದೀ ವರ್ಣ, ನೋವು ವಾಂತಿ, ನಿದ್ರೆಗಳು ಇರುವವು ||೧೫೪|| ಸವಿಷ ಮೀನಗಳು ಕಡಿದರೆ ದಾಹ, ಬಾವು, ನೋವುಗಳುಂಟಾಗುವವು. ಸವಿಷ ಜಿಗಳಿಗಳು ಕಡಿ ದರೆ ತಿಂಡಿ, ಬಾವು, ಜ್ವರ ಮೂರ್ಛೆಗಳುಂಟಾಗುವವು ||೧೫೫|| ಮನಿಯಲ್ಲಿಯ ಹಲ್ಲಿಯು ಕಡಿದರೆ ದಾಹ, ಬಾವು, ಚುಚ್ಚುವಿಕೆ, ಬೆವರು ಬರುವದು. ಶತಪದಿ (ಗೋಮದೇಳು) ಯ ವಿಷವು ದಂಶದಲ್ಲಿ ಬೆವರು, ಚುಚ್ಚುವಿಕೆ, ದಾಹಗಳ ನ್ನುಂಟುಮಾಡುವದು ||೧೫೬|| ಗುಂಗಾಡಿಗಳು ಕಡಿದರೆ ತುರಿಕೆ, ಸ್ವಲ್ಪಬಾವು ಸ್ವಲ್ಪ ವೇದನೆಗಳಿರುವವು. ಅಸಾಧ್ಯಗುಂಗಾಡಿಯ ದಂಶವು ಅಸಾಧ್ಯ ಕೀಟ

ದಂತೆ ಇರುವದು. ||೧೫೭|| ನೊಣಗಳು ಕಡಿಯಲು ಕೂಡಲೇ ಸೋರುವ ದಾಹ, ಮೂರ್ಛೆ, ಜ್ವರಗಳಿಂದ ಕೂಡಿದ ಕಪ್ಪುಬಣ್ಣದ ಬಕ್ಕೆಯಾಗುವದು. ಅವುಗಳಲ್ಲಿ "ಸ್ಥಗಿಕಾ" ಎಂಬ ನೊಣವು ಪ್ರಾಣಘಾತಕವಾಗಿದೆ. ||೧೫೮||

ಸ್ಥಲಕಾಲಾನುಸಾರ ವಿಷವು ಸಾಧ್ಯಾಸಾಧ್ಯತೆಯನ್ನು ಹೊಂದುತ್ತದೆಂದು ಹೇಳುತ್ತಾರೆ—

**ಶ್ಮಶಾನಚೈತ್ಯವಲ್ಮೀಕ ಯಜ್ಞಾಶ್ರಮಸುರಾಲಯೇ ||**
**ಪಕ್ಷಸಂಧಿಷು ಮಧ್ಯಾನ್ಹೇ ಸಾರ್ಧರಾತ್ರೇಽಷ್ಟಮೀಷು ಚ ||೧೫೯||**

**ನ ಸಿಧ್ಯಂತಿ ನರಾ ದಷ್ಟಾಃ ಪಾಷಂಡಾಯತನೇಷು ಚ ||**
**ದೃಷ್ಟಿಶ್ವಾಸಮಲಸ್ಪರ್ಶ ವಿಷೈರಾಶೀವಿಷೈಸ್ತಥಾ ||೧೬೦||**

**ವಿನಶ್ಯಂತ್ಯಪ್ರತಿಹತಾ ದಷ್ಟಾಃ ಸರ್ವೇಷು ಮರ್ಮಸು ||**
**ಭೀತಮತ್ತಾಬಲೋಷ್ಣಕ್ಷುತ್ತೃಷ್ಣಾರ್ತೇ ವರ್ಧತೇ ಭೃಶಮ್ ||೧೬೧||**

**ವಿಷಂ ಪ್ರಕೃತಿಕಾಲೌ ಚೇತ್ ತುಲ್ಯೌಪ್ರಾಣಾಲ್ಪಮನ್ಯಥಾ ||**
**ವಾರಿವಿಪ್ರಹಾತಾಃ ಕ್ಷೀಣಾ ಭೀತಾ ನಕುಲನಿರ್ಜಿತಾಃ ||**
**ಮುಕ್ತತ್ವಚೋ ವೃದ್ಧಬಾಲಾಃ ಸರ್ಪಾಮಂದವಿಷಾಃ ಸ್ಮೃತಾಃ ||೧೬೨||**

**ಸರ್ವದೇಹಾಶ್ರಿತಂ ಕ್ರೋಧಾದ್ ವಿಷಂ ಸರ್ಪೋ ವಿಮುಞ್ಚತಿ ||**
**ತದೇವಾಹಾರಹೇತೋರ್ವಾ ಭಯಾದ್ವಾ ನ ಪ್ರಮುಞ್ಚತಿ ||೧೬೩||**

**ಅರ್ಥ—** ಸ್ಮಶಾನ, ದೇವರಗಿಡ, ಹುತ್ತು, ಯಜ್ಞಸ್ಥಲ, ಆಶ್ರಮ ದೇವಾಲಯಗಳಲ್ಲಿಯೂ ಪಕ್ಷಗಳ ಸಂಧಿಗಳಲ್ಲಿಯೂ ಮಧ್ಯಾನ್ಹದಲ್ಲಿಯೂ ಅರ್ಧರಾತ್ರಿಯಲ್ಲಿಯೂ ಅಷ್ಟಮಿಗಳಲ್ಲಿಯೂ ||೧೫೯|| ನಾಸ್ತಿಕರಮನೆಗಳಲ್ಲಿಯೂ ಕಡಿಯಲ್ಪಟ್ಟ ಜನರು ಬದುಕುವದಿಲ್ಲ. ದೃಷ್ಟಿಶ್ವಾಸ, ಮಲ, ಸ್ಪರ್ಶಗಳಲ್ಲಿ ಕೂಡ ವಿಷವುಳ್ಳ ಆಶೀವಿಷ ಸರ್ಪಗಳಿಂದ ಕಡಿಯಲ್ಪಟ್ಟವರೂ|| ೧೬೦ || ಎಲ್ಲ ಮರ್ಮಗಳಲ್ಲಿ ಕಡಿಯಲ್ಪಟ್ಟವರೂ ಪ್ರತಿಕಾರವಿಲ್ಲದೆ ಸಾಯುವರು ಅಂಜಿಕೆ,ಮದ,ಅಶಕ್ತಿ,ಉಷ್ಣತೆ, ಹಸಿವೆ, ನೀರಡಿಕೆಗಳುಳ್ಳದರಲ್ಲಿ ವಿಷವು ಹೆಚ್ಚು ವದು. ||೧೬೧|| ಅದರಂತೆ ವಿಷದ ಪ್ರಕೃತಿ (ಪಿತ್ತಪ್ರಕೃತಿ) ಕಾಲಗಳು ಒಂದೇ (ಪಿತ್ತಪ್ರಕೃತಿಶರತ್ಕಾಲ) ಇದ್ದರೆ ವಿಷವು ಹೆಚ್ಚುವದು. ಇದರ ವಿಪರೀತವಿದ್ದರೆ ಅದರ ಶಕ್ತಿಯು ಕಡಿಮೆಯಾಗುವದು. ನೀರಲ್ಲಿರುವ, ವ್ಯಾಧಿ ಉಪವಾಸಗಳಿಂದ

ಕ್ಷೀಣವಾದ, ಅಂಜಿದ, ಮುಂಗುಲಿಯಿಂದ ಗೆಲ್ಲಲ್ಪಟ್ಟ ||೧೬೨|| ಪರೆಯನ್ನು ಬಿಟ್ಟವೃದ್ಧ, ಬಾಲ, ಸರ್ಪಗಳಲ್ಲಿ ವಿಷವು ಮಂದವಾಗಿರುತ್ತದೆ. ಸರ್ಪವು ಸಿಟ್ಟಾದರೆ ತನ್ನ ಎಲ್ಲ ದೇಹದಲ್ಲಿಯ ವಿಷವನ್ನು ಬಿಡುವದು. ||೧೬೩|| ಹಸಿವೆ ಯಾದರೆ ಅಥವಾ ಅಂಜಿಕೆ ಯಾದರೆ ಅದನ್ನು ಬಿಡುವದಿಲ್ಲ || ೧೬೩|| ||

ಯಾವ ಪ್ರಾಣಿಗಳಲ್ಲಿ ಯಾವ ದೋಷದ ವಿಷವಿರುತ್ತದೆಂಬದನ್ನೂ ಅವುಗಳ ಲಕ್ಷಣ ಮತ್ತು ಚಿಕಿತ್ಸೆಯನ್ನೂ ಹೇಳುತ್ತಾರೆ :—

ಪ್ರಾಯೋ ವಾತೋಲ್ಬಣವಿಷಾ ಉಚ್ಚಿಡಿಂಗಾಃ ಸವೃಶ್ಚಿಕಾಃ ||
ವಾತಪಿತ್ತೋಲ್ಬಣಾಃ ಕೀಟಾಃ ಶ್ಲೈಷ್ಮಿಕಾಃ ಕಣಭಾದಯಃ ||೧೬೪||

ಯಸ್ಯ ಯಸ್ಯ ತು ದೋಷಸ್ಯ ಲಿಂಗಾಧಿಕ್ಯಂ ಪ್ರತರ್ಕಯೇತ್||
ತಸ್ಯ ತಸ್ಯೌಷಧೈಃ ಕುರ್ಯಾತ್ ವಿಪರೀತಗುಣೈಃ ಕ್ರಿಯಾಮ್ ||೧೬೫||

ಹೃತ್ಪೀಡೋದ್ಧ್ವಾನಿಲಃ ಸ್ತಂಭಃ ಸಿರಾಯಾಮೋಽಸ್ಥಿಪರ್ವರುಕ್ ||
ಘೂರ್ಣನೋದ್ವೇಷ್ಟನಂ ಗಾತ್ರೇ ಶ್ಯಾವತಾ ವಾತಿಕೇವಿಷೇ ||೧೬೬||

ಸಂಜ್ಞಾನಾಶೋಷ್ಣನಿಶ್ವಾಸೌ ಹೃದ್ದಾಹಃ ಕಟುಕಾಸ್ಯತಾ ||
ದಂಶಾವದರಣಂ ಶೋಥಾ ರಕ್ತಪಿತ್ತಂ ಚ ಪೈತ್ತಿಕೇ || ೧೬೭ ||

ಛರ್ದ್ಯರೋಚಕಹೃಲ್ಲಾಸ ಪ್ರಸೇಕೋತ್ಕ್ಲೇಶಗೌರವೈಃ ||
ಸಶೈತ್ಯಮುಖಮಾಧುರ್ಯೈರ್ವಿದ್ಯಾತ್ ಶ್ಲೇಷ್ಮಾಧಿಕಂ ವಿಷಮ್||೧೬೮||

ಖಂಡೇನ ಚ ವ್ರಣಾಲೇಪಸ್ತೈಲಾಭ್ಯಂಗಶ್ಚ ವಾತಿಕೇ ||
ಸ್ವೇದೋ ನಾಡೀಪುಲಾಕಾದ್ಯೈರ್ಬೃಂಹಣಶ್ಚ ವಿಧಿರ್ಹಿತಃ ||೧೬೯||

ಸುಶೀತೈಃ ಸ್ತಂಭಯೇತ್ ಸೇಕೈಃ ಪ್ರದೇಹೈಶ್ಚಾಪಿ ಪೈತ್ತಿಕಮ್ ||
ಲೇಖನಚ್ಛೇದನಸ್ವೇದವಮನೈಃ ಶ್ಲೈಷ್ಮಿಕಂ ಜಯೇತ್ ||೧೭೦||

ವಿಷೇಷ್ವಪಿ ಚ ಸರ್ವೇಷು ಸರ್ವಸ್ಥಾನಗತೇಷು ಚ ||
ಅವೃಶ್ಚಿಕೋಚ್ಚಿಡಿಂಗೇಷು ಪ್ರಾಯಃ ಶೀತೋ ವಿಧಿಃ ಸ್ಮೃತಃ ||೧೭೧||

ವೃಶ್ಚಿಕೇ ಸ್ವೇದಮಭ್ಯಂಗಾ ಘೃತೇನ ಲವಣೇನ ಚ ||
ಸೇಕಾಂಶ್ಚೋಷ್ಣಾನ್ ಪ್ರಯುಂಜೀತ ಭೋಜ್ಯಂ ಪಾನಞ್ಚ ಸರ್ಪಿಷಃ ||೧೭೨||

ಏತದೇವೋಚ್ಚಿಡಿಂಗೇಷು ಪ್ರತಿಲೋಮಞ್ಚ ಪಾಂಶುಭಿಃ ||
ಉದ್ವರ್ತನಂ ಸುಖಾಂಬುಷ್ಣೈಸ್ತಥಾವಚ್ಛಾದನಂ ಘನೈಃ ||೧೭೩||

ಶ್ವಾತ್ ತ್ರಿದೋಷಪ್ರಕೋಪಾತ್ತು ತಥಾ ಧಾತುವಿಪರ್ಯಯಾತ್ ||
ಶಿರೋಽಭಿತಾಪೀಲಾಲಾಸ್ರಾವ್ಯವಕ್ತ್ರಕೃದೇವ ಚ ||೧೭೪||

ಅನ್ಯೇಽಪ್ಯೇವಂವಿಧಾ ವ್ಯಾಲಾಃ ಕಫವಾತಪ್ರಕೋಪಣಾಃ ||
ಹೃಚ್ಛಿರೋರುಗ್ ಜ್ವರಸ್ತಂಭತೃಷ್ಣಾಮೂರ್ಚ್ಛಾಕರಾಃಸ್ಮೃತಾಃ ||೧೭೫||

ಕಂಡೂನಿಸ್ತೋದವೈವರ್ಣ್ಯಂ ಸುಪ್ತಿಕ್ಲೇದೋಪಶೋಷಣಮ್ ||
ವಿದಾಹರಾಗರುಕ್‌ಪಾಕಾಃ ಶೋಥಾ ಗ್ರಂಥಿನಿತುಞ್ಚನಮ್ ||೧೭೬||

ದಂಶಾವದರಣಂ ಸ್ಫೋಟಾಃ ಕರ್ಣಿಕಾ ಮಂಡಲಾನಿ ಚ ||
ಜ್ವರಶ್ಚ ಸವಿಷೇ ಲಿಂಗಂ ವಿಪರೀತಞ್ಚ ನಿರ್ವಿಷೇ ||೧೭೭||

ತತ್ರ ಸರ್ವೇ ಯಥಾದೋಷಂ ಪ್ರಯೋಜ್ಯಾಃ ಸ್ಯುರುಪಕ್ರಮಾಃ ||
ಪೂರ್ವೋಕ್ತವಿಧಿಮನ್ಯಞ್ಚ ಯಥಾವದ್ ವದತಃ ಶೃಣು ||೧೭೮||

**ಅರ್ಥ—** ಇಂಗಳ ಮತ್ತು ಚೇಳುಗಳ ವಿಷವು ಬಹಳವಾಗಿ ವಾತಾಧಿಕವೂ || ೧೬೪ || ಕೀಟಗಳ ವಿಷವು ವಾತಪಿತ್ತಾಧಿಕವೂ ಕಣಭ ಮುಂತಾದವುಗಳ ವಿಷವು ಕಫಾಧಿಕವೂ ಇರುತ್ತದೆ. ಯಾವಯಾವ ದೋಷದ ಲಕ್ಷಣವು ಹೆಚ್ಚಾಗಿ ಕಂಡುಬರುತ್ತದೆಯೊ || ೧೬೫ || ಅದರ ವಿಪರೀತ ಗುಣವುಳ್ಳ ಔಷಧಗಳಿಂದ ಅದರ ಚಿಕಿತ್ಸೆಯನ್ನು ಮಾಡಬೇಕು. ವಾತಿಕ ವಿಷದಲ್ಲಿ ಎದೆಯಲ್ಲಿ ಶೂಲ, ಶ್ವಾಸ, ಸ್ತಬ್ಧತೆ, ನರಗಳು ಸೆಟೆಯೋಣ, ಅಸ್ಥಿಸಂಧಿಗಳಲ್ಲಿ ನೋವು || ೧೬೬ || ಮೋಹ ವರಟೆಬರೋಣ, ಶರೀರವು ಕಪ್ಪಾಗೋಣ, ಈ ಲಕ್ಷಣಗಳಿರುವವು. ಪೈತ್ತಿಕ ವಿಷದಲ್ಲಿ ಮೂರ್ಛೆ, ಉಷ್ಣಶ್ವಾಸ, ಎದೆಯಲ್ಲಿದಾಹ, ಬಾಯಿಕಹಿಯಾಗೋಣ || ೧೬೭ || ಗಾಯದಿಂದ ಮಾಂಸವು ಉದರೋಣ, ಬಾವು ರಕ್ತಪಿತ್ತ ಈ ಲಕ್ಷಣಗಳಿರುವವು. ಕಫಾಧಿಕ ವಿಷದಲ್ಲಿ ವಾಂತಿ, ಅರುಚಿ ಬಾಯಿಗೆನೀರುಬಿಡೋಣ, ಮಳಮಳ, ಓಕರಿಕೆ, ಜಡತ್ವ || ೧೬೮ || ಶೈತ್ಯ, ಬಾಯಿಯಲ್ಲಿ ಮಾಧುರ್ಯ, ಈ ಲಕ್ಷಣಗಳಿರುವವು ವಾತಿಕ ವಿಷಕ್ಕೆ ಗಟ್ಟಿಬೆಲ್ಲದಿಂದ ವ್ರಣಕ್ಕೆ ಲೇಪ, ತೈಲದ ಅಭ್ಯಂಗ || ೧೬೯ || ನಾಡೀಸ್ವೇದ, ಅನ್ನ ಮುಂತಾದವುಗಳಿಂದಸ್ವೇದ ಮತ್ತು ಬೃಂಹಣ ಚಿಕಿತ್ಸೆಯನ್ನು ಮಾಡಬೇಕು ಪೈತ್ತಿಕ ವಿಷದಲ್ಲಿ ಅತ್ಯಂತ ಶೀತವಾದ ಕಷಾಯಸೇಚನ ಮತ್ತು ಲೇಪಗಳಿಂದ

ರಕ್ತಸ್ತಂಭನ ಮಾಡಬೇಕು. || ೧೭೦ || ಕಫದ ವಿಷದಲ್ಲಿ ಲೇಖನ, ಭೇದನ, ಸ್ವೇದ, ವಮನಗಳನ್ನು ಮಾಡಬೇಕು. ಚೇಳು ಮತ್ತು ಇಂಗಳದ ಹೊರ್ತಾಗಿ ಉಳಿದ ಎಲ್ಲ ತರದ ಮತ್ತು ಎಲ್ಲ ಸ್ಥಾನಗಳ ವಿಷಗಳಲ್ಲಿ || ೧೭೧ || ಬಹಳ ಮಾಡಿ ಶೀತವಿಧಿಯನ್ನು ಮಾಡಬೇಕು. ಚೇಳಿನ ವಿಷದಲ್ಲಿ ಸ್ವೇದ, ತುಪ್ಪ ಮತ್ತು ಉಪ್ಪಿನ ಅಭ್ಯಂಗ || ೧೭೨ || ಉಷ್ಣ ಕಷಾಯಸೇಚನ ಉಷ್ಣ ಭೋಜನ ಘೃತಪಾನಗಳನ್ನು ಮಾಡಬೇಕು. ಇಂಗಳ ವಿಷದಲ್ಲಿಯೂ ಇದೇ ಚಿಕಿತ್ಸೆಯನ್ನು ಮಾಡಬೇಕು. ಮಣ್ಣಿನ ಹುಡಿಯಿಂದ ಕೆಳದಿಂದ ಮೇಲಕ್ಕೆ ತಿಕ್ಕಬೇಕು. ||೧೭೩|| ಬಿಸಿನೀರು ಹಾಕಿದ ಹುಡಿಯಿಂದ ಮೆತ್ತಬೇಕು. ತ್ರಿದೋಷ ಕೋಪದಿಂದ ಮತ್ತು ಧಾತುವಿಪರ್ಯಯದಿಂದ ||೧೭೪|| ನಾಯಿಯತಲೆಯು ಕಾಯುವದು, ಜೊಲ್ಲು ಸೋರುವದು, ಮೋರೆ ಕೆಳಗಾಗುವದು, ಇದರಂತೆ ಇದ್ದ ಬೇರೆ ಕಚ್ಚುವ ಕಾಡು ಮೃಗಗಳು ಕಫವಾತಪ್ರಕೋಪವನ್ನು ಮಾಡಿ ||೧೭೫|| ಹೃದ್ರೋಗ, ಶಿರೋರೋಗ, ಜ್ವರ, ಸ್ತಂಭ, ನೀರಡಿಕೆ, ಮೂರ್ಛೆಗಳನ್ನುಂಟುಮಾಡುವವು. ವ್ರಣವು ವಿಷಯುಕ್ತವಿದ್ದರೆ ತುರಿಕೆ, ಚುಚ್ಚೋಣ ವಿವರ್ಣತೆ, ಸಂಜ್ಞಾನಾಶ, ಕ್ಲೇದ, ಒಣಗೋಣ, ||೧೭೬|| ದಾಹ, ಕೆಂಪುಬಣ್ಣ, ನೋವು, ಪಾಕ, ಬಾವು, ಗಂಟುಕಟ್ಟೋಣ, ಗಾಯವು ಪಸರಿಸೋಣ, ಬಕ್ಕೆ, ಗಾದರಿ, ಟಿಬಿಕೆ, ಜ್ವರ ಈ ಲಕ್ಷಣಗಳು ಇರುವವು. ||೧೭೭|| ಇಲ್ಲವಾದರೆ ಇರುವದಿಲ್ಲ. ಇವುಗಳ ಮೇಲೆ ದೋಷಾನುಸಾರ ಎಲ್ಲ ಚಿಕಿತ್ಸೆಗಳನ್ನು ಮಾಡಬೇಕು. ||೧೭೮|| ಮತ್ತು ಹಿಂದೆ ಹೇಳಿದ ವಿಧಿಯನ್ನೂ ಸರಿಯಾಗಿ ಮಾಡಬೇಕು. ಬೇರೆ ವಿಧಿಯನ್ನು ಹೇಳುತ್ತೇನೆ ಕೇಳಿರಿ || ೧೭೮|| ||

ವಿಷದ ಸ್ಥಾನಾನುಸಾರ ಚಿಕಿತ್ಸೆಯನ್ನು ಹೇಳುತ್ತಾರೆ—

**ಹೃದಿ ದಾಹೇ ಪ್ರಸೇಕೇ ಚ ವಿರೇಕವಮನಂ ಭೃಶಮ್ ||**
**ಯಥಾವಸ್ಥಂ ಪ್ರಯೋಕ್ತವ್ಯಂ ಶುದ್ಧೇ ಸಂಸರ್ಜನಕ್ರಮಃ ||೧೭೯||**

**ಶಿರೋಗತೇ ವಿಷೇ ನಸ್ತಃ ಕುರ್ಯಾನ್ಮೂಲಾನಿ ಬುದ್ಧಿಮಾನ್ ||**
**ಬಂಧುಜೀವಸ್ಯ ಭಾರ್ಗ್ಯಾ ವಾ ಸುರಸಸ್ಯಾಸಿತಸ್ಯ ಚ ||೧೮೦||**

**ದಷ್ಟಕಾಕಮಯೂರಾಣಾಂ ಮಾಂಸಾಸೃಜ್ ಮಸ್ತಕೇ ಕ್ಷತೇ ||**
**ಮೂರ್ಧ್ನಿ ದೇಯಮಧೋ ದಷ್ಟೇ ಮೂರ್ಧ್ನಿ ದಷ್ಟಸ್ಯ ಪಾದಯೋಃ ||೧೮೧||**

ಪಿಪ್ಪಲೀಮರಿಚಕ್ಷಾರವಚಾಸ್ಸೈಂಧವಶಿಗ್ರುಕಾಃ ||
ಪಿಷ್ಟ್ವಾ ರೋಹಿತಪಿತ್ತೇನ ಘ್ನಂತ್ಯಕ್ಷಿಗತಮಂಜನಾತ್ || ೧೮೨ ||

ಕಪಿತ್ಥಮಾಮಂ ಸಸಿತಾಕ್ಷೌದ್ರಂ ಕಂಠಗತೇ ವಿಷೇ ||
ಲಿಹ್ಯಾದಾಮಾಶಯಗತೇ ತಾಭ್ಯಾಂ ಚೂರ್ಣಪಲಂ ನತಾತ್ || ೧೮೩ ||

ವಿಷೇ ಪಕ್ವಾಶಯಗತೇ ಪಿಪ್ಪಲೀರಜನೀದ್ವಯಮ್ ||
ಮಂಜಿಷ್ಠಾಂಚ ಸಮಂ ಪಿಷ್ಟ್ವಾ ಗೋಪಿತ್ತೇನ ಪಿಬೇನ್ನರಃ || ೧೮೪ ||

ರಕ್ತಂ ಮಾಂಸಂಚ ಗೋಧಾಯಾಃ ಶುಷ್ಕಚೂರ್ಣೀಕೃತಂ ಹಿತಮ್ ||
ವಿಷೇ ರಸಗತೇ ಪಾನಂ ಕಪಿತ್ಥರಸಸಂಯುತಮ್ || ೧೮೫ ||

ಶೇಲೋರ್ಮೂಲತ್ವಗಗ್ರಾಣಿ ಬದರೋದುಂಬರಾಣಿ ಚ ||
ಕಟಭ್ಯಾಶ್ಚ ಪಿಬೇದ್ ರಕ್ತಗತೇ ಮಾಂಸಗತೇ ಪಿಬೇತ್ || ೧೮೬ ||

ಸಕ್ಷೌದ್ರಂ ಖದಿರಾರಿಷ್ಟಂ ಕೌಟಜಂ ಮೂಲಮಂಭಸಾ ||
ಸರ್ವೇಷು ಚ ಬಲೇ ದ್ವೇ ಚ ಮಧೂಕಂ ಮಧುಕಂ ನತಮ್ || ೧೮೭ ||

ಪಿಪ್ಪಲೀ ಮರಿಚಂ ಕ್ಷಾರಂ ನವನೀತೇನ ಮೂರ್ಛಿತಮ್ ||
ಪ್ರವೃದ್ಧೇ ಶ್ಲೇಷ್ಮಣಿ ಭಿಷಕ್ ಪ್ರದದ್ಯಾತ್ ಪ್ರತಿಸಾರಣಮ್ || ೧೮೮ ||

ಮಾಂಸೀಕುಂಕುಮಪತ್ರತ್ವಕ್ ರಜನೀನತಚಂದನೈಃ ||
ಮನಃಶಿಲಾವ್ಯಾಘ್ರನಖ ಸುರಸೈರಂಬುಪೇಷಿತೈಃ || ೧೮೯ ||

ಪಾನನಸ್ಯಾಂಜನಾಲೇಪಾಃ ಸರ್ವಶೋಥವಿಷಾಪಹಾಃ ||
ಶಿರೀಷಪುಷ್ಪಸ್ವರಸೇ ಸಪ್ತಾಹಂ ಮರಿಚಂ ಸಿತಮ್ || ೧೯೦ ||

ಭಾವಿತಂ ಸರ್ಪದಷ್ಟಾನಾಂ ನಸ್ಯಪಾನಾಂಜನೇ ಹಿತಮ್ ||
ದ್ವಿಪಲಂ ನತಕುಷ್ಠಾಭ್ಯಾಂ ಘೃತಕ್ಷೌದ್ರಂ ಚತುಷ್ಪಲಮ್ || ೧೯೧ ||

ಅಪಿ ತಕ್ಷಕದಷ್ಟಾನಾಂ ಪಾನಮೇತತ್ ಸುಖಪ್ರದಮ್ ||

**ಅರ್ಥ—** ಹೃದಯದಲ್ಲಿ ದಾಹ, ಬಾಯಿಗೆ ನೀರುಬಿಡೋಣ, ಈ ಲಕ್ಷಣಗಳಿದ್ದರೆ, ಅವಸ್ಥಾನುಸಾರವಾಗಿ ತೀಕ್ಷ್ಣ ವಿರೇಚನ ಅಥವಾ ವಮನವನ್ನು ಕೊಡಬೇಕು. ಅದರಿಂದ ಶರೀರ ಶುದ್ಧಿಯಾಗಲು ಪೇಯಾದಿ ಪಥ್ಯಕ್ರಮವನ್ನು ಮಾಡಿಸಬೇಕು. ||೧೭೯|| ಬುದ್ಧಿವಂತನಾದ ವೈದ್ಯನು ವಿಷವು ತಲೆಯೆತ್ತಿದ್ದರೆ, ಬಂಧುಜೀವ (ಬಂದುಗೇ ಹೂವು), ಭಾರಂಗಿ ಅಥವಾ ಕರೇ

ತುಳಸಿಯ ಬೇರಿನ ನಸ್ಯವನ್ನು ಕೊಡಬೇಕು. ||೧೮೦|| ತಲೆಗೆ ಕಚ್ಚುಹಾಕಿಅದ
ರಲ್ಲಿ ಕೋಳಿ, ಕಾಗಿ ನವಿಲುಗಳ ಮಾಂಸರಕ್ತಗಳನ್ನು ಹಾಕಬೇಕು. ಕೆಳಭಾಗದಲ್ಲಿ
ದಂಶವಿದ್ದರೆ, ತಲೆಯಲ್ಲಿ ದಂಶವಿದ್ದರೆ, ಕಾಲುಗಳಲ್ಲಿ ಮೇಲಿನಂತೆ ಮಾಡಬೇಕು.
||೧೮೧|| ಹಿಪ್ಪಲಿ, ಮೆಣಸು, ಜವಖಾರ, ಬಜಿ, ಸೈಂಧವ, ನುಗ್ಗಿ, ಇವು
ಗಳನ್ನು ರೋಹಿತ ಮೀನದ ಪಿತ್ತದಿಂದ ಅರೆದು ಅಂಜನಮಾಡಲು ಕಣ್ಣಲ್ಲಿಯ
ವಿಷವು ಹೋಗುವದು. ||೧೮೨|| ವಿಷವು ಕಂಠದಲ್ಲಿದ್ದರೆ, ಕಗ್ಗ (ಅಪಕ್ವ)
ಬೆಳವಲಕಾಯಿಯನ್ನು ತುಪ್ಪ-ಸಕ್ಕರೆಯೊಡನೆ ನೆಕ್ಕಬೇಕು. ವಿಷವು ಆಮಾ
ಶಯದಲ್ಲಿರಲು ನಾಲ್ಕು ತೊಲಿ ತಗರ ಚೂರ್ಣವನ್ನು ಸಕ್ಕರೆ ಜೇನಿನೊಡನೆ
ನೆಕ್ಕಬೇಕು. ||೧೮೩|| ವಿಷವು ಪಕ್ವಾಶಯದಲ್ಲಿರಲು ಹಿಪ್ಪಲಿ, ಅರಿಷಿಣ,
ಮರಅರಿಷಿಣ, ಮಂಜಿಷ್ಠಾ ಇವುಗಳನ್ನು ಸಮನಾಗಿ ತಕ್ಕೊಂಡು ಅರೆದು,
ಗೋರೋಚನ ಹಾಕಿ ಕುಡಿಯಬೇಕು. ||೧೮೪|| ವಿಷವು ರಸಧಾತುವಿನಲ್ಲಿ
ಇರಲು ಉಡದ ರಕ್ತ, ಮಾಂಸಗಳನ್ನು ಒಣಗಿಸಿ ಪುಡಿಮಾಡಿಸಿ ಕಪಿತ್ಥರಸ
ವನ್ನು ಹಾಕಿ ಕುಡಿಯಬೇಕು. ||೧೮೫|| ವಿಷವು ರಕ್ತದಲ್ಲಿ ಇರಲು ಚಳ್ಳೇ
ವೃಕ್ಷದ ಬೇರಿನ ತೊಗಟೆ, ಬೋರೆ, ಅತ್ತಿ, ಕಟಭೀ (ಗಿರಿಕರ್ಣಿಕ ಅಥವಾ ಜೇತಿ
ಷ್ಮತಿ) ವೃಕ್ಷದ ಮುಗಳುಗಳ ಕಲ್ಕವನ್ನು ನೀರಿನೊಡನೆ ಕುಡಿಯಬೇಕು.
ವಿಷವು ಮಾಂಸರಸದಲ್ಲಿರಲು ||೧೮೬|| ಖದಿರಾರಿಷ್ಟದಲ್ಲಿ ಜೇನುಹಾಕಿ ಅಥವಾ
ಹಲಗತ್ತಿಯ ಬೇರಿನ ಕಲ್ಕವನ್ನು ನೀರಿನೊಡನೆ ಕುಡಿಯಬೇಕು. ಎಲ್ಲ ಧಾತು
ಗಳಲ್ಲಿ ವಿಷವಿದ್ದರೆ, ಕಳ್ಳಂಗಡ್ಲೆ, ಮುದ್ರೆ, ಹಿಪ್ಪೇಹೂವು, ಜೇಷ್ಠಮಧು, ತಗರ
ಇವುಗಳ ಕಲ್ಕವನ್ನು ನೀರಿನೊಡನೆ ಕುಡಿಯಬೇಕು. ||೧೮೭|| ಕಫವು ಹೆಚ್ಚಿ
ದ್ದರೆ, ವೈದ್ಯನು ಹಿಪ್ಪಲಿ, ಮೆಣಸು, ಜವಖಾರಗಳಲ್ಲಿ ಬೆಣ್ಣೆಯನ್ನು ಕಲಿಸಿ,
ತಿಕ್ಕಬೇಕು. ||೧೮೮|| ಜಟಾಮಾಂಸಿ, ಕೇಶರ, ತಮಾಲಪತ್ರ, ದಾಲಚಿನ್ನಿ,
ಅರಿಷಿಣ, ತಗರ, ಚಂದನ, ಮನಶಿಳ, ವ್ಯಾಘ್ರನಖ, ತುಳಸಿಗಳನ್ನು ನೀರಿನಲ್ಲಿ
ಅರೆದು ||೧೮೯|| ಪಾನ, ನಸ್ಯ, ಅಂಜನ, ಲೇಪಗಳನ್ನು ಮಾಡಲು ಎಲ್ಲ
ಬಾವು ವಿಷಗಳು ಹೋಗುವವು. ಬಿಳೀ ಮೆಣಸ (ನುಗ್ಗೀಬೀಜ)ಗೆ ಶಿರೀ
ಷಪುಷ್ಪರಸದ ಭಾವನೆಯನ್ನು ಕೊಟ್ಟು ಏಳುದಿನಗಳವರೆಗೆ ಕೊಟ್ಟು ||೧೯೦||
ಅದನ್ನು ನಸ್ಯ-ಪಾನ-ಅಂಜನಗಳಿಂದ ಉಪಯೋಗಿಸಿದರೆ ಹಾವುಕಡಿದವರೆಲ್ಲ
ರಿಗೂ ಹಿತವಾಗುವದು. ೪ತೊಲಿ ತಗರ ೪ತೊಲಿ ಕೋಷ್ಠ, ೮ ತೊಲಿತುಪ್ಪ,
೮ ತೊಲಿ ಜೇನು, ||೧೯೧|| ಹಾಕಿ ಮಾಡಿದ ಪಾನವು ತಕ್ಷಕ (ಪುರಾಣ
ಪ್ರಸಿದ್ಧ ಹಾವು) ದಿಂದ ಕಡಿಯಲ್ಪಟ್ಟವರಿಗೂ ಸುಖದಾಯಕವಾಗಿದೆ.||೧೯೨||

ಬೇರೆ ಬೇರೆ ಪ್ರಾಣಿಗಳ ವಿಷಗಳಿಗೆ ಔಷಧವನ್ನು ಹೇಳುತ್ತಾರೆ—

ಸಿಂಧುವಾರಸ್ಯ ಮೂಲಂಚ ಶ್ವೇತಾ ಚ ಗಿರಿಕರ್ಣಿಕಾ ||
ಪಾನಂ ದರ್ವೀಕರೈರ್ದಷ್ಟೇ ನಸ್ಯಂ ಸಮಧು ಪಾಕಲಮ್ ||
ಮಂಜಿಷ್ಠಾಮಧುಯಷ್ಟ್ಯಾಹ್ವಾಜೀವಕರ್ಷಭಕಾಃ ಸಿತಾ || ೧೯೩ ||
ಕಾಶ್ಮರ್ಯವಟಶುಂಗಾನಿ ಪಾನಂ ಮಂಡಲಿನಾಂ ವಿಷೇ ||
ವ್ಯೋಷಂ ಸಾತಿವಿಷಂ ಕುಷ್ಠಂ ಗೃಹಧೂಮೋ ಹರೇಣುಕಾ || ೧೯೪ ||
ಕಟುಕಾ ತಗರಂ ಕ್ಷೌದ್ರಂ ಹಂತಿ ರಾಜೀಮತಾಂ ವಿಷಮ್ ||
ಗೃಹಧೂಮಂ ಹರಿದ್ರೇ ದ್ವೇ ಸಮೂಲಂ ತಂಡುಲೀಯಕಮ್ || ೧೯೫ ||
ಅಪಿ ವಾಸುಕಿನಾ ದಷ್ಟಃ ಪಿಬೇದ್ ದಧಿಘೃತಾಪ್ಲುತಮ್ ||
ಕ್ಷೀರಿವೃಕ್ಷತ್ವಗಾಲೇಪಃ ಶುದ್ಧೇ ಕೀಟವಿಷಾಪಹಃ || ೧೯೬ ||
ಮುಕ್ತಾಲೇಪೋ ವರಃ ಶೋಥದಾಹತೋದಜ್ವರಾಪಹಃ ||
ಚಂದನಂ ಪದ್ಮಕೋಶೀರಶಿರೀಷಾಃ ಸಿಂಧುವಾರಕಾಃ || ೧೯೭ ||
ಕ್ಷೀರಶುಕ್ಲಾ ನತಂ ಕುಷ್ಠಸಾರಿವೋದೀಚ್ಯಪಾಟಲಾಃ ||
ಶೇಲುಸ್ವರಸಪಿಷ್ಟೋಽಯಂ ಲೂತಾನಾಂ ಸಾರ್ವಕಾರ್ಮಿಕಃ || ೧೯೮ ||
ಯಥಾಯೋಗಂ ಪ್ರಯೋಕ್ತವ್ಯಃ ಸಮೀಕ್ಷ್ಯಾಲೇಪನಾದಿಷು ||
ಮಧೂಕಂ ಮಧುಕಂ ಕುಷ್ಠಂ ಸಾರಿವೋದೀಚ್ಯಪಾಟಲಾಃ || ೧೯೯ ||
ಸನಿಂಬಸಾರಿವಾಕ್ಷೌದ್ರಂ ಪಾನಂ ಲೂತಾವಿಷಾಪಹಮ್ ||
ಕುಸುಂಭಪುಷ್ಪಂ ಗೋದಂತಃ ಸ್ವರ್ಣಕ್ಷೀರೀ ಕಪೋತವಿಟ್ || ೨೦೦ ||
ದಂತೀ ತ್ರಿವೃತ್ ಸೈಂಧವೈಲೇ ಕರ್ಣಿಕಾಪಾತನಂ ತಯೋಃ ||
ಕಟಭ್ಯರ್ಜುನಶೈರೀಷ ಶೇಲುಕ್ಷೀರದ್ರುಮತ್ವಚಃ || ೨೦೧ ||
ಕಷಾಯಕಲ್ಕಚೂರ್ಣಾಃ ಸ್ಯುಃ ಕೀಟಲೂತಾವ್ರಣಾಪಹಾಃ ||
ತ್ವಚಂ ಚ ನಾಗರಂ ಚೈವ ಸಮಾಂಶಂ ಶ್ಲಕ್ಷ್ಣಪೇಷಿತಮ್ || ೨೦೨ ||
ಪೇಯಮುಷ್ಣಾಂಬುನಾ ಸರ್ವಂ ಮೂಷಿಕಾಣಾಂ ವಿಷಾಪಹಮ್
ಕುಟಜಸ್ಯ ಫಲಂ ಪಿಷ್ಟಂ ತಗರಂ ಜಾಲಮಾಲಿನೀ || ೨೦೩ ||
ತಿಕ್ತೇಕ್ಷ್ವಾಕುಶ್ಚ ಯೋಗೋಽಯಂ ಪಾನಪ್ರಧಮನಾದಿಭಿಃ ||
ವೃಶ್ಚಿಕೋಂದೂರಲೂತಾನಾಂ ಸರ್ಪಾಣಾಂಚ ವಿಷಾಪಹಾಃ || ೨೦೪ ||

ಸಮಾನಮಮೃತೇನೇದಂ ಗರಾಜೀರ್ಣಂಚ ನಾಶಯೇತ್ ||
ಸರ್ವೇಽಗದಾಯಥಾಯೋಗಂ ಪ್ರಯೋಜ್ಯಾಃ ಸ್ಯುಸ್ತ್ರಿಕಂಟಕೇ ||೨೦೫||
ಕಪೋತವಿಡ್ ಮಾತುಲುಂಗಂ ಶಿರೀಷಕುಸುಮಾದ್ರಸಃ ||
ಶಂಖಿನ್ಯಾರ್ಕಪಯಃ ಶುಂಠೀ ಕರಂಜೋ ಮಧು ವಾಶ್ಚಿಕೇ || ೨೦೬ ||
ಸ್ನುಕ್‌ಕ್ಷೀರಪಿಷ್ಟಂ ಶೈರೀಷಂ ಫಲಂ ದರ್ದುರಜೇ ಹಿತಮ್ ||
ಮೂಲಾನಿ ಶ್ವೇತಭಂಡೀನಾಂ ವ್ಯೋಷಂ ಸರ್ಪಿಶ್ಚ ಮತ್ಸ್ಯಜೇ || ೨೦೭ ||
ಕೀಟದಷ್ಟಕ್ರಿಯಾಃ ಸರ್ವಾಃ ಸಮಾನಾಃ ಸ್ಯುರ್ಜತಾಕಸಾಮ್ ||
ವಾತಪಿತ್ತಹರೀಪ್ರಾಯಾ ಕ್ರಿಯಾ ಪ್ರಾಯಃ ಪ್ರಶಸ್ಯತೇ || ೨೦೮ ||
ವಾಶ್ಚಿಕಸ್ಯೋಚ್ಚಿಡಿಂಗಸ್ಯ ಕಣಭಸ್ಯೌಂದುರೇಽಗದಃ ||

**ಅರ್ಥ—** ಲಕ್ಕಿ ಮತ್ತು ಬಿಳೇ ಗೋಕರ್ಣಿಯ ಬೇರನ್ನು ನೀರಿನಲ್ಲಿ ಅರೆದು ಕುಡಿಸಬೇಕು. ||೧೯೨|| ಮತ್ತು ಕೋಷ್ಠವನ್ನು ಜೇನುತುಪ್ಪದೊಡನೆ ನಸ್ಯ ಮಾಡಬೇಕು. ಇದು ದರ್ವೀಕರ ಸರ್ಪ ಕಡಿದವರಿಗೆ ಹಿತಕರವಾಗಿದೆ. ಮಂಡಲಸರ್ಪಗಳ ವಿಷಕ್ಕೆ ಮಂಜಿಷ್ಠೆ, ಜೇಷ್ಠಮಧು, ಜೀವಕ, ಋಷಭಕ, ಸಕ್ಕರೆ ||೧೯೩|| ಶಿವನ್ನಿ ಮತ್ತು ಆಲದ ಚಿಗುರೆಲೆಗಳ ಕಲ್ಕವನ್ನು ನೀರಿನೊಡನೆ ಕುಡಿಯಬೇಕು. ರಾಜೀಮತ ಹಾವುಗಳ ವಿಷಕ್ಕೆ ತ್ರಿಕಟು, ಅತಿವಿಷ, ಕೋಷ್ಠ, ಇಲ್ಲಣ ರೇಣುಕಬೀಜ, ಕಟುಕರೋಣಿ, ತಗರ ಇವುಗಳನ್ನು ನೀರಲ್ಲಿ ಅರೆದು ಜೇನುಹಾಕಿ ಕೊಡಬೇಕು. ಇಲ್ಲಣ, ಅರಿಷಿಣ, ಮರಅರಿಷಿಣ, ಬೇರು ಸಹಿತ ಕಿರಕಸಾಲಿ, ||೧೯೪|| ಇವುಗಳನ್ನು ನೀರಲ್ಲಿ ಅರೆದು ಜೇನು ಹಾಗು ತುಪ್ಪ ಹಾಕಿ ಕೊಟ್ಟರೆ ಸಾಕ್ಷಾತ್ ವಾಸುಕಿಯಿಂದ ಕಡೆಯಲ್ಪಟ್ಟವನೂ ಗುಣ ಹೊಂದುವನು. ಶೋಧನ ಕೊಟ್ಟು ಆಮೇಲೆ ಕ್ಷೀರೀವೃಕ್ಷ (ಆಲ, ಅತ್ತಿ, ಬಸರಿ, ಬಿತ್ತಗಳ) ತೊಗಟೆಯ ಲೇಪ ಮಾಡಲು ಕೀಟವಿಷವು ನಾಶವಾಗು ವದು. ||೧೯೬|| ಮುತ್ತಿನ ಲೇಪವನ್ನು ಮಾಡಿದರೆ ಬಾವು, ದಾಹ, ಚುಚ್ಚು ವಿಕೆ, ಜ್ವರಗಳು ನಾಶವಾಗುವವು. ಆದ್ದರಿಂದ ಅದು ಶ್ರೇಷ್ಠವಾಗಿದೆ. ಚಂದನ, ಪದ್ಮಕಾಷ್ಠ, ಬಾಳದಬೇರು, ಶಿರೀಷ, ಲಕ್ಕಿ, ||೧೯೭|| ಹಾಲುನೆಲಗುಂಬಳ, ತಗರ, ಕೋಷ್ಠ, ಅನಂತಮೂಲ, ಬಾಳದಬೇರು, ಪಾದರೀ ಇವುಗಳನ್ನು ಸಮ ನಾಗಿ ತಕ್ಕೊಂಡು ಚಳ್ಳಕಾಯಿಯ ರಸದಲ್ಲಿ ಅರೆದು ಪಾನ, ನಸ್ಯ ಮುಂ ತಾದ ಎಲ್ಲ ಕರ್ಮಗಳಲ್ಲಿ ಕೊಟ್ಟರೆ ಲೂತಾವಿಷಗಳನ್ನು ನಾಶಮಾಡುವದು.

||೧೯೮|| ಆಲೇಪ ಮುಂತಾದವುಗಳಲ್ಲಿ ವಿಕಾರಕ್ಕೆ ತಕ್ಕಂತೆ ವಿಚಾರಿಸಿ ಉಪಯೋಗಿಸಬೇಕು. ಇಪ್ಪೀಹೂ, ಜೇಷ್ಠಮಧು, ಕೋಷ್ಠ, ಶಿರೀಷ, ಬಾಳದ ಬೇರು, ಪಾದರಿ ||೧೯೯|| ಬೇವು, ಅನಂತಮೂಲ ಇವುಗಳನ್ನು ಸಮನಾಗಿ ನೀರಲ್ಲಿ ಅರೆದು ಜೇನುಹಾಕಿ ಕುಡಿದರೆ ಲೂತಾವಿಷವು ನಾಶವಾಗುವದು. ಕುಶಿಬೆಯ ಹೂ ಗೋದಂತ (ಆಕಳಹಲ್ಲು) ಗೊಳಗೊಳಿಕೆ, ಪಾರಿವಾಳದಮಲ || ೨೦೦ || ದಂತಿ, ನಿಶೋತ್ತರ, ಸೈಂಧವ, ಯಾಲಕ್ಕಿ ಇವುಗಳನ್ನು ನೀರಲ್ಲಿ ಅರೆದು ಲೇಪಮಾಡಿದರೆ ವಿಷದ ಗಾದರಿಗಳು ಹೋಗುವವು. ಕೀಟ ಮತ್ತು ಲೂತಗಳ ವ್ರಣಗಳಿಗೆ ಕಟಭಿ (ಕರ್ಣಿಕೆ) ಮತ್ತಿ, ಶಿರಸಲ ತೋಟೆ, ಚಳ್ಳಕಾಯಿ ಕ್ಷೀರೀವೃಕ್ಷಗಳ ತೋಟೆ ಇವುಗಳ || ೨೦೧ || ಕಷಾಯ, ಕಲ್ಕ, ಚೂರ್ಣವನ್ನು ಉಪಯೋಗಿಸಬೇಕು. ಅಂದರೆ ಅವು ನಾಶವಾಗುವವು. ಎಲ್ಲ ಇಲಿಯ ವಿಷಕ್ಕೆ ದಾಲಚಿನ್ನಿ, ಸುಂಠಿಗಳನ್ನು ಸಮನಾಗಿ ತಕ್ಕೊಂಡು ನೀರಲ್ಲಿ ಸಣ್ಣಾಗಿ ಅರೆದು || ೨೦೨ || ಬಿಸಿ ನೀರಿನೊಡನೆ ಕುಡಿಯಬೇಕು. ಇಂದ್ರಜವ, ತಗರ, ಕಹಿತಿಪ್ಪರಿ || ೨೦೩ || ಕಹಿಹಾಲುಗುಂಬಳ ಇವುಗಳ ಚೂರ್ಣವನ್ನು ಪಾನ, ಪ್ರಧಮನ, ನಸ್ಯ ಮುಂತಾದ ರೂಪದಿಂದ ಕೊಟ್ಟರೆ ಚೇಳು, ಇಲಿ, ಲೂತೆ ಮತ್ತು ಹಾವುಗಳ ವಿಷವೂ ನಾಶವಾಗುವದು. || ೨೦೪ || ಇದು ಅಮೃತ ಸಮಾನವಾಗಿರುವದು. ಕೃತ್ರಿಮವಿಷ, ಅಜೀರ್ಣಗಳನ್ನು ಕಳೆಯುವದು. ತ್ರಿಕಂಟಕ ಮತ್ಸ್ಯವಿಷದಲ್ಲಿಯೂ ಈ ಎಲ್ಲ ಔಷಧಗಳನ್ನು ದೋಷಾನುಸಾರವಾಗಿ ಉಪಯೋಗಿಸಬೇಕು. || ೨೦೫ || ಜೇಳಿನ ವಿಷದಮೇಲೆ ಪಾರಿವಾಳದ ಮಲ, ಮಾದಾಳ, ಶಿರಸಲ ಹೂವಿನ ರಸ, ಶಂಖಿನಿ (ನೆಲಬೇವಿನಜಾತಿಯತಿಕ್ತ) ಎಕ್ಕೆಯಹಾಲು ಸುಂಠಿ, ಹುಲಗಲೆ ಕಷಾಯವನ್ನು ಜೇನು ಹಾಕಿ ಕೊಡಬೇಕು. || ೨೦೬ || ಕಪ್ಪೇ ವಿಷದಮೇಲೆ ಶಿರಸಲ ಫಲವನ್ನು ಕಳ್ಳಿಯ ಹಾಲಿನಲ್ಲಿ ಲೇಪ ಮಾಡಬೇಕು. ಮೀನಿನ ವಿಷಕ್ಕೆ ಶ್ವೇತಭಂಡಿ (ಬಿಳೇ ಶಿರೀಷ) ಗಳ ಬೇರು, ತ್ರಿಕಟುಗಳ ಚೂರ್ಣಗಳನ್ನು ತುಪ್ಪದಿಂದ ಲೇಪಮಾಡಬೇಕು. || ೨೦೭ || ಜಲಚರ ಪ್ರಾಣಿಗಳಿಗೆ ಕೀಟದಂಶಕ್ಕೆ ಹೇಳಿದ ಎಲ್ಲ ಕ್ರಿಯೆಗಳನ್ನು ಮಾಡಬೇಕು. ಚೇಳು, ಉಚ್ಚಡಿಂಗ ಕಣಭ ಮತ್ತು ಇಲಿಯ ವಿಷಕ್ಕೆ ಬಹಳವಾಡಿ ವಾತಪಿತ್ತನಾಶಕ ಚಿಕಿತ್ಸೆಯು ಉಪಯುಕ್ತವಾಗುತ್ತದೆ. ಮುಂದೆ ಹೇಳಿದ ಔಷಧವು ಇಲಿಯ ವಿಷಕ್ಕೆ ಉಪಯುಕ್ತವದೆ. || ೨೦೮|| ||

ಆ ಔಷಧವನ್ನು ಹೇಳುತ್ತಾರೆ—

ವಚಾ ವಂಶತ್ವಚಃ ಪಾಠಾ ನತಂ ಸುರಸಮಂಜರೀಮ್ ॥೨೦೯॥
ದ್ವೇ ಬಲೇ ನಾಕುಲೀ ಕುಷ್ಠಂ ಶಿರೀಷೋ ರಜನೀ ದ್ವಯಮ್ ॥

ಗುಹಾಮತಿಗುಹಾಂ ಶ್ವೇತಾಂ ಚಾಜಗಂಧಾಂ ಶಿಲಾಜತು ॥೨೧೦॥
ಕತ್ತೃಣಂ ಕಟಭೀ ಕ್ಷಾರೋ ಗೃಹಧೂಮೋ ಮನಃಶಿಲಾ ॥

ರೋಹಿತಮತ್ಸ್ಯಪಿತ್ತೇನ ಪಿಷ್ಟೋಽಯಂ ಪರಮೋಽಗದಃ ॥೨೧೧॥
ನಸ್ಯಾಂಜನಾದಿ ಲೇಪೇಷು ಹಿತೋ ವಿಶ್ವಂಭರಾದಿಷು ॥

**ಅರ್ಥ—** ಬಜೆ, ಬಿದರಿನತೋಟೆ, ಅಗಳಶುಂಠಿ, ತಗರ, ತುಳಸೀತೆನೆ ॥ ೨೦೯ ॥ ಬಲಾ (ಕಳ್ಳಂಗಡ್ಲೆ) ಅತಿಬಲಾ (ಮುದ್ರೆ) ನಾಕುಲೀ (ರಾಸ್ನಾ ಭೇದ) ಕೋಷ್ಠ, ಶಿರಸಲ, ಅರಿಷಿಣ, ಮರದರಿಷಿಣ, ಒಂದೆಲೆಹೊನ್ನೆ, ಮೂರೆಲೆ ಹೊನ್ನೆ, ಬಿಳೀ ಉತ್ತರಾಣಿ, ನಾಯಿತುಳಸಿ, ಶಿಲಾಜತು ॥ ೨೧೦ ॥ ಗಂಜನಿ ಹುಲ್ಲು, ಜವಖಾರ, ಗಿರಿಕರ್ಣಿಕ, ಇಲ್ಲಣ, ಮನಶಿಳೆ ಇವೆಲ್ಲವುಗಳನ್ನು ರೋಹಿತಮೀನದ ಪಿತ್ತದಲ್ಲಿ ಅರೆದರೆ ಉತ್ತಮ ಔಷಧವಾಗುವದು. ॥ ೨೧೧ ॥ ಇದನ್ನು ವಿಶ್ವಂಭರ (ಕೀಟವಿಶೇಷ) ಮುಂತಾದ ಕೀಟಗಳ ವಿಷದಲ್ಲಿ ನಸ್ಯ, ಅಂಜನ, ಲೇಪ ಮುಂತಾದ ರೂಪಗಳಿಂದ ಉಪಯೋಗಿಸಬೇಕು. ॥ ೨೧೧॥ ॥

ಸ್ವರ್ಜಿಕಾಜಶಕೃತ್‌ಕ್ಷಾರಃ ಸುರಸೋಽಥಾಕ್ಷಿಪೀಡಕಃ ॥೨೧೨॥
ಮದಿರಾ ಮಂಡಸಂಯುಕ್ತೋ ಹಿತಃ ಶತಪದೀವಿಷೇ ॥
ಕಪಿತ್ಥಮಕ್ಷಿ ಪಿಡೋಽರ್ಕಬೀಜಂ ತ್ರಿಕಟುಕಂ ತಥಾ ॥೨೧೩॥

ಕರಂಜೋ ದ್ವೇ ಹರಿದ್ರೇಚ ಗೃಹಗೋಧಾವಿಷಂ ಜಯೇತ್ ॥
ಕಾಕಾಂಡಯುಕ್ತಃ ಸರ್ವೇಷಾಂ ವಿಷಾಣಾಂ ತಂಡುಲೀಯಕಃ ॥೨೧೪॥

ಪ್ರಧಾನಂ ಬರ್ಹಿಪಿತ್ತೇನ ತದ್ವದ್ ವಾಯುಸಪೀಲುಕಃ ॥
ಶಿರೀಷಫಲಮೂಲತ್ವಕ್ ಪುಷ್ಪಪತ್ರೈಃ ಸಮೈರ್ಘೃತೈಃ ॥೨೧೫॥

ಶ್ರೇಷ್ಠಃ ಪಞ್ಚ ಶಿರೀಷೋಽಯಂ ವಿಷಾಣಾಂ ಪ್ರವರೋ ವಧೇ ॥
ಚತುಷ್ಪದ್ಭಿರ್ದ್ವಿಪದ್ಭಿರ್ವಾ ನಖದಂತವಿಷಞ್ಚ ಯತ್ ॥೨೧೬॥
ಶೂಯತೇ ಪಚ್ಯತೇ ಚಾಪಿ ಸ್ರವತಿ ಜ್ವರಯತ್ಯಪಿ ॥೨೧೬॥ ॥

ಶತಪದಿ (ಗೋಮದೇಳು) ವಿಷಕ್ಕೆ ಸಜ್ಜೀಖಾರ, ಆಡಿನಮಲದ ಕ್ಷಾರ, ತುಳಸೀರಸ ಇವುಗಳಲ್ಲಿ || ೨೧೨ || ಮದ್ಯದ ತಿಳಿನೀರನ್ನು ಕೂಡಿಸಿ ಕಣ್ಣಲ್ಲಿ ಹಾಕಬೇಕು. ಮನೆಯಲ್ಲಿಯ ಗೋಧಾ (ಹಲ್ಲಿ) ವಿಷಕ್ಕೆ ಬೆಳವಲ, ಎಕ್ಕೇಬೀಜ, ತ್ರಿಕಟುಗಳ ಕಷಾಯವನ್ನು || ೨೧೩ || ಅಥವಾ ಹುಲಗಲಿ, ಅರಿಷಿಣ, ಮರ ದರಿಷಿಣದ ಕಷಾಯವನ್ನು ಕಣ್ಣಲ್ಲಿ ಹಾಕಬೇಕು. ಎಲ್ಲ ವಿಷಗಳಿಗೆ ನಸು ಗುನ್ನಿ ಮತ್ತು ಕಿರಕಸಾಲಿಯ ರಸವು || ೨೧೪ || ಮತ್ತು ಎಲಬುಸಂದಕ ರಸ ದೊಡನೆ ಕೊಟ್ಟ ನವಿಲಿನ ಪಿತ್ತವು ಹಿತಕರವಾಗಿದೆ. ಶಿರಸಲದ ಫಲ, ಬೇರು, ತೊಟ್ಟೆ, ಹೂ, ಎಲೆಗಳನ್ನು ಆಕ್ಟೇ ತುಪ್ಪದಲ್ಲಿ ಕೊಡಬೇಕು. || ೨೧೫ || ಈ ಪಂಚಶಿರೀಷವೆಂಬ ಔಷಧವು ವಿಷಗಳ ನಾಶದಲ್ಲಿ ಶ್ರೇಷ್ಠವಾಗಿದೆ. ನಾಲ್ಕು ಪಾದಗಳುಳ್ಳ ಅಥವಾ ಎರಡು ಪಾದಗಳುಳ್ಳ ಪ್ರಾಣಿಗಳ ನಖ, ದಂತ ಗಳಿಂದ ಉಂಟಾದ || ೨೧೬ || ವಿಷ, ಬಾವು, ಪಾಕ, ಸ್ರಾವ, ಜ್ವರಗಳಲ್ಲಿ ಇದು ಉತ್ತಮ ಔಷಧವಾಗಿದೆ.

**ಸೋಮವಲ್ಕೋಽಶ್ವಕರ್ಣಶ್ಚ ಗೋಜಿಹ್ವಾ ಹಂಸಪದ್ಯಪಿ || ೨೧೭ ||**
**ರಜಸ್ಯೌ ಗೈರಿಕಂ ಲೇಪೋ ನಖದಂತವಿಷಾಪಹಃ ||**

ಬಿಳೇ ಖದಿರ, ಅಶ್ವಕರ್ಣ (ಬಿಳೇಮತ್ತಿ) ಗೋಜಿಹ್ವಾ (ಹತ್ತರಿಕೆ) ಹಂಸಪದೀ, || ೨೧೭ || ಮರಅರಿಷಿಣ, ಅರಿಷಿಣ, ಕಾವಿ ಇವುಗಳ ಲೇಪವು ನಖದಂತವಿಷ ಗಳನ್ನು ಕಳೆಯುವದು. || ೨೧೭|| ||

ಶಂಕಾವಿಷದ ಲಕ್ಷಣ ಚಿಕಿತ್ಸೆಗಳನ್ನು ಹೇಳುತ್ತಾರೆ—

**ದುರಂಧಕಾರೇ ದಷ್ಟಸ್ಯ ಕೇನಚಿದ್ ವಿಷಸಂಕಯಾ || ೨೧೮ ||**
**ವಿಷೋದ್ವೇಗಾಜ್ವರಶ್ಛರ್ದಿರ್ಮೂರ್ಚ್ಛಾ ದಾಹೋಽಪಿ ವಾ ಭವೇತ್ ||**
**ಗ್ಲಾನಿರ್ಮೋಹೋಽತಿಸಾರೋ ವಾಪ್ಯೇತಚ್ಛಂಕಾವಿಷಂ ಮತಮ್||೨೧೯||**
**ಚಿಕಿತ್ಸಮಿದಂ ತಸ್ಯ ಕುರ್ಯಾದಾಶ್ವಾಸನಂ ಬುಧಃ ||**
**ಸಿತಾ ವೈಗಂಧಿಕೋ ದ್ರಾಕ್ಷಾ ಪಯಸ್ಯಾ ಮಧುಕಂ ಮಧು || ೨೨೦ ||**
**ಪಾನಂ ಸಮಂತ್ರಪೂತಾಂಬು ಪ್ರೋಕ್ಷಣಂ ಸಾಂತ್ವಹರ್ಷಣಮ್ ||**

**ಅರ್ಥ—** ಕಗ್ಗತ್ತಲೆಯಲ್ಲಿ ಏನಾದರೂ ಕಚ್ಚಿಯಲು ಅದು ನಿರ್ವಿಷ ವಿದ್ದರೂ ವಿಷದ ಸಂಶಯದಿಂದ || ೨೧೮ || ವಿಷವೇರಿದಂತೆ ಜ್ವರ, ವಾಂತಿ, ಮೂರ್ಛೆ, ದಾಹ, ಗ್ಲಾನಿ, ಮೋಹ, ಅತಿಸಾರಗಳುಂಟಾಗುತ್ತವೆ. ಇದಕೆ

ಶಂಕಾವಿಷವೆಂದು ಅನ್ನುತ್ತಾರೆ. || ೨೧೯ || ಇದಕ್ಕೆ ಪಂಡಿತನಾದ ವೈದ್ಯನು (ಮುಖ್ಯವಾಗಿ) ವಿಷವಿಲ್ಲವೆಂಬ ಸಮಾಧಾನ ಹೇಳಬೇಕು. ಸಕ್ಕರೆ, ಚತುರ್ಜಾತಕ, ದ್ರಾಕ್ಷೆ, ಕ್ಷೀರಕಾಕೋಲಿ, ಜೇಷ್ಠಮಧುಗಳ ಕಷಾಯದಲ್ಲಿ ಜೇನು ಹಾಕಿ ಕೊಡಬೇಕು. || ೨೨೦ || ಮಂತ್ರದಿಂದ ಪವಿತ್ರವಾದ ನೀರನ್ನು ಸಿಂಪಡಿಸಬೇಕು. ಸಮಾಧಾನ, ಸಂತೋಷವಾಗುವಂತೆ ಮಾಡಬೇಕು. || ೨೨೦|| ||

ವಿಷಪೀಡಿತರಿಗೆ ಪಥ್ಯ ಅಪಥ್ಯಗಳನ್ನು ಹೇಳುತ್ತಾರೆ—

**ಶಾಲಯಃ ಷಷ್ಟಿಕಾಶ್ಚೈವ ಕೋರದೂಷಾಃ ಪ್ರಿಯಂಗವಃ || ೨೨೧ ||**
**ಭೋಜನಾರ್ಥೇ ಪ್ರಶಸ್ಯಂತೇ ಲವಣಾರ್ಥಂಚ ಸೈಂಧವಮ್ ||**
**ತಂಡುಲೀಯಕಜೀವಂತೀ ವಾರ್ತಾಕಸುನಿಷಣ್ಣಕಾಃ || ೨೨೨ ||**
**ಮಂಡೂಕಪರ್ಣೀ ಕುಲಕಂ ಶಾಕಂ ಚುಂಚೋಶ್ಚ ಶಸ್ಯತೇ ||**
**ಹರೇಣುಮುದ್ಗಾನ್ ಯೂಷಾರ್ಥಮಮ್ಲಾರ್ಥಂ ಧಾತ್ರೀದಾಡಿಮಮ್ || ೨೨೩ ||**
**ರಸಾಶ್ಚೈಣಾಶ್ಚ ಶಿಖಿನಾಂ ಲಾವತೈತ್ತಿರಪಾರ್ಷತಾಃ ||**
**ವಿಷಘ್ನೌಷಧಸಂಯುಕ್ತಾ ರಸಾ ಯೂಷಾಶ್ಚ ಸಂವೃತಾಃ || ೨೨೪ ||**
**ಅವಿದಾಹೀನಿ ಚಾನ್ನಾನಿ ವಿಷಾರ್ತಾನಾಂ ಭಿಷಗ್ಜಿತಮ್ ||**
**ವಿರುದ್ಧಾಧ್ಯಶನಕ್ರೋಧ ಕ್ಷುದ್ಭಯಾಯಾಸಮೈಥುನಮ್ || ೨೨೫ ||**
**ವರ್ಜಯೇದ್ವಿಷಮುಕ್ತೋಽಪಿ ದಿವಾಸ್ವಪ್ನಂ ವಿಶೇಷತಃ || ೨೨೫ || ||**

**ಅರ್ಥ—** ಭತ್ತ, ಷಷ್ಟಿಕಭತ್ತ, ಹರಿಕ, ಪ್ರಿಯಂಗು ಇವನ್ನು ಊಟಕ್ಕಾಗಿ ಉಪಯೋಗಿಸಬೇಕು. ಉಪ್ಪಿಗಾಗಿ ಸೈಂಧವವನ್ನೂ ಪಲ್ಲೆಗಾಗಿ ಕಿರಕಸಾಲಿ, ಜೀವಂತಿ, ಬದನೆ, ಸುನಿಷಣ್ಣಕ (ಪಾಂಡದಹರಿವೆ) || ೨೨೨ || ಮಂಡೂಕಪರ್ಣಿ, ಹಾಗಲು ಮತ್ತು ಚುಂಚು (ಪತ್ರಶಾಕವಿಶೇಷ) ಗಳನ್ನು ಉಪಯೋಗಿಸಬೇಕು. ಕಟ್ಟಿಗಾಗಿ ರೇಣುಕಬೀಜ, ಹೆಸರುಗಳನ್ನೂ ಹುಳಿಯ ಸಲುವಾಗಿ ನೆಲ್ಲಿ, ದಾಳಿಂಬಗಳನ್ನೂ || ೧೨೩ || ಮಾಂಸರಸಕ್ಕಾಗಿ ಚಿಗರೆ, ನವಿಲು, ಲಾವ, ತಿತ್ತಿರಿ, ಪೃಷತ್ (ಚಿಗರಿಜಾತಿ) ಪ್ರಾಣಿಗಳನ್ನುಪಯೋಗಿಸಬೇಕು. ಸಂಸ್ಕಾರ ಕೊಟ್ಟ, ವಿಷಘ್ನ ಔಷಧಕೂಡಿದರಸ, ಯೂಷಗಳನ್ನುಪಯೋಗಿಸಬೇಕು. || ೨೨೪|| (ಮುಖ್ಯತಃ) ವಿದಾಹಿ ಅಲ್ಲದ ಅನ್ನಗಳು ವಿಷರೋಗಿಗಳಿಗೆ ಔಷಧವು.

ವಿಷಘ್ನೋದರೂ ಕೂಡ ವಿರುದ್ಧಾಶನ, ವಿಷಮಾಶನ, ಕ್ರೋಧ, ಉಪವಾಸ, ಭಯ, ಆಯಾಸ, ಮೈಥುನ, || ೨೨೫ || ಹಗಲುಮಲಗೋಣ ಇವುಗಳನ್ನು ವಿಶೇಷವಾಗಿ ಬಿಡಬೇಕು. || ೨೨೫|| ||

ನಾಲ್ಕುಕಾಲಿನ ಪ್ರಾಣಿಗಳಿಗೆ ಉಂಟಾಗುವ ವಿಷದ ಲಕ್ಷಣಗಳನ್ನೂ, ಅವುಗಳ ಚಿಕಿತ್ಸೆಯನ್ನೂ ಹೇಳುತ್ತಾರೆ.

**ಮುಹುರ್ಮುಹುಃ ಶಿರೋನ್ಯಾಸಃ ಶೋಥಃ ಶುಷ್ಕಾಸ್ಯಕಂಠತಾ || ೨೨೬||**

**ಜ್ವರೋಽಂಗಮರ್ದಃ ಸ್ತಬ್ಧಾಕ್ಷಿಗಾತ್ರತ್ವಂ ಹನುಕಂಪನಮ್ ||**
**ಲೋಮಾಪಗಮನಂ ಗ್ಲಾನಿರರತಿರ್ವೇಪಥುರ್ಭ್ರಮಃ ||೨೨೭||**

**ಚತುಷ್ಪದಾಂ ಭವತ್ಯೇತದ್ ದಷ್ಟಾನಾಮಿಹ ಲಕ್ಷಣಮ್ ||**
**ದೇವದಾರು ಹರಿದ್ರೇದ್ವೇ ಸುರಸಂ ಚಂದನಾಗುರು ||೨೨೮||**

**ರಾಸ್ನಾ ಗೋರೋಚನಾಜಾಜೀ ಗುಗ್ಗುಲ್ವಿಕ್ಷುರಸೋನತಮ್ ||**
**ಚೂರ್ಣಂ ಸಸೈಂಧವಾನಂತಂ ಗೋಪಿತ್ತಮಧುಸಂಯುತಮ್ ||೨೨೯||**

**ಚತುಷ್ಪದಾನಾಂ ದಷ್ಟಾನಾಮಗದಃ ಸಾರ್ವಕಾರ್ಮಿಕಃ ||**

**ಅರ್ಥ—** ಆಗಾಗ್ಗೆ ತಲೆ ಜಾಡಿಸೋಣ, ಬಾವು, ತುಟಿ, ಗಂಟಲು ಒಣಗೋಣ, ||೨೨೬|| ಜ್ವರ, ಮೈ ನೋಯೋಣ, ಕಣ್ಣು ಮತ್ತು ಶರೀರವು ಸ್ತಬ್ಧವಾಗೋಣ, ಗದ್ದ ನಡಗೋಣ, ಕೂದಲು ಉದರೋಣ, ಗ್ಲಾನಿ, ಚೈನವಿಲ್ಲದಿರೋಣ, ನಡುಗೋಣ, ಭ್ರಮ, ||೨೨೭|| ಈಲಕ್ಷಣಗಳು ವಿಷಯುಕ್ತ ಪ್ರಾಣಿಗಳಿಂದ ಕಡೆಯಲ್ಪಟ್ಟ ನಾಲ್ಕುಕಾಲಿನ ಪ್ರಾಣಿಗಳಿಗೆ ಉಂಟಾಗುವವು. ದೇವದಾರು, ಅರಿಷಿಣ, ಮರದರಿಷಿಣ, ಸರಲ, ಚಂದನ ಅಗುರು,||೨೨೮|| ರಾಸ್ನಾ, ಗೋರೋಚನ, ಜೀರಿಗೆ, ಗುಗ್ಗುಳು ತಗರಗಳ ಚೂರ್ಣವನ್ನು ಕಬ್ಬಿನ ರಸದೊಡನೆ ಅಥವಾ ಸೈಂಧವ, ಅನಂತಮೂಲಗಳ ಚೂರ್ಣವನ್ನು ಗೋರೋಚನ ಮತ್ತು ಜೇನು ಕೂಡಿಸಿ ಕೊಡಬೇಕು. ||೨೨೯|| ಈ ಔಷಧವು ಕಡಿಸಿಕೊಂಡ ಎಲ್ಲ ಚತುಷ್ಪದ ಪ್ರಾಣಿಗಳ ಪಾನ, ಲೇಪ, ಸೇಕ ಮುಂತಾದ ಎಲ್ಲ ಕರ್ಮಗಳಲ್ಲಿ ಉಪಯುಕ್ತವಿದೆ || ೨೨೯|| ||

**ಕೃತ್ರಿಮ ವಿಷದ ಲಕ್ಷಣ ಮತ್ತು ಚಿಕಿತ್ಸೆಯನ್ನು ಹೇಳುತ್ತಾರೆ—**

**ಸೌಭಾಗ್ಯಾರ್ಥಂ ಸ್ತ್ರಿಯಃ ಸ್ವೇದರಜೋನಾನಾಂಗಜಾನ್ ಮಲಾನ್ || ೨೩೦ ||**

ಶತ್ರುಪ್ರಯುಕ್ತಾಂಶ್ಚ ಗರಾನ್ ಪ್ರಯಚ್ಛಂತ್ಯನ್ನಮಿಶ್ರಿತಾನ್ ||
ತೈಃ ಸ್ಯಾತ್ಪಾಂಡುಃ ಕೃಶೋಽಲ್ಪಾಗ್ನಿರ್ಗರಶ್ಚಾಸ್ಯೋಪಜಾಯತೆ
|| ೨೩೧ ||

ಮರ್ಮಪ್ರಧಮನಾಧ್ಮಾನಂ ಶ್ವಯತುರ್ಹಸ್ತಪಾದಯೋಃ ||
ಜಠರಂ ಗ್ರಹಣೀರೋಗೋ ಯಕ್ಷ್ಮಾ ಗುಲ್ಮಃ ಕ್ಷಯೋ ಜ್ವರಃ || ೨೩೨ ||
ಏವಂವಿಧಾನಿ ಚಾನ್ಯಸ್ಯ ವ್ಯಾಧೇರ್ಲಿಂಗಾನಿ ದರ್ಶಯೇತ್ ||
ಸ್ವಪ್ನೇಮಾರ್ಜಾರಗೋಮಾಯುವ್ಯಾಲಾನ್ ಸನಕುಲಾನ್ ಕಪೀನ್
|| ೨೩೩ ||

ಪ್ರಾಯಃ ಪಶ್ಯತಿ ನದ್ಯಾದೀನ್ ಶುಷ್ಕಾಂಶ್ಚ ಸವನಸ್ಪತೀನ್ ||
ಕಾಲಶ್ಚ ಗೌರಮಾತ್ಮಾನಂ ಸ್ವಪ್ನೇ ಗೌರಶ್ಚ ಕಾಲಕಮ್ || ೨೩೪ ||
ವಿಕರ್ಣನಾಶಿಕಂ ವಾಪಿ ಪ್ರಪಶ್ಯೇದಹತೇಂದ್ರಿಯಃ ||
ತಮವೇಕ್ಷ್ಯ ಭಿಷಕ್ ಪ್ರಾಜ್ಞಃ ಪೃಚ್ಛೇತ್ ಕಿಂ ಕೈಃ ಕದಾ ಸಹ||೨೩೫||
ಜಗ್ಧಮಿತ್ಯನಗಮ್ಯಾಶು ಪ್ರಪದ್ಯಾದ್ ವಮನಂ ಬುಧಃ ||
ಸೂಕ್ಷ್ಮಂ ತಾಮ್ರರಜಶ್ಚಾಸ್ಮೈ ಸಕ್ಷೌದ್ರಂ ಹೃದ್‌ವಿಶೋಧನಮ್||೨೩೬||
ಶುದ್ಧೇ ಹೃದಿ ತತಃ ಶಾಣಂ ಹೇಮಚೂರ್ಣಸ್ಯ ದಾಪಯೇತ್ ||
ಹೇಮ ಸರ್ವವಿಷಾಣ್ಯಾಶು ಗರಾಂಶ್ಚ ವಿನಿಯಚ್ಛತಿ || ೨೩೭ ||
ನ ಸಜ್ಜತೇ ಹೇಮಪಾಂಗೇ ವಿಷಂ ಪದ್ಮದಲೇಽಂಬುವತ್ ||
ನಾಗದನ್ತೀ ತ್ರಿವೃದ್ದಂತೀದ್ರವಂತೀಸ್ನುಕ್‌ಪಯಃ ಫಲೈಃ || ೨೩೮ ||
ಸಾಧಿತಂ ಮಾಹಿಷಂ ಸರ್ಪಿರ್ಗೋಮೂತ್ರಾರ್ಧಕಪಾಚಿತಮ್ ||
ಸರ್ಪಕೀಟವಿಷಾರ್ತಾನಾಮೌಷಧಞ್ಚ ಪ್ರಶಾಂತಯೇ || ೨೩೯ ||

**ಅರ್ಥ—** ಹೆಂಗಸರು ಗಂಡನ ವಶೀಕರಣಕ್ಕಾಗಿ ಬೆವರು, ರಜ ಅಥವಾ ಬೇರೆ ಅನೇಕ ಅಂಗಗಳ ಮಲಗಳನ್ನು || ೨೩೦ || ಅಥವಾ ಶತ್ರುಗಳು ಕೊಟ್ಟ ಕೃತ್ರಿಮ ವಿಷಗಳನ್ನು ಅನ್ನದಲ್ಲಿ ಮಿಶ್ರಮಾಡಿ ಕೊಡುತ್ತಾರೆ. ಅವುಗಳಿಂದ ಪಾಂಡುರೋಗ, ಕಾರ್ಶ್ಯ, ಮಂದಾಗ್ನಿ ಮುಂತಾದ ಕೃತ್ರಿಮ ವಿಷದ ಲಕ್ಷಣಗಳು ಇವನಲ್ಲಿ ಉಂಟಾಗುತ್ತವೆ. || ೨೩೧ || ಮರ್ಮಗಳಲ್ಲಿ ನೋವು, ಹೊಟ್ಟೆಯುಬ್ಬೋಣ, ಕೈಕಾಲುಗಳಿಗೆ ಬಾವು, ಉದರ- ಸಂಗ್ರಹಣಿ, ಕ್ಷಯ, ಗುಲ್ಮ, ಜ್ವರ ಇದರಂತೆ ಬೇರೆ ಬೇನೆಯ ಲಕ್ಷಣಗಳೂ ಉಂಟಾಗುವವು. ಕನಸಿನಲ್ಲಿ ಬೆಕ್ಕು, ನರಿ, ಹಾವು, ಮುಂಗುಲಿ, ಕಪಿಗಳನ್ನೂ || ೨೩೩ || ಒಣಗಿದ ಗಿಡಗಂಟೆ

ಹೊಳೆ ಮುಂತಾದವುಗಳನ್ನೂ ಬಹಳವಾಡಿ ನೋಡುತ್ತಾನೆ ಸ್ವಪ್ನದಲ್ಲಿ ಕಪ್ಪು ಬಣ್ಣದವನು ತನ್ನನ್ನು ಕೆಂಪೆಂದೂ, ಕೆಂಪು ಬಣ್ಣವದನು ತನ್ನನ್ನು ಕಪ್ಪಗೆಂದೂ ||೨೩೪|| ಇಂದ್ರಿಯಗಳು ಸರಿಯಾಗಿದ್ದರೂ ಕಿವಿಮೂಗುಗಳು ಇಲ್ಲವೆಂದೂ ತಿಳಿಯುತ್ತಾನೆ ಜಾಣನಾದ ವೈದ್ಯನು ಅವನನ್ನು ನೋಡಿ ಯಾರೊಡನೆ, ಯಾವಾಗ್ಯೆ ಏನು ತಿಂದಿರುವೆಯೆಂದು ಕೇಳಿ||೨೩೫|| ತಿಳಿದುಕೊಂಡು ಕೂಡಲೆ ವಮನವನ್ನು ಕೊಡಬೇಕು. ಸೂಕ್ಷ್ಮವಾದ ತಾಮ್ರಭಸ್ಮವನ್ನು ಜೇನಿನೊಡನೆ ಕೊಡಬೇಕು. ಆದು ಹೃದಯವನ್ನು ಶುದ್ಧಮಾಡುವದು || ೨೩೬ || ಹೃದಯವು. ಶುದ್ಧವಾಗಲು ಸುವರ್ಣಭಸ್ಮವನ್ನು ೧ ಶಾಣ ( ೩ ಮಾಸಿ ) ಕೊಡಬೇಕು. ಸುವರ್ಣವು ಎಲ್ಲ ವಿಷಗಳನ್ನೂ ಕೃತ್ರಿಮ ವಿಷಗಳನ್ನೂ ನಾಶ ಮಾಡುತ್ತದೆ. ||೨೩೭|| ಕಮಲದ ಎಲೆಯಲ್ಲಿ ಹೇಗೆ ನೀರು ಅಂಟಿಕೊಳ್ಳದೋ, ಹಾಗೆಯೇ ಸುವರ್ಣಭಸ್ಮ ತಿನ್ನುವವನಲ್ಲಿ ವಿಷವು ಅಂಟಿಕೊಳ್ಳದು. ನಾಗದಂತೀ ದೀರ್ಘಮೂಲದಂತಿ ತ್ರಿವೃದ್ದಂತೀ (ಹೃಸ್ವಮೂಲದಂತಿ) ದ್ರಂವತೀ, (ಮೂಲವು ಹೃಸ್ವವಿದ್ದ ಸಣ್ಣಗಿಡ) ಕಳ್ಳಿಯಹಾಲು, ಮಂಗಾರಿಯಕಾಯಿ ||೨೩೮|| ಇವುಗಳ ೪ ಕಲ್ಕದಲ್ಲಿ ೫೧೨ ತೊಲಿ ಗೊಮೂತ್ರ, ೧೨೮ ತೊಲಿ ಎಮ್ಮೆಯ ತುಪ್ಪ ಹಾಕಿ ಮಾಡಿದ ಘೃತವು ಸರ್ಪ ಮತ್ತು ಕೀಟ ವಿಷದಿಂದ ಪೀಡಿತರಾದವರಿಗೆ ಉತ್ತಮ ಔಷಧವಾಗಿರುವದು.

ಅಮೃತ ಘೃತವನ್ನು ಹೇಳುತ್ತಾರೆ:—

**ಶಿರೀಷತ್ವಕ್ ತ್ರಿಕಟುಕಂ ತ್ರಿಫಲಾ ಚಂದನೋತ್ಪಲೇ ||**
**ದ್ವೇಬಲೇ ಸಾರಿವೇ ಶ್ವೇತಾ ಸುರಭೀನಿಂಬಪಾಟಲಾಃ || ೨೪೦ ||**
**ಬಂಧುಜೀವಾಢಕೀಮೂರ್ವಾವಾಸಾಸುರಸವತ್ಸಕಾನ್ ||**
**ಪಾಠಾಂಕೋಲಾಶ್ಚ ಗಂಧಾರ್ಕಮೂಲಯಷ್ಟ್ಯಾಹ್ವಪದ್ಮಕಾನ್ ||೨೪೧||**
**ವಿಶಾಲಾಂ ಬೃಹತೀಂದ್ರಾಕ್ಷಾಂ ಕೋವಿದಾರಂ ಶತಾವರೀಮ್ ||**
**ಕಟಭೀದಂತ್ಯಪಾಮಾರ್ಗ ಪ್ರಶ್ನಿಪರ್ಣೀರಸಾಂಜನಮ್ || ೨೪೨ ||**
**ಶ್ವೇತೌ ಬಾಣಾಶ್ವಖುರಕೌ ಕುಷ್ಠದಾರುಪ್ರಿಯಂಗುಕಾನ್ ||**
**ವಿದಾರೀಂ ಮಧುಕಾತ್‌ಸಾರಂ ಕರಂಜಸ್ಯ ಫಲತ್ವಚೌ || ೨೪೩ ||**
**ರಜಸ್ಯೌ ಲೋಧ್ರಮಕ್ಷಾಂಶಂ ಪಿಷ್ಟ್ವಾ ಸಾಧ್ಯಂ ಘೃತಾಢಕಮ್ ||**
**ತುಲ್ಯಾಂಬುಚ್ಛಾಗಗೋಮೂತ್ರತ್ಯಾಢಕೇ ತದ್ವಿಷಾಪಹಮ್ || ೨೪೪ ||**
**ಅಪಸ್ಮಾರಜ್ವರೋನ್ಮಾದಭೂತಗ್ರಹಗರೋದರಮ್ ||**

**ಪಾಂಡುರೋಗಾನ್ ಕ್ರಿಮೀನ್ ಗುಲ್ಮಾನ್ ಪ್ಲೀಹೋರುಸ್ತಂಭಕಾಮಲಾಃ ॥ ೨೪೫ ॥**
**ಹನುಸ್ಕಂದಗ್ರಹಾದೀಂಶ್ಚ ಪಾನಾಭ್ಯಂಜನನಾವನೈಃ ॥**
**ಹನ್ಯಾತ್ ಸಂಜೀವಯೇಚ್ಚಾಶು ವಿಷೋದ್ವೇಗಮೃತಾನ್ ನರಾನ್ ॥ ೨೪೬ ॥**
**ನಾಮ್ನೈತದಮೃತಂ ಸರ್ವವಿಷಾಣಾಂ ಸ್ಯಾದ್ ಘೃತೋತ್ತಮಮ್ ॥**

**ಅರ್ಥ:—** ಶಿರಸಲ ತೋಟೆ, ತ್ರಿಕಟು, ತ್ರಿಫಳೆ, ಚಂದನ, ನೀಲಕಮಲ, ಕಳ್ಳಂಗಡ್ಲೆ, ಮುದ್ರೆ, ಅನಂತಮೂಲ, ಕರೇಅನಂತಮೂಲ, ಬಿಳೇಗೋಕರ್ಣಿ, ರಾಸ್ನೆ, ಬೇವು, ಪಾದರಿ, ॥೨೪೦॥ ಬಂಧುಜೀವ, (ಬಂದುಗೆಹೂವು) ತೊಗರಿ, ಹೆಗ್ಗೊರಟಿಗೆ, ಅಡಸಲ, ತುಳಸಿ, ಇಂದ್ರಜವ, ಅಗಳಶುಂಠಿ, ಅಂಕೋಲ, ಅಶ್ವಗಂಧೆ, ಎಕ್ಕೆಯ ಬೇರು, ಜೇಷ್ಠ್ಯಮಧು, ಪದ್ಮಕಾಷ್ಠ, ॥೨೪೧॥ ಕಾಡಕವಡಿಯ ಬೇರು, ಹೆಬ್ಬಾಗುಳ್ಳ, ದ್ರಾಕ್ಷೆ, ಕೋವಿದಾರ, ( ಕಂಚವಾಳ ) ಶತಾವರೀ ಕಟಭಿ ( ಗಿರಿಕರ್ಣಿಕೆ ) ದಂತೀಮೂಲ, ಉತ್ತರಾಣಿ ಮೂರೆಲೆ ಹೊನ್ನೆ ರಸಾಂಜನ, ॥೨೪೨॥ ಶ್ವೇತಬಾಣ, ಅಶ್ವಖುರ (ಉತ್ತರಾಣಿ) ಕೋಷ್ಠ, ದೇವದಾರ, ಗವ್ಹಲಾ, ನೆಲಗುಂಬಳ, ಇಪ್ಪಿಯಕೆಚ್ಚು, ಹುಲಗಲಿಯ ಫಲ ಮತ್ತು ತೋಟೆ, ಅರಿಷಿಣ ಮರದರಿಷಿಣ, ಲೋಧ ಇವುಗಳನ್ನೆಲ್ಲ ಒಂದೊಂದು ತೊಲೆ ತಕ್ಕೊಂಡು ಕಲ್ಕಮಾಡಿ ಅದರಲ್ಲಿ ನೀರು ೮ ಪ್ರಸ್ಥ, ಆಡಿನಮೂತ್ರ, ಗೋಮೂತ್ರಗಳನ್ನು ಹನ್ನೆರಡು ಹನ್ನೆರಡು ಪ್ರಸ್ಥ ಹಾಕಿ ಎಂಟು ಪ್ರಸ್ಥ ಘೃತ ಸಿದ್ಧ ಮಾಡಬೇಕು. ಅದನ್ನು ಪಾನ, ಅಭ್ಯಂಗ, ನಸ್ಯಗಳಿಂದ ಉಪಯೋಗಿಸಿದರೆ ಅದು ವಿಷವನ್ನೂ, ಅಪಸ್ಮಾರ, ಜ್ವರ, ಉನ್ಮಾದ, ಭೂತಬಾಧೆ, ಗ್ರಹಪೀಡೆ, ಕೃತ್ರಿಮವಿಷ, ಉದರ, ಪಾಂಡುರೋಗ, ಕೃಮಿ, ಗುಲ್ಮ, ಪ್ಲೀಹ, ಉರುಸ್ತಂಭ, ಕಾಮಣಿ, ॥ ೨೪೫ ॥ ಹನುಸ್ತಂಭ, ಹೆಗಲು ಬಿಗಿಯೋಣ ಮುಂತಾದವುಗಳನ್ನು ನಾಶಮಾಡುತ್ತದೆ. ವಿಷದ ಬಾಧೆಯಿಂದ ಸತ್ತವರನ್ನು ತೀವ್ರವಾಗಿ ಬದುಕಿಸುವದು. ॥ ೨೪೬ ॥ ಈ ಶ್ರೇಷ್ಠವಾದ ಘೃತದ ಹೆಸರು ಅಮೃತವೆಂದಿದ್ದು ಎಲ್ಲ ವಿಷಗಳಿಗೆ ಉಪಯುಕ್ತವಾಗಿದೆ. ॥ ೨೪೬ ॥ ॥

**ತತ್ರಶ್ಲೋಕಾಃ**

**ಛತ್ರೀಝರ್ಝರಪಾಣಿಶ್ಚ ಚರೇದ್ ರಾತ್ರೌ ತಥಾ ದಿವಾ ॥ ೨೪೭ ॥**
**ತಚ್ಛಾಯಾಶಬ್ದವಿತ್ರಸ್ತಾಃ ಪ್ರಣಶ್ಯಂತಿ ಹಿ ಪನ್ನಗಾಃ ॥**

**ದಷ್ಟಮಾತ್ರೋ ದಶೇದಾಶು ತಂ ಸರ್ಪಂ ಲೋಷ್ಟಮೇವ ಚ || ೨೪೮ ||**
**ಉಪರ್ಯರಿಷ್ಟಾನ್ ಬಧ್ನೀಯಾದ್ ದಂಶಂ ಛಿತ್ವಾ ದಹೇತ ವಾ ||**
**ವಜ್ರಂ ಮರಕತಃ ಸಾರಃ ಪಿಚುಕೀ ವಿಷಮುಷ್ಟಿಕಾ　　|| ೨೪೯ ||**
**ಕರ್ಕೋಟಕಂ ಸರ್ಪಮಣಿರ್ವೈದೂರ್ಯಂ ಗಜಮೌಕ್ತಿಕಮ್ ||**
**ಧಾರ್ಯಂ ವರಮಣಿರ್ಯಾಶ್ಚ ವರೌಷಧ್ಯೋ ವಿಷಾಪಹಾಃ || ೨೫೦ ||**
**ಖಗಾಶ್ಚ ಸಾರಿಕಾಃ ಕ್ರೌಂಚಾಃ ಶಿಖಿಹಂಸಶುಕಾದಯಃ ||**
**ಇತೀದಮುಕ್ತಂ ದ್ವಿವಿಧಶ್ಚ ವಿಸ್ತರೈರ್ಬಹುಪ್ರಕಾರೈರ್ವಿಷರೋಗಭೇಷಜಮ್ || ೨೫೧ ||**
**ಅಧೀತ್ಯ ಯಃ ಸಮ್ಯಗಿಹ ಪ್ರಯೋಜಯೇದ್ ವ್ರಜೇದ್ವಿಷಾಣಾಮಪಿ ಸಹ್ಯತಾಂ ಭಿಷಗ್ ||**

**ಅರ್ಥ—** ಹಗಲುರಾತ್ರಿ ಹೊರಗೆ ಹೋಗುವಾಗ ಕೊಡೆಯನ್ನು, ಕೈಯಲ್ಲಿ ಸಪ್ಪಳಮಾಡುವ ಬಡಿಗೆಯನ್ನು ತಕ್ಕೊಂಡು ಹೊರಡಬೇಕು. || ೨೪೭ || ಏಕೆಂದರೆ ಕೊಡೆಯ ನೆರಳುಮತ್ತು ಕಟ್ಟಿಗೆಯ ಸಪ್ಪಳದಿಂದ ಹಾವುಗಳು ಅಂಜಿ ತೀವ್ರ ಓಡಿಹೋಗುವವು. ಹಾವು ಕಡಿದ ಕೂಡಲೆ ಅದನ್ನು ಅಥವಾ ಹೆಂಟೆಯನ್ನು ಕಚ್ಚಬೇಕು. || ೨೪೮ || ದಂಶದಮೇಲೆ ಅರಿಷ್ಟ (ಹಗ್ಗ) ಗಳನ್ನು ಕಟ್ಟಬೇಕು. ದಂಶವನ್ನು ಕೊಯ್ದು ತೆಗೆಯಬೇಕು, ಅಥವಾ ಸುಡಬೇಕು. ವಜ್ರ, ಮರಕತಮಣಿ, ಪಾರ, ಪಿಚುಕ, ವಿಷಮೂಷ್ಟಿಕ, || ೨೪೯ || ಪದ್ಮರಾಗ, ಸರ್ಪಮಣಿ, ವೈಡೂರ್ಯ, ಗಜಮೌಕ್ತಿಕ, ವರಮಣಿ ಮತ್ತು ಉತ್ತಮ ವಿಷನಾಶಕ ಔಷಧಗಳನ್ನು ಮೈಮೇಲೆ ಧರಿಸಬೇಕು. || ೨೫೦ || ಮತ್ತು ಕ್ರೌಂಚ, ಸಾರಿಕೆ, ನವಿಲು, ಹಂಸ, ಶುಕ ಮುಂತಾದ ಪಕ್ಷಿಗಳನ್ನು ಮನೆಯಲ್ಲಿ ಸಾಕಬೇಕು. ಈ ಪ್ರಕಾರ ಸಹಜ ಕೃತ್ರಿಮವೆಂಬ ಎರಡು ತರದ ವಿಷರೋಗದ ಔಷಧವು ವಿಸ್ತಾರವಾಗಿ ಹೇಳಲ್ಪಟ್ಟಿತು. || ೨೫೧ || ಯಾವ ವೈದ್ಯನು ಇದನ್ನು ಚನ್ನಾಗಿ ಕಲಿತು ಉಪಯೋಗಿಸುವನೋ, ಅವನು ವಿಷಗಳಿಗೆ ಅಂಜಿಸಿ ಓಡಿಸುವನು.　　|| ೨೫೧|| ||

**ಇತ್ಯಗ್ನಿವೇಶಕೃತೇ ತಂತ್ರೇ ದೃಢಬಲಪ್ರತಿಸಂಸ್ಕೃತೇ ಚಿಕಿತ್ಸಿತಸ್ಥಾನೇ ವಿಷಚಿಕಿತ್ಸಿತಂ ನಾಮ ತ್ರಯೋವಿಂಶೋಧ್ಯಾಯಃ**

ಶ್ರೀ ಮದಾಢ್ಯ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ **ಚರಕ 'ಚಿಕಿತ್ಸಾ ಬೋಧಿನಿ'** ಎಂಬ ಚರಕ ಸಂಹಿತೆಯ ಟಿಪ್ಪಣಿಯಲ್ಲಿ **ವಿಷಚಿಕಿತ್ಸೆ** ಎಂಬ ಇಪ್ಪತ್ತುಮೂರನೆಯ ಅಧ್ಯಾಯವು ಮುಗಿದುದು.

# ೨೪ ನೆಯ ಅಧ್ಯಾಯವು

## ಮದಾತ್ಯಯ ಚಿಕಿತ್ಸೆ

ಮೋಹಜನಕತ್ವ ಮತ್ತು ವಿಷಸಮಾನಗುಣಜನ್ಯತ್ವ ಈ ಗುಣಗಳು ಇವರಲ್ಲಿ ಇದ್ದವರಿಂದ ವಿಷದ ನಂತರ ಮದಾತ್ಯಯ ಚಿಕಿತ್ಸೆಯನ್ನು ಹೇಳುತ್ತಾರೆ.

**ಮದಾತ್ಯಯ ಚಿಕಿತ್ಸಿತಂ ವ್ಯಾಖ್ಯಾಸ್ಯಾಮಃ**

**ಅರ್ಥ—** ಇನ್ನುಮೇಲೆ ಮದಾತ್ಯಯ ಚಿಕಿತ್ಸೆಯನ್ನು ಹೇಳುವೆವು.

**ಇತಿಹ ಸ್ಮಾಹ ಭಗವಾನಾತ್ರೇಯಃ** ॥ ೧ ॥

**ಅರ್ಥ—** ಪೂಜ್ಯರಾದ ಆತ್ರೇಯ ಋಷಿಗಳು ಹೀಗೆ ಹೇಳಿದರು. ॥೧॥

ಮದ್ಯಪ್ರಶಂಸೆಯನ್ನು ಮಾಡುತ್ತಾರೆ—

**ಸುರೈಃ ಸುರೇಶಸಹಿತೈರ್ಯಾ ಪುರಾ ಪ್ರತಿಪೂಜಿತಾ ॥**
**ಸೌತ್ರಾಮಣ್ಯಾಂ ಹೂಯತೇ ಯಾ ಕರ್ಮಭಿರ್ಯಾ ಪ್ರತಿಷ್ಠಿತಾ ॥ ೧ ॥**
**ಯಜ್ಞೇ ಹಿ ಯಾ ಚ ಶಕ್ರಸ್ಯ ಸೋಮೋಽತಿಪತಿತೋ ಯಯಾ ॥**
**ನಿರೋಜಸ್ತಮಸಾವಿಷ್ಟಸ್ತಸ್ಮಾದ್ ದುರ್ಗಾದ್ ಸಮುದ್ಧೃತಃ ॥ ೨ ॥**
**ವಿದಿಭಿರ್ವೇದವಿಹಿತೈರ್ಯಾಯೇಜ್ಯಂತೇ ಮಹಾತ್ಮಭಿಃ ॥**
**ದೃಶ್ಯಾ ಸ್ಪೃಶ್ಯಾ ಪ್ರಕಲ್ಪ್ಯಾ ಚ ಯಜ್ಞೇ ಯಾ ಯಜ್ಞಸಿದ್ಧಯೇ ॥ ೩ ॥**
**ಯೋನಿಸಂಸ್ಕಾರಸಾಮಾದ್ಯೈರ್ವಿಶೇಷೈರ್ಬಹುಧಾ ಚ ಯಾ ॥**
**ಭೂತ್ವಾ ಭವತ್ಯೇಕವಿಧಾ ಸಾಮಾನ್ಯನ್ಮದಲಕ್ಷಣಾತ್ ॥ ೪ ॥**

ಯಾ ದೇವಾನಮೃತಂ ಭೂತ್ವಾ ಸ್ವಧಾ ಭೂತ್ವಾ ಪಿತೄಂಶ್ಚ ಯಾ ॥
ಸೋಮೋ ಭೂತ್ವಾ ದ್ವಿಜಾತೀನ್ ಯಾ ಯುಂಕ್ತೇ ಶ್ರೇಯೋಭಿರುತ್ತ
ಮೈಃ ॥೫॥

ಆಶ್ವಿನಂ ಯಾ ಮಹತ್ತೇಜೋ ವೀರ್ಯಂ ಸಾರಸ್ವತಂ ಚ ಯಾ ॥
ಬಲಮೈಂದ್ರಂ ಚ ಯಾ ಸಿದ್ಧಾ ಸೋಮೇ ಸೌತ್ರಾಮಣೌ ಚ ಯಾ॥೬॥

ಶೋಕಾರತಿಭಯೋದ್ವೇಗನಾಶಿನೀ ಯಾ ಮಹಾಬಲಾ ॥
ಯಾ ಪ್ರೀತಿರ್ಯಾ ರತಿರ್ಯಾ ವಾಕ್ ಯಾ ಪುಷ್ಟಿರ್ಯಾ ಚ ನಿವೃತಿಃ
॥ ೭ ॥

ಯಾ ಸುರಾಸುರಗಂಧರ್ವಯಕ್ಷರಾಕ್ಷಸಮಾನುಷೈಃ ॥
ರತಿಃ ಸುರೇತ್ಯಭಿಹಿತಾ ತಾಂ ಸುರಾಂ ವಿಧಿನಾ ಪಿಬೇತ್ ॥ ೮ ॥

**ಅರ್ಥ—** ಇಂದ್ರನೊಡನೆ ಎಲ್ಲ ದೇವತೆಗಳು ಹಿಂದಕ್ಕೆ ಯಾವ ಮದ್ಯವನ್ನು ಪೂಜಿಸಿದರೋ ಮತ್ತು ಸೌತ್ರಾಮಣಿ ಯಜ್ಞದಲ್ಲಿ ಯಾವದು ಆಹುತಿಯಾಗಿ ಹಾಕಲ್ಪಡುತ್ತದೋ, ವೈದಿಕ ಕರ್ಮಗಳಿಂದ ಮತ್ತು ಇಂದ್ರನ ಯಜ್ಞದಲ್ಲಿ ಕೂಡ ಯಾವುದು ಸ್ವಾಗತಿಸಲ್ಪಡುತ್ತದೋ ॥ ೧ ॥ ಓಜಃಕ್ಷಯವನ್ನು ಹೊಂದಿ ರೋಗಿಯಾದ ಚಂದ್ರನು ಆ ಸಂಕಟದಿಂದ ಯಾವ ಮದ್ಯದಿಂದ ಪಾರಾದನೋ ॥ ೨ ॥ ಮಹಾತ್ಮರು ವೇದವಿಹಿತ ವಿಧಿಗಳಿಂದ ಯಾವ ಮದ್ಯದಿಂದ ಯಜ್ಞವನ್ನು ಮಾಡುತ್ತಾರೋ ಯಜ್ಞಸಿದ್ಧಿಗಾಗಿ ಯಾತರ ದರ್ಶನ, ಸ್ಪರ್ಶನ, ಉತ್ಪಾದನಗಳು ಅವಶ್ಯವಾಗಿವೆಯೋ ॥ ೩ ॥ ಮೂಲಕಾರಣ, ಸಂಸ್ಕಾರ, ಹೆಸರು, ಪ್ರಭಾವ ಮುಂತಾದ ವಿಶೇಷಗಳಿಂದ ಯಾವದು ಅನೇಕ ವಿಧವಿದ್ದರೂ ಸಾಮಾನ್ಯವಾದ ಮದವೆಂಬ ಲಕ್ಷಣದಿಂದ ಒಂದೇ ವಿಧವಾಗಿದೆಯೋ ॥ ೪ ॥ ಅಮೃತವಾಗಿ ದೇವತೆಗಳಿಗೂ, ಸ್ವಧೆಯಾಗಿ ಪಿತೃಗಳಿಗೂ ಸೋಮವಾಗಿ ದ್ವಿಜರಿಗೂ ಯಾವದು ಉತ್ತಮ ಶ್ರೇಯಸ್ಸನ್ನು ಉಂಟುಮಾಡುತ್ತದೋ ॥ ೫ ॥ ಯಾವದು ಅಶ್ವಿನೀ ದೇವತೆಗಳಲ್ಲಿ ಮಹಾ ತೇಜವನ್ನೂ, ಸರಸ್ವತಿಯಲ್ಲಿ ವೀರ್ಯವನ್ನೂ, ಇಂದ್ರನಲ್ಲಿ ಬಲವನ್ನೂ ಉಂಟುಮಾಡಿದೆಯೋ, ಸೋಮಯಾಗ ಸೌತ್ರಾಮಣಿ ಯಾಗಗಳಲ್ಲಿ ಯಾವದು ಉಪಯೋಗಿಸಲ್ಪಡುತ್ತದೋ ॥ ೬ ॥ ಯಾವ ಮದ್ಯವು ಬಲಿಷ್ಠವಿದ್ದು, ದುಃಖ ಅರತಿ, ಭಯ, ಉದ್ವೇಗಗಳನ್ನು ನಾಶಮಾಡಿ ಪ್ರೀತಿ, ಆನಂದ, ವಾಣಿ, ಪುಷ್ಟಿ, ಸುಖ

ಗಳನ್ನು ಕೊಡುತ್ತದೋ ॥ ೭ ॥ ಯಾವದು ದೇವ, ದೈತ್ಯ, ಗಂಧರ್ವ, ಯಕ್ಷ, ರಾಕ್ಷಸ, ಮನುಷ್ಯರಿಂದ ಪ್ರತ್ಯಕ್ಷವಾದ ಆನಂದವೇ ಎಂದು ಹೇಳಲ್ಪಡುತ್ತದೋ ಆ ಮದ್ಯವನ್ನು ವಿಧಿಯಿಂದ ಕುಡಿಯಬೇಕು.

ಆ ವಿಧಿಯನ್ನು ಹೇಳುತ್ತಾರೆ—

ಶರೀರಕೃತಸಂಸ್ಕಾರಃ ಶುಚಿರುತ್ತಮ ಗಂಧವಾನ್ ॥
ಉದ್ದಾಮಗಂಧಿಭಿರ್ವಸ್ತ್ರೈರಮಲೈರ್ವಾ ಯಥಾನುಗೈಃ ॥ ೯ ॥

ವಿಚಿತ್ರವಿವಿಧಸ್ರಗ್ವೀ ರತ್ನಾಭರಣಭೂಷಿತಃ ॥
ದೇವದ್ವಿಜಾತೀನ್ ಸಂಪೂಜ್ಯ ಸ್ಪೃಷ್ಟ್ವಾ ಮಂಗಲಮುತ್ತಮಂ ॥೧೦॥

ದೇಶೇ ಯಥರ್ತುಕೇ ಶಸ್ತೇ ಕುಸುಮಪ್ರಕರೀಕೃತೇ ॥
ಸಂವಾಸಸಮ್ಮತೇ ಯುಕ್ತೇ ಧೂಪಸಮ್ಮೋದಭೂಷಿತೇ ॥ ೧೧ ॥

ಸೂಪಧಾನೇ ಸುಸಂಸ್ತೀರ್ಣೇ ವಿಹಿತೇ ಶಯನಾಶಿನೇ ॥
ಉಪವಿಷ್ಟೋಽಥವಾ ತಿರ್ಯಕ್ ಸ್ವಶರೀರಸುಖೇ ಸ್ಥಿತಃ ॥ ೧೨ ॥

ಸೌವರ್ಣೈರಾಜತೈಶ್ಚಾಪಿ ತಥಾ ಮಣಿಮಯೈರಪಿ ॥
ಭೋಜನೈರ್ವಿವಿಧೈಶ್ಚಿತ್ರೈಃ ಸುಕೃತೈಶ್ಚ ಪಿಬೇತ್ ಸದಾ ॥ ೧೩ ॥

ರೂಪಯೌವನಮತ್ತಾಭಿಃ ಶಿಕ್ಷಿತಾಭಿರ್ವಿಶೇಷತಃ ॥
ವಸ್ತ್ರಾಭರಣಮಾಲ್ಯೈಶ್ಚ ಭೂಷಿತಾಭಿರ್ಯಥರ್ತುಕೈಃ ॥ ೧೪ ॥

ಶೌಚಾನುರಾಗಯುಕ್ತಾಭಿಃ ಪ್ರಮದಾಭಿರಿತಸ್ತತಃ ॥
ಸಂವಾಹ್ಯಮಾನ ಇಷ್ಟಾಭಿಃ ಪಿಬೇನ್ಮದ್ಯಮನುತ್ತಮಮ್ ॥ ೧೫ ॥

ಮದ್ಯಾನುಕೂಲೈರ್ಹರಿತೈಃ ಫಲೈರ್ಹರಿತಕೈಃ ಶುಭೈಃ ॥
ಲವಣೈರ್ಗಂಧಪಿಶುನೈರವದಂಶೈರ್ಯಥರ್ತುಕೈಃ ॥ ೧೬ ॥

ಭೃಷ್ಟೈರ್ಮಾಂಸೈರ್ಬಹುವಿಧೈರ್ಭೂಜಲಾಂಬರಚಾರಿಣಾಮ್ ॥
ಪೌರೋಗವೈಶ್ಚ ವಿಹಿತೈರ್ಭಕ್ಷ್ಯೈಶ್ಚ ವಿವಿಧಾತ್ಮಕೈಃ ॥ ೧೭ ॥

ಪಿಬೇತ್ ಸಂಪೂಜ್ಯ ವಿಬುಧಾನಾಶಿಷಃ ಸಂಪ್ರಯುಜ್ಯ ಚ ॥
ಪ್ರದಾಯ ಯಜನಂ ಗ್ರೇ ತ್ವರ್ಥಿಭ್ಯಃ ಪೃಥಿವೀತಲೇ ॥ ೧೮ ॥

**ಅರ್ಥ—** ಸ್ನಾನ ಮುಂತಾದ ಶರೀರಸಂಸ್ಕಾರಗಳನ್ನು ಮಾಡಿ, ಪವಿತ್ರನಾಗಿ, ಉತ್ತಮ ಗಂಧಗಳನ್ನು ಮೈಗೆ ತೊಡೆದುಕೊಂಡು, ಆಯಾಯ ಋತುಗಳಿಗೆ ತಕ್ಕ ಉತ್ಕೃಷ್ಟ ಗಂಧವನ್ನು ಹಚ್ಚಿದ ನಿರ್ಮಲ ವಸ್ತ್ರಗಳನ್ನುಟ್ಟುಕೊಂಡು, || ೯ || ವಿಚಿತ್ರ, ವಿವಿಧ ಮಾಲೆಗಳನ್ನು ಹಾಕಿಕೊಂಡು, ರತ್ನದ ಆಭರಣಗಳಿಂದ ಅಲಂಕೃತನಾಗಿ ದೇವ ಬ್ರಾಹ್ಮಣರನ್ನು ಪೂಜಿಸಿ, ಉತ್ತಮ ಮಂಗಲಕರವಾದ ವಸ್ತುಗಳನ್ನು ಸ್ಪರ್ಶಮಾಡಿ, || ೧೦ || ಆಯಾಯ ಋತುಗಳಿಗೆ ಯೋಗ್ಯವಾದ, ಉತ್ತಮವಾದ, ಅತ್ತಿತ್ತ ಹೂಗಳನ್ನು ಚೆಲ್ಲಿದ, ಧೂಪದ ವಾಸನೆ ಹಿಡಿದ, ವಾಸಕ್ಕೆ ಯೋಗ್ಯವಾದ, ಪ್ರಶಸ್ತವಾದ, || ೧೧ || ಉತ್ತಮವಾದ ತಲೆಗಿಂಬುಗಳನ್ನು ಇಟ್ಟು, ಹಾಸಿದ ಹಾಸಿಗೆಯಲ್ಲಿ ಅಥವಾ ಆಸನದಲ್ಲಿ ತನಗೆ ಆರಾಮವೆನಿಸುವಂತೆ ಮಲಗಿ ಅಥವಾ ಕೂತು, || ೧೨ || ಬಂಗಾರ, ಬೆಳ್ಳಿ, ರತ್ನಗಳಿಂದ ಮಾಡಿದ ಪಾತ್ರೆಗಳಿಂದ, ಸಂಸ್ಕಾರಕೊಟ್ಟ ತರತರದ ಅನೇಕ ಅನ್ನದೊಡನೆ ಮದ್ಯವನ್ನು ಕುಡಿಯಬೇಕು. || ೧೩ || ರೂಪ, ತಾರುಣ್ಯಗಳಿಂದ ಮತ್ತರಾದ ವಿಶೇಷ ಶಿಕ್ಷಣವನ್ನು ಪಡೆದ, ಆಯಾ ಋತುಗಳಿಗನುರೂಪವಾದ ವಸ್ತ್ರ, ಆಭರಣ, ಮಾಲೆಗಳಿಂದ ಅಲಂಕೃತರಾದ, || ೧೪ || ಸ್ವಚ್ಛತೆ, ಪ್ರೇಮಗಳುಳ್ಳ, ಅತ್ತಿತ್ತ ತಿರುಗಾಡುತ್ತಿರುವ ಪ್ರಿಯ ಸ್ತ್ರೀಯರಿಂದ ಮೈಯನ್ನು ಒತ್ತಿಸಿಕೊಳ್ಳುತ್ತ ಅವರೊಡನೆ ಉತ್ಕೃಷ್ಟವಾದ ಮದ್ಯವನ್ನು ಕುಡಿಯಬೇಕು. || ೧೫ || ಮದ್ಯಕ್ಕೆ ಅನುರೂಪವಾದ ಒಳ್ಳೇ, ಹಸರು ವ್ಯಂಜನ ಫಲಗಳಿಂದ, ಆಯಾ ಋತುಗಳಿಗನುರೂಪವಾದ, ಗಂಧವಿರುವ, ಉಪ್ಪು, ಉಸುಳಿ ಮುಂತಾದ ಪದಾರ್ಥಗಳಿಂದ || ೧೬ || ಭೂಮಿ, ಆಕಾಶ, ನೀರುಗಳಲ್ಲಿ ಸಂಚರಿಸುವ ಅನೇಕ ತರದ ಪ್ರಾಣಿಗಳ ಕರಿದ ಮಾಂಸಗಳೊಡನೆ ಚಲೋ ಅಡಿಗೆಯವರು ಮಾಡಿದ ತರತರದ ಭಕ್ಷ್ಯಗಳೊಡನೆ ಮದ್ಯವನ್ನು ಕುಡಿಯಬೇಕು. || ೧೭ || ಮೊದಲು ದೇವತೆಗಳನ್ನು ಪೂಜಿಸಿ ಆಶೀರ್ವಾದಗಳನ್ನು ಕೇಳಿಕೊಂಡು, ಭೂತಲದಲ್ಲಿರುವ ಭಿಕ್ಷುಕರಿಗೆ ಯಜ್ಞಭಾಗವನ್ನು ಕೊಟ್ಟು ಮದ್ಯವನ್ನು ಕುಡಿಯಬೇಕು. || ೧೮ ||

**ಬೇರೆಬೇರೆ ಪ್ರಕೃತಿಯವರಿಗೆ ಮದ್ಯ ಕುಡಿಯುವ ಮೊದಲು ಮಾಡಬೇಕಾದ ವಿಧಿಯನ್ನೂ ಕುಡಿಯತಕ್ಕ ಮದ್ಯದ ಪ್ರಕಾರವನ್ನೂ ಹೇಳುತ್ತಾರೆ—**

**ಅಭ್ಯಂಗೋತ್ಸಾದನಸ್ನಾನಪಾನೋಧೂಪಾನುಲೇಪನೈಃ ||**
**ಸ್ನಿಗ್ಧೋಷ್ಣೈರ್ಭಾವಿತಶ್ಚಾನ್ನೈರ್ವಾತಿಕೋ ಮದ್ಯಮಾಚರೇತ್ || ೧೯ ||**

ಶೀತೋಪಚಾರೈರ್ವಿವಿಧೈರ್ಮಧುರಸ್ನಿಗ್ಧಶೀತಲೈಃ ||
ಪೈತ್ತಿಕೋ ಭಾವಿತಶ್ಚಾನ್ನೈಃ ಪಿಬೇನ್ ಮದ್ಯಂ ನ ಸೀದತಿ || ೨೦ ||
ಉಪಚಾರೈಶ್ಚ ಶಿಶಿರೈರ್ಯವಗೋಧೂಮಭುಕ್ ಪಿಬೇತ್ ||
ಶ್ಲೈಷ್ಮಿಕೋ ಧನ್ವಜೈರ್ಮಾಂಸೈರ್ಮದ್ಯಂ ಮಾರೀಚಕೈಃ ಸಹ || ೨೧ ||
ಕಫಪಿತ್ತಾತ್ಮಕೇಭ್ಯಶ್ಚ ಮಾಧ್ವೀಕಂ ಮಾಧವಂ ಚ ಯತ್ ||
ವಾತಿಕೇಭ್ಯೋ ಹಿತಂ ಮದ್ಯಂ ಪ್ರಾಯೋ ಗೌಡಿಕಪೈಷ್ಟಿಕವ್ || ೨೨ ||
ಬಹುದ್ರವಂ ಬಹುಗುಣಂ ಬಹುಕರ್ಮ ಮದಾತ್ಮಕವ್ ||
ವಿಧಿರ್ವಸುಮತಾಮೇಷ ಭವಿಷ್ಯದ್ವಿಭವಾಶ್ಚ ಯೇ || ೨೩ ||
ಯಥೋಪಪೈತ್ತಿಕೈರ್ಮದ್ಯಂ ಪಾತವ್ಯಂ ಮಾತ್ರಯಾ ಹಿತವ್ ||
ಗುಣೈರ್ದೋಷೈಶ್ಚ ತನ್ಮದ್ಯಮುಭಯಂ ಚೋಪಲಕ್ಷ್ಯತೇ || ೨೪ ||
ವಿಧಿನಾ ಮಾತ್ರಯಾ ಕಾಲೇ ಹಿತೈರನ್ನೈರ್ಯಥಾಬಲವ್ ||
ಪ್ರಹೃಷ್ಟೋ ಯಃ ಪಿಬೇನ್ಮದ್ಯಂ ತಸ್ಯ ಸ್ಯಾದಮೃತಂ ಯಥಾ || ೨೫ ||
ಯಥೋಪೀತಂ ಪುನರ್ಮದ್ಯಂ ಪ್ರಸಂಗಾದ್ ಯೇನ ಪೀಯತೇ ||
ರೂಕ್ಷವ್ಯಾಯಾಮನಿತ್ಯೇನ ವಿಷವದ್ ಯಾತಿ ತಸ್ಯ ತತ್ || ೨೬ ||

**ಅರ್ಥ—** ವಾತಿಕ ಮನುಷ್ಯನು ಸ್ನಿಗ್ಧ, ಉಷ್ಣಗಳಾದ ಅಭ್ಯಂಗ ಉತ್ಸಾದನ ( ಮೈಗೆಉದರಿಸುವ ಸುಗಂಧದ್ರವ್ಯ ) ಸ್ನಾನ, ವಸ್ತ್ರ, ಧೂಪ, ಗಂಧಗಳನ್ನು ಮತ್ತು ಬೇರೆ ಇಂಥ ವಸ್ತುಗಳನ್ನು ಸೇವಿಸುತ್ತ ಮದ್ಯವನ್ನು ಕುಡಿಯಬೇಕು. ||೧೯|| ಪಿತ್ತಪ್ರಕೃತಿಯವನು ಮಧುರ ಸ್ನಿಗ್ಧ ಶೀತ, ವೀರ್ಯ ವಂತ ವಿವಿಧ ವಸ್ತುಗಳನ್ನು ಸೇವಿಸುತ್ತ ಕುಡಿಯುತ್ತಿದ್ದರೆ ಅಪಾಯ ವಾಗದು. ||೨೦|| ಕಫಪ್ರಕೃತಿಯವನು ರೂಕ್ಷ ಉಷ್ಣೋಪಚಾರಗಳನ್ನು ಮಾಡಿ ಕೊಳ್ಳುತ್ತ ಜವೆ, ಗೋದಿಗಳನ್ನು ಉಣ್ಣುತ್ತ, ಮೆಣಸು ಹಾಕಿದ ಜಾಂಗಲ ಮಾಂಸದೊಡನೆ ಮದ್ಯವನ್ನು ಕುಡಿಯಬೇಕು. ||೨೧|| ಕಫಪಿತ್ತ ಪ್ರಕೃತಿಯ ವರಿಗೆ ಮಾಧ್ವೀಕ (ದ್ರಾಕ್ಷೆಯಮದ್ಯ) ಮಾಧವ (ಜೇನಿನಮದ್ಯ) ಮದ್ಯಗಳು ಹಿತಕರವು. ವಾತಪ್ರಕೃತಿಯವರಿಗೆ ಬಹಳವಾಡಿ ಗೌಡಿಕ (ಬೆಲ್ಲದಿಂದಮಾಡಿದ) ಪೈಷ್ಟಿಕ (ಹಿಟ್ಟಿನಿಂದ ಮಾಡಿದ) ತೆಳ್ಳಗಿನ ಬಹಳ ನೀರು ಹಾಕಿದ ಮದ್ಯವು ಹಿತಕರವು ||೨೨|| ಅದರಲ್ಲಿ ಅನೇಕ ಗುಣಗಳಿದ್ದು ಪುಷ್ಟಿ ಮುಂತಾದ ಅನೇಕ ಕರ್ಮಗಳನ್ನು ಆ ಮದವು ಉಂಟುಮಾಡುತ್ತದೆ. ಹಣವುಳ್ಳವರು ಮತ್ತು

ಹಣವನ್ನು ಗಳಿಸುವವರು ॥ ೨೩ ॥ ತಮ್ಮ ಸಂಪತ್ತಿಗನುಗುಣವಾಗಿ ಯೋಗ್ಯ ವಾದ ಮದ್ಯವನ್ನು ಅಲ್ಪಪ್ರಮಾಣದಿಂದ ಕುಡಿದರೆ ಹಿತವಾಗುವದು. ಮದ್ಯವು ಗುಣ ಮತ್ತು ದೋಷ ಇವೆರಡರಿಂದಲೂ ಕೂಡಿರುತ್ತದೆ. ॥ ೨೪ ॥ ವಿಧಿಯಂತ ತಕ್ಕ ಪ್ರಮಾಣದಲ್ಲಿ ಯೋಗ್ಯವೇಳೆಯಲ್ಲಿ ಹಿತಕರವಾದ ಅನ್ನದೊಡನೆ ತನ್ನ ಶಕ್ತಿಯಂತೆ ಆನಂದದಿಂದ ಮದ್ಯವನ್ನು ಕುಡಿಯುವವನಿಗೆ ಅದು ಅಮೃತದಂತೆ ಆಗಿದೆ. ॥ ೨೫ ॥ ದಿನಾಲು ವ್ಯಾಯಾಮ ಮಾಡುವ ರುಕ್ಷ ಮನುಷ್ಯನು ಕುಡಿಯುವ ಕಾಲಕ್ಕೆ ಎಂಥದು ಸಿಗುವದೋ ಅಂಥದನ್ನೇ ಕುಡಿದರೆ ಅವನಿಗೆ ಅದು ವಿಷವಾಗುವದು. ॥ ೨೬ ॥

ಮದ್ಯವು ಮದವನ್ನುಂಟುಮಾಡುವ ರೀತಿಯನ್ನು ಹೇಳುತ್ತಾರೆ—

**ಮದ್ಯಂ ಹೃದಯಮಾವಿಶ್ಯ ಸ್ವಗುಣೈರೋಜಸೋ ಗುಣಾನ್ ॥**
**ದಶಭಿರ್ದಶ ಸಂಕ್ಷೋಭ್ಯ ಚೇತೋ ನಯತಿ ವಿಕ್ರಿಯಾಮ್ ॥ ೨೭ ॥**

**ಲಘೂಷ್ಣತೀಕ್ಷ್ಣಸೂಕ್ಷ್ಮಾಮ್ಲವ್ಯವಾಯ್ಯಾಶುಗಮೇವ ಚ ॥**
**ರೂಕ್ಷಂ ವಿಕಾಸಿ ವಿಶದಂ ಮದ್ಯಂ ದಶಗುಣಂ ಸ್ಮೃತಮ್ ॥ ೨೮ ॥**

**ಗುರು ಶೀತಂ ಮೃದು ಸ್ನಿಗ್ಧಂ ಮಧುರಂ ಬಹಲಂ ಸ್ಥಿರಮ್ ॥**
**ಪ್ರಸನ್ನಂ ಪಿಚ್ಛಿಲಂ ಶ್ಲಕ್ಷ್ಣಮೋಜೋ ದಶಗುಣಂ ಸ್ಮೃತಮ್ ॥ ೨೯ ॥**
**ಗೌರವಂ ಲಾಘವಾತ್ ಶೈತ್ಯಮೌಷ್ಣ್ಯಾದಮ್ಲಸ್ವಭಾವತಃ ॥**
**ಮಾಧುರ್ಯಂ ಮಾರ್ದವಂ ತೈಕ್ಷ್ಣ್ಯಾತ್ ಪ್ರಸಾದಂ ಚಾಶು ಭಾವನಾತ್ ॥ ೩೦ ॥**

**ರೌಕ್ಷ್ಯಾತ್ ಸ್ನೇಹಂ ವ್ಯವಾಯಿತ್ವಾತ್ ಸ್ಥಿರತ್ವಂ ಶ್ಲಕ್ಷ್ಣತಾಮಪಿ ॥**
**ವಿಕಾಸಿಭಾವಾತ್ ಪೈಚ್ಛಿಲ್ಯಂ ವೈಶದ್ಯಾತ್ ಸಾಂದ್ರತಾಂ ತಥಾ ॥ ೩೧ ॥**
**ಸೌಕ್ಷ್ಮ್ಯಾನ್ಮದ್ಯಂ ನಿಹಂತ್ಯೇವಮೋಜಸಃ ಸ್ವಗುಣೈರ್ಗುಣಾನ್ ॥**
**ಸತ್ವಂ ತದಾಶ್ರಯಂ ಚಾಶು ಸಂಕ್ಷೋಭ್ಯ ಕುರುತೇ ಮದಮ್ ॥ ೩೨ ॥**

**ರಸವಾತಾದಿಮಾರ್ಗಾಣಾಂ ಸತ್ವಬುದ್ಧೀಂದ್ರಿಯಾತ್ಮನಾಮ್ ॥**
**ಪ್ರಧಾನಸ್ಯೌಜಸಶ್ಚೈವ ಹೃದಯಂ ಸ್ಥಾನಮುಚ್ಯತೇ ॥ ೩೩ ॥**

**ಅತಿಪೀತೇನ ಮದ್ಯೇನ ವಿಹತೇನೌಜಸಾ ಚ ತತ್ ॥**
**ಹೃದಯಂ ವಿಕೃತಿಂ ಯಾತಿ ತತ್ರಸ್ಥಾ ಯೇ ಚ ಧಾತವಃ ॥ ೩೪ ॥**

**ಅರ್ಥ—** ಮದ್ಯವು ಹೃದಯವನ್ನು ಸೇರಿ ತನ್ನ ಹತ್ತು ಗುಣಗಳಿಂದ ಓಜಸ್ಸಿನ ಹತ್ತು ಗುಣಗಳನ್ನು ಹೊಡೆದು ಮನಸ್ಸನ್ನು ವಿಕೃತಮಾಡುತ್ತದೆ. || ೨೭ || ಲಘುತ್ವ, ಉಷ್ಣತ್ವ, ತೀಕ್ಷ್ಣತ್ವ, ಸೂಕ್ಷ್ಮತ್ವ, ಆಮ್ಲತ್ವ, ವ್ಯವಾಯ, ಆಶುಗತ್ವ (ತೀವ್ರ ಹೋಗುವದು) ರುಕ್ಷತ್ವ, ವಿಕಾಸಿತ್ವ, (ವ್ಯಾಪಕತ್ವ) ವಿಶದತ್ವ, ಇವು ೧೦ ಮದ್ಯದ ಗುಣಗಳು. || ೨೮ || ಗುರುತ್ವ, ಶೀತತ್ವ, ಮೃದುತ್ವ, ಸ್ನಿಗ್ಧತ್ವ, ಮಾಧುರ್ಯ, ಬಾಹುಲ್ಯ, (ಘನತ್ವ) ಸ್ಥೈರ್ಯ, ಪ್ರಸಾದ, ಪೈಚ್ಛಿಲ್ಯ, ಶ್ಲಕ್ಷ್ಣತೆ ಇವು ಓಜದ ೧೦ ಗುಣಗಳು. || ೨೯ || ಲಘುತ್ವದಿಂದ ಗುರುತ್ವ ವನ್ನೂ ಉಷ್ಣತ್ವದಿಂದ ಶೈತ್ಯವನ್ನೂ ಆಮ್ಲದಿಂದ ಮಾಧುರ್ಯವನ್ನೂ ತೀಕ್ಷ್ಣತ್ವದಿಂದ ಮೃದುತ್ವವನ್ನೂ ತೀವ್ರಗಮನದಿಂದ ಪ್ರಸಾದವನ್ನೂ || ೩೦ || ರುಕ್ಷತೆಯಿಂದ ಸ್ನೇಹವನ್ನೂ ವ್ಯವಾಯ ಗುಣದಿಂದ ಸ್ಥೈರ್ಯವನ್ನೂ ವಿಕಾಸಿ ಗುಣದಿಂದ ಶ್ಲಕ್ಷ್ಣತೆಯನ್ನೂ, ವೈಶದ್ಯದಿಂದ ಪೈಚ್ಛಿಲ್ಯವನ್ನೂ, ಸೂಕ್ಷ್ಮಗುಣ ದಿಂದ ಸಾಂದ್ರತೆಯನ್ನೂ || ೩೧ || ಹೀಗೆ ಓಜಸ್ಸಿನ ೧೦ ಗುಣಗಳನ್ನು ಮದ್ಯದ ೧೦ ಗುಣಗಳು ಹೊಡೆದುಹಾಕಿ ಸತ್ವವನ್ನೂ ಅದರ ಆಶ್ರಯವಾದ ಮನಸ್ಸನ್ನೂ ಕ್ಷೋಭಿಸಿ, ಮದವನ್ನುಂಟುಮಾಡುತ್ತದೆ. || ೩೨ || ಹೃದಯವು ಸತ್ವ ಬುದ್ಧಿ ಇಂದ್ರಿಯಗಳ, ರಸವಾತಾದಿ ಮಾರ್ಗಗಳ ಮತ್ತು ಮುಖ್ಯವಾದ ಓಜಸ್ಸಿನ ಸ್ಥಾನವಾಗಿರುವದು. || ೩೩ || ಬಹಳ ಮದ್ಯ ಕುಡಿಯುವದರಿಂದ ಓಜಸ್ಸು ನಷ್ಟವಾಗಿ ಹೃದಯವೂ, ಅದರಲ್ಲಿಯ ಧಾತುಗಳೂ ವಿಕೃತಿ ಯನ್ನು ಹೊಂದುತ್ತವೆ.

ಮದದ ಭೇದ ಅವುಗಳ ಲಕ್ಷಣ ಮತ್ತು ದೋಷಗಳನ್ನು ಹೇಳುತ್ತಾರೆ—

**ಓಜಸ್ಯವಿಹತೇ ಪೂರ್ವೋ ಹೃದಿ ಚ ಪ್ರತಿಬೋಧಿತೇ ||**
**ಮಧ್ಯಮೋ ವಿಹತೇಽಲ್ಪೇ ತು ವಿಹತೇ ತೂತ್ತರೋ ಮದಃ || ೩೪ ||**

**ನೈವಂ ವಿಘಾತಂ ಕುರುತೇ ಮದ್ಯಂ ಪೈಷ್ಟಿಕಮೋಜಸಃ ||**
**ವಿಕಾಸಿರೂಕ್ಷವಿಶದಾ ಗುಣಾಸ್ತತ್ರ ಹಿ ನೋಲ್ಬಣಾಃ || ೩೬ ||**

**ಹೃದಿ ಮದ್ಯಗುಣಾವಿಷ್ಟೇ ಹರ್ಷಸ್ತರ್ಷೋ ರತಿಃ ಸುಖಮ್ ||**
**ವಿಕಾರಾಶ್ಚ ಯಥಾಸತ್ವಂ ಚಿತ್ರಾ ರಾಜಸತಾಮಸಾಃ || ೩೭ ||**

**ಜಾಯಂತೇ ಮೋಹನಿದ್ರಾಂತಾ ಮದ್ಯಸ್ಯಾತಿನಿಷೇವಣಾತ್ ||**
**ಸಮದ್ಯವಿಭ್ರಮೋ ನಾಮ್ನಾ ಮದ ಇತ್ಯಭಿಧೀಯತೇ || ೩೮ ||**

ಪೀಯಮಾನಸ್ಯ ಮದ್ಯಸ್ಯ ವಿಜ್ಞಾತವ್ಯಾಸ್ತ್ರಯೋ ಮದಾಃ ||
ಪ್ರಥಮೋ ಮಧ್ಯಮೋಽನ್ತ್ಯಶ್ಚ ಲಕ್ಷಣೈಸ್ತಾನ್ ಪ್ರಚಕ್ಷ್ಮಹೇ ||೩೯ ||
ಪ್ರಹರ್ಷಣಃ ಪ್ರೀತಿಕರಃ ಪಾನಾನ್ನಗುಣದರ್ಶಕಃ ||
ವಾದ್ಯಗೀತಪ್ರಭಾಷ್ಯಾಣಾಂ ಕಥಾನಾಂ ಚ ಪ್ರವರ್ತಕಃ || ೪೦ ||
ನ ಚ ಬುದ್ಧಿಸ್ಮೃತಿಹರೋ ವಿಷಯೇಷು ನ ಚಾಕ್ಷಮಃ ||
ಸುಖಂ ನಿದ್ರಾಪ್ರಬೋಧಶ್ಚ ಪ್ರಥಮಃ ಸುಖದೋ ಮದಃ || ೪೧ ||
ಮುಹುಃ ಸ್ಮೃತಿರ್ಮುಹುರ್ಮೋಹೋ ವ್ಯಕ್ತಾಽವ್ಯಕ್ತಾ ಚ ವಾಙ್ ಮುಹುಃ ||
ಯುಕ್ತಾಯುಕ್ತಪ್ರಲಾಪಶ್ಚ ಪ್ರಚಲಾಯನಮೇವ ಚ || ೪೨ ||
ಸ್ಥಾನಪಾನಾನ್ನಸಾಂಕಥ್ಯಯೋಜನಾಃ ಸವಿಪರ್ಯಯಾಃ ||
ಲಿಂಗಾನ್ಯೇತಾನಿ ಜಾನೀಯಾದಾವಿಷ್ಟೇ ಮಧ್ಯಮೇ ಮದೇ || ೪೩ ||
ಮಧ್ಯಮಂ ಮದಮುತ್ಕ್ರಮ್ಯ ಮದಮಾಪ್ರಾಪ್ಯ ಚೋತ್ತರಮ್ ||
ನ ಕಿಂಚಿನ್ನಾಶುಭಂ ಕುರ್ಯುರ್ನರಾ ರಾಜಸತಾಮಸಾಃ || ೪೪ ||
ಕೋ ಮದಂ ತಾದೃಶಂ ವಿದ್ವಾನುನ್ಮಾದಮಿವ ದಾರುಣಮ್ ||
ಗಚ್ಛೇದಧ್ವಾನಮಾಸನ್ನಂ ಬಹುದೋಷಮಿವಾಧ್ವಗಃ || ೪೫ ||
ತೃತೀಯಂ ತು ಮದಂ ಪ್ರಾಪ್ಯ ಭಗ್ನದಾರ್ವಿವ ನಿಷ್ಕ್ರಿಯಃ ||
ಮದಮೋಹಾವೃತಮನಾ ಜೀವನ್ನಪಿ ಮೃತೈಃ ಸಮಃ || ೪೬ ||
ರಮಣೀಯಾನ್ ಸವಿಷಯಾನ್ ನ ವೇತ್ತಿ ನ ಸುಹೃಜ್ಜನಮ್ ||
ಯದರ್ಥಂ ಪೀಯತೇ ಮದ್ಯಂ ರತಿಂ ತಾಂಚ ನ ವಿಂದತಿ || ೪೭ ||
ಕಾರ್ಯಾಕಾರ್ಯಂ ಸುಖಂ ದುಃಖಂ ಯಚ್ಚ ಲೋಕೇಹಿತಾಹಿತಮ್ ||
ಯದವಸ್ಥೋ ನ ಜಾನಾತಿ ಕೋಽವಸ್ಥಾಂ ತಾಂ ವ್ರಜೇದ್ ಬುಧಃ || ೪೮ ||
ಸ ದೂಷ್ಯಃ ಸರ್ವಭೂತಾನಾಂ ನಿಂದಶ್ಚಾಗ್ರಾಹ್ಯ ಏವ ಚ ||
ವ್ಯಸನಿತ್ವಾದುದರ್ಕೇ ಚ ಸ ದುಃಖಂ ವ್ಯಾಧಿಮಶ್ನುತೇ || ೪೯ ||
ಪ್ರೇತ್ಯ ಚೇಹ ಚ ಯಚ್ಛ್ರೇಯಃ ಶ್ರೇಯೋ ಮೋಕ್ಷೇ ಚ ಯತ್ ಪರಮ್ ||
ಮನಃ ಸಮಾಧೌ ತತ್ ಸರ್ವಮಾಯತ್ತಂ ಸರ್ವದೇಹಿನಾಮ್ || ೫೦ ||

ಮದ್ಯೇನ ಮನಸಶ್ಚಾಸ್ಯ ಸಂಕ್ಷೋಭಃ ಕ್ರಿಯತೇ ಮಹಾನ್ ||
ಮಹಾಮಾರುತವೇಗೇನ ತಟಸ್ಥಸ್ಯೇವ ಶಾಖಿನಃ || ೫೧ ||

ಮದ್ಯಪ್ರಸಂಗಂ ತಂ ಚಾಜ್ಞಾ ಮಹಾದೋಷಂ ಮಹಾಗದಂ ||
ಸುಖಮಿತ್ಯಾಧಿಗಚ್ಛಂತಿ ರಜೋಮೋಹಪರಾಜಿತಾಃ || ೫೨ ||

ಮದ್ಯೋಪಹತವಿಜ್ಞಾನಾದ್ ವಿಮುಕ್ತಾಃ ಸಾತ್ವಿಕೈರ್ಗುಣೈಃ ||
ಶ್ರೇಯೋಭಿರ್ವಿಪ್ರಯುಜ್ಯಂತೇ ಮದಾಂಧಾ ಮದ್ಯಲಾಲಸಾಃ || ೫೩ ||

ಮದ್ಯೇ ಮೋಹೋ ಭಯಂ ಶೋಕಃ ಕ್ರೋಧೋ ಮೃತ್ಯುಶ್ಚ ಸಂಶ್ರಿತಃ ||
ಸೋನ್ಮಾದಮದಮೂರ್ಚ್ಛಾದ್ಯಾಃ ಸಾಪಸ್ಮಾರಾಪತಾನಕಾಃ || ೫೪ ||

ಯತ್ರೈಕಃ ಸ್ಮೃತಿವಿಭ್ರಂಶಸ್ತತ್ರ ಸರ್ವಮಸಾಧುವತ್ ||
ಇತ್ಯೇವಂ ಮದ್ಯದೋಷಜ್ಞಾ ಮದ್ಯಂ ನಿಂದಂತಿ ತತ್ವತಃ || ೫೫ ||

**ಅರ್ಥ—** ಓಜಸ್ಸು ನಾಶವಾಗದೆ ಮನಸ್ಸು ಮಾತ್ರ ಎಚ್ಚರಾಗಲು ಮೊದಲನೇ ಮದವೂ, ಓಜಸ್ಸು ಸ್ವಲ್ಪ ನಷ್ಟವಾಗಲು ಎರಡನೇ ಮದವೂ, ಓಜಸ್ಸು ಪೂರ್ಣ ನಷ್ಟವಾಗಲು ಮೂರನೇ ಮದವೂ ಉಂಟಾಗುತ್ತದೆ. ||೩೫|| ಹಿಟ್ಟಿನಿಂದ ಮಾಡಿದ ಮದ್ಯದಲ್ಲಿ ವಿಕಾಸಿ, ರುಕ್ಷ, ವಿಶದ ಗುಣಗಳು ಬಹಳ ವಿರುವದಿಲ್ಲವಾದ್ದರಿಂದ ಅದು ಓಜಸ್ಸಿನ ನಾಶವನ್ನು ಅಷ್ಟು ಮಾಡುವದಿಲ್ಲ. || ೩೬ || ಮದ್ಯದ ಗುಣಗಳು ಹೃದಯವನ್ನು ಸೇರಲು, ಹರ್ಷ, ನೀರಡಿಕೆ, ಆನಂದ ಸುಖಗಳೂ ಅವನ ಮನಸ್ಸಿನ ಅನುಗುಣವಾಗಿ ತರತರದ ರಾಜಸ, ತಾಮಸ ವಿಕಾರಗಳೂ ಉಂಟಾಗುವವು. || ೩೭ || ಮದ್ಯದ ಅತಿಸೇವನೆಯಿಂದ ಮೋಹನಿದ್ರೆಯುಂಟಾಗುತ್ತದೆ. ಈ ಮದ್ಯವಿಭ್ರಮವು ಮದವೆಂದು ಕರೆಯಲ್ಪಡುವದು. || ೩೮ || ಕುಡಿಯುವ ಮದ್ಯದ ಪ್ರಥಮ, ಮಧ್ಯಮ, ಅಂತ್ಯ ಎಂದು ಮೂರು ಮದಗಳಿರುತ್ತವೆ. ಅವುಗಳ ಲಕ್ಷಣಗಳನ್ನು ಹೇಳುವೆವು. || ೩೯ || ಮೊದಲನೇ ಮದದಲ್ಲಿ ಹರ್ಷ, ಆನಂದಗಳು ಇರುವವು. ಅನ್ನಪಾನಗಳ ರುಚಿಯು ತಿಳಿಯುವದು. ವಾದ್ಯ, ಗೀತ ಮಾತುಕತೆಗಳನ್ನು ನಡೆಸುವನು. || ೪೦ || ಬುದ್ಧಿ ಮತ್ತು ಸ್ಮೃತಿ ವಿಷಗ್ರಹಣ ಶಕ್ತಿಗಳು ನಷ್ಟವಾಗಿರುವದಿಲ್ಲ. ಸರಿಯಾದ ಕಾಲಕ್ಕೆ ಸುಖದಿಂದ ನಿದ್ರೆ ಎಚ್ಚರಿಕೆಗಳುಂಟಾಗುವವು. ಆದ್ದರಿಂದ ಈ ಮೊದಲನೇ ಮದವು ಸುಖಕರವಿರುತ್ತದೆ. || ೪೧ || ಒಮ್ಮೆ

ಸ್ಮೃತಿ, ಒಮ್ಮೆ ವಿಸ್ಮೃತಿ, ಒಮ್ಮೆ ಸ್ಪಷ್ಟ, ಒಮ್ಮೆ ಅಸ್ಪಷ್ಟ ಮಾತು, ಒಮ್ಮೆ ಯುಕ್ತ ಒಮ್ಮೆ ಅಯುಕ್ತ ಬಡಬಡಿಸೋಣ, ತೂಗಾಡೋಣ, ॥ ೪೨ ॥ ಸ್ಥಾನ ಅನ್ನಪಾನ ಮಾತುಗಳಲ್ಲಿಯೂ ಇದೇ ರೀತಿಯಾಗಿ ಅವ್ಯವಸ್ಥೆ ಈ ಲಕ್ಷಣಗಳು ಮಧ್ಯಮ ಮದದಲ್ಲಿ ಇರುತ್ತವೆಯೆಂದು ತಿಳಿಯಬೇಕು. ॥ ೪೩ ॥ ಮಧ್ಯಮ ಮಧ್ಯಮ ಮದವನ್ನು ದಾಟಿ, ಇನ್ನೂ ಮುಂದಿನ ಮದವನ್ನು ಹೊಂದದ ರಾಜಸ-ತಾಮಸ ಜನರು ಇಂಥ ಕೆಟ್ಟ ಕೆಲಸವನ್ನು ಮಾಡರು; ಎಂದು ಹೇಳಲಾಗದು ॥ ೪೪ ॥ ಉನ್ಮಾದದಂತೆ ಭಯಂಕರವಾದ ಇಂಥ ದುಷ್ಪರಿಣಾಮಿ ಮದವನ್ನು ಯಾವ ಜಾಣನು ಅಪಾಯಕರವಾದ ಕೆಟ್ಟ ಮಾರ್ಗವನ್ನು ಹೊಂದಿದ ದಾರಿಕಾರರಂತೆ ಹೊಂದಲು ಇಚ್ಛಿಸುವನು ? ॥ ೪೫ ॥ ಮೂರನೇ ಮದದಲ್ಲಿ ಮನುಜನು ಮುರಿದ ಕಟ್ಟಿಗೆಯಂತೆ ಯಾವ ಕೆಲಸವನ್ನೂ ಮಾಡಲಸಮರ್ಥನಾಗುವನು. ಮನಸ್ಸು ಮದಮೋಹದಿಂದ ಆವೃತವಾಗುವದರಿಂದ ಜೀವಂತನಿದ್ದರೂ ಸತ್ತಂತೆ ಆಗುವನು. ॥ ೪೬ ॥ ಆನಂದಕರ ವಿಷಯಗಳನ್ನೂ ಗೆಳೆಯರನ್ನೂ ತಿಳಿಯನು. ಯಾವ ಆನಂದಕ್ಕಾಗಿ ಮದ್ಯವನ್ನು ಕುಡಿಯುವನೋ ಅದೇ ಅವನಿಗುಂಟಾಗಲಾರದು. ॥ ೪೭ ॥ ಯಾವ ಅವಸ್ಥೆಯಲ್ಲಿ ಈ ಲೋಕದಲ್ಲಿ ಕಾರ್ಯ, ಅಕಾರ್ಯ, ಸುಖ, ದುಃಖ, ಹಿತ, ಅಹಿತ ತಿಳಿಯದಂತೆ ಆಗುವವೋ ಅಂಥ ಅವಸ್ಥೆಯನ್ನು ಯಾವ ಜಾಣನು ಹೊಂದಬಯಸುವನು ? ॥ ೪೮ ॥ ಅವನು ಎಲ್ಲರ ದೂಷಣ, ನಿಂದೆಗಳಿಗೆ ಪಾತ್ರನಾಗುವನಲ್ಲದೆ ಯಾರೂ ಅವನನ್ನು ಮುಂದೆ ಕರೆಯರು. ಈ ವ್ಯಸನದಿಂದ ಪರಿಣಾಮದಲ್ಲಿ ದುಃಖಕರ ಬೇನೆಯನ್ನು ಹೊಂದುವನು. ॥ ೪೯ ॥ ಸ್ವರ್ಗ, ಮರ್ತ್ಯ ಲೋಕಗಳಲ್ಲಿ ಯಾವ ಕಲ್ಯಾಣವಿರುವದೋ; ಮೋಕ್ಷದಲ್ಲಿ ಯಾವ ದೊಡ್ಡ ಕಲ್ಯಾಣವಿರುವದೋ; ಅದೆಲ್ಲ ಎಲ್ಲ ಪ್ರಾಣಿಗಳಿಗೆ ಮನಸ್ಸಮಾಧಾನದಲ್ಲಿ ದೊರಕುವದು. ॥ ೫೦ ॥ ಬಿರುಗಾಳಿಯ ವೇಗದಿಂದ ದಂಡೆಯಲ್ಲಿಯ ಗಿಡಕ್ಕೆ ಉಂಟಾಗುವಂತೆ ಮದ್ಯದಿಂದ ಮನಸ್ಸಿಗೆ ಬಹಳ ಕ್ಷೋಭೆಯಾಗುತ್ತದೆ. ॥ ೫೧ ॥ ರಜೋಗುಣದಿಂದ ಮೂಢರಾದ ಅಜ್ಞರು ಬಹಳ ಅಪಾಯ ಮತ್ತು ರೋಗಗಳುಳ್ಳ ಈ ಮದ್ಯದ ಆಸಕ್ತಿಯನ್ನು ಸುಖವೆಂದು ಬಗೆಯುವರು. ॥ ೫೨ ॥ ಮದ್ಯಲೋಲುಪರಾದ ಮದಾಂಧರ ಜ್ಞಾನವು ಮದ್ಯದಿಂದ ನಷ್ಟವಾಗಿ ಸಾತ್ವಿಕ ಗುಣಗಳು ಹೋಗುವದರಿಂದ ಅವರ ಕಲ್ಯಾಣವಾಗದು. ॥ ೫೩ ॥ ಮದ್ಯದಲ್ಲಿ ಮೋಹ, ಭಯ, ಶೋಕ, ಕ್ರೋಧ, ಮೃತ್ಯು, ಉನ್ಮಾದ, ಮದ, ಮೂರ್ಛೆ, ಅಪಸ್ಮಾರ, ಅಪ

ತಾಸಕ ಮುಂತಾದವುಗಳು ಇರುತ್ತವೆ. ॥ ೫೪ ॥ ಎಲ್ಲಿ ಒಂದು ಸ್ಮೃತಿಭ್ರಂಶ ವಿರುವದೋ, ಅಲ್ಲಿ ಏನಿದ್ದರೂ ಅದೆಲ್ಲ ಕೆಡಕು ಇದ್ದಂತೆಯೇ ಎಂದು ಮದ್ಯ ದೋಷ ಬಲ್ಲವರು ತಾತ್ವಿಕವಾಗಿ ಮದ್ಯವನ್ನು ನಿಂದಿಸುತ್ತಾರೆ. ॥ ೫೫ ॥

ಮದ್ಯದ ಸ್ತುತಿಯನ್ನು ಮಾಡುತ್ತಾರೆ—

ಸತ್ಯಮೇತೇ ಮಹಾದೋಷಾ ಮದ್ಯಸ್ಯೋಕ್ತಾ ನ ಸಂಶಯಃ ॥
ಅಹಿತಸ್ಯಾತಿಮಾತ್ರಸ್ಯ ಪೀತಸ್ಯ ವಿಧಿವರ್ಜಿತಮ್ ॥ ॥ ೫೬ ॥

ಕಿಂತು ಮದ್ಯಂ ಸ್ವಭಾವೇನ ಯಥೈವಾನ್ನಂ ತಥಾ ಸ್ಮೃತಮ್ ॥
ಅಯುಕ್ತಿಯುಕ್ತಂ ರೋಗಾಯ ಯುಕ್ತಿಯುಕ್ತಂ ಯಥಾಮೃತಮ್ ॥ ೫೭ ॥

ಪ್ರಾಣಾಃ ಪ್ರಾಣಭೃತಾಮನ್ನಂ ತದಯುಕ್ತ್ಯಾ ನಿಹಂತ್ಯಸೂನ್ ॥
ವಿಷಂ ಪ್ರಾಣಹರಂ ತಚ್ಚ ಯುಕ್ತಿಯುಕ್ತಂ ರಸಾಯನಮ್ ॥ ೫೮ ॥

ಹರ್ಷಮೂರ್ಜೋ ಮುದಂ ಪುಷ್ಟಿಮಾರೋಗ್ಯಂ ಪೌರುಷಂ ಬಲಮ್ ॥
ಯುಕ್ತ್ಯಾ ಪೀತಂ ಕರೋತ್ಯಾಶು ಮದ್ಯಂ ಮದಸುಖಪ್ರದಮ್ ॥ ೫೯ ॥

ರೋಚನಂ ದೀಪನಂ ಹೃದ್ಯಂ ಸ್ವರವರ್ಣಪ್ರಸಾದನಮ್ ॥
ಪ್ರೀಣನಂ ಬೃಂಹಣಂ ಬಲ್ಯಂ ಭಯಶೋಕಶ್ರಮಾಪಹಮ್ ॥ ೬೦ ॥

ಸ್ವಾಪನಂ ನಷ್ಟನಿದ್ರಾಣಾಂ ಮೂಕಾನಾಮ್ ವಾಗ್ವಿಶೋಧನಮ್ ॥
ಬೋಧನಂ ಚಾತಿನಿದ್ರಾಣಾಂ ವಿಬದ್ಧಾನಾಂ ವಿಬಂಧನುತ್ ॥ ೬೧ ॥

ವಧಬಂಧಪರಿಕ್ಲೇಶದುಃಖಾನಾಂ ಚಾಪ್ಯಬೋಧನಮ್ ॥
ಮದ್ಯೋತ್ಥಾನಾಂಚ ರೋಗಾಣಾಂ ಮದ್ಯಮೇವ ಪ್ರಬಾಧಕಮ್ ॥ ೬೨ ॥

ರತಿರ್ವಿಷಯಸಂಯೋಗೇ ಪ್ರೀತಿಸಂಭೋಗವರ್ಧನಮ್ ॥
ಅಪಿ ಪ್ರವಯಸಾಂ ಮದ್ಯಮುತ್ಸವಾಮೋದಕಾರಕಮ್ ॥ ೬೩ ॥

ಪಂಚಸ್ವರ್ಥೇಷು ಕಾಮ್ಯೇಷು ಯಾ ರತಿಃ ಪ್ರಥಮೋ ಮದೇ ॥
ಯೂನಾಂ ವಾ ಸ್ಥವಿರಾಣಾಂ ವಾ ತಸ್ಯ ನಾಸ್ತ್ಯುಪಮಾ ಭುವಿ ॥ ೬೪ ॥

ಬಹುದುಃಖಕ್ಷತಸ್ಯಾಸ್ಯ ಶೋಕೈರುಪಹತಸ್ಯ ಚ ॥
ವಿಶ್ರಾಮೋ ಜೀವಲೋಕಸ್ಯ ಮದ್ಯಂ ಯುಕ್ತ್ಯಾ ನಿಷೇವಿತಮ್ ॥ ೬೫ ॥

**ಅರ್ಥ—** ನಿಜವಾಗಿ ಹಿಂದೆ ಹೇಳಿದ ದೊಡ್ಡ ದುರ್ಗುಣಗಳು ಮದ್ಯದಲ್ಲಿ ಇರುತ್ತವೆಯೆಂಬದರಲ್ಲಿ ಸಂಶಯವಿಲ್ಲ. ಆದರೆ ಅವು ಕೆಟ್ಟಮದ್ಯ, ಅತಿಮದ್ಯ, ವಿಧಿಬಿಟ್ಟು ಕುಡಿದ ಮದ್ಯಗಳ ಪಾನದಿಂದುಂಟಾಗುತ್ತವೆ. || ೫೬ || ಸ್ವಭಾವತಃ ಮದ್ಯವು ಹೇಗೆ ಅನ್ನವೋ ಹಾಗೇ ಎಂದು ತಿಳಿಯಬೇಕು. ವಿಧಿಯನ್ನು ಬಿಟ್ಟು ಕುಡಿದರೆ ರೋಗವನ್ನುಂಟುಮಾಡುವದು. ಯುಕ್ತಿಯಿಂದ ಸೇವಿಸಿದರೆ ಅಮೃತವಾಗುವದು. || ೫೭ || ಪ್ರಾಣಿಗಳಿಗೆ ಅನ್ನವು ಪ್ರಾಣವಾಗಿರುವದು. ಆದರೆ ಅದನ್ನು ಯುಕ್ತಿಬಿಟ್ಟು ಸೇವಿಸಿದರೆ ಪ್ರಾಣನಾಶಕವಾಗುವದು. ಆದರೆ ಅದನ್ನು ಯುಕ್ತಿಯಿಂದ ಸೇವಿಸಿದರೆ ರಸಾಯನವಾಗುವದು. || ೫೮ || ಯುಕ್ತಿಯಿಂದ ಮದ್ಯವನ್ನು ಕುಡಿದರೆ ಅದು ಹರ್ಷ, ಊರ್ಜ, (ಉತ್ಸಾಹ) ಆನಂದ, ಪುಷ್ಟಿ, ಆರೋಗ್ಯ, ಶುಕ್ರ, ಬಲ ಮತ್ತು ಸುಖಕಾರಕವಾದ ಮದವನ್ನು ತೀವ್ರವಾಗಿ ಉಂಟುಮಾಡುವದು. || ೫೯ || ರುಚಿಯನ್ನೂ ಅಗ್ನಿದೀಪವನ್ನೂ, ಹೃದಯಕ್ಕೆ ಬಲವನ್ನೂ, ಸ್ವರ, ವರ್ಣಗಳ ಶುದ್ಧಿಯನ್ನೂ, ಸುಖ, ಪುಷ್ಟಿ, ಬಲಗಳನ್ನೂ ಉಂಟುಮಾಡುವದು. ಭ್ರಮ, ಶೋಕ, ಶ್ರಮಗಳನ್ನು ಕಳೆಯುವದು. || ೬೦ || ನಿದ್ರೆ ಬಾರದವರಿಗೆ ನಿದ್ರೆಯನ್ನು ತರುವದು. ಮೂಕರ ವಾಣಿಯನ್ನು ಶುದ್ಧಮಾಡುವದು. ಅರೆನಿದ್ರೆಯನ್ನೂ ಮಲಬಂಧವನ್ನೂ ನಾಶಮಾಡುವದು || ೬೧ || ಇದರಿಂದ ಬಡಿಯೋಣ, ಕಟ್ಟೋಣಗಳಿಂದುಂಟಾದ ಕ್ಲೇಶ ಮತ್ತು ಬೇರೆ ದುಃಖಗಳು ತಿಳಿಯವು. ಮದ್ಯದಿಂದುಂಟಾದ ರೋಗಗಳನ್ನು ಮದ್ಯವೇ ಕಳೆಯುವದು. || ೬೨ || ಶಬ್ದಾದಿ ವಿಷಯಗಳ ಸಂಯೋಗವಾಗಲು ವೃದ್ಧರಿಗೂ ಕೂಡ ಮದ್ಯವು ಉತ್ಸಾಹ ಆನಂದಗಳನ್ನುಂಟುಮಾಡುವದು. || ೬೩ || ತರುಣರಿಗೆ ಆಗಲಿ, ವೃದ್ಧರಿಗೆ ಆಗಲಿ ಬೇಕಾದ ಮೊದಲನೆ ಮದದಲ್ಲಿ ಉಂಟಾಗುವ ಐದು ವಿಷಯಗಳಲ್ಲಿಯ ಆನಂದಕ್ಕೆ ಜಗತ್ತಿನಲ್ಲಿ ಉಪಮೆಯೇ ಇಲ್ಲ. ||೬೪|| ಯುಕ್ತಿಯಿಂದ ಸೇವಿಸಿದ ಮದ್ಯವು ಬಹಳ ದುಃಖದಿಂದ ಪೀಡಿತವಾದ ಮತ್ತುಕ್ಲೇಶದಿಂದ ಆಕ್ರಾಂತವಾದಪ್ರಾಣಿವರ್ಗಕ್ಕೆ ವಿಶ್ರಾಂತಿಸ್ಥಾಪನವಾಗಿದೆ || ೬೫ ||

**ಮದ್ಯಪಾನದ ಯುಕ್ತಿಯನ್ನು ಹೇಳುತ್ತಾರೆ—**

**ಅನ್ನಪಾನವಯೋವ್ಯಾಧಿಬಲಕಾಲತ್ರಿಕಾಣಿ ಷಟ್ ||**
**ತ್ರೀನ್ ದೋಷಾನ್ ತ್ರಿವಿಧಂ ಸತ್ವಂ ಜ್ಞಾತ್ವಾ ಮದ್ಯಂ ಪಿಬೇತ್ ಸದಾ || ೬೬||**

**ಏಷಾಂ ತ್ರಿಕಾಣಾಮುಷ್ಟಾನಾಂ ಯೋಜನಾ ಯುಕ್ತಿರಿಷ್ಯತೇ ||**
**ಮಯಾ ಯುಕ್ತ್ಯಾ ಪಿಬನ್ಮದ್ಯಂ ಮದ್ಯದೋಷೈರ್ನ ಯುಜ್ಯತೇ ||೬೭ ||**

**ಮದ್ಯಸ್ಯ ಚ ಗುಣಾನ್ ಸರ್ವಾನ್ ಯಥೋಕ್ತಾನ್ ಸಸಮಶ್ನುತೇ ॥**
**ಧರ್ಮಾರ್ಥಯೋರಪೀಡಾಯೈ ನರಃ ಸತ್ವಗುಣೋತ್ಥಿತಃ ॥ ೬೮ ॥**

**ಅರ್ಥ—** ಅನ್ನದ ಮೂರು (ವಾತ, ಪಿತ್ತ, ಕಫಕರ) ಪ್ರಕಾರಗಳನ್ನೂ ಪಾನದ ಮೂರು (ಪಾರ್ಥಿವ, ಆಪ್ಯ, ತೈಜಸ) ಪ್ರಕಾರಗಳನ್ನೂ ಮಯಸ್ಸಿನ ಮೂರು (ಬಾಲ್ಯ, ತಾರುಣ್ಯ, ವಾರ್ಧಕ್ಯ) ಪ್ರಕಾರಗಳನ್ನೂ, ಬೇನೆಯ ಮೂರು (ವಾತಜ, ಪಿತ್ತಜ, ಕಫಜ) ಪ್ರಕಾರಗಳನ್ನೂ ಬಲದ ಮೂರು (ಹೀನ, ಮಧ್ಯಮ ಉತ್ತಮ) ಪ್ರಕಾರಗಳನ್ನೂ ಕಾಲದ ಮೂರು (ಚಳಿ, ಬೇಸಿಗೆ, ಮಳೆ) ಪ್ರಕಾರಗಳನ್ನೂ ಮೂರು ದೋಷ (ವಾತ, ಪಿತ್ತ, ಕಫ) ಗಳನ್ನೂ, ಮನಸ್ಸಿನ ಮೂರು (ಸಾತ್ವಿಕ, ರಾಜಸ, ತಾಮಸ) ಪ್ರಕಾರಗಳನ್ನೂ ವಿಚಾರಿಸಿ ಯಾವಾಗಲೂ ಮದ್ಯವನ್ನು ಕುಡಿಯಬೇಕು. ॥ ೬೬ ॥ ಈ ಎಂಟು ವಸ್ತುಗಳ ಮೂರು, ಮೂರು ಪ್ರಕಾರಗಳಿಂದ ಉಂಟಾದ ೨೪ ವಿಧ ವಸ್ತುಗಳ (ಸರಿಯಾದ) ಯೋಜನೆಯೇ ಯುಕ್ತಿಯೆಂದು ಕರೆಯಲ್ಪಡುತ್ತದೆ. ಈ ಯುಕ್ತಿಯಿಂದ ಮದ್ಯವನ್ನು ಕುಡಿಯುವವನಿಗೆ ಮದ್ಯ ದೋಷಗಳು ಉಂಟಾಗವು. ॥ ೬೭ ॥ ಮತ್ತು ಹಿಂದೆ ಹೇಳಿದ ಮದ್ಯದ ಎಲ್ಲ ಲಾಭಗಳನ್ನೂ ಹೊಂದುವನು. ಅವನ ಸತ್ವ ಗುಣವು ಹೆಚ್ಚುವದು. ಧರ್ಮಾರ್ಥಗಳಿಗೆ ಬಾಧೆ ಬರದು ॥ ೬೮ ॥

ಸಾತ್ವಿಕ, ರಾಜಸ, ತಾಮಸ ಪ್ರಕೃತಿಯವರ ಮೇಲೆ ಆಗುವ ಮದ್ಯದ ಪರಿಣಾಮವನ್ನು ಹೇಳುತ್ತಾರೆ—

**ಸತ್ವಾನಿ ತು ಪ್ರಬುಧ್ಯಂತೇ ಪ್ರಾಯಶಃ ಪ್ರಥಮೇ ಮದೇ ॥**
**ದ್ವಿತೀಯೇ ವ್ಯಕ್ತತಾಂ ಯಾಂತಿ ಮಧ್ಯೇ ಚೋತ್ತರಮಧ್ಯಯೋಃ ॥೬೯॥**

**ಸತ್ವಸಂಬೋಧಕಂ ಹರ್ಷ ಮೋಹಪ್ರಕೃತಿದರ್ಶಕಮ್ ॥**
**ಹುತಾಶ ಇವ ಭೂತಾನಾಂ ಮದ್ಯಂ ತೂಭಯಕಾರಕಮ್ ॥ ೭೦ ॥**

**ಪ್ರಧಾನಾವರಮಧ್ಯಾನಾಂ ರುಕ್ಮಾಣಾಂ ವ್ಯಕ್ತಿದರ್ಶಕಃ ॥**
**ಯಥಾಗ್ನಿರೇವ ಸತ್ವಾನಾಂ ಮದ್ಯಂ ಪ್ರಕೃತಿದರ್ಶಕಮ್ ॥ ೭೧ ॥**

**ಸುಗಂಧಿಮಾಲ್ಯಗಂಧರ್ವಾ ಸುಪ್ರಣೀತಮನಾಕುಲಮ್ ॥**
**ಮಿಷ್ಟಾನ್ನಪಾನವಿಶದಂ ಸದಾ ಮಧುರಸಂಕಥಮ್ ॥ ೭೨ ॥**

**ಸುಖಪ್ರಸಾದಂ ಸುಮದಂ ಹರ್ಷಪ್ರೀತಿವಿವರ್ಧನಮ್ ॥**
**ಸ್ವಂ ತಂ ಸಾತ್ವಿಕಮಾಪಾನಂ ನ ಚೋತ್ತರಮದಪ್ರದಮ್ ॥ ೭೩ ॥**

ವೈಗುಣ್ಯಂ ಸಹಸಾ ಯಾಂತಿ ಮದ್ಯದೋಷೈಃ ನ ಸಾತ್ವಿಕಾಃ ||
ಸಹಸಾ ನ ಚ ಗೃಹ್ಣಾತಿ ಸುದಃ ಸತ್ವಬಲಾಧಿಕಮ್ || ೭೪ ||

ಸೌಮ್ಯಾಸೌಮ್ಯಕಥಾಪ್ರಾಯಂ ವಿಶದಾವಿಶದಂ ಕ್ಷಣೇ ||
ಚಿತ್ರಂ ರಾಜಸಮಾಪಾನಂ ಪ್ರಾಯೇಣಾಶ್ವಂ ತಮಾಕುಲಮ್ || ೭೫ ||

ಹರ್ಷಪ್ರೀತಿಕಥೋಪೇತಮದುಷ್ಟಂ ಪಾನಭೋಜನೇ ||
ಸಮ್ಮೋಹಕ್ರೋಧನಿದ್ರಾಂ ತಮಾಪಾನಂ ತಾಮಸಂ ಸ್ಮೃತಮ್ ||೭೬||

ಆಪಾನೇ ಸಾತ್ವಿಕಾನ್ ಬುಧ್ವಾ ತಥಾ ರಾಜಸತಾಮಸಾನ್ ||
ಜಹ್ಯಾತ್ ಸಹಾನ್ನೈಃ ಪೀತ್ವಾ ತು ಮದ್ಯದೋಷಾನುಪಾಶ್ನುತೇ ||೭೭||

ಸುಖಶೀಲಾಃ ಸುಸಂಭಾಷಾಃ ಸುಮುಖಾಃ ಸಮ್ಮತಾಃ ಸತಾಮ್ ||
ಕಲಾಸ್ವಬಾಹ್ಯಾಃ ವಿಶದಾ ವಿಷಯಪ್ರವಣಾಶ್ಚ ಯೇ || ೭೮ ||

ಪರಸ್ಪರವಿಧೇಯಾ ಯೇ ಯೇಷಾಮೈಕ್ಯಂ ಸುಹೃತ್ತಯಾ ||
ಪ್ರಹರ್ಷಪ್ರೀತಿಮಾಧುರ್ಯೈರಾಪಾನಂ ವರ್ಧಯಂತಿ ತೇ || ೭೯ ||

ಉತ್ಸವಾದುತ್ಸವತರಂ ಯೇಷಾಂ ಚಾನ್ಯೋಽನ್ಯದರ್ಶನಮ್ ||
ಯೇ ಸಹಾಯಾಃ ಸುಖಂ ಪಾನೇ ತೈಃ ಪಿಬನ್ ಸಹ ಮೋದತೇ ||೮೦||

ರೂಪಗಂಧರಸಸ್ಪರ್ಶೈಃ ಶಬ್ದೈಶ್ಚಾತಿಮನೋಹರೈಃ ||
ಪಿಬಂತಿ ಸುಸಹಾಯಾ ಯೇ ತೇ ವೈ ಸುಕೃತಿಭಿಃ ಸಮಾಃ || ೮೧ ||

ಪಂಚಭಿರ್ವಿಷಯೈರಿಷ್ಟೈರುಪೇತೈರ್ಮನಸಃ ಪ್ರಿಯೈಃ ||
ದೇಶೇ ಕಾಲೇ ಪಿಬೇನ್ಮದ್ಯಂ ಪ್ರಹೃಷ್ಟೇನಾಂತರಾತ್ಮನಾ || ೮೨ ||

ಸ್ಥಿರಸತ್ವಶರೀರಾಯೇ ಪೂರ್ವಾನ್ನಾ ಮದ್ಯಪಾನ್ವಯಾಃ ||
ಬಹುಮದ್ಯೋಚಿತಾ ಯೇ ಚ ಮಾದ್ಯಂತಿ ಸಹಸಾ ನ ತೇ || ೮೩ ||

ಕ್ಷುತ್ಪಿಪಾಸಾಪರೀತಾಶ್ಚ ದುರ್ಬಲಾ ವಾತಪೈತ್ತಿಕಾಃ ||
ರೂಕ್ಷಾಲ್ಪಪ್ರಮಿತಾಹಾರಾ ವಿಸ್ರಬ್ಧಾಃ ಸತ್ವದುರ್ಬಲಾಃ || ೮೪ ||

ಕ್ರೋಧಿನೋಽನುಚಿತಾಃ ಕ್ಷೀಣಾಃ ಪರಿಶ್ರಾಂತಾ ಮದಕ್ಷತಾಃ ||
ಸ್ವಲ್ಪೇನಾಪಿ ಮದಂ ಶೀಘ್ರಂ ಯಾಂತಿ ಮದ್ಯೇನ ಮಾನವಾಃ || ೮೫ ||

**ಅರ್ಥ—** ಪ್ರಥಮ ಮದದಲ್ಲಿ ಬಹಳವಾದಿ ಮನಸ್ಸುಗಳು ವ್ಯಕ್ತವಾಗುವವು. ಎರಡನೇ ಮದದಲ್ಲಿಯೂ ಕಡೆಯ ಮತ್ತು ನಡುವಿನ ಮದದ

ಮಧ್ಯದಲ್ಲಿಯೂ ಅವು ವ್ಯಕ್ತವಾಗುವವು. ||೯|| ಮದ್ಯವು ಮನಸ್ಸನ್ನು ಎಚ್ಚರಿಸುವದು. ಹರ್ಷ, ಮೋಹ, ಪ್ರಕೃತಿ ದರ್ಶನ ಎಂಬ ಎರಡೂ ಕೆಲಸಗಳನ್ನು ಬೆಂಕಿಯಂತೆ ಮಾಡುತ್ತದೆ. ||೨೦|| ಬೆಂಕಿಯು ಹೇಗೆ ಒಂದೇ, ಉತ್ತಮ–ಮಧ್ಯಮ–ಕನಿಷ್ಠ ಬಂಗಾರಗಳ ಸ್ವರೂಪವನ್ನು ತೋರಿಸುವದೋ, ಅದರಂತೆ ಮದ್ಯವು ಎಲ್ಲ ಪ್ರಾಣಿಗಳ ಪ್ರಕೃತಿಯನ್ನು ತೋರಿಸಿಕೊಡುವದು. ||೨೧|| ಸಾತ್ವಿಕ ಪಾನೋತ್ಸವವು ಸುಗಂಧ ಮಾಲಿ–ಗಾಯನಗಳಿಂದ ಕೂಡಿರುತ್ತದೆ. ಏಕಾಗ್ರಚಿತ್ತದಿಂದ, ಮಿಷ್ಟವಾದ ಅನ್ನಪಾನಗಳಿಂದ, ಮಧುರವಾದ ಹರಟೆಗಳಿಂದ, ||೨೨|| ಸುಖವಾಗಿ ಆಯಾಯ ಋತುಗಳಿಗನುರೂಪವಾದ ಮದ್ಯವನ್ನು ಕುಡಿಯುವದರಿಂದ ಒಳ್ಳೇ ಮದವನ್ನೂ ಹರ್ಷಪ್ರೀತಿಗಳನ್ನೂ ಹೆಚ್ಚಿಸುತ್ತದೆ. ಈಸಾತ್ವಿಕ ಆಪಾನವು ಮುಂದಿನ ಮದವನ್ನುಂಟು ಮಾಡುವದಿಲ್ಲ. ||೨೩|| ಸಾತ್ವಿಕರು ಮದ್ಯದೋಷಗಳಿಂದ ಸಹಸಾ ವಿಕೃತಿಯನ್ನು ಹೊಂದುವದಿಲ್ಲ. ಸತ್ವದ ಬಲವು ಹೆಚ್ಚಾಗಿಳ್ಳವನಿಗೆ ಸಹಸಾ ಮದವೇ ಉಂಟಾಗುವದಿಲ್ಲ ||೨೪|| ರಾಜಸ ಆಪಾನದಲ್ಲಿ ಒಮ್ಮೆ ಸೌಮ್ಯವಾಗಿಯೂ ಒಮ್ಮೆ ತೀಕ್ಷ್ಣವಾಗಿಯೂ ಮಾತಾಡುವರು. ಒಂದು ಕ್ಷಣದಲ್ಲಿ ಶುದ್ಧಿ, ಬೇಶುದ್ಧಿ ಹೀಗೆ ವ್ಯಗ್ರಚಿತ್ತದಿಂದ ತರತರದ ಚೇಷ್ಟೆಗಳನ್ನು ಮಾಡುವನು. ||೨೫|| ಅನ್ನಪಾನಗಳಲ್ಲಿ ಮೊದಲು ಸರಿಯಾಗಿದ್ದು, ಹರ್ಷ ಪ್ರೀತಿ ಸಂಭಾಷಣೆಗಳಿಂದಕೂಡಿರುವದು. ಆದರೆ ಮೋಹಕ, ಕ್ರೋಧ ನಿದ್ರೆಗಳಿಂದ ಕೂಡಿದ, ಆಪಾನವು ತಾಮಸವು. ||೨೬|| ಮದ್ಯ ಪಾನಕಾಲದಲ್ಲಿ ಸಾತ್ವಿಕ, ರಾಜಸ, ತಾಮಸ ಜನರನ್ನು ಗುರುತಿಸಿ ರಾಜಸತಾಮಸರನ್ನು ಬಿಟ್ಟು ಬಿಡಬೇಕು. ಏಕಂದರೆ ಅವರೊಡನೆ ಮದ್ಯ ಕುಡಿದರೆ ಮದದೋಷಗಳುಂಟಾಗುವವು. || ೨೭ || ಸುಖಿಗಳೂ ಸವಿಮಾತಾಡುವವರೂ ನಗೆಮೋರೆಯವರೂ ಸಜ್ಜನರಿಗೆ ಮಾನ್ಯರೂ ಕಲೆಗಳಲ್ಲಿ ನಿಪುಣರೂ ಶುದ್ಧರೂ ವಿಷಯಮಗ್ನರೂ ||೨೮|| ಪರಸ್ಪರರ ಮಾತು ಕೇಳುವವರೂ ಪ್ರೀತಿಯಿಂದ ಒಟ್ಟುಗೂಡಿದವರೂ ಹರ್ಷ–ಪ್ರೇಮ ಮಧುರ ಸ್ವಭಾವಗಳಿಂದ ಆಪಾನದ ರುಚಿಯನ್ನು ಹೆಚ್ಚಿಸುವರೂ ||೨೯|| ಆದ ಯಾರಿಗೆ ಪರಸ್ಪರರನ್ನು ಕಂಡರೆ ಉತ್ಸವಕ್ಕಿಂತ ಉತ್ಸವವೆನಿಸುವದೋ, ಯಾರು ಪಾನಕ್ಕಾಗಿ ಆನಂದದಿಂದ ಬರುವರೋ ಅವರೊಡನೆ ಮದ್ಯವನ್ನು ಕುಡಿದರೆ ಆನಂದವಾಗುವದು || ೩೦ || ಅತ್ಯಂತ ಮನೋಹರವಾದ ರೂಪವುಳ್ಳ ಸ್ತ್ರೀಯರು ಕೂಡಿದ್ದಾರೆ; ಸುಗಂಧವು ಹಬ್ಬಿದೆ; ಮಧುರವಾದ ಪಕ್ವಾನ್ನ

ಗಳು ಸಿದ್ಧವಾಗಿವೆ; ಸುಗಂಧ ಶೀತಲವಾಯುವು ಬೀಸುತ್ತದೆ; ಮಧುರ ಗಾಯನವು ಕೇಳಬರುತ್ತದೆ; ಅಂಥಲ್ಲಿ ತಮ್ಮ ಗೆಳೆಯರೊಡನೆ ಯಾರು ಮದ್ಯವನ್ನು ಕುಡಿಯುವರೋ ಅವರು ಪುಣ್ಯವಂತರೆಂದು ತಿಳಿಯಬೇಕು ||೮೧|| ಮನಸ್ಸಿಗೆ ಪ್ರಿಯವಾದ ರೂಪ ಮುಂತಾದ ಐದು ವಿಷಯಗಳಿಂದ ಕೂಡಿಕೊಂಡು ಯೋಗ್ಯ ದೇಶಕಾಲಗಳಲ್ಲಿ ಸಂತುಷ್ಟ ಮನಸ್ಸಿನಿಂದ ಮದ್ಯಮನ್ನು ಕುಡಿಯಬೇಕು. || ೮೨ || ಯಾರ ಶರೀರ ಮತ್ತು ಮನಸ್ಸು ಗಟ್ಟಿಯಾಗಿವೆಯೋ; ಯಾರು ಕುಡುಕರ ವಂಶಜರಿರುವರೋ, ಯಾರಿಗೆ ಬಹಳ ಮದ್ಯದ ಅಭ್ಯಾಸವಿರುವದೋ, ಯಾರು ಮದ್ಯಪಾನಕ್ಕಿಂತ ಮೊದಲು ಊಟಮಾಡುವರೋ, ಅವರಿಗೆ ಸಹಸಾ ಮದವೇರುವದಿಲ್ಲ. || ೮೩ || ಅದರೆ ಯಾರು ಹಸಿವೆ ನೀರಡಿಕೆಯಿಂದ ಬಳಲಿರುತ್ತಾರೋ; ದುರ್ಬಲ, ವಾತಪಿತ್ತ ಪ್ರಕೃತಿಯುವರೋ, ರುಕ್ಷ-ಅಲ್ಪ-ಮಿತವಾದ ಆಹಾರ ಮಾಡುವವರೋ; ಮನೋವಿಕಾರವಶವಾಗಿರುವರೋ, ಮನೋದುರ್ಬಲರೋ, || ೮೪ || ಸಿಟ್ಟಿನವರೋ, ಮದ್ಯಕ್ಕೆ ಅನರ್ಹರೋ, ಕ್ಷೀಣರೋ, ದಣಿದವರೋ; ಮದದಿಂದ ಕ್ಷತವಾದವರೋ; ಅಂಥ ಮನುಷ್ಯರಿಗೆ ಸ್ವಲ್ಪ ಮದ್ಯದಿಂದಲೂ ತೀವ್ರ ಮದಬರುವದು. || ೮೫ ||

ಮದಾತ್ಯಯದ ಕಾರಣ, ಲಕ್ಷಣ, ಚಿಕಿತ್ಸೆಗಳನ್ನು ಹೇಳಹೊರಟು, ಮೊದಲು ಕಾರಣ ಲಕ್ಷಣಗಳನ್ನು ಹೇಳುತ್ತಾರೆ—

**ಊರ್ಧ್ವಂ ಮದಾತ್ಯಯಸ್ಯಾತಃ ಸಂಭವಂ ಸಸ್ವಲಕ್ಷಣಮ್ ||**
**ಅಗ್ನಿವೇಶ ಚಿಕಿತ್ಸಾಂಚ ಪ್ರವಕ್ಷ್ಯಾಮಿ ಯಥಾಕ್ರಮಮ್　|| ೮೬ ||**

**ಸ್ತ್ರೀಶೋಕಭಯಭಾರಾಧ್ವಕರ್ಮಭಿರ್ಯೋಽತಿಕರ್ಷಿತಃ ||**
**ರೂಕ್ಷಾಲ್ಪಪ್ರಮಿತಾಶೀ ಚ ಯಃ ಪಿಬತ್ಯತಿಮಾತ್ರಯಾ　|| ೮೭ ||**

**ರೂಕ್ಷಂ ಪರಿಣತಂ ಮದ್ಯಂ ನಿಶಿ ನಿದ್ರಾಂ ನಿಹತ್ಯ ಚ ||**
**ಕರೋತಿ ತಸ್ಯ ತಚ್ಛೀಘ್ರಂ ವಾತಪ್ರಾಯಂ ಮದಾತ್ಯಯಮ್ || ೮೮ ||**

**ಹಿಕ್ಕಾಶ್ವಾಸಶಿರಃಕಂಪ ಪಾರ್ಶ್ವಶೂಲಪ್ರಜಾಗರೈಃ ||**
**ವಿದ್ಯಾದ್ ಬಹುಪ್ರಲಾಪಸ್ಯ ವಾತಪ್ರಾಯಂ ಮದಾತ್ಯಯಮ್ || ೮೯ ||**

**ತೀಕ್ಷ್ಣೋಷ್ಣಂ ಮದ್ಯಮಮ್ಲಂಚ ಯೋಽತಿಮಾತ್ರಂ ನಿಷೇವತೇ ||**
**ಅಮ್ಲೋಷ್ಣತೀಕ್ಷ್ಣಭೋಜೀ ಚ ಕ್ರೋಧನೋಽಗ್ನ್ಯಾತಪಪ್ರಿಯಃ || ೯೦ ||**

ತಸ್ಯೋಪಜಾಯತೇ ಪಿತ್ತಾದ್ ವಿಶೇಷೇಣ ಮದಾತ್ಯಯಃ ||
ಲಕ್ಷಣಾನಿ ಭವಂತ್ಯಸ್ಯ ಯಾನಿ ತಾನಿ ನಿಬೋಧ ಮೇ || ೯೧ ||

ತೃಷ್ಣಾದಾಹಜ್ವರಸ್ವೇದ ಮೋಹಾತಿಸಾರವಿಭ್ರಮೈಃ ||
ವಿದ್ಯಾದ್ಧರಿತವರ್ಣಸ್ಯ ಪಿತ್ತಪ್ರಾಯಂ ಮದಾತ್ಯಯಮ್ || ೯೨ ||

ತರುಣಂ ಮಧುರಪ್ರಾಯಂ ಗೌಡಂ ಪೈಷ್ಟಿಕಮೇವವಾ ||
ಮಧುರಸ್ನಿಗ್ಧಗುರ್ವಾಶೀ ಯಃ ಪಿಬತ್ಯತಿಮಾತ್ರಯಾ || ೯೩ ||

ಅವ್ಯಾಯಾಮದಿವಾಸ್ವಪ್ನ ಶಯ್ಯಾಸನಸುಖೇರತಃ ||
ಮದಾತ್ಯಯಂ ಕಫಪ್ರಾಯಂ ಸಶೀಘ್ರಮಧಿಗಚ್ಛತಿ || ೯೪ ||

ಛರ್ದ್ಯರೋಚಕಹೃಲ್ಲಾಸ ತಂದ್ರಾಸ್ತೈಮಿತ್ಯಗೌರವೈಃ ||
ವಿದ್ಯಾಚ್ಛೀತಪರೀತಸ್ಯ ಕಫಪ್ರಾಯಂ ಮದಾತ್ಯಯಮ್ || ೯೫ ||

ವಿಷಸ್ಯ ಯೇ ಗುಣಾ ದೃಷ್ಟಾಃ ಸನ್ನಿಪಾತಪ್ರಕೋಪಕಾಃ ||
ತ ಏವ ಮದ್ಯೇ ದೃಶ್ಯಂತೇ ವಿಷೇ ತು ಬಲವತ್ತರಾಃ || ೯೬ ||

ಹಂತ್ಯಾಶು ಹಿ ವಿಷಂ ಕಿಂಚಿತ್ ಕಿಂಚಿದ್ರೋಗಾಯ ಕಲ್ಪತೇ ||
ಯಥಾ ವಿಷಂ ತಥೈವಾಂತ್ಯೋ ಜ್ಞೇಯೋ ಮದ್ಯಕೃತೋ ಮದಃ ||೯೭||

ತಸ್ಮಾತ್ ತ್ರಿದೋಷಜಂ ಲಿಂಗಂ ಸರ್ವತ್ರಾಪಿ ಮದಾತ್ಯಯೇ ||
ದೃಶ್ಯತೇ ರೂಪವೈಶೇಷ್ಯಾತ್ ಪೃಥಕ್ತ್ವಂ ಚಾಪಿ ಲಕ್ಷ್ಯತೇ || ೯೮ ||

ಶರೀರದುಃಖಂ ಬಲವತ್ ಪ್ರಮೋಹೋ ಹೃದಯವ್ಯಥಾ ||
ಅರುಚಿಃ ಪ್ರತತಾ ತೃಷ್ಣಾ ಜ್ವರಃ ಶೀತೋಷ್ಣಲಕ್ಷಣಃ || ೯೯ ||

ಶಿರಃಪಾರ್ಶ್ವಾಸ್ಥಿಸಂಧೀನಾಂ ವೇದನಾ ವಿಕ್ಷತೇ ಯಥಾ ||
ಜಾಯತೇಽತಿಬಲಾಜೃಂಭಾ ಸ್ಫುರಣಂ ವೇಪನಂ ಶ್ರಮಃ ||೧೦೦||

ಉರೋವಿಬಂಧಃ ಕಾಸಶ್ಚ ಶ್ವಾಸೋ ಹಿಕ್ಕಾ ಪ್ರಜಾಗರಃ ||
ಶರೀರಕಂಪಃ ಕರ್ಣಾಕ್ಷಿಮುಖರೋಗಸ್ತ್ರಿಕಗ್ರಹಃ ||೧೦೧||

ಛರ್ದಿರ್ವಿಡ್ಭೇದ ಉತ್ಕ್ಲೇಶೋ ವಾತಪಿತ್ತಕಫಾತ್ಮಕಃ ||
ಭ್ರಮಃ ಪ್ರಲಾಪೋ ರೂಪಾಣಾಮಸತಾಂ ಚೈವ ದರ್ಶನಮ್ ||೧೦೨||

ತೃಣಭಸ್ಮಲತಾಪರ್ಣಪಾಂಶುಭಿಶ್ಚಾವಪೂರಣಮ್ ||
ಪ್ರಧರ್ಷಣಂ ವಿಹಂಗೈಶ್ಚ ಭ್ರಾಂತಚೇತಾಃ ಸ ಮನ್ಯತೇ || ೧೦೩ ||

**ವ್ಯಾಕುಲಾನಾಮಶಸ್ತಾನಾಂ ಸ್ವಪ್ನಾನಾಂ ದರ್ಶನಾನಿ ಚ ||**
**ಮದಾತ್ಯಯಸ್ಯ ರೂಪಾಣಿ ಸರ್ವಾಣ್ಯೇತಾನಿ ಲಕ್ಷಯೇತ್ || ೧೦೪ ||**

**ಅರ್ಥ—** ಇನ್ನು ಮೇಲೆ ಮದಾತ್ಯಯದ ಕಾರಣ ಲಕ್ಷಣ, ಚಿಕಿತ್ಸೆಗಳನ್ನು-ಅಗ್ನಿವೇಶನೇ,-ಕ್ರಮವಾಗಿ ಹೇಳುತ್ತೇನೆ. || ೮೬ || ಸ್ತ್ರೀ, ದುಃಖ, ಭಯ, ಭಾರಹೊರೋಣ, ಹಾದಿನಡೆಯೋಣ, ಈ ಕರ್ಮಗಳನ್ನು ಮಾಡುವವನಿಗೂ, ರುಕ್ಷ ಮತ್ತು ಅಲ್ಪ ಪ್ರಮಾಣದ ಆಹಾರ ಮಾಡಿ ಬಹಳ ಮದ್ಯವನ್ನು ಕುಡಿಯುವವನಿಗೂ. || ೮೭ || ರಾತ್ರಿ ಜಾಗರಣೆಮಾಡಿ, ರುಕ್ಷ ಹಳೇ ಮದ್ಯವನ್ನು ಕುಡಿಯುವವನಿಗೂ ಅದು ತೀವ್ರವಾಗಿ ವಾತಾಧಿಕ ಮದಾತ್ಯಯವನ್ನುಂಟು ಮಾಡುತ್ತದೆ. || ೮೮ || ಬಿಕ್ಕು, ಶ್ವಾಸ, ತಲೆನಡಗೋಣ ಪಾರ್ಶ್ವಶೂಲ—ಜಾಗರಣೆ—ಬಹಳ ಬಡಬಡಿಸೋಣ ಈ ಲಕ್ಷಣಗಳು ವಾತಾಧಿಕ ಮದಾತ್ಯಯದಲ್ಲಿರುತ್ತವೆ. || ೮೯ || ತೀಕ್ಷ್ಣ, ಉಷ್ಣ, ಹುಳಿ ಇದ್ದ ಮದ್ಯವನ್ನು ಯಾವನು ಬಹಳವಾಗಿ ಕುಡಿಯುವನೋ ಹುಳಿ, ಉಷ್ಣ, ತೀಕ್ಷ್ಣ, ಆಹಾರವನ್ನು ಸೇವಿಸುವನೋ ಬಹಳ ಸಿಟ್ಟುಮಾಡುವನೋ ಬೆಂಕಿ ಬಿಸಲು ಕಾಸುವನೋ || ೯೦ || ಅವನಿಗೆ ಪಿತ್ತಾಧಿಕ ಮದಾತ್ಯಯವುಂಟಾಗುತ್ತದೆ. ಅದರಲ್ಲಿ ಯಾವ ಲಕ್ಷಣಗಳಾಗುತ್ತವೆಯೊ ಅವನ್ನು ಹೇಳುತ್ತೇನೆ ಕೇಳು || ೯೧ || ರೋಗಿಯ ಮೈಯು ಹಸರು ಆಗಿ ಸೀರಡಿಕೆ, ದಾಹ, ಜ್ವರ, ಬೆವರು, ಮೋಹ, ಅತಿಸಾರ, ಭ್ರಮಗಳು ಇದ್ದರೆ ಅದು ಪಿತ್ತಾಧಿಕ ಮದಾತ್ಯಯವೆಂದು ತಿಳಿಯಬೇಕು. || ೯೨ || ಹೊಸ, ಹೆಚ್ಚಾಗಿ ಮಧುರರಸವುಳ್ಳ, ಬೆಲ್ಲದ ಅಥವಾ ಹಿಟ್ಟಿನ ಮದ್ಯವನ್ನು ಯಾವನು ಅತಿಯಾಗಿ ಕುಡಿಯುವನೋ; ಮತ್ತು ಮಧುರ, ಸ್ನಿಗ್ಧ, ಜಡ ಪದಾರ್ಥಗಳನ್ನು ತಿನ್ನುವನೋ || ೯೩ || ವ್ಯಾಯಾಮ ಹಗಲು ನಿದ್ರೆ, ಯಾವಾಗಲೂ ಮಲಗೋಣ, ಕೂಡೋಣ ಇವುಗಳಲ್ಲಿಯೇ ಆನಂದಪಡುವನೋ; ಅವನಿಗೆ ತೀವ್ರವಾಗಿ ಕಫಾಧಿಕ ಮದಾತ್ಯಯವುಂಟಾಗುವದು. || ೯೪ || ಚಳಿಯಾಗೋಣ, ವಾಂತಿ, ಅರುಚಿ, ಬಾಯಿಗೆ ನೀರು ಬಿಡೋಣ, ತಂದ್ರೆ, ಆಲಸ್ಯ, ಜಡತ್ವಗಳಿಂದ ಕಫಾಧಿಕ ಮದಾತ್ಯಯವನ್ನು ಗುರುತಿಸಬೇಕು. || ೯೫ || ವಿಷದಲ್ಲಿ ಸನ್ನಿಪಾತಕೋಪಕವಾದ ಯಾವ ಗುಣಗಳು ಕಂಡುಬರುತ್ತವೆಯೋ ಅವೇ ಗುಣಗಳು ಮದ್ಯದಲ್ಲಿಯೂ ಕಂಡುಬರುತ್ತವೆ. ಆದರೆ ವಿಷದಲ್ಲಿ ಅವು ಬಲಿಷ್ಠವಿರುತ್ತವೆ. || ೯೬ || ಕೆಲವು ವಿಷಗಳು ಕೊಲ್ಲುತ್ತವೆ; ಕೆಲವು ರೋಗಗಳನ್ನುಂಟುಮಾಡುತ್ತವೆ. ವಿಷದಂತೆಯೇ ಮದ್ಯದ

ಕೊನೆಯ ಮದವೂ ಇರುತ್ತದೆ. ॥ ೯೭ ॥ ಆದ್ದರಿಂದ ಎಲ್ಲ ಮದಾತ್ಯಯಗಳಲ್ಲಿ ತ್ರಿದೋಷದ ಲಕ್ಷಣಗಳು ಇರುತ್ತವೆ. ಲಕ್ಷಣಗಳ ಹೆಚ್ಚುಕಡಿಮೆಗಳಿಂದ ಅವುಗಳಲ್ಲಿ ಭೇದವು ಕಂಡುಬರುತ್ತದೆ. ॥ ೯೮ ॥

ಎಲ್ಲ ಮದಾತ್ಯಯಗಳ ಸಾಮಾನ್ಯ ಲಕ್ಷಣಗಳನ್ನು ಹೇಳುತ್ತಾರೆ—

ಬಹಳವಾದ ಶರೀರಕ್ಲೇಶ, ಮೋಹ, ಎದೆಯಲ್ಲಿನೋವು, ಅರುಚಿ, ಒಂದೇಸವನೆ ನೀರಡಿಕೆ, ಒಮ್ಮೆ ಶೀತಜ್ವರ, ಒಮ್ಮೆ ಉಷ್ಣಜ್ವರ, ॥ ೯೯ ॥ ತಲೆ, ಪಾರ್ಶ್ವ, ಅಸ್ಥಿಸಂಧಿಗಳಲ್ಲಿ ಬಡಿದಂತೆ ವೇದನೆ, ಬಹಳ ಆಕಳಿಕೆ, ಸ್ಫುರಣ, ನಡುಗೋಣ, ಶ್ರಮ, ॥ ೧೦೦ ॥ ಎದೆಹಿಡಿಯೋಣ, ಕೆಮ್ಮು, ದಮ್ಮು, ಬಿಕ್ಕು, ಜಾಗರಣೆ, ಮೈ ನಡಗೋಣ, ಕಿವಿ, ಮಣ್ಣು, ಮುಖಗಳ ರೋಗಗಳು, ತಿಗ ಹಿಡಿಯೋಣ, ॥೧೦೧॥ ವಾಂತಿ, ಅತಿಸಾರ, ವಾತಪಿತ್ತಕಫಗಳ ಉತ್ಕ್ಲೇಶ, (ಕೆರಳೋಣ) ಭ್ರಮ, ಪ್ರಲಾಪ, ಇಲ್ಲದೇ ಇದ್ದ ರೂಪಗಳು ಕಾಣೋಣ, ಹುಲ್ಲು–ಧೂದಿ–ಬಳ್ಳಿ–ಎಲೆ ಹುಡಿಗಳು ಮೈಮೇಲೆ ಬೀಳೋಣ, ಪಕ್ಷಿಗಳು ಮೈಮೇಲೆ ಬರೋಣ, ಮುಂತಾದವುಗಳು ಭ್ರಾಂತಿಯು ಅವನಿಗಾಗುತ್ತದೆ. ॥೧೦೨॥ ಅಂಜಿಕೆಯನ್ನುಂಟುಮಾಡುವ ಅಮಂಗಲ ಸ್ವಪ್ನಗಳು ಬೀಳುವವು. ಇವೆಲ್ಲ ಮದಾತ್ಯಯದ ಲಕ್ಷಣಗಳೆಂದು ತಿಳಿಯಬೇಕು. ॥೧೦೪॥

ಮದಾತ್ಯಯ ಚಿಕಿತ್ಸೆಯ ಸಾಮಾನ್ಯ ತತ್ವಗಳನ್ನು ಹೇಳುತ್ತಾರೆ—

**ಸರ್ವಂ ಮದಾತ್ಯಯಂವಿದ್ಯಾತ್ ತ್ರಿದೋಷಮಧಿಕಂತು ಯುಮ್ ॥**
**ದೋಷಂ ಮದಾತ್ಯಯೇ ಪಶ್ಯೇತ್ ತಮಾದೌ ಪ್ರತಿಕಾರಯೇತ್ ॥೧೦೫॥**

**ಕಫಸ್ಥಾನಾನುಪೂರ್ವ್ಯಾ ವಾ ಕ್ರಿಯಾ ಕಾರ್ಯಾ ಮದಾತ್ಯಯೇ ॥**
**ಪಿತ್ತಮಾರುತಪಯಂತಃ ಪ್ರಾಯೇಣ ಹಿ ಮದಾತ್ಯಯಃ ॥೧೦೬॥**

**ಮಿಥ್ಯಾತಿಹೀನಪೀತೇನ ಯೋ ವ್ಯಾಧಿರುಪಜಾಯತೇ ॥**
**ಸಮ್ಯಕ್ ಪೀತೇನ ತೇನೈವ ಸ ಮದ್ಯೇನೋಪಶಾಮ್ಯತಿ ॥೧೦೭॥**

**ಜೀರ್ಣಾನ್ನೇ ಮದ್ಯದೋಷಾಯ ಮದ್ಯಮೇವ ಪ್ರದಾಪಯೇತ್ ॥**
**ಪ್ರಕಾಂಕ್ಷಾಲಾಘವೇ ಜಾತೇ ಮದ್ಯಮಸ್ಮೈ ಹಿತಂ ಭವೇತ್ ॥೧೦೮॥**

**ಸೌವರ್ಚಲಾನುಸಂವಿದ್ಧಂ ಶೀತಂ ಸಬಿಡಸೈಂಧವಮ್ ॥**
**ಮಾತುಲುಂಗಾರ್ದ್ರಕೋಪೇತಂ ಜಲಯುಕ್ತಂ ಪ್ರಮಾಣವತ್ ॥೧೦೯॥**

**ತೀಕ್ಷ್ಣೋಷ್ಣೇನಾತಿಮಾತ್ರೇಣ ಪೀತೇನಾಮ್ಲವಿದಾಹಿನಾ ||**
**ಮದ್ಯೇನಾನ್ನರಸೋತ್ಕ್ಲೇದೋ ವಿದಗ್ಧಃ ಕ್ಷಾರತಾಂ ಗತಃ ||೧೧೦||**

**ಅಂತರ್ದಾಹಂ ಜ್ವರಂ ತೃಷ್ಣಾಂ ಪ್ರಮೋಹಂ ವಿಭ್ರಮಂ ಮದಮ್ ||**
**ಜನಯತ್ಯಾಶು ತಚ್ಛಾಂತ್ಯೈ ಮದ್ಯಮೇವ ಪ್ರಯೋಜಯೇತ್ ||೧೧೧||**

**ಕ್ಷಾರೋ ಹಿ ಯಾತಿ ಮಾಧುರ್ಯಂ ಶೀಘ್ರಮಮ್ಲೋಪಸಂಹಿತಃ ||**
**ಶ್ರೇಷ್ಠಮಮ್ಲೇಷು ಮದ್ಯಞ್ಚ ಯೈರ್ಗುಣೈಸ್ತಾನ್ಪರಂ ಶೃಣು ||೧೧೨||**

**ಮದ್ಯಸ್ಯಾಮ್ಲಸ್ವಭಾವಸ್ಯ ಚತ್ವಾರೋಽನುರಸಾಃ ಸ್ಮೃತಾಃ ||**
**ಮಧುರಶ್ಚ ಕಷಾಯಶ್ಚ ಕಟುಕಸ್ತಿಕ್ತ ಏವ ಚ ||೧೧೩||**

**ಗುಣಾಶ್ಚ ದಶ ಪೂರ್ವೋಕ್ತಾಸ್ತೈಶ್ಚತುರ್ದಶಭಿರ್ಗುಣೈಃ ||**
**ಸರ್ವೇಷಾಂ ಮದ್ಯಮಮ್ಲಾನಾಮುಪರ್ಯುಪರಿ ವರ್ತತೇ ||೧೧೪||**

**ಮದ್ಯೋತ್ಕ್ಲಿಷ್ಟೇನ ದೋಷೇಣ ಕ್ರುದ್ಧಃ ಸ್ರೋತಃಸು ಮಾರುತಃ ||**
**ವೇದನಾಂ ಕುರುತೇ ತೀವ್ರಾಂ ಶಿರಃಸ್ವಸ್ಥಿಷು ಸಂಧಿಷು ||೧೧೫||**

**ವಿಷ್ಯಂದನಾರ್ಥಂ ದೋಷಸ್ಯ ತಸ್ಯ ಮದ್ಯಂ ವಿಶೇಷತಃ ||**
**ವ್ಯವಾಯಿತೀಕ್ಷ್ಣೋಷ್ಣತಯಾ ದೇಯಮಮ್ಲೇಷು ಸತ್ಸ್ವಪಿ ||೧೧೬||**

**ಸ್ರೋತೋವಿಬಂಧನುನ್ಮೃದ್ಯಂ ಮಾರುತಸ್ಯಾನಲೋಮನಮ್ ||**
**ರೋಚನಂ ದೀಪನಂ ಚಾಗ್ನೇರಭ್ಯಾಸಾತ್ ಸಾತ್ಮ್ಯಮೇವ ಚ ||೧೧೭||**

**ಉರಃಸ್ರೋತಃಸು ಶುದ್ಧೇಷು ಮಾರುತೇ ಚಾನುಲೋಮಿತೇ ||**
**ನಿವರ್ತಂತೇ ವಿಕಾರಾಶ್ಚ ಶಾಮ್ಯತ್ಯಸ್ಯ ಮದೋದಯಃ || ೧೧೮ ||**

**ಅರ್ಥ—** ಎಲ್ಲ ಮದಾತ್ಯಯಗಳು ತ್ರಿದೋಷವಾಗಿವೆ. ಆದರೆ ಅವುಗಳಲ್ಲಿ ಯಾವದೋಷವು ಹೆಚ್ಚಾಗಿ ಕಂಡುಬರುವದೋ ಅದರ ಪ್ರತಿಕಾರ ಮೊದಲುಮಾಡಬೇಕು. ||೧೦೫|| ಅಥವಾ ಮೊದಲು ಕಫ ಅನಂತರ ಪಿತ್ತ ವಾತದ ಚಿಕಿತ್ಸೆಯನ್ನು ಕ್ರಮವಾಗಿ ಮದಾತ್ಯಯದಲ್ಲಿ ಮಾಡಬೇಕು. ಏಕಂದರೆ ಮದಾತ್ಯಯದಲ್ಲಿ ಕೊನೆಗೆ ಪಿತ್ತ ಅಥವಾ ವಾತವು ಪ್ರಬಲವಾಗಿರುತ್ತದೆ. ||೧೦೬|| ವಿಧಿಯಿಲ್ಲದೆ ಅಥವಾ ಅತಿಯಾಗಿ ಅಥವಾ ಕಡಿಮೆಯಾಗಿ ಮದ್ಯವನ್ನು ಕುಡಿಯುವದರಿಂದ ಉಂಟಾದ ಬೇನೆಯು ಅದೇ ಮದ್ಯವನ್ನು ಸರಿಯಾಗಿ ಕುಡಿಯಲು ಹೋಗುತ್ತದೆ. ||೧೦೭|| ಮದ್ಯದ ವಿಕಾರವುಳ್ಳವನಿಗೆ

ಸಸ್ನೇಹೈಃ ಸಕ್ತುಭಿರ್ಯುಕ್ತಮುವದಂಶೈಶ್ಚ ರೋಚಿತಮ್ ||
ದದ್ಯಾತ್ ಸಲವಣಂ ಮದ್ಯಂ ಪೈಷ್ಟಿಕಂ ವಾತಶಾಂತಯೇ ||೧೨೦||

ದೃಷ್ಟ್ವಾ ವಾತೋಲ್ಬಣಂ ಲಿಂಗಂ ರಸೈಶ್ಚೈನಮುಪಾಚರೇತ್ ||
ಲಾವತಿತ್ತಿರಿದಕ್ಷಾಣಾಂ ಸ್ನಿಗ್ಧಾಮ್ಲೈಃ ಶಿಖಿನಾಮಪಿ ||೧೨೧||

ಪಕ್ಷಿಣಾಂ ಮೃಗಮತ್ಸ್ಯಾನಾಮಾನೂಪಾನಾಞ್ಚ ಸಂಸ್ಕೃತೈಃ ||
ಭೂಶಯಪ್ರಸಹಾನಾಞ್ಚ ರಸೈಃ ಸಾಲ್ಯೋದನೇನ ಚ ||೧೨೨||

ಸ್ನಿಗ್ಧೋಷ್ಣಲವಣಾಮ್ಲೈಶ್ಚ ವೇಶವಾರೈರ್ಮುಖಪ್ರಿಯೈಃ ||
ಸ್ನಿಗ್ಧೈರ್ಗೋಧೂಮಕೈಶ್ಚಾನ್ಯೈರ್ವಾರುಣೀಮಂಡಮಿಶ್ರಿತೈಃ ||೧೨೩||

ಸಿತಾಮಾರ್ದ್ರಕಗರ್ಭಾಭಿಃ ಸ್ನಿಗ್ಧಾಭಿಃ ಪೂಪವರ್ತಿಭಿಃ ||
ಮಾಷಪೂಪಲಿಕಾಭಿಶ್ಚ ವಾತಿಕಂ ಸಮುಪಾಚರೇತ್ ||೧೨೪||

ನಾತಿಸ್ನಿಗ್ಧೈರ್ನಚಾಮ್ಲೇನ ಸಿದ್ಧಂ ಸಮರಿಚಾರ್ದ್ರಕಮ್ ||
ಮೇಧ್ಯಂ ಪ್ರಾಗುದಿತಂ ಮಾಂಸಂ ದಾಡಿಮಸ್ಯರಸೇನ ವಾ ||೧೨೫||

ಪೃಥಕ್ ತ್ರಿಜಾತಕೋಪೇತಂ ಸಧಾನ್ಯಮರಿಚಾರ್ದ್ರಕಮ್ ||
ರಸಪ್ರಲೇಹಯೂಷೈಶ್ಚ ಸುಖೋಷ್ಣೈಃ ಸಹ ದಾಪಯೇತ್ ||೧೨೬||

ಭಕ್ತೇನ ವಾರುಣೀಮಂಡಂ ದದ್ಯಾತ್ ಪಾತುಂ ಪಿಪಾಸವೇ ||
ದಾಡಿಮಸ್ಯ ರಸಂ ವಾಪಿ ಜಲಂ ವಾ ಪಾಞ್ಚಮೂಲಿಕಮ್ ||೧೨೭||

ಧಾನ್ಯನಾಗರತೋಯಂ ವಾ ದಧಿಮಂಡಮಥಾಪಿ ವಾ ||
ಅಮ್ಲಕಾಂಜಿಕಮಂಡಂ ವಾ ಶುಕ್ತೋದಕಮಥಾಪಿ ವಾ ||೧೨೮||

ಕರ್ಮಣಾನೇನ ಸಿದ್ಧೇನ ವಿಕಾರ ಉಪಶಾಮ್ಯತಿ ||
ಮಾತ್ರಾಕಾಲಪ್ರಯುಕ್ತೇನ ಬಲಂ ವರ್ಣಶ್ಚ ವರ್ಧತೇ ||೧೨೯||

ರಾಗಷಾಡವಸಂಯೋಗೈರ್ವಿವಿಧೈರ್ಭಕ್ತರೋಚನೈಃ ||
ಪಿಶಿತೈಃ ಶಾಕಪಿಷ್ಟಾನ್ನೈಃ ಸ್ನಿಗ್ಧೈರ್ಗೋಧೂಮಶಾಲಿಭಿಃ ||೧೩೦||

ಅಭ್ಯಂಗೋತ್ಸಾದನಸ್ನಾನೈರುಷ್ಣೈಃ ಪ್ರಾವರಣೈರ್ಘನೈಃ ||
ಘನೈರಗುರುಪಂಕೈಶ್ಚ ಧೂಪೈಶ್ಚಾಗುರುಜೈರ್ಘನೈಃ ||೧೩೧||

ನಾರೀಣಾಂ ಯೌವನೋಷ್ಣಾನಾಂ ನಿರ್ದಯೈರುಪಗೂಹನೈಃ ||
ಶ್ರೋಣ್ಯೂರುಕುಚಭಾರೈಶ್ಚ ಸಂರೋಧೋಷ್ಣಸುಖಪ್ರದೈಃ ||೧೩೨||

**ಶಯನಾಚ್ಛಾದನೈರುಷ್ಣೈರುಷ್ಣೈಶ್ಚಾಂತರ್ಗೃಹೈಃ ಸುಖೈಃ**
**ಮಾರುತಪ್ರಬಲಃ ಶೀಘ್ರಂ ಪ್ರಶಾಮ್ಯತಿ ಮದಾತ್ಯಯಃ ||೧೩೩||**

**ಅರ್ಥ—** ವಾತಮದಾತ್ಯದಲ್ಲಿ ಮಾದಾಳ, ವೃಕ್ಷಾಮ್ಲ (ಅಮಸೋಲು) ಬೋರೆ, ದಾಳಿಂಬ, ಅಜವಾನ, ಹಪುಷಾ ( ಹಾವುಮೆಕ್ಕೆ ) ಜೀರಿಗೆ, ಶುಂಠಿ ಇವುಗಳ ಚೂರ್ಣವನ್ನು ||೧೧೯|| ಸ್ನೇಹ, ಸಕ್ತು ಮತ್ತು ವ್ಯಂಜನಪದಾರ್ಥಗಳನ್ನು ಹಾಕಿ ಮಾಡಿದ ಹಳೇ ಪೈಷ್ಟಿಕ ಮದ್ಯವನ್ನು ಉಪ್ಪುಹಾಕಿ ಕೊಡಬೇಕು. ||೧೨೦|| ವಾತದ ಲಕ್ಷಣಗಳು ತೀವ್ರವಾಗಿದ್ದರೆ ಲಾವ ( ಪಕ್ಷಿ ಜಾತಿ) ತಿತ್ತಿರಿ ( ಕೌಜುಗ ಪಕ್ಷಿ) ಕೋಳಿ, ನವಿಲುಗಳ ಮಾಂಸರಸವನ್ನು ಸ್ನಿಗ್ಧ ಹುಳಿಮಾಡಿಕೊಡಬೇಕು. ||೧೨೧|| ಅದರಂತೆ ಪಕ್ಷಿಗಳ ಮತ್ತು ಆನೂಪ ದೇಶದ ಮೃಗ, ಮೀನುಗಳ ಭೂಶಯ ಪ್ರಸಹ ಪ್ರಾಣಿಗಳ ಮಾಂಸರಸದಲ್ಲಿ ಸ್ನೇಹ ಅಮ್ಲಗಳನ್ನು ಹಾಕಿ ಸಂಸ್ಕಾರಕೊಟ್ಟು, ಅದನ್ನು ಅಕ್ಕಿಯ ಅನ್ನದೊಡನೆ ಕೊಡಬೇಕು. ||೧೨೨|| ಅದರಂತೆ ಸ್ನಿಗ್ಧ–ಉಷ್ಣ–ಉಪ್ಪು–ಹುಳಿಯಾದ–ರುಚಿಯಾದ ಮಾಂಸದ ಉಸಳಿಗಳಿಂದಲೂ ಮದ್ಯದ ಕೆಸೆಯಿಂದ ಮಾಡಿದ, ತುಪ್ಪಹಾಕಿದ, ಗೋಧಿಯ ಪದಾರ್ಥಗಳಿಂದಲೂ ||೧೨೩|| ಸಕ್ಕರೆ ಹಸಿಸುಂಠಿಗಳನ್ನು ಒಳಗೆ ಹಾಕಿದ, ತುಪ್ಪದಲ್ಲಿ ಕರಿದ, ಪೂಪವರ್ತಿ ( ಕಾಚಿ ಕಾಯಿ ) ಮತ್ತು ಉದ್ದಿನವಡೆಗಳಿಂದ ವಾತಮದಾತ್ಯಯವನ್ನು ಉಪಚರಿಸಬೇಕು. ||೧೨೪|| ಬಹಳ ಸ್ನಿಗ್ಧ ಅಥವಾ ಬಹಳ ಹುಳಿಯಾಗದಂತೆ ಮಾಡಿದ ಸುಂಠಿ, ಮೆಣಸುಹಾಕಿದ ಹಿಂದೆ ಹೇಳಿದ ಪುಷ್ಟಪ್ರಾಣಿಯ ಮಾಂಸವನ್ನು ದಾಳಿಂಬದ ರಸದೊಡನೆ ಕೊಡಬೇಕು. ||೧೨೫|| ಅಥವಾ ದಾಲಚಿನ್ನಿ, ತಮಾಲಪತ್ರ, ಯಾಲಕ್ಕಿಗಳನ್ನು ಹಾಕಿದ ಅಥವಾ ಹವೀಜ, ಮೆಣಸು ಸುಂಠಿಗಳನ್ನು ಹಾಕಿದ ಪುಷ್ಟಮಾಂಸಗಳನ್ನು ಮಾಂಸರಸ–ಲೇಹ ಅಥವಾ ಬೆಚ್ಚನ್ನ ರೊಟ್ಟಿಗಳೊಡನೆ ಕೊಡಬೇಕು. ||೧೨೬|| ನೀರಡಿಕೆಯಾದರೆ ಅನ್ನದೊಡನೆ ಮದ್ಯದ ತಿಳಿಯನ್ನು, ದಾಳಿಂಬದ ರಸವನ್ನು ಅಥವಾ ಪಂಚಮೂಲದ ಕಷಾಯವನ್ನು ಕುಡಿಸಬೇಕು. ಹವೀಜ–ಸುಂಠಿ ಕಷಾಯ ಅಥವಾ ಮೊಸರ ಮೇಲಿನ ತಿಳಿನೀರನ್ನು ಅಥವಾ ಹುಳಿಗಂಜಿಯ ತಿಳಿನೀರನ್ನು ಅಥವಾ ನೀರು ಹಾಕಿದ ಶುಕ್ತ ( ಕಂದಮೂಲದ ಮದ್ಯ ) ವನ್ನು ಕೊಡಬೇಕು. ||೧೨೮|| ಯೋಗ್ಯ ಪ್ರಮಾಣದಿಂದ ಯೋಗ್ಯಕಾಲದಲ್ಲಿ ಮಾಡಿದ ಈ ಚಿಕಿತ್ಸೆಯಿಂದ ವಿಕಾರವು ಶಾಂತವಾಗುತ್ತದೆ. ಮತ್ತು ಬಲ ವರ್ಣಗಳು ಹೆಚ್ಚುತ್ತವೆ. ||೧೨೯||

ರಾಗ ( ಉಪ್ಪಿನಕಾಯಿ ) ಷಾಡವ ( ಚಟ್ನಿ ) ಗಳಿಂದ ಯುಕ್ತವಾದ ವಿವಿಧ ರುಚಿಕರ ಅನ್ನ, ಮಾಂಸ, ಹಕ್ಕಿ, ಹಿಟ್ಟಿನ ಪದಾರ್ಥ ಗೋಧಿ, ಅಕ್ಕಿಗಳಿಂದ ಮಾಡಿದ ಆಹಾರಗಳಿಂದಲೂ ||೧೩೦|| ಮತ್ತು ಅಭ್ಯಂಗ, ಉತ್ಸಾದನ ( ಮೈಗೆ ಹಚ್ಚುವ ಸುಗಂಧದ್ರವ್ಯ ) ಸ್ನಾನಗಳಿಂದಲೂ ಉಷ್ಣ – ವಸ್ತ್ರದ ಹೊದಿಕೆಗಳಿಂದಲೂ ದಪ್ಪಗಿರುವ ಅಗರುಲೇಪನಗಳಿಂದಲೂ ಅಗರುವಿನ ದಟ್ಟವಾದ ಧೂಪಗಳಿಂದಲೂ ||೧೩೧|| ತಾರುಣ್ಯದಿಂದ ಉನ್ಮತ್ತರಾದ ಹೆಂಗಸರ ಗಾಢಾಲಿಂಗನದಿಂದಲೂ ಸಂಘಟನದಿಂದ, ಉಷ್ಣತೆಯಿಂದ, ಸುಖದಾಯಕವಾದ ಪುಷ್ಟ ಕಟಿ, ತೊಡೆ, ಸ್ತನಗಳಿಂದಲೂ ||೧೩೨|| ಉಷ್ಣವಾದ ಹಾಸಿಗೆ ಹೊದಿಕೆಗಳಿಂದಲೂ ಸುಖಕರವಾದ ಬೆಚ್ಚಗಿನ ಮನೆಗಳಿಂದಲೂ ವಾತಾಧಿಕ ಮದಾತ್ಯಯವು ಶೀಘ್ರವಾಗಿ ಶಾಂತವಾಗುವದು. ||೧೩೩||

ಪಿತ್ತಮದಾತ್ಯಯ ಚಿಕಿತ್ಸೆಯನ್ನು ಹೇಳುತ್ತಾರೆ—

ಮದ್ಯಂ ಖರ್ಜೂರಮೃದ್ವೀಕಾಪರೂಷಕರಸೈರ್ಯುತಮ್ ||
ಸದಾಡಿಮರಸಂಶೀತಂ ಸಕ್ತುಭಿಶ್ಚಾವಚೂರ್ಣಿತಮ್ ||೧೩೪||

ಸಶರ್ಕರಂ ವಾ ಮಾರ್ದ್ವೀಕಸಂಯುಕ್ತಮಥವಾಪರಮ್ ||
ದದ್ಯಾದ್ ಬಹೂದಕಂ ಕಾಲೇ ಪಾತುಂ ಪಿತ್ತಮದಾತ್ಯಯೇ ||೧೩೫||

ಶಶಾನ್ ಕಪಿಂಜಲಾನೇಣಾನ್ ಲಾವಾನಸಿತಪುಚ್ಛಕಾನ್ ||
ಮಧುರಾಮ್ಲಾನ್ ಪ್ರಯುಂಜೀತಭೋಜನೇ ಶಾಲಿಷಷ್ಟಿಕಾನ್ ||೧೩೬||

ಪಟೋಲಯೂಷಮಿಶ್ರಂ ವಾ ಛಾಗಲಂ ಕಲ್ಪಯೇದ್ರಸಮ್ ||
ಸತೀನಮುದ್ಗಮಿಶ್ರಂ ವಾ ದಾಡಿಮಾಮಲಕಾನ್ವಿತಮ್ ||೧೩೭||

ದ್ರಾಕ್ಷಾಮಲಕಖರ್ಜೂರಪರೂಷಕರಸೇನ ವಾ ||
ಕಲ್ಪಯೇತ್ ತರ್ಪಣಾನ್ ಯೂಷಾನ್ ರಸಾಂಶ್ಚವಿವಿಧಾತ್ಮಕಾನ್ ||೧೩೮||

ಆಮಾಶಯಸ್ಥಮುತ್ಕ್ಲಿಷ್ಟಂ ಕಫಪಿತ್ತಂ ಮದಾತ್ಯಯೇ ||
ವಿಜ್ಞಾಯ ಬಹುದೋಷಸ್ಯ ತೃಜ್ವಿದಾಹಾನ್ವಿತಸ್ಯ ಚ ||೧೩೯||

ಮದ್ಯಂ ದ್ರಾಕ್ಷಾರಸಂ ತೋಯೇ ದತ್ವಾ ತರ್ಪಣಮೇವ ವಾ ||
ನಿಃಶೇಷಂ ವಾಮಯೇಚ್ಛೀಘ್ರಮೇವಂ ರೋಗಾದ್ ವಿಮುಚ್ಯತೇ ||೧೪೦||

ಹೆಸರುಗಳಿಂದ ಅಥವಾ ದಾಳಿಂಬ ನೆಲ್ಲಿಗಳಿಂದ ಆಡಿನ ಮಾಂಸದ ರಸವನ್ನು ಸಿದ್ಧಮಾಡಿ ಕೊಡಬೇಕು. ||೧೩೭|| ದ್ರಾಕ್ಷೆ, ನೆಲ್ಲಿ, ಉತ್ತತ್ತಿ, ಪರೂಷಕ (ಧಡಸಲ) ಇವುಗಳ ರಸವನ್ನು ಹಾಕಿ ತರತರದ ತರ್ಪಣ (ಸತುವಿನಮಂಥ) ಕಟ್ಟು, ರಸಗಳನ್ನು ಮಾಡಬೇಕು. ||೧೩೮|| ಬಹಳ ದೋಷವುಳ್ಳವನಿಗೆ ನೀರ ಡಿಕೆ ದಾಹಗಳುಂಟಾಗಿ ಆಮಾಶಯದಲ್ಲಿದ್ದ ಕಫಪಿತ್ತಗಳು ಕೆರಳಿದ್ದರೆ, ಆ ಮದಾತ್ಯಯದಲ್ಲಿ ||೧೩೯|| ಮದ್ಯವನ್ನು ಅಥವಾ ದ್ರಾಕ್ಷಾರಸವನ್ನು ನೀರಿ ನಲ್ಲಿ ಕೊಟ್ಟು ಅಥವಾ ಸಕ್ತುವಿನ ತರ್ಪಣವನ್ನು ಕುಡಿಸಿ ಎಲ್ಲವನ್ನು ತೀವ್ರ ವಾಗಿ ವಮನ ಮಾಡಿಸಬೇಕು. ಹೀಗೆ ಮಾಡುವದರಿಂದ ರೋಗಮುಕ್ತ ನಾಗುತ್ತಾನೆ. ||೧೪೦|| ಹಸಿವೆಯಾಗಲು ಯೋಗ್ಯಕಾಲದಲ್ಲಿ ತರ್ಪಣವನ್ನು ಕೊಟ್ಟು, ಪೇಯಾದಿಕ್ರಮವನ್ನು ಆರಂಭಿಸಬೇಕು. ಅದರಿಂದ ಅಗ್ನಿಯು ಪ್ರದೀಪ್ತವಾಗಿ ಉಳಿದ ದೋಷವನ್ನೂ ಅನ್ನವನ್ನೂ ಪಚನಮಾಡುವದು. ||೧೪೧|| ಕೆಮ್ಮು, ರಕ್ತದವಾಂತಿ, ಪಾರ್ಶ್ವ-ಸ್ತನಗಳಲ್ಲಿ ನೋವು, ವಿದಾಹ, ಎದೆ-ಹೊಟ್ಟೆಗಳಲ್ಲಿ ಉತ್ಕ್ಲೇಶ ||೧೪೨|| ನೀರಡಿಕೆಗಳಿದ್ದರೆ, ಅಮೃತಬಳ್ಳಿ, ಭದ್ರಮುಸ್ತೆಗಳ ಅಥವಾ ಕಹಿಪಡುವಲದ ಕಷಾಯವನ್ನು ಶುಂಠಿಯ ಚೂರ್ಣ ಹಾಕಿ ಕೊಟ್ಟು ತಿತ್ತಿರಿ ಮಾಂಸವನ್ನು ತಿನ್ನಿಸಬೇಕು. ||೧೪೩|| ಪ್ರಬಲವಾದ ವಾತಪಿತ್ತಗಳಿಂದ ಉಂಟಾದ ಮದಾತ್ಯಯದಲ್ಲಿ ನೀರಡಿಕೆಯಾದರೆ ತಣ್ಣಗಿನ ದ್ರಾಕ್ಷಾರಸವನ್ನು ಕುಡಿಯಲು ಕೊಡಬೇಕು. ಅದು ದೋಷಗಳ ಅನು ಲೋಮನಮಾಡುವದು. ||೧೪೪|| ಅದು ಪಚನವಾಗಲು ಹುಳಿ ಮಧುರವಾದ ಆಡಿನ ಮಾಂಸರಸದೊಡನೆ ಊಟವನ್ನು ಮಾಡಿಸಬೇಕು. ಅನುತರ್ಷ (ಅನು ಪಾನರೂಪವಾಗಿ ಕೊಡುವ) ಮದ್ಯವನ್ನು ಕುಡಿಸಬೇಕು. ||೧೪೫|| ಮನಸ್ಸಿಗೆ ವಿಕೃತಿಯಾಗದಂತೆ ಅದರ ಪ್ರಮಾಣವಿಡಬೇಕು. ನೀರಡಿಸಿದವನಿಗೆ ನೀರಡಿ ಕೆಯು ಕಡಿಮೆಯಾಗಬೇಕು. ಆದರೆ ಮದವು ಬರಬಾರದು, ಈ ಪ್ರಮಾಣ ದಿಂದ ಬಹಳ ನೀರು ಹಾಕಿದ ಮದ್ಯವನ್ನು ಸ್ವಲ್ಪ ಸ್ವಲ್ಪವಾಗಿ ಕೊಡಬೇಕು. ||೧೪೬|| ಪರೂಷಕ (ಧಡಸಲ) ಗಳ ಪೀಲು (ಗೋವಿನಹಣ್ಣು)ಗಳ, ತಣ್ಣಗಿನ ರಸವನ್ನು ||೧೪೭|| ಅಥವಾ ನಾಲ್ಕುಪರ್ಣಿ (ಶಾಲಿಪರ್ಣಿ, ಪೃಶ್ನಿಪರ್ಣಿ, ಮಾಷಪರ್ಣಿ, ಮುದ್ಗಪರ್ಣಿ)ಗಳ ರಸವನ್ನು ಅಥವಾ ತಣ್ಣೀರನ್ನು ಅಥವಾ ಹೆಸರು, ದಾಳಿಂಬ, ಭತ್ತರಳುಗಳ ಕಷಾಯವನ್ನು ಕುಡಿಯಬೇಕು. ಅದು ನೀರಡಿಕೆಯನ್ನು ಕಳೆಯುವದು. ||೧೪೮|| ಬೋರೆ, ದಾಳಿಂಬ, ಆಮಸೋಲ,

ಚುಕ್ರೀಕಾ (ಚಾಂಗೇರಿ) ಚುಕ್ರಿಕಾ (ಹುಣಚಿಕ್ಕ) ಈ ಐದು ಹುಳಿ ಪದಾರ್ಥ ಗಳಿಂದ ಮಾಡಿದ ಮುಖಾಲೇಪ (ಕವಲ) ವು ನೀರಡಿಕೆಯನ್ನು ಕೂಡಲೇ ಕಳೆಯುವದು. ||೧೪೯|| ಪಿತ್ತಮದಾತ್ಯಯದಲ್ಲಿ ಶೀತವಾದ ಅನ್ನಪಾನಗಳೂ ಶೀತವಾದ ಹಾಸಿಗೆ ಆಸನಗಳೂ ಶೀತವಾದ ಗಾಳಿ ನೀರುಗಳ ಸ್ಪರ್ಶಗಳೂ ಶೀತ ಉಪವನಗಳೂ ||೧೫೦|| ಗಂಧದ ನೀರಿನಿಂದ ತಣ್ಣಗಾದ ಕ್ಷೌಮ, (ನಾರಿನವಸ್ತ್ರ) ಕೆಂಪುಕಮಲ, ನೀಲಕಮಲಗಳ, ರತ್ನಗಳ, ಮುತ್ತುಗಳ ಚಂದ್ರ ಕಿರಣಗಳಂತೆ ತಂಪಾದ ಸ್ಪರ್ಶಗಳೂ ||೧೫೧|| ಅದರಂತೆ ತಣ್ಣೀರಿನಿಂದ ತುಂಬಿದ ಬಂಗಾರ-ಬೆಳ್ಳಿ-ಕಂಚುಗಳ ಪಾತ್ರೆಗಳ ಬರ್ಫದಿಂದ ತುಂಬಿದ ಪಕಾಲಿಗಳ ಗಾಳಿಗೆ ತಣ್ಣಗಾದ ||೧೫೨|| ಸ್ಪರ್ಶವೂ ಗಂಧವನ್ನು ತೊಡೆದು ಕೊಂಡ ಸ್ತ್ರೀಯರ ಸ್ಪರ್ಶವೂ ಇದರ ಹೊರ್ತು ಶೀತವೀರ್ಯವಾದ ಎಲ್ಲವನ್ನೂ ಉಪಯೋಗಿಸಬೇಕು. ||೧೫೩|| ದಾಹವಾಗುತ್ತಿದ್ದರೆ ಜಲಯಂತ್ರಗಳನ್ನೂ ಗಾಳಿಬೀಸುವ ಯಂತ್ರಗಳನ್ನೂ ಧಾರಾಗೃಹಗಳನ್ನೂ ವೈದ್ಯನು ಸಿದ್ಧಪಡಿಸ ಬೇಕು. ||೧೫೪|| ಸ್ನಾನ, ಅವಗಾಹನ, ಬೀಸಣಿಕೆಗಳಿಗಾಗಿ ತಣ್ಣಗಿನನೀರನ್ನೇ ಉಪಯೋಗಿಸಬೇಕು. ಅದು ನೀರಡಿಕೆ, ದಾಹಗಳನ್ನು ಶಾಂತಮಾಡುವದು. ||೧೫೫|| ದಾಹದಲ್ಲಿ ಲೇಪಕ್ಕಾಗಿ ಫಲಿನೀ (ಪ್ರಿಯಂಗು) ಲೋಧ್ರ ಬಾಳದ ಬೇರು, ಕರೇಬಾಳದಬೇರು, ಕೇಶರ, ತಮಾಲಪತ್ರ, ಭದ್ರಮುಸ್ತೆ, ಕಾಲೀಯಕ ಕಾಷ್ಠದರಸ ಇವುಗಳ ಲೇಪವನ್ನು ಮಾಡಬೇಕು. || ೧೫೬ || ಮದ್ಯದ ದಾಹ ದಲ್ಲಿ ಮನೋಹರವಾದ ಗಂಧದ ನೀರು ಸಿಂಪಡಿಸಿದ ಕೆಂಪು ನೀಲಕಮಲಗಳ ಸ್ಪರ್ಶವು ಹಿತಕರವು. || ೧೫೭ || ತರತರದ ವಿಚಿತ್ರ ಕಥೆಗಳೂ ನವಿಲುಗಳ ಮಂಗಲ ಶಬ್ದಗಳೂ, ಮೇಘಗಳ ಮನೋಹರ ಧ್ವನಿಯೂ, ಮದಾತ್ಯಯ ವನ್ನು ಕಳೆಯುವವು. || ೧೫೮ || ಬೋರೆಎಲೆ ಅಥವಾ ಬೇವಿನಎಲೆ ಅಥವಾ ಅಂಟಾಳಕಾಯಿಗಳನ್ನು ಅರೆದು ತೆಗೆದ ಬುರುಗಿನ ಲೇಪವು ದಾಹದಲ್ಲಿ ಹಿತಕರ ವಾಗಿದೆ. || ೧೫೯ || ಮಂಡಯುಕ್ತವಾದ ಸುರೆ, ಹುಳಿಮೊಸರು, ಮಾದಾಳದ ರಸ, ಜೇನು ಇವುಗಳನ್ನು ಹುಳಿಗಂಜಿಯೊಡನೆ ಸ್ನಾನ-ಲೇಪಗಳಲ್ಲಿ ಉಪಯೋ ಗಿಸಿದರೆ ದಾಹನಾಶಕವಾಗುವವು || ೧೬೦ || ವೈದ್ಯನು ಹೇಳಿದಂತೆ ಕೇಳುವ ಜಾಣ ರೋಗಿಯ ಪಿತ್ತಮದಾತ್ಯಯ ವಿಕಾರವು ಈ ಅನುಭೂತ ಚಿಕಿತ್ಸೆಯಿಂದ ಶಾಂತವಾಗುವದು. || ೧೬೧ ||

ಕಫ ಮದಾತ್ಯಯ ಚಿಕಿತ್ಸೆಯನ್ನು ಹೇಳುತ್ತಾರೆ—

ಉಲ್ಲೇಖನೋಪವಾಸಾಭ್ಯಾಂ ಜಯೇತ್ ಕಫಮದಾತ್ಯಯಮ್ ||
ತೃಷ್ಯತೇ ಸಲಿಲಂ ಚಾಸ್ಮೈ ದದ್ಯಾದ್ಧ್ರೀಬೇರಸಾಧಿತಮ್ || ೧೬೨ ||

ಬಲಯಾ ಪೃಶ್ನಿಪರ್ಣ್ಯಾ ವಾ ಕಂಟಕಾರ್ಯಾಥವಾ ಶೃತಮ್ ||
ಸನಾಗರಾಭಿಃ ಸರ್ವಾಭಿರಥವಾ ಶೃತಶೀತಲಮ್ || ೧೬೩ ||

ದುಃಸ್ಪರ್ಶೇನ ಸಮುಸ್ತೇನ ಶೃತಂ ಪರ್ಪಟಕೇನ ವಾ ||
ಜಲಂ ಮುಸ್ತೈಃ ಶೃತಂ ವಾಪಿ ದದ್ಯಾದ್ ದೋಷವಿಪಾಚನಮ್ ||೧೬೪||

ಏತದೇವ ಚ ಪಾನೀಯಮ್ ಸರ್ವತ್ರಾಪಿ ಮದಾತ್ಯಯೇ ||
ನಿರತ್ಯಯಂ ಪೀಯಮಾನಂ ಪಿಪಾಸಾಜ್ವರನಾಶನಮ್ || ೧೬೫ ||

ನಿರಾಮಂ ಕಾಂಕ್ಷಿತಂ ಕಾಲೇ ಪಾಯಯೇತ್ ಬಹುಮಾಕ್ಷಿಕಮ್
ಶಾರ್ಕರಂ ಮಧು ವಾ ಜೀರ್ಣಮರಿಷ್ಟಂ ಸೀಧುಮೇವ ವಾ || ೧೬೬ ||

ರೂಕ್ಷಂ ತರ್ಪಣಸಂಯುಕ್ತಂ ಯವಾನ್ನಂ ವಾ ಪ್ರದಾಪಯೇತ್ ||
ವ್ಯೋಷಯೂಷಮಥಾಮ್ಲಂ ವಾ ಸಿದ್ಧಂ ವಾ ಸಾಮ್ಲವೇತಸಮ್
|| ೧೬೭ ||

ಛಾಗಮಾಂಸರಸಂ ರೂಕ್ಷಮಮ್ಲಂ ವಾ ಜಾಂಗಲಂ ರಸಮ್ ||
ಸ್ಥಾಲ್ಯಾಮಥ ಕಪಾಲೇ ವಾ ಭೃಷ್ಟಂ ನಿರ್ದ್ರವಶಿತಮ್ || ೧೬೮ ||

ಕಟ್ವಮ್ಲಲವಣಂ ಮಾಂಸಂ ಭಕ್ಷಯನ್ ಮೃಣಯಾಸ್ತಥಾ ||
ವ್ಯಕ್ತಮಾರೀಚಕಂ ಮಾಂಸಂ ಮಾತುಲುಂಗರಸಾನ್ವಿತಮ್ || ೧೬೯ ||

ಪ್ರಭೂತಕಟುಸಂಯುಕ್ತಂ ಯಮಾನೀನಾಗರಾನ್ವಿತಮ್ ||
ಯವಗೋಧೂಮಕಂ ಚಾನ್ನಂ ರೂಕ್ಷಂ ಯೂಷೇಣ ಭೋಜಯೇತ್
|| ೧೭೦ ||

ಕುಲತ್ಥಾನಾಂ ಚ ಶುಷ್ಕಾಣಾಂ ಮೂಲಕಾನಾಂ ರಸೇನ ವಾ ||
ಭೃಷ್ಟಂ ದಾಡಿಮಪಂಚಾಮ್ಲ ಮುದ್ಗಯೂಷಂ ಯವಾಷ್ಟಮಮ್
|| ೧೭೧ ||

ಯಥಾಗ್ನಿ ಭಕ್ಷಯೇತ್ ಕಾಲೇ ಪ್ರಭೂತಾರ್ದ್ರಕಪೇಷಿತಮ್ ||
ಪಿಬೇಚ್ಚ ನಿಗದಂ ಮದ್ಯಂ ಕಫಪ್ರಾಯೇ ಮದಾತ್ಯಯೇ || ೧೭೨ ||

ಸೌವರ್ಚಲಮಜಾಜ್ಯಶ್ಚ ವೃಕ್ಷಾಮ್ಲಂ ಸಾಮ್ಲವೇತಸಮ್ ॥
ತ್ವಗೇಲಾಮರಿಚಾರ್ಧಾಂಶಂ ಶರ್ಕರಾಭಾಗಯೋಜಿತಮ್ ॥ ೧೭೩ ॥
ಏತಲ್ಲವಣಮುಷ್ಣಾಂಗಮಗ್ನಿಸಂದೀಪನಂ ಪರಮ್ ॥
ಮದಾತ್ಯಯೇ ಕಫಪ್ರಾಯೇ ದದ್ಯಾತ್ ಸ್ರೋತೋವಿಶೋಧನಮ್ ॥ ೧೭೪ ॥

ಏತದೇವ ಪುನರ್ಯುಕ್ತ್ಯಾ ಮಧುರಾಮ್ಲದ್ರವೀಕೃತಮ್ ॥
ಗೋಧೂಮಶಾಲ್ಯಯವಾನ್ನಾನಾಂ ಮಾಂಸಾನಾಂ ಚಾತಿರೋಚನಮ್ ॥ ೧೭೫ ॥

ಪೇಷಯೇತ್ ಕಟುಕೈರ್ಯುಕ್ತಾಂ ಶ್ವೇತಾಂ ಬೀಜವಿವರ್ಜಿತಾಮ್ ॥
ಮೃದ್ವೀಕಾಂ ಮಾತುಲುಂಗಸ್ಯ ದಾಡಿಮಸ್ಯ ರಸೇನ ವಾ ॥ ೧೭೬ ॥
ಸೌವರ್ಚಲೈಲಾಮರಿಚೈರಜಾಜೀಭೃಂಗದೀಪ್ಯಕೈಃ ॥
ಸರಾಗಃ ಆಕ್ಷೌದ್ರಸಂಯುಕ್ತಃ ಶ್ರೇಷ್ಠೋ ರೋಚನದೀಪನಃ ॥೧೭೭॥
ಮೃದ್ವೀಕಾಯಾ ವಿಧಾನೇನ ಕಾರಯೇತ್ ಕಾರವೀಮಪಿ ॥
ಶುಕ್ತ ಮತ್ಸ್ಯಂಡಿಕೋಪೇತಂ ರಾಗಂ ರೋಚನದೀಪನಮ್ ॥೧೭೮॥

ಆಮ್ರಾಮಲಕಪೇಶೀನಾಂ ರಾಗಾನ್ ಕುರ್ಯಾತ್ ಪೃಥಕ್ ಪೃಥಕ್ ॥
ಧಾನ್ಯಸೌವರ್ಚಲಾಜಾಜೀಕಾರವೀಮರಿಚಾನ್ವಿತಾನ್ ॥ ೧೭೯ ॥
ಗುಡೇನ ಮಧುಶುಕ್ತೇನ ವೃಕ್ಷಾಮ್ಲಮಧುರೀಕೃತಾನ್ ॥
ತೈರನ್ನಂ ರುಚ್ಯತೇ ದಗ್ಧಂ ಭುಕ್ತಂ ಸಮ್ಯಕ್ ಚ ಜೀರ್ಯತಿ ॥ ೧೮೦ ॥

ರೂಕ್ಷಾಮ್ಲೇನಾನ್ನಪಾನೇನ ಸೋಷ್ಣೇನ ಶಿಶಿರೇಣ ವಾ ॥
ವ್ಯಾಯಾಮಲಂಘನಾಭ್ಯಾಂ ಚ ಯುಕ್ತ್ಯಾ ಜಾಗರಣೇನ ಚ ॥ ೧೮೧ ॥

ಕಾಲಯುಕ್ತೇನ ರೂಕ್ಷೇಣ ಸ್ನಾನೇನೋದ್ವರ್ತನೇನ ಚ ॥
ಪ್ರಾಣವರ್ಣಕರಾಣಾಂ ಚ ಪ್ರಹರ್ಷಾಣಾಂ ಚ ಸೇವಯಾ ॥ ೧೮೨ ॥
ಸೇವಯಾ ವಸನಾನಾಂಚ ಗುರೂಣಾಮಗುರೋರಪಿ ॥
ಸಂಕೋಚೇಷ್ಣಸುಖಾಂಗೀನಾಮಂಗನಾನಾಂ ಚ ಸೇವಯಾ ॥ ೧೮೩ ॥

ಸುಖಶಿಕ್ಷಿತಹಸ್ತಾನಾಂ ಸ್ತ್ರೀಣಾಂ ಸಂವಾಹನೇನ ಚ ॥
ಮದಾತ್ಯಯಃ ಕಫಪ್ರಾಯಃ ಶೀಘ್ರಂ ಸಮುಪಶಾಮ್ಯತಿ ॥ ೧೮೪ ॥

**ಅರ್ಥ—** ಕಫಮದಾತ್ಯಯವನ್ನು ವಾಂತಿ ಮತ್ತು ಉಪವಾಸಗಳಿಂದ ಕಳೆಯಬೇಕು. ಅವನಿಗೆ ನೀರಡಿಕೆಯಾದರೆ ಬಾಳದಬೇರು ಹಾಕಿ ಕುದಿಸಿದ ನೀರನ್ನು ಕೊಡಬೇಕು. ||೧೬೨|| ಕಳ್ಳಂಗಡ್ಲೆ ಮತ್ತು ಮೂರೆಲೆಹೊನ್ನೆಗಳನ್ನು ಅಥವಾ ನೆಲಗುಳ್ಳವನ್ನು ಅಥವಾ ಸುಂಠಿಯನ್ನು ಅಥವಾ ಇವೆಲ್ಲವನ್ನು ಹಾಕಿ ಕುದಿಸಿ ಆರಿಸಿದ ನೀರನ್ನು ಕೊಡಬೇಕು. ||೧೬೩|| ನೆಲಬೇವುಗಳ ಮತ್ತು ಜೇಕಿನ ಗಡ್ಡೆ ಅಥವಾ ಕಲ್ಲುಸಬ್ಬಸಿಗೆ ಅಥವಾ ಬಿಳೀ ಜೇಕಿನಗಡ್ಡೆ ಹಾಕಿ ಕುದಿಸಿದ ನೀರನ್ನು ಕೊಡಬೇಕು. ||೧೬೪|| ಎಲ್ಲ ಮದಾತ್ಯಯಗಳಲ್ಲಿಯೂ ಶೀತಲವಾಗಿ ಇವನ್ನೇ ಕೊಡಬೇಕು. ಅವು ನೀರಡಿಕೆ ಜ್ವರಗಳನ್ನು ನಾಶಮಾಡುವವು. ||೧೬೫|| ಆಮದ್ರವು ನಷ್ಟವಾಗಲು ನೀರು ಬೇಡಿದರೆ, ಬಹಳ ಜೇನು ಹಾಕಿ ಅದನ್ನು ಕೊಡಬೇಕು. ಸಕ್ಕರೆ ಹಾಕಿದ ನೀರನ್ನು ಅಥವಾ ಜೇನುತುಪ್ಪವನ್ನು ಅಥವಾ ಹಳೇ ಅರಿಷ್ಟವನ್ನು ಅಥವಾ ಶೀಧು (ಕಬ್ಬಿನಮದ್ಯ) ವನ್ನು ಕುಡಿಸಬೇಕು. ||೧೬೬|| ಸ್ನೇಹ ಹಾಕಿದ ಸಕ್ತುವಿನ ತರ್ಪಣವನ್ನು ಅಥವಾ ಜವೆಯ ಅನ್ನವನ್ನು ಕೊಡಿಸಬೇಕು. ಅಥವಾ ತ್ರಿಕಟು ಹಾಕಿದ ಅಥವಾ ಅಮ್ಲವೇತಸದಿಂದ ಹುಳಿಯಾದ ಹೆಸರು ಮುಂತಾದವುಗಳ ಕಟ್ಟನ್ನು ಕೊಡಬೇಕು. ||೧೬೭|| ಸ್ನೇಹ ಹಾಕದ ಆಡಿನ ಮಾಂಸರಸವನ್ನು ಅಥವಾ ಹುಳಿ ಮಾಡಿದ ಜಾಂಗಲ ಮಾಂಸವನ್ನು ಕಾಲಿಯಲ್ಲಿ ಅಥವಾ ಬಗ್ಗರಿಯಲ್ಲಿ ಹುರಿದು ಗಟ್ಟಿ ಮಾಡಿದ್ದನ್ನೇ ಕೊಡಬೇಕು. ||೧೬೮|| ಕಾರ, ಹುಳಿ, ಉಪ್ಪು ಮಾಂಸವನ್ನು ತಿನ್ನಿಸುತ್ತ ಜೇನನ್ನು ಕೊಡಬೇಕು. ಮೆಣಸು ಬಹಳ ಹಾಕಿದ ಗಾನಾಳದ ರಸ ಕೂಡಿಸಿದ ಮಾಂಸವನ್ನು ಕೊಡಬೇಕು. ||೧೬೯|| ಅಜವಾನ ಸುಂಠಿ ಮತ್ತು ಬಹಳ ಕಾರ ಹಾಕಿದ ಜವೆ ಮತ್ತು ಗೋದಿಗಳ ಅನ್ನವನ್ನು ತುಪ್ಪ ಹಾಕದೆ ಹುರಳಿಯ ಕಟ್ಟಿನೊಡನೆ ||೧೭೦|| ಅಥವಾ ಒಣಗಿದ ಮೂಲಂಗಿಗಳ ಕಟ್ಟಿನೊಡನೆ ತಿನ್ನಿಸಬೇಕು. ಕಫಾಧಿಕ ಮದಾತ್ಯಯದಲ್ಲಿ ದಾಳಿಂಬಕೋಟೆ, ಬೋರೆ, ದಾಳಿಂಬ, ಅಮಸೋಲ, ಚುಕ್ರೀಕಾ (ಚಾಂಗೇರಿ) ಚುಕ್ರಿಕಾ (ಹುಣಚಿಕ್ಕ) ಎಂಬ ೫ ಹುಳಿ ಪದಾರ್ಥಗಳು, ಹೆಸರಿನ ಕಟ್ಟು, ಜವೆ, ಇವೆಂಟು ಪದಾರ್ಥಗಳನ್ನು ಬಹಳ ಹಸಿಸುಂಠಿಯ ಕಲ್ಕವನ್ನು ಕೂಡಿಸಿ ಹುರಿದು ||೧೭೧|| ಹಸಿವೆಯಾಗಲು ಪಚನವಾಗುವಷ್ಟು ತಿನ್ನಿಸಬೇಕು. ಆಮೋಲಿ ಸಿಧೋರ್ಷ ಅಥವಾ ಹಳೇ ಮದ್ಯವನ್ನು ಕುಡಿಯಬೇಕು. ||೧೭೩||

ಅಷ್ಟಾಂಗಲವಣವನ್ನು ಹೇಳುತ್ತಾರೆ—

ಕಾಚಲವಣ ೧ಭಾಗ, ಜೀರಿಗೆ ೧ ಭಾಗ, ಅಮಸೋಲ ೧ ಭಾಗ, ಅಮ್ಲವೇತಸ ೧ ಭಾಗ, ದಾಲಿಚಿನ್ನಿ ಅರ್ಧಭಾಗ, ಯಾಲಕ್ಕಿ ಅರ್ಧಭಾಗ, ಮೆಣಸು ಅರ್ಧಭಾಗ, ಸಕ್ಕರೆ ೧ ಭಾಗ, ಇವುಗಳ ಚೂರ್ಣವನ್ನು ಮಾಡ ಬೇಕು. ||೧೭೩|| ಇದಕ್ಕೆ ಅಷ್ಟಾಂಗಲವಣವೆಂಬ ಹೆಸರು. ಇದು ಅಗ್ನಿ ದೀಪಕವಾಗಿದೆ. ಇದನ್ನು ಕಫಾಧಿಕ ಮದಾತ್ಯಯದಲ್ಲಿ ಕೊಟ್ಟರೆ ಅದು ಸ್ರೋತಸ್ಸುಗಳ ಶೋಧನವನ್ನು ಮಾಡುವದು. ||೧೭೪|| ಇದನ್ನೇ ಮಧುರ ಅಮ್ಲಗಳನ್ನು ಹಾಕಿ ಯುಕ್ತಿಯಿಂದ ದ್ರವರೂಪವಮಾಡಿದರೆ, ಅದು ಗೋದಿಯ ಮತ್ತು ಜವೆಯ ಅನ್ನಗಳಿಗೂ ಮಾಂಸಗಳಿಗೂ ಅತಿರುಚಿಯನ್ನುಂಟುಮಾಡು ವದು. ||೧೭೫|| ಬೀಜವಿಲ್ಲದ ಬಿಳೀ ದ್ರಾಕ್ಷದಲ್ಲಿ ಮೆಣಸು ಮುಂತಾದ ಕಾರ ಗಳನ್ನು ಕೂಡಿಸಿ ಮಾದಾಳದ ರಸದೊಡನೆ ಅಥವಾ ದಾಳಿಂಬದ ರಸದೊಡನೆ ಅರೆಯಬೇಕು. ||೧೭೬|| ಅದರಲ್ಲಿ ಕಾಚಲವಣ, ಯಾಲಕ್ಕಿ, ಮೆಣಸು, ಜೀರಿಗೆ ಭೃಂಗ (ದಾಲಚಿನ್ನಿ) ಅಜವಾನಗಳ ಚೂರ್ಣವನ್ನು ಹಾಕಿ ಜೇನು ಕೂಡಿ ಸಿದರೆ ಶ್ರೇಷ್ಠವಾದ ರುಚಿಕೊಡುವ ಅಗ್ನಿದೀಪಕರಾಗವೆಂಬ ಕಲ್ಪವಾಗುವದು. ||೧೭೭|| ದ್ರಾಕ್ಷದ ವಿಧಾನದಿಂದಲೇ ಕರೇಜೀರಿಗೆಯ ಶುಕ್ತ ಮತ್ತು ಸಕ್ಕರೆ ಹಾಕಿದ ರಾಗ (ಪಂಚಾಮೃತ) ವನ್ನು ಮಾಡಬೇಕು. ಇದಾದರೂ ರೋಚ ಕವೂ ದೀಪಕವೂ ಆಗಿದೆ. ||೧೭೮|| ಮಾವು ನೆಲ್ಲಿಗಳ ಹೋಳುಗಳಲ್ಲಿ ಹವೀಜ ಕಾಚಲವಣ, ಜೀರಿಗೆ, ಕರೇಜೀರಿಗೆ, ಮೆಣಸುಗಳ ಚೂರ್ಣವನ್ನು ಕೂಡಿಸಿ ||೧೭೯|| ಬೆಲ್ಲ, ಮಧು, ಶುಕ್ತಗಳಿಂದ ಚನ್ನಾಗಿ ಹುಳಿ ಮಧುರಮಾಡಿ ಬೇರೆ ಬೇರೆ ರಾಗಕಲ್ಪನಗಳನ್ನು ಮಾಡಬೇಕು. ಅದನ್ನು ಅನ್ನದಲ್ಲ ಕಲೆಸಿ ತಿಂದರೆ ಅದಕ್ಕೆ ರುಚಿ ಬರುವದು. ಮತ್ತು ತೀವ್ರ ಪಚನವಾಗುವದು. ||೧೮೦|| ರುಕ್ಷ ಅಮ್ಲವಾದ ಉಷ್ಣ ಅಥವಾ ಶೀತ ಅನ್ನಪಾನಗಳಿಂದಲೂ ವ್ಯಾಯಾಮ ಲಂಘ ನಗಳಿಂದಲೂ ಯೋಗ್ಯವಾದ ಜಾಗರಣೆಯಿಂದಲೂ ||೧೮೧|| ಕಾಲಕ್ಕೆ ಯೋಗ್ಯ ವಾದ ರುಕ್ಷಸ್ನಾನ, ಉದ್ವರ್ತನೆಗಳಿಂದಲೂ ಶಕ್ತಿ, ಬಣ್ಣ, ಆನಂದವನ್ನುಂಟು ಮಾಡುವ ವಸ್ತುಗಳ ಸೇವನೆಯಿಂದಲೂ ||೧೮೨|| ದಪ್ಪಾದ ವಸ್ತ್ರಗಳನ್ನು ಹೊತ್ತುಕೊಳ್ಳುವದರಿಂದಲೂ ಅಗುರು ಗಂಧದ ಲೇಪನದಿಂದಲೂ ಸಂಕೋಚ ದಿಂದ ಉಷ್ಣವಾದ್ದರಿಂದ ಸುಖದಾಯಕ ಅವಯವಗಳುಳ್ಳ ಹೆಂಗಸರ ಸೇವನೆ ಯಿಂದಲೂ ||೧೮೩|| ಸುಖವಾಗುವಂತೆ ಮರ್ದನಮಾಡಲು ಕಲಿತ ಕೈಗಳುಳ್ಳ

ಹೆಂಗಸರ ಸಂಭಾಷಣದಿಂದಲೂ ಕೂಡ ಮದಾತ್ಯಯವು ಶೀಘ್ರವಾಗಿ ನಿವೃತ್ತಿ
ಯಾಗುವದು (೧೮೪)

ಯದಹಂ ಕರ್ಮ ನಿರ್ದಿಷ್ಟಂ ಪೃಥಗ್ ದೋಷೋಲ್ಬಣಂ ಪ್ರತಿ ||
ಸನ್ನಿಪಾತೇ ದಶವಿಧೇ ತದ್ವಿಕಲ್ಪ್ಯಂ ಭಿಷಗ್ವಿದಾ || ೧೮೫ ||
ಯಶ್ಚ ದೋಷವಿಕಲ್ಪಜ್ಞೋ ಯಶ್ಚೌಷಧವಿಕಲ್ಪವಿತ್ ||
ಸ ಸಾಧ್ಯಾನ್ ಸಾಧಯೇದ್ ವ್ಯಾಧೀನ್ ಸಾಧ್ಯಾಸಾಧ್ಯವಿಭಾಗವಿತ್
|| ೧೮೬ ||

ವನಾನಿ ರಮಣೀಯಾನಿ ಪದ್ಮಿನ್ಯಃ ಸಲಿಲಾಶಯಾಃ ||
ವಿಷಯಾನ್ಯನ್ನಪಾನಾನಿ ಸಹಾಯಾಶ್ಚ ಪ್ರಹರ್ಷಣಾಃ || ೧೮೭ ||
ಮಾಲ್ಯಾನಿ ಗಂಧಯೋಗಾಶ್ಚ ವಾಸಾಂಸಿ ವಿವಿಧಾನಿ ಚ ||
ಗಂಧರ್ವಶಬ್ದಾಃ ಕಾಂತಾಶ್ಚ ಗೋಷ್ಠ್ಯಶ್ಚ ಹೃದಯಪ್ರಿಯಾಃ || ೧೮೮ ||
ಸಂಕಥಾ ಹಾಸ್ಯಗೀತಾನಾಂ ವಿಶದಾಶ್ಚೈವ ಯೋಜನಾ ||
ಪ್ರಿಯಾಶ್ಚಾನುಮತಾ ನಾರ್ಯೋ ನಾಶಯಂತಿ ಮದಾತ್ಯಯಮ್
|| ೧೮೯ ||

ನಾಪ್ನೋಭ್ಯ ಹಿ ಮನೋ ಮದ್ಯಂ ಶರೀರಮವಿಹತ್ಯ ಚ ||
ಕುರ್ಯಾನ್ಮದಾತ್ಯಯಂ ತಸ್ಮಾದೇಷ್ಟವ್ಯಾ ಹರ್ಷಿಣೀ ಕ್ರಿಯಾ || ೧೯೦ ||
ಆಭಿಃ ಕ್ರಿಯಾಭಿಃ ಸಿದ್ಧಾಭಿಃ ಶಮಂ ಯಾತಿ ಮದಾತ್ಯಯಃ ||
ನಚೇನ್ಮದ್ಯಕ್ರಮಂ ಮುಕ್ತ್ವಾ ಕ್ಷೀರಮಸ್ಯ ಪ್ರಯೋಜಯೇತ್ || ೧೯೧ ||
ಲಂಘನೈಃ ಪಾಚನೈರ್ದೋಷಶೋಧನೈಃ ಶಮನೈರಪಿ ||
ವಿಮುದ್ಯಸ್ಯ ಕಫೇ ಕ್ಷೀಣೇ ಜಾತೇ ದೌರ್ಬಲ್ಯಲಾಘವೇ || ೧೯೨ ||

ತಸ್ಯ ಮದ್ಯವಿದಗ್ಧಸ್ಯ ವಾತಪಿತ್ತಾಧಿಕಸ್ಯ ಚ ||
ಗ್ರೀಷ್ಮೋಪತಪ್ತಸ್ಯ ತರೋರ್ಯಥಾ ವರ್ಷಂ ತಥಾ ಪಯಃ || ೧೯೩ ||

ಪಯಸಾ ವಿಹತೇ ರೋಗೇ ಬಲೇ ಜಾತೇ ನಿವರ್ತಯೇತ್ ||
ಕ್ಷೀರಪ್ರಯೋಗಂ ಮದ್ಯಂಚ ಕ್ರಮೇಣಾಲ್ಪಾಲ್ಪಮಾಚರೇತ್ || ೧೯೪ ||

ವಿಚ್ಛಿನ್ನಮದ್ಯಃ ಸಹಸಾ ಯೋಽತಿಮದ್ಯಂ ನಿಷೇವತೇ ||
ಧ್ವಂಸಕೋ ವಿಕ್ಷಯಶ್ಚೈವ ರೋಗಸ್ತಸ್ಯೋಪಜಾಯತೇ || ೧೯೫ ||

**ವ್ಯಾಧ್ಯುಪಕ್ಷೀಣದೇಹಸ್ಯ ದುಶ್ಚಿಕಿತ್ಸ್ಯತಮೌ ಹಿ ತೌ ||**
**ತಯೋರ್ಲಿಂಗಂ ಚಿಕಿತ್ಸಾ ಚ ಯಥಾವದುಪದೇಕ್ಷ್ಯತೇ || ೧೯೬ ||**

**ಅರ್ಥ—** ಒಂದೊಂದೇ ದೋಷವು ಹೆಚ್ಚಾಗಿ ಉಳ್ಳ ಮದಾತ್ಯಯದಲ್ಲಿ ಹೇಳಿದ ಈ ಚಿಕಿತ್ಸೆಯನ್ನೇ ಪತ್ತು (ಎರಡು ದೋಷ ಹೆಚ್ಚಾಗಿ ಉಳ್ಳವು ಮೂರು, ಒಂದು ಹೆಚ್ಚು, ಒಂದು ಮಧ್ಯಮ, ಒಂದು ಕಡಿಮೆ, ಹೀಗೆ ದೋಷ ವೃದ್ಧಿವು ಆರು, ಮೂರು ದೋಷಗಳು ಸಮನಾಗಿ ಉಳ್ಳದ್ದು ೧, ಹೀಗೆ ೧೦) ವಿವಿಧ ಸನ್ನಿಪಾತಗಳಲ್ಲಿ ವೈದ್ಯಶ್ರೇಷ್ಠನಿಂದ ವಿಚಾರಿಸಿ ಉಪಯೋಗಿಸತಕ್ಕದ್ದು. ||೧೮೫|| ಯಾವನು ದೋಷಗಳ ತಾರತಮ್ಯವನ್ನೂ ಔಷಧಗಳ ಮರ್ಮವನ್ನೂ ರೋಗಗಳ ಸಾಧ್ಯಾಸಾಧ್ಯತೆಯನ್ನೂ ಬಲ್ಲನೋ ಅವನು ಶೀಘ್ರವಾಗಿ ಸಾಧ್ಯವಾದ ರೋಗಗಳನ್ನು ಚಿಕಿತ್ಸೆ ಮಾಡುವನು. ||೧೮೬|| ರಮ್ಯವಾದ ವನಗಳೂ ಕಮಲದ ಬಳ್ಳಿಗಳೂ ಜಲಾಶಯಗಳೂ ಸ್ವಚ್ಛವಾದ ಆಸನಗಳೂ, ಆನಂದ ಕೊಡುವ ಮಿತ್ರರೂ ||೧೮೭|| ನಾಟಕಗಳೂ ಸುಗಂಧ ದ್ರವ್ಯಗಳೂ ರಮ್ಯ ಹಾಡುಗಳೂ ಮನೋಹರ ಕಥೆಗಳೂ ||೧೮೮|| ಉತ್ತಮವಾದ ಕಥೆ, ಪ್ರಹಸನ ಗಾಯನಗಳ ಯೋಜನೆಗಳೂ ಅನುರಕ್ತರಾದ ಪ್ರಿಯ ಸ್ತ್ರೀಯರೂ ಮದಾತ್ಯಯವನ್ನು ನಾಶಮಾಡುತ್ತಾರೆ. ||೧೮೯|| ಮನಸ್ಸನ್ನು ಕ್ಷೋಭಿಸದೆ, ಶರೀರವನ್ನು ಕೆಡಿಸದೆ, ಮದ್ಯವು ಮದಾತ್ಯಯವನ್ನುಂಟುಮಾಡದು. ಅದ್ದರಿಂದ ಹರ್ಷಮಾಡುವ ಚಿಕಿತ್ಸೆಯನ್ನು ಮಾಡತಕ್ಕದ್ದು. ||೧೯೦|| ಈ ಅನುಭೂತಕ್ರಿಯೆಗಳಿಂದಲೂ ಮದಾತ್ಯಯವು ಹೋಗದಿದ್ದರೆ, ಮದ್ಯ ಕೊಡುವದನ್ನು ಬಿಟ್ಟು ಹಾಲನ್ನು ಕೊಡಬೇಕು. ||೧೯೧|| ಮದ್ಯವನ್ನು ಬಿಟ್ಟವನ ಮದಾತ್ಯಯದಲ್ಲಿ ಕಫವು ಲಂಘನ, ಪಾಚನ, ಶೋಷ, ಶೋಧನ, ಶಮನಗಳಿಂದ ಕ್ಷೀಣವಾಗಿ ಅದಕ್ಕೆ ಲಾಘವಗಳುಂಟಾಗುತ್ತವೆ. ||೧೯೨|| ಮದ್ಯದಿಂದ ವಿದಾಹ ಹೊಂದಿದ ವಾತಪಿತ್ತವು ಬಹಳವಾಗಿ ಉಳ್ಳ ಅವನಿಗೆ ಆ ಕಾಲದಲ್ಲಿ ಕೊಡುವ ಹಾಲು, ಬೇಸಿಗೆಯಿಂದ ಬಾಡಿದ ಗಿಡದಮೇಲೆ ಬೀಳುವ ಮಳೆಯಂತೆ ಹಿತಕರವಾಗುತ್ತದೆ. ||೧೯೩|| ಹಾಲಿನಿಂದ ರೋಗವು ಹೋಗಿ ಶಕ್ತಿಬರಲು, ಹಾಲು ಕೊಡುವದನ್ನು ನಿಲ್ಲಿಸಿ ಕ್ರಮದಿಂದ ಸ್ವಲ್ಪ ಸ್ವಲ್ಪ ಮದ್ಯವನ್ನು ಕೊಡಲು ಆರಂಭಿಸಬೇಕು. ||೧೯೪|| ಏಕೆಂದರೆ ಮದ್ಯಬಿಟ್ಟವನು ಬಹಳ ಮದ್ಯವನ್ನು ಒಮ್ಮೆಲೇ ಸೇವಿಸಿದರೆ ಅವನಿಗೆ ಮುಂದೆ ಹೇಳುವ ಧ್ವಂಸಕ, ವಿಕ್ಷೇಯವೆಂಬ ರೋಗಗಳುಂಟಾಗುತ್ತವೆ. ||೧೯೫|| ಮೊದಲೇ ವ್ಯಾಧಿಯಿಂದ ಕ್ಷೀಣನಾದವ

ನಿಗೆ ಉಂಟಾದ ಈ ರೋಗಗಳನ್ನು ಚಿಕಿತ್ಸಿಸುವದು ಕಠಿಣವಹೆ. ಅವುಗಳ ಲಕ್ಷಣ ಮತ್ತು ಚಿಕಿತ್ಸೆಗಳನ್ನು ಮುಂದೆ ಸರಿಯಾಗಿ ಹೇಳುವೆವು. ||೯೬||

ಧ್ವಂಸಕ, ವಿಕ್ಷಯಗಳ ಲಕ್ಷಣ ಚಿಕಿತ್ಸೆಗಳನ್ನು ಹೇಳುತ್ತಾರೆ—

**ಶ್ಲೇಷ್ಮಪ್ರಸೇಕಃ ಕಂಠಾಸ್ಯಶೋಷಃ ಶಬ್ದಾಸಹಿಷ್ಣುತಾ ||**
**ಮೋಹಸ್ತಂದ್ರಾತಿಯೋಗಶ್ಚ ಜ್ಞೇಯಂ ಧ್ವಂಸಕಲಕ್ಷಣಮ್ || ೯೭ ||**
**ಹೃತ್‌ಕಂಠರೋಗಃ ಸಮ್ಮೋಹಶ್ಛರ್ದಿರಂಗರುಜಾ ಜ್ವರಃ ||**
**ತೃಷ್ಣಾ ಕಾಸಃ ಶಿರಃಶೂಲಮೇತದ್ ವಿಕ್ಷಯಲಕ್ಷಣಮ್ || ೯೮ ||**
**ತಯೋಃ ಕರ್ಮ ತದೇವೇಷ್ಟಂ ವಾತಿಕೇ ಯನ್ಮದಾತ್ಯಯೇ ||**
**ತೌ ಹಿ ಪ್ರಕ್ಷೀಣದೇಹಸ್ಯ ಜಾಯೇತಾಂ ದುರ್ಬಲಸ್ಯ ವೈ || ೯೯ ||**
**ಬಸ್ತಯಃ ಸರ್ಪಿಷಃ ಪಾನಂ ಪ್ರಯೋಗಾಃ ಕ್ಷೀರಸರ್ಪಿಷೋಃ ||**
**ಅಭ್ಯಂಗೋತ್ಸಾದನಸ್ನಾನಾನ್ಯನ್ನಪಾನಂಚ ವಾತನುತ್ || ೧೦೦ ||**
**ಧ್ವಂಸಕೋ ವಿಕ್ಷಯಶ್ಚೈವ ಕರ್ಮಣಾನೇನ ಶಾಮ್ಯತಃ ||**
**ಯುಕ್ತಮದ್ಯಸ್ಯ ಮದ್ಯೋತ್ಥೋ ನ ವ್ಯಾಧಿರುಪಜಾಯತೇ || ೧೦೧ ||**
**ನಿವೃತ್ತಃ ಸರ್ವಮದ್ಯೇಭ್ಯೋ ನರೋ ಯಃ ಸ್ಯಾಜ್ಜಿತೇಂದ್ರಿಯಃ ||**
**ಶಾರೀರಮಾನಸೈರ್ಧೀಮಾನ್ ವಿಕಾರೈರ್ನ ಸ ಯುಜ್ಯತೇ || ೧೦೨ ||**

**ಅರ್ಥ—** ಬಾಯಿಗೆ ನೀರು ಬಿಡೋಣ, ಬಾಯಿಕಂಠಗಳು ಒಣಗೋಣ ಶಬ್ದಗಳು ಬೇಡಾಗೋಣ, ಮೋಹ, ತಂದ್ರೆಗಳು ಬಹಳವಿರೋಣ, ಇದು ಧ್ವಂಸಕ ಲಕ್ಷಣವು. ||೯೭|| ಎದೆ ಮತ್ತು ಕುತ್ತಿಗೆಗಳಲ್ಲಿ ನೋಯೋಣ, ಮೂರ್ಛೆ, ವಾಂತಿ, ಮೈನೋಯೋಣ, ಜ್ವರ, ನೀರಡಿಕೆ, ಕೆಮ್ಮು, ತಲೆಶೂಲಿ ಇದು ವಿಕ್ಷಯದ ಲಕ್ಷಣವು. ||೯೮|| ಅವು ಕೃಶನಾದ ದುರ್ಬಲರೋಗಿಗೆ ಉಂಟಾಗುತ್ತವೆ. ಆದಕಾರಣ ವಾತಿಕ ಮದಾತ್ಯಯದಲ್ಲಿ ಹೇಳಿದ ಚಿಕಿತ್ಸೆಯನ್ನೇ ಅವುಗಳಲ್ಲಿ ಮಾಡಬೇಕು. ||೯೯|| ಬಸ್ತಿ, ಘೃತಪಾನ, ಹಾಲು, ತುಪ್ಪಗಳ ಪ್ರಯೋಗ, ಅಭ್ಯಂಗ, ಉದ್ವರ್ತನ, ಸ್ನಾನಗಳೂ, ಅನ್ನಪಾನಗಳೂ ವಾತನಾಶಕವಾಗಿರುವವು. ||೧೦೦|| ಆದ್ದರಿಂದ ಈ ಕರ್ಮಗಳಿಂದ ಧ್ವಂಸಕ ಮತ್ತು ವಿಕ್ಷಯಗಳು ಶಾಂತವಾಗುತ್ತವೆ. ಯೋಗ್ಯ ಪ್ರಮಾಣದಿಂದ ಮದ್ಯವನ್ನು ಕುಡಿಯುವವನಿಗೆ ಮದಾತ್ಯಯವುಂಟಾಗದು. ||೧೦೧|| ಎಲ್ಲ ಮದ್ಯಗಳನ್ನು ಬಿಟ್ಟು ಜಿತೇಂದ್ರಿಯನಾಗಿರುವ ಜಾಣ ಮನುಷ್ಯನಿಗೆ ಶಾರೀರಿಕ ಮಾನಸಿಕ ಯಾವ ವಿಕಾರಗಳೂ ಉಂಟಾಗವು ||೧೦೨||

ತತ್ರಶ್ಲೋಕಾಃ

**ಯತ್ಪ್ರಭಾವಾ ಭಗವತೀ ಸುರಾ ಪೇಯಾ ಯಥಾ ಚ ಸಾ ॥**
**ಯದ್ದ್ರವ್ಯಾ ಯಸ್ಯ ಯಾ ಚೇಷ್ಟಾ ಯೋಗಂ ಚಾಪೇಕ್ಷತೇ ಯಥಾ ॥ ೨೦೩ ॥**
**ಯಥಾ ಮದಯತೇ ಯೈಶ್ಚ ಗುಣೈರ್ಯುಕ್ತಾ ಮಹಾಗುಣಾ ॥**
**ಯೋ ಮದೋ ಮದಭೇದಾಶ್ಚ ಯೇ ತ್ರಯಃ ಸ್ವಸ್ವಲಕ್ಷಣಾಃ ॥ ೨೦೪ ॥**
**ಯೇ ಚ ಮದ್ಯಕೃತಾ ದೋಷಾ ಗುಣಾ ಯೇ ಚ ಮದಾತ್ಮಕಾಃ ॥**
**ಯಚ್ಚ ತ್ರಿವಿಧಮಾಪಾನಂ ಯಥಾ ಸತ್ವಂ ಚ ಲಕ್ಷಣಮ್ ॥ ೨೦೫ ॥**
**ಯೇ ಸಹಾಯಾಃ ಸುಖೇಃ ಪಾನೇ ಚಿರಕ್ಷಿಪ್ರಮದಾ ನರಾಃ ॥**
**ಮದಾತ್ಯಯಸ್ಯ ಯೋ ಹೇತುರ್ಲಕ್ಷಣಂಚ ಯಥಾಯಥಮ್ ॥೨೦೬॥**
**ಮದ್ಯಂ ಮದ್ಯೋತ್ಥಿತಾನ್ ರೋಗಾನ್ ಹಂತಿ ಯಶ್ಚ ಕ್ರಿಯಾಕ್ರಮಃ ॥**
**ಸರ್ವಂತಮುಕ್ತಮಖಿಲಂ ಮದಾತ್ಯಯಚಿಕಿತ್ಸಿತೇ ॥ ೨೦೭ ॥**

**ಅರ್ಥ—** ಪವಿತ್ರವಾದ ಮದ್ಯದ ಪ್ರಭಾವ ಅದನ್ನು ಹೇಗೆ ಕುಡಿಯಬೇಕು, ಅದು ಯಾವ ದ್ರವ್ಯಗಳಿಂದಾಗುತ್ತದೆ. ಯಾರಿಗೆ ಯಾವ ಮದ್ಯವು ಹಿತಕರವು, ಅದರಲ್ಲಿ ಏನು ಅಪೇಕ್ಷಿಸುವದು, ॥೨೦೩॥ ಅದು ಹೇಗೆ ಮದವನ್ನುಂಟುಮಾಡುತ್ತದೆ, ಯಾವ ಗುಣಗಳಿದ್ದರೆ ಶ್ರೇಷ್ಠವಾದದ್ದು, ಮದವೆಂದರೇನು, ಮದದ ಮೂರು ಪ್ರಕಾರಗಳು ಮತ್ತು ಅವುಗಳ ಲಕ್ಷಣಗಳು ॥೨೦೪॥ ಮದ್ಯದ ದೋಷಗಳು, ಅವುಗಳ ಗುಣಗಳು, ಮದ್ಯದ ಮೂರುತರದ ಪಾನೋತ್ಸವ, ಕುಡಿಯುವವರ ಅವರ ಸತ್ವಾನುಸಾರ ಮೂರು ಪ್ರಕಾರದ ಲಕ್ಷಣ ॥೨೦೫॥ ಕುಡಿಯುವಾಗ ಸುಖಕರ ಮಿತ್ರರು, ಯಾರು ಯಾರಿಗೆ ಮದವು ತೀವ್ರ ಅಥವಾ ತಡವಾಗಿ ಬರುವದು, ಮದಾತ್ಯಯದ ಕಾರಣ, ಅವುಗಳ ಯಥಾಯೋಗ್ಯ ಲಕ್ಷಣ, ॥ ೨೦೬ ॥ ಮದ್ಯವು ಮದ್ಯದಿಂದುಂಟಾದ ರೋಗಗಳನ್ನು ಕಳೆಯುತ್ತದೆಂಬದೂ, ಮದ್ಯದ ಚಿಕಿತ್ಸಾಕ್ರಮವೂ, ಇದೆಲ್ಲ ಈ ಮದಾತ್ಯಯ ಚಿಕಿತ್ಸೆಯಲ್ಲಿ ಹೇಳಲ್ಪಟ್ಟಿತು. ॥ ೨೦೭ ॥

**ಇತ್ಯಗ್ನಿವೇಶಕೃತೇ ತಂತ್ರೇ ದೃಢಬಲಪ್ರತಿಸಂಸ್ಕೃತೇ ಚಿಕಿತ್ಸಿತಸ್ಥಾನೇ ಮದಾತ್ಯಯ ಚಿಕಿತ್ಸಿತಂ ನಾಮ ಚತುರ್ವಿಂಶೋಽಧ್ಯಾಯಃ ॥**

ಶ್ರೀ ಮಹಾದೇವ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆಪ್ಟೆ ಅನಂತಾಚಾರ್ಯರಿಂದ ರಚಿತವಾದ **ಚರಕ 'ಚಿಕಿತ್ಸಾ ಬೋಧಿನಿ'** ಎಂಬ ಚರಕ ಸಂಹಿತೆಯ ಟಿಪ್ಪಣಿಯಲ್ಲಿ **ಮದಾತ್ಯಯ** ಚಿಕಿತ್ಸೆ ಎಂಬ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.

# ೨೫ ನೆಯ ಅಧ್ಯಾಯ

## ದ್ವಿವ್ರಣೀಯ ಚಿಕಿತ್ಸೆ

### ( ಮದಾತ್ಯಯ ನಿದಾನ )

ಮದ್ಯದಿಂದ ಮತ್ತನಾದವನಿಂದ ವ್ರಣವಾಗುವದರಿಂದ ಮದಾತ್ಯಯದನಂತರ ದ್ವಿವ್ರಣೀಯ ಚಿಕಿತ್ಸೆಯನ್ನು ಹೇಳುತ್ತಾರೆ.

**ಅಥಾತೋ ದ್ವಿವ್ರಣೀಯ ಚಿಕಿತ್ಸಿತಂ ವ್ಯಾಖ್ಯಾಸ್ಯಾಮಃ**

**ಅರ್ಥ:—** ಇನ್ನು ಮೇಲೆ 'ದ್ವಿವ್ರಣೀಯ ಚಿಕಿತ್ಸೆ' ಯೆಂಬ ಅಧ್ಯಾಯವನ್ನು ಹೇಳುವೆವು.

**ಇತಿ ಹ ಸ್ಮಾಹ ಭಗವಾನಾತ್ರೇಯಃ** ||೧||

**ಅರ್ಥ:—** ಪೂಜ್ಯರಾದ ಆತ್ರೇಯರು ಹೀಗೆ ಹೇಳಿದರು ||೧||

**ಪರಾವರಜ್ಞಮಾತ್ರೇಯಂ ಗತಮಾನಮದವ್ಯಥಮ್ ।**
**ಅಗ್ನಿವೇಶೋ ಗುರುಂ ಕಾಲೇ ವಿನಯಾದಿದಮಬ್ರವೀತ್** ||೨||

**ಅರ್ಥ:—** ಭೂತ-ಭವಿಷ್ಯ ಸಂಗತಿಗಳ ಜ್ಞಾನವುಳ್ಳ, ಅಭಿಮಾನ ಅಹಂಕಾರ ದುಃಖರಹಿತರಾದ, ಗುರುಗಳಾದ, ಆತ್ರೇಯ ಋಷಿಗಳಿಗೆ ಯೋಗ್ಯ ಅವಸರದಲ್ಲಿ ಅಗ್ನಿವೇಶರು ವಿನಯದಿಂದ ಹೀಗೆ ಅಂದರು. ||೨||

**ಭಗವನ್ ಪೂರ್ವಮುದ್ದಿಷ್ಟೌ ದ್ವೌ ವ್ರಣೌ ರೋಗಸಂಗ್ರಹೇ ||**
**ತಯೋರ್ಲಿಂಗಂ ಚಿಕಿತ್ಸಾಂ ಚ ವಕ್ತುಮರ್ಹಸಿ ಶರ್ಮದ** ||೩||

**ಅರ್ಥ—** ಪೂಜ್ಯರೇ, ಹಿಂದೆ ಅಷ್ಟೋದರೀಯ ಅಧ್ಯಾಯದಲ್ಲಿ ರೋಗ ಸಂಖ್ಯೆಯನ್ನು ಹೇಳುವಾಗ) ಎರಡು ತರದ ವ್ರಣಗಳಿರುತ್ತವೆಯೆಂದು ಹೇಳಿದೆ. ಅವುಗಳ ಲಕ್ಷಣ ಮತ್ತು ಚಿಕಿತ್ಸೆಗಳನ್ನು ಹೇ ಆನಂದದಾಯಕರೇ, ದಯವಿಟ್ಟು ಹೇಳಿರಿ. ||೩||

ಗುರುಗಳು ಹೇಳುತ್ತಾರೆ—

**ಹುತಾಶವೇಶಸ್ಯ ವಚಸ್ತಚ್ ಶ್ರುತ್ವಾ ಗುರುರಬ್ರವೀತ್ ||**
**ಯೌ ವ್ರಣೌ ಪೂರ್ವಮುದ್ದಿಷ್ಟೌ ನಿಜಶ್ಚಾಗಂತುರೇವ ಚ ||೪||**

**ಅರ್ಥ—** ಹೀಗೆಂದ ಅಗ್ನಿವೇಶನ ಈ ಮಾತನ್ನು ಕೇಳಿ, ಗುರುಗಳು ಅಂದರು— ಹಿಂದೆ ಹೇಳಲ್ಪಟ್ಟ ವ್ರಣಗಳು ನಿಜ ಮತ್ತು ಆಗಂತು ಎಂದು ಎರಡು ಇರುತ್ತವೆ. || ೪ ||

**ಶ್ರೂಯತಾಂ ವಿಧಿವತ್ ಸೌಮ್ಯ ತಯೋರ್ಲಿಂಗಂ ಸಭೇಷಜಂ ||**
**ನಿಜಃ ಶರೀರದೋಷೋತ್ಥ ಆಗಂತುರ್ಬಾಹ್ಯಹೇತುಜಃ || ೫ ||**

**ಅರ್ಥ—** ಶಿಷ್ಯನೇ, ಅವುಗಳ ಲಕ್ಷಣ ಮತ್ತು ಔಷಧಗಳನ್ನು ಹೇಳುತ್ತೇನೆ ಕೇಳು. ಶರೀರದ ದೋಷ (ವಾತ, ಪಿತ್ತ, ಕಫ) ಗಳಿಂದ ಉಂಟಾದವು ನಿಜಗಳೆಂದೂ ಬಾಹ್ಯಕಾರಣಗಳಿಂದುಂಟಾದವು ಆಗಂತುಗಳೆಂದೂ ಕರೆಯಲ್ಪಡುವವು. || ೫ ||

**ವಧಬಂಧಪ್ರಪತನಾದ್ ದಂಷ್ಟ್ರಾದಂತನಖಕ್ಷತಾತ್ ||**
**ಆಗಂತವೋ ವ್ರಣಾಸ್ತದ್ವದ್ ವಿಷಸ್ಪರ್ಶಾಗ್ನಿಶಸ್ತ್ರಜಾಃ || ೬ ||**

**ಅರ್ಥ—** ಹೊಡೆತ, ಕಟ್ಟೋಣ, ಬೀಳೋಣಗಳಿಂದಲೂ ದವಡೆಹಲ್ಲು ಉಗುರುಗಳ ಗಾಯದಿಂದಲೂ ಅದರಂತೆ ವಿಷಸ್ಪರ್ಶ, ಬೆಂಕಿ, ಶಸ್ತ್ರಗಳಿಂದಲೂ ಆಗಂತು ವ್ರಣಗಳು ಉಂಟಾಗುವವು. || ೬ ||

**ಮಂತ್ರಾಗದಪ್ರಲೇಪಾದ್ಯೈರ್ಭೇಷಜೈರ್ಹೇತುಭಿಶ್ಚ ತೇ ||**
**ಲಿಂಗೈಕದೇಶೈಶ್ಚೋದ್ದಿಷ್ಟಾ ವಿಪರೀತಾ ನಿಜೈರ್ವ್ರಣಾಃ || ೭ ||**

**ಅರ್ಥ—** ಈ ಆಗಂತು ವ್ರಣಗಳಿಗೆ ಮಂತ್ರ, ಅಗದ, ಪ್ರಲೇಪ ಮುಂತಾದ ಬೇರೆ ಔಷಧಗಳೂ ವಧ, ಬಂಧನ ಮುಂತಾದ ಬೇರೆ ಕಾರಣಗಳೂ ಮೊದಲು ವೇದನೆ ಆಮೇಲೆ ವಾತಾದಿಗಳ ಸಂಬಂಧ ಹೀಗೆ ಬೇರೆ ಕೆಲವು ಲಕ್ಷಣಗಳೂ ಇರುವದರಿಂದ ಇವು ನಿಜ ವ್ರಣಕ್ಕೆ ವಿಪರೀತವಾಗಿರುತ್ತವೆ. || ೭ ||

**ವ್ರಣಾನಾಂ ನಿಜಹೇತೂನಾಮಾಗಂತೂನಾಮುಶಾಮ್ಯತಾಂ ||**
**ಕುರ್ಯಾದ್ ದೋಷಬಲಾಪೇಕ್ಷೀ ನಿಜಾನಾಮೌಷಧಂ ಯಥಾ|| ೮ ||**

**ಅರ್ಥ—** ವಾತ, ಪಿತ್ತ, ಕಫಗಳಿಂದುಂಟಾದ ವ್ರಣಗಳಿಗೂ ತೀವ್ರ ವಾಸಿಯಾಗಿವಿಷ್ಟ ಆಗಂತು ವ್ರಣಗಳಿಗೂ ಅವುಗಳ ದೋಷ ಬಲಗಳನ್ನು ವಿಚಾರಿಸಿ ನಿಜವ್ರಣಗಳ ಉಪಚಾರವನ್ನು ಮಾಡಬೇಕು. ॥ ೮ ॥

**ಯಥಾ ಸ್ವೈರ್ಹೇತುಭಿರ್ದುಷ್ಟಾ ವಾತಪಿತ್ತಕಫಾ ನೃಣಾಂ ॥**
**ಬಹಿರ್ಮಾರ್ಗಂ ಸಮಾಶ್ರಿತ್ಯ ಜನಯಂತಿ ನಿಜಾನ್ ವ್ರಣಾನ್ ॥ ೯ ॥**

**ಅರ್ಥ—** ತಮ್ಮ ತಮ್ಮ ಕಾರಣಗಳಿಂದ ದುಷ್ಟವಾದ ವಾತ ಪಿತ್ತ ಕಫಗಳು ಮನುಷ್ಯರ ಬಹಿರ್ಮಾರ್ಗವನ್ನು (ಶಾಖೆ, ರಕ್ತ, ಧಾತು, ತ್ವಚಗಳನ್ನು) ಆಶ್ರಯಿಸಿ ನಿಜ ವ್ರಣಗಳನ್ನುಂಟುಮಾಡುತ್ತವೆ. ॥ ೯ ॥

ವಾತ-ಪಿತ್ತ-ಕಫಜಗಳ ನಿದಾನ ಚಿಕಿತ್ಸೆಗಳನ್ನು ಹೇಳುತ್ತಾರೆ—

**ಸ್ತಬ್ಧಃ ಕಠಿಣಸಂಸ್ಪರ್ಶೋ ಮಂದಸ್ರಾವೋ ಮಹಾರುಜಃ ॥**
**ತುದ್ಯತೇ ಸ್ಫುರತಿ ಶ್ಯಾವೋ ವ್ರಣೋ ಮಾರುತಸಂಭವಃ ॥ ೧೦ ॥**

**ಅರ್ಥ—** ವಾತವ್ರಣವು ಸ್ತಬ್ಧ, ಬಿರುಸು, ಕಪ್ಪು ಇದ್ದು, ಅದರ ಸ್ರಾವವು ಸ್ವಲ್ಪ-ನೋವು ಬಹಳಿರುತ್ತದೆ. ಚುಚ್ಚುವದು, ಸ್ಫುರಣಹೊಂದುವದು. ॥ ೧೦ ॥

**ಸಂಪೂರಣೈಃ ಸ್ನೇಹಪಾನೈಃ ಸ್ನಿಗ್ಧೈಃ ಸ್ವೇದೋಪನಾಹನೈಃ ॥**
**ಪ್ರದೇಹಪರಿಷೇಕೈಶ್ಚ ವಾತವ್ರಣಮುಪಾಚರೇತ್ ॥೧೧॥**

**ಅರ್ಥ—** ಪೌಷ್ಟಿಕ ಆಹಾರ, ಸ್ನೇಹಪಾನ, ಸ್ನಿಗ್ಧವಾದ ಸ್ನೇಹ ಉಪನಾಹಗಳಿಂದ ಲೇಪಸೇಚನಗಳಿಂದ ವಾತವ್ರಣವನ್ನು ಉಪಚರಿಸಬೇಕು ॥ ೧೧ ॥

**ತೃಷ್ಣಾಮೋಹಜ್ವರಕ್ಲೇದದಾಹದುಷ್ಟಾವದಾರಣೈಃ ॥**
**ವ್ರಣಂ ಪಿತ್ತಕೃತಂ ವಿದ್ಯಾತ್ ಗಂಧೈಃ ಸ್ರಾವೈಶ್ಚ ಪೂತಿಕೈಃ ॥ ೧೨ ॥**

**ಅರ್ಥ—** ಪಿತ್ತದ ವ್ರಣದಲ್ಲಿ ನೀರಡಿಕೆ, ಮೋಹ, ಜ್ವರ, ಕ್ಲೇದ, ದಾಹ, ಸೀಳೋಣ, ಹೊಲಸುನಾರುವ ಸ್ರಾವಗಳಿರುತ್ತವೆ. ॥ ೧೨ ॥

**ಶೀತಲೈರ್ಮಧುರೈಃ ಸ್ನಿಗ್ಧೈಃ ಪ್ರದೇಹಪರಿಷೇಚನೈಃ ॥**
**ಸರ್ಪಿಃ ಪಾನೈರ್ವಿರೇಕೈಶ್ಚ ಪೈತ್ತಿಕಂ ಶಮಯೇದ್ ವ್ರಣಮ್ ॥ ೧೩ ॥**

**ಅರ್ಥ—** ಪಿತ್ತ ವ್ರಣವನ್ನು ಶೀತ, ಮಧುರ, ಕಹಿಯಾದ ಲೇಪ ಪರಿಷೇಕಗಳಿಂದಲೂ ಘೃತಪಾನವಿರೇಚನಗಳಿಂದಲೂ ಶಮನವಾಡಬೇಕು. ||೧೩||

**ಬಹುಪಿಚ್ಛೋ ಗುರುಃ ಸ್ನಿಗ್ಧಃ ಸ್ತಿಮಿತೋ ಮಂದವೇದನಃ ||**
**ಪಾಂಡುವರ್ಣೋಽಲ್ಪಸಂಕ್ಲೇದಶ್ಚಿರಕಾರೀ ಕಫವ್ರಣಃ　　|| ೧೪ ||**

**ಅರ್ಥ—** ಕಫವ್ರಣವು ಜಡ, ಸ್ನಿಗ್ಧ, ಸ್ತಿಮಿತ, ಬಿಳೀಬಣ್ಣವುಳ್ಳ ಇದ್ದು, ಅದರಲ್ಲಿ ಪಿಚ್ಛೆ (ಲೋಳೆ) ಯು, ಬಹಳ ವೇದನೆಯು, ಸ್ವಲ್ಪಕ್ಲೇದವು ಇರುತ್ತದೆ. ಪಾಕವಾಗಲು ತಡವಾಗುತ್ತದೆ.　　|| ೧೪ ||

**ಕಷಾಯಕಟುರುಕ್ಷೋಷ್ಣೈಃ ಪ್ರದೇಹೈಃ ಪರಿಸೇಚನೈಃ ||**
**ಕಫವ್ರಣಂ ಪ್ರಶಮಯೇತ್ ತಥಾ ಲಂಘನಪಾಚನೈಃ　　|| ೧೫ ||**

**ಅರ್ಥ—** ಕಫವ್ರಣವನ್ನು ಒಗರು, ಕಾರ, ರೂಕ್ಷ, ಉಷ್ಣವುಳ್ಳ ಲೇಪ ಪರಿಷೇಕಗಳಿಂದ ಮತ್ತು ಲಂಘನಪಾಚನಗಳಿಂದ ಶಮನ ವಾಡಬೇಕು ||೧೫||

ಅವುಗಳಲ್ಲಿಯ ಅನೇಕ ಭೇದಗಳನ್ನು ಹೇಳುತ್ತಾರೆ—

**ತೌ ದ್ವೌ ನಾನಾತ್ವಭೇದೇನ ಭಿನ್ನಾಃ ಸ್ಯುರ್ವಿಂಶತಿರ್ವ್ರಣಾಃ ||**
**ತೇಷಾಂ ಪರೀಕ್ಷಾ ತ್ರಿವಿಧಾ ಪ್ರದುಷ್ಟಾ ದ್ವಾದಶಸ್ಮೃತಾಃ　　|| ೧೬ ||**

**ಅರ್ಥ—** ಈ ಎರಡು ವ್ರಣಗಳು ೨೦ ಭೇದವನ್ನು ಹೊಂದುತ್ತವೆ. ಅವುಗಳ ಪರೀಕ್ಷೆಯು ಮೂರುವಿಧವಾಗಿದೆ. ದುಷ್ಟ ವ್ರಣಗಳು ೧೨ ಉಂಟು.　　|| ೧೬ ||

**ಸ್ಥಾನಾನ್ಯಷ್ಟೌ ತಥಾ ಗಂಧಾಃ ಪರಿಸ್ರಾವಾಶ್ಚತುರ್ದಶಃ ||**
**ಷೋಡಶೋಪದ್ರವಾ ದೋಷಾಶ್ಚತ್ವಾರೋ ವಿಂಶತಿಸ್ತಥಾ　　|| ೧೭ ||**

**ಅರ್ಥ—** ಅವುಗಳ ಸ್ಥಾನಗಳು ೮, ಗಂಧ ಮತ್ತು ಸ್ರಾವಗಳು ೧೪, ಉಪದ್ರವಗಳು ೧೬, ದೋಷಗಳು ೨೪ ವುಂಟು.　　|| ೧೭ ||

**ತಥಾ ಚೋಪಕ್ರಮಾಃ ಸಿದ್ಧಾಃ ಷಟ್‌ತ್ರಿಂಶತ್ಸಮುದಾಹೃತಾಃ ||**
**ವಿಭಜ್ಯಮಾನಾನ್ ಶ್ರುಣು ಮೇ ಸರ್ವಾನೇತಾನ್ಯಥೇರಿತಾನ್　　|| ೧೮ ||**

**ಅರ್ಥ—** ಅವುಗಳ ಅನುಭೂತ ಉಪಚಾರಗಳು ೩೬ ಇರುತ್ತವೆ. ಹೇಳಿದ ಇವನ್ನೆಲ್ಲ ವಿಭಾಗವಾಡಿ ಹೇಳುವೆನು ಕೇಳು.

ವ್ರಣದ ೨೦ ಭೇದಗಳನ್ನು ಹೇಳುತ್ತಾರೆ.

ಕೃತ್ಯೋಽಕೃತ್ಯಸ್ತಥಾ ದುಷ್ಟಸ್ತಥಾ ಮರ್ಮಸ್ಥಿತೋ ನವಃ
ಸಂವೃತೋ ದಾರುಣೋತ್ಸನ್ನಃ ಸವಿಷೋ ವಿಷಮಸ್ಥಿತಃ ||೧೯||

ಅಸ್ರಾವ್ಯುತ್ಸಂಗ ಪಿಪ್ಪೈಷಾಂ ವ್ರಣಾನ್ ವಿದ್ಯಾತ್ ವಿಪರ್ಯಯಾತ್ ||
ಇತಿ ನಾನಾತ್ಮಭೇದೇನ ನಿರುಕ್ತಾ ವಿಂಶತಿರ್ವ್ರಣಾಃ ||೨೦||

**ಅರ್ಥ**— ೧ ಸುಖಸಾಧ್ಯ, ೨ ಕಷ್ಟಸಾಧ್ಯ, ೩ ಅಸಾಧ್ಯ, ೪ ಯಾಪ್ಯ, ೫ ದುಷ್ಟ, ೬ ಅದುಷ್ಟ ೭ ಮರ್ಮದಲ್ಲಿದ್ದದ್ದು ೮ ಮರ್ಮದಲ್ಲಿರದ್ದು ೯ ಹೊಸದು ೧೦ ಹಳೆಯದು ೧೧ ಮುಚ್ಚಿದ್ದು ೧೨ ತೆರೆದದ್ದು ೧೩ ಮೇಲೆ ಮಾಂಸ ಬಹಳ ಬಂದದ್ದು ೧೪ ಮೇಲೆ ಮಾಂಸ ಬರದ್ದು ೧೫ ಸವಿಷ ೧೬ ನಿರ್ವಿಷ ೧೭ ಸಮವಾಗಿರದ್ದು ೧೮ ಸಮವಾಗಿದ್ದದ್ದು ೧೯ ಮೇಲೆ ಸೋರುವದು ೨೦ ಮೇಲೆ ಸೋರದ್ದು ಎಂದು ವ್ರಣಗಳು ವಿವಿಧವಾಗಿ ೨೦ ಹೇಳಲ್ಪಟಿವೆ.

ವ್ರಣ ಪರೀಕ್ಷೆಗಳನ್ನು ಹೇಳುತ್ತಾರೆ

ದರ್ಶನ ಪ್ರಶ್ನಸಂಸ್ಪರ್ಶೈಃ ಪರೀಕ್ಷಾ ತ್ರಿವಿಧಾ ಸ್ಮೃತಾ
ವಯೋವರ್ಣ ಶರೀರಾಣಾಮಿಂದ್ರಿಯಾಣಾಂ ಚ ದರ್ಶನಾತ್ ||೨೦||
ಹೇತ್ವರ್ತಿಸಾತ್ಮ್ಯಾಗ್ನಿಬಲಂ ಪರೀಕ್ಷ್ಯಂ ವಚಸಾದ್ಬುಧೈಃ
ಸ್ಪರ್ಶಾನ್ಮಾರ್ದವ ಶೈತ್ಯೇ ಚ ಪರೀಕ್ಷ್ಯೇ ಸವಿಪರ್ಯಯೇ || ೨೨ ||

**ಅರ್ಥ**— ೧ ದರ್ಶನದಿಂದ ೨ ಪ್ರಶ್ನೆಯಿಂದ ೩ ಸ್ಪರ್ಶದಿಂದ ಹೀಗೆ ಮೂರು ವಿಧವಾದ ಪರೀಕ್ಷೆಗಳು ವಯ, ವರ್ಣ, ಆಕಾರ ಮತ್ತು ಇಂದ್ರಿಯಗಳ ಪರೀಕ್ಷೆಯನ್ನು ದರ್ಶನದಿಂದಲೂ, ಕಾರಣ, ನೋವುಗಳ ಹೆಚ್ಚುಕಡಿಮೆ, ಮಾಡಿಸುವ ಆಹಾರ, ಅಗ್ನಿಬಲ, ಇವುಗಳನ್ನು ಪ್ರಶ್ನೆಯಿಂದಲೂ—ಮೃದುತ್ವ, ಕಠಿಣತ್ವ, ಶೈತ್ಯ, ಉಷ್ಣತೆಗಳನ್ನು ಪಂಡಿತರು ಸ್ಪರ್ಶದಿಂದಲೂ ಪರೀಕ್ಷಿಸಬೇಕು. || ೨೨ ||

ಹನ್ನೆರಡು ದುಷ್ಟ ವ್ರಣಗಳನ್ನು ಹೇಳುತ್ತಾರೆ—

ಶ್ವೇತೋಽವಸನ್ನ ಚವರ್ಮಾತಿ-ಸ್ಥೂಲಚವರ್ಮಾತಿಪಿಂಜರಃ ||
ನೀಲಃ ಶ್ಯಾವೋಽತಿಪಿಡಕೋ ರಕ್ತಃ ಕೃಷ್ಣೋಽತಿಪೂತಿಕಃ || ೨೩ ||

**ರೋಹ್ಯಃ ಕುಂಭೀಮುಖಶ್ಚೇತಿ ಪ್ರದುಷ್ಟಾ ದ್ವಾದಶ ವ್ರಣಾಃ ||**

**ಅರ್ಥ—** ೧ ಬಹಳ ಹಳೆ ೨ ಅತಿ ತಿಳುವಾದ ತೊಗಲು ಇದ್ದು ೩ ಅತಿ ಬಿರುಸಾದತೊಗಲುಳ್ಳದ್ದು ೪ ಅತಿಪಿಂಜರ(ಬಹಳಕೆಂಪುಹಳದಿ) ೫ ನೀಲ ೬ ಕಪ್ಪು ೭ ಬಹಳ ಬಕ್ಕೆಗಳುಳ್ಳದ್ದು ೮ ಕೆಂಪು ೯ ಕರಿದು ೧೦ ಬಹಳಹೊಲಸುನಾರುವದು ೧೧ ರೋಹ್ಯ ೧೨ ಕುಂಭೀಮುಖ ಎಂದು ೧೨ ದುಷ್ಟವ್ರಣಗಳಿರುತ್ತವೆ || ೨೩ || ||

ವಿವರಣೆ— ವ್ರಣಗಳು ಮಾಯ್ದಿದ್ದರೂ ಒಳಗೆ ದೋಷಗಳಿರುವದರಿಂದ ಅವು ಆಗಾಗ್ಗೆ ಅತಿ ಕುಪಿತವಾಗಿ ಹೊರಗೆ ದುಷ್ಟವಾಗುತ್ತಿದ್ದರೆ ಆ ವ್ರಣಗಳು ರೋಹ್ಯವೆಂದು ಕರೆಯಲ್ಪಡುತ್ತವೆ—ಒಳಗೆ ಕೀವು ಬಹಳ ಇದ್ದು ಬಾಯಿಯು ಸಣ್ಣದಿದ್ದರೆ ಆ ವ್ರಣವು ಕುಂಭೀಮುಖವೆಂದು ಕರೆಯಲ್ಪಡುತ್ತದೆ.

**ವ್ರಣದ ೮ ಸ್ಥಾನಗಳನ್ನು ಸಂಕ್ಷೇಪವಾಗಿ ಹೇಳುತ್ತಾರೆ—**

**ತ್ವಕ್‌ಸಿರಾಮಾಂಸಮೇದೋಽಸ್ಥಿಸ್ನಾಯುಮರ್ಮಾಂತ್ರರಾಶ್ರಯಾಃ|| ೨೪**
**ವ್ರಣಸ್ಥಾನಾನಿ ನಿರ್ದಿಷ್ಟಾನ್ಯಷ್ಟಾವೇತಾನಿ ಸಂಗ್ರಹೇ || ೨೪ || ||**

**ಅರ್ಥ—** ೧ ತ್ವಚ ೨ ಸಿರೆ ೩ ಮಾಂಸ ೪ ಮೇದ ೫ ಅಸ್ಥಿ ೬ ಸ್ನಾಯು ೭ ಮರ್ಮ ೮ ಕೋಷ್ಠ ಎಂದು ಎಂಟು ವ್ರಣಸ್ಥಾನಗಳಿರುತ್ತವೆ. || ೨೪ || ||

**ವ್ರಣದ ೮ ಗಂಧಗಳನ್ನು ಹೇಳುತ್ತಾರೆ—**

**ಸರ್ಪಿಸ್ತೈಲವಸಾಪೂಯರಕ್ತಶಾವಾಮ್ಲಪೂತಿಕಾಃ || ೨೫ ||**
**ವ್ರಣಾನಾಂ ವ್ರಣಗಂಧಜ್ಞೈರಷ್ಟೌ ಗಂಧಾಃ ಪ್ರಕೀರ್ತಿತಾಃ || ೨೫ || ||**

**ಅರ್ಥ—** ೧ ತುಪ್ಪ ೨ ಎಣ್ಣೆ ೩ ನೆಣ ೪ ಕೀವು ೫ ರಕ್ತ ೬ ಶವದಂತೆ ನಾರುವ ೭ ಹುಳಿನಾರುವ ೮ ಹೊಲಸುನಾರುವ ಹೀಗೆ ವ್ರಣದ ಎಂಟುತರದ ಗಂಧಗಳಿರುತ್ತವೆಯೆಂದು ತಜ್ಞರು ಹೇಳುತ್ತಾರೆ. || ೨೫ || ||

**೧೪ ತರದ ವ್ರಣಸ್ರಾವಗಳನ್ನು ಹೇಳುತ್ತಾರೆ—**

**ಲಸಿಕಾಜಲಪೂಯಾಸೃಗ್ಘರಿದ್ರಾರುಣಪಿಂಜರಾಃ || ೨೬ ||**
**ಕಷಾಯನೀಲಹರಿತಸ್ನಿಗ್ಧರೂಕ್ಷಸಿತಾಸಿತಾಃ ||**
**ಇತಿ ರೂಪೈಃ ಸಮುದ್ದಿಷ್ಟಾ ವ್ರಣಸ್ರಾವಾಶ್ಚತುರ್ದಶ || ೨೭ ||**

ಅರ್ಥ— ೧ ಲಸಿಕೆ ೨ ನೀರು ೩ ಕೀವು ೪ ರಕ್ತ ೫ ಅರಿಷಿಣ ಇವುಗಳ ಬಣ್ಣದ್ದು ೬ ನಸುಗೆಂಪು ೭ ಪಿಂಜರ (ಕೆಂಪುಹಳದಿ) ೮ ಕಷಾಯ (ಕೆಂಪು ಕಪ್ಪು) ೯ ನೀಲ ೧೦ ಹಸರು ೧೧ ಸ್ನಿಗ್ಧ ೧೨ ರುಕ್ಷ ೧೩ ಬಿಳಿದು ೧೪ ಕರಿದು ಈ ಪ್ರಕಾರ ಅವುಗಳ ರೂಪಗಳಿಂದ ವ್ರಣಸ್ರಾವಗಳು ಹದಿನಾಲ್ಕೆಂದು ಹೇಳಲ್ಪಟ್ಟಿವೆ. || ೨೭ ||

೧೬ ಉಪದ್ರವಗಳನ್ನು ಹೇಳುತ್ತಾರೆ—

ವಿಸರ್ಪಃ ಪಕ್ಷಘಾತಶ್ಚ ಶಿರಸ್ತಂಭೋಽಪತಾನಕಃ |
ಮೋಹೋನ್ಮಾದವ್ರಣರುಜಾ ಜ್ವರಸ್ತೃಷ್ಣಾ ಹನುಗ್ರಹಃ || ೨೮ ||
ಕಾಸಶ್ಛರ್ದಿರತೀಸಾರೋ ಹಿಕ್ಕಾ ಶ್ವಾಸಃ ಸವೇಪಥುಃ |
ಷೋಡಶೋಪದ್ರವಾಃ ಪ್ರೋಕ್ತಾ ವ್ರಣಾನಾಂ ವ್ರಣಚಿಂತಕೈಃ || ೨೯ ||

ಅರ್ಥಃ— ೧ ವಿಸರ್ಪ ೨ ಪಕ್ಷಘಾತ ೩ ಶಿರಃಸ್ತಂಭ ೪ ಅಪತಾನಕ ೫ ಮೋಹ ೬ ಉನ್ಮಾದ ೭ ವ್ರಣದಲ್ಲಿ ನೋವು ೮ ಜ್ವರ ೯ ನೀರಡಿಕೆ ೧೦ ಹನುಗ್ರಹ ೧೧ ಕೆಮ್ಮು ೧೨ ವಾಂತಿ ೧೩ ಅತಿಸಾರ ೧೪ ಬಿಕ್ಕು ೧೫ ಶ್ವಾಸ ೧೬ ಕಂಪ ಇವು ವ್ರಣದ ೧೬ ತರದ ಉಪದ್ರವಗಳೆಂದು ವ್ರಣಜ್ಞಾನಿಗಳು ಹೇಳುತ್ತಾರೆ.

ವ್ರಣವು ನೆಟ್ಟಗಾಗದಿರಲು ಕಾರಣವಾದ ಅದರಲ್ಲಿರುವ ೨೪ ದೋಷಗಳನ್ನು ಹೇಳುತ್ತಾರೆ—

ಚತುರ್ವಿಂಶತಿರುದ್ದಿಷ್ಟಾ ದೋಷಾಃ ಕಲ್ಪಾಂತರೇಣ ಚ ||

ಅರ್ಥ:— ಬೇರೆ ರೀತಿಯಿಂದ (ವಾತಾದಿ ಭೇದದಿಂದಲ್ಲ) ವ್ರಣಗಳಲ್ಲಿ ೨೪ ದೋಷಗಳು ಇರುತ್ತವೆ.

ಸ್ನಾಯುಕ್ಲೇದಾಚ್ಛಿರಾಚ್ಛೇದಾದ್ ಗಾಂಭೀರ್ಯಾತ್ ಕ್ರಿಮಿಭಕ್ಷಣಾತ್||
|| ೩೦ ||
ಅಸ್ಥಿಭೇದಾತ್ ಸಶಲ್ಯತ್ವಾತ್ ಸವಿಷತ್ವಾಚ್ಚ ಸರ್ಪಣಾತ್ ||
ನಖಕಾಷ್ಠಾವಬಾಧಾಚ್ಚ ಮರ್ಮಲೋಮಾಭಿಘಟ್ಟನಾತ್ || ೩೧ ||
ಮಿಥ್ಯಾಬಂಧಾದತಿಸ್ನೇಹಾದತಿಭೈಷಜ್ಯಕರ್ಷಣಾತ್ ||
ಅಜೀರ್ಣಾದತಿಭುಕ್ತಾಚ್ಚ ವಿರುದ್ಧಾ ಸಾತ್ಮ್ಯಭೋಜನಾತ್ || ೩೨ ||

**ಶೋಕಾತ್ ಕ್ರೋಧಾದ್ ದಿವಾಸ್ವಪ್ನಾದ್ ವ್ಯವಾಯಾತ್ ಕ್ಷೋಭ ಣಾತ್ತಥಾ ।**
**ವ್ರಣಾ ನ ಪ್ರಶಮಂ ಯಾಂತಿ ನಿಷ್ಕ್ರಿಯತ್ವಾಚ್ಚ ದೇಹಿನಾಮ್ ॥ ೩೩ ॥**

**ಅರ್ಥ:—** ೧ ಸ್ನಾಯು ಕ್ಲೇದ ೨ ಶಿರಾಚ್ಛೇದ ೩ ಬಹಳ ಗುಂಬ ಇರೋಣ ೪ ಹುಳತಿನ್ನೋಣ ೫ ಅಸ್ಥಿಭೇದ ೬ ಒಳಗೆ ಶಲ್ಯ ಇರೋಣ ೭ ವಿಷವಿರೋಣ ೮ ಪಸರಿಸೋಣ ೯ ಉಗುರು ಕಟ್ಟಿಗೆಗಳು ಚುಚ್ಚೋಣ ೧೦ ಮರ್ಮಕ್ಕೆ ಪೆಟ್ಟುತಾಕೋಣ ೧೧ ಲೋಮಘಟ್ಟನ (ಕೂದಲು ಕಿತ್ತೋಣ) ೧೨ ಸರಿಯಾಗಿ ಕಟ್ಟದಿರೋಣ ೧೩ ಬಹಳ ಸ್ನೇಹಹಚ್ಚೋಣ ೧೪ ಬಹಳ ಔಷಧ ತಕ್ಕೊಂಡು ಸೊರಗೋಣ ೧೫ ಅಜೀರ್ಣ ೧೬ ಬಹಳ ಊಟ ಮಾಡೋಣ ೧೭ ವಿರುದ್ಧ ಆಹಾರ ೧೮ ಅಸಾತ್ಮ್ಯ ಆಹಾರ ೧೯ ಶೋಕ ೨೦ ಕ್ರೋಧ ೨೧ ಹಗಲು ನಿದ್ರೆ ೨೨ ಮೈಥುನ ೨೩ ಪೆಟ್ಟು ತಗಲೋಣ ೨೪ ಅಗಳಾಡದೆ ಒತ್ತಟ್ಟಿಗೆ ಕೂಡೋಣ ಈ ೨೪ ವ್ರಣದೋಷ ಗಳಿಂದ ಮನುಷ್ಯರ ವ್ರಣಗಳು ಮಾಯುವದಿಲ್ಲ. ॥ ೩೩ ॥

ವ್ರಣದ ಸಾಧ್ಯಾಸಾಧ್ಯತೆಗಳನ್ನು ಹೇಳುತ್ತಾರೆ—

**ಪರಿಸ್ರವಾಚ್ಚ ಗಂಧಾಚ್ಚ ದೋಷಾಚ್ಚೋಪದ್ರವೈಃ ಸಹ ॥**
**ವ್ರಣಾನಾಂ ಬಹುದೋಷಾಣಾಂ ಕೃಚ್ಛ್ರತ್ವಂ ಚೋಪಜಾಯತೇ ॥ ೩೪ ॥**

**ಅರ್ಥ—** ಬಹಳ ಸ್ರಾವವಾಗೋಣದರಿಂದ, ದುರ್ಗಂಧದಿಂದ, ಉಪ ದ್ರವಗಳಿಂದ ದೋಷಗಳು ಬಹಳ ಇರುವದರಿಂದ ವ್ರಣಗಳು ಕಷ್ಟಸಾಧ್ಯ ವಾಗುತ್ತವೆ. ॥ ೩೪ ॥

**ತ್ವಗ್ ಮಾಂಸಜಃ ಸುಖೇ ದೇಶೇ ತರುಣಸ್ಯಾನುಪದ್ರವಃ ॥**
**ಧೀಮತೋಽಭಿನವಃ ಕಾಲೇ ಸುಖೇ ಸಾಧ್ಯಃ ಸುಖವ್ರಣಃ ॥ ೩೫ ॥**

**ಅರ್ಥ—** ತ್ವಚೆ ಮಾಂಸಗಳಲ್ಲಿ ಆದ, ತ್ರಾಸವಾಗದ ಸ್ಥಳದಲ್ಲಿರುವ, ತರುಣನ, ಉಪದ್ರವವಿಲ್ಲದ, ಬುದ್ಧಿವಂತನ, ಹೊಸದಾದ, ಚಲೋ (ಹೇಮಂತ ಶಿಶಿರ) ಕಾಲದಲ್ಲಿ ಉಂಟಾದ, ನೋವಿಲ್ಲದ ವ್ರಣವು ಸುಖಸಾಧ್ಯವೆಂದು ತಿಳಿಯಬೇಕು. ॥ ೩೫ ॥

**ಗುಣೈರನ್ಯತಮೈರ್ಹೀನಸ್ತತಃ ಕೃಚ್ಛ್ರೋ ವ್ರಣಃ ಸ್ಮೃತಃ ॥**
**ಸರ್ವೈರ್ವಿಹೀನೋ ವಿಜ್ಞೇಯಸ್ತ್ವಸಾಧ್ಯೋ ನಿರುಪಕ್ರಮಃ ॥ ೩೬ ॥**

**ಅರ್ಥ—** ಮೇಲೆ ಹೇಳಿದ ಸುಖಸಾಧ್ಯ ಲಕ್ಷಣಗಳಲ್ಲಿ ಒಂದೆರಡು ಇಲ್ಲದ ವ್ರಣವು ಕಷ್ಟಸಾಧ್ಯವು; ಅವುಗಳಲ್ಲಿ ಒಂದೂ ಲಕ್ಷಣವಿರದ ವ್ರಣವು ಅಸಾಧ್ಯವು. ಅದರ ಚಿಕಿತ್ಸೆಯನ್ನು ಮಾಡಬಾರದು. ॥ ೩೬ ॥

**ವ್ರಣಿನಾಮಾದಿತಃ ಕಾರ್ಯಂ ಯಥಾಸತ್ವಂ ವಿಶೋಧನಂ ॥**
**ಊರ್ಧ್ವಭಾಗೈರಧೋಭಾಗೈಃ ಶಸ್ತ್ರೈರ್ಬಸ್ತಿಭಿರೇವ ಚ ॥ ೩೭ ॥**

**ಅರ್ಥ—** ವ್ರಣವುಳ್ಳವರಿಗೆ ಮೊದಲು ಬಲದ ಶಕ್ತಿಯಂತೆ ವಮನ, ವಿರೇಚನ, ಶಸ್ತ್ರ (ರಕ್ತಸ್ರಾವ) ಬಸ್ತಿಗಳಿಂದ ಶೋಧನ ಕೊಡಬೇಕು. ॥ ೩೭ ॥

**ಸದ್ಯಃ ಶುದ್ಧಶರೀರಾಣಾಂ ಪ್ರಶಮಂ ಯಾಂತಿ ಹಿ ವ್ರಣಾಃ ॥**
**ಯಥಾಕ್ರಮಮತಶ್ಚೋರ್ಧ್ವಂ ಶೃಣು ಸರ್ವಾನುಪಕ್ರಮಾನ್ ॥೩೮॥**

**ಅರ್ಥ—** ಯಾಕೆಂದರೆ ಶರೀರವು ಶುದ್ಧವಾಗಲು ವ್ರಣಗಳು ಬೇಗನೆ ಶಮನಹೊಂದುವವು. ಇನ್ನು ಮೇಲೆ ಕ್ರಮದಿಂದ ಎಲ್ಲ (೩೬) ವ್ರಣದ ಉಪಚಾರಗಳನ್ನು ಹೇಳುತ್ತೇನೆ. ॥ ೩೮ ॥

೩೬ ಉಪಕ್ರಮಗಳನ್ನು ಹೇಳುತ್ತಾರೆ—

**ಶೋಫಘ್ನಂ ಷಡ್ವಿಧಂ ಚೈವ ಶಸ್ತ್ರಕರ್ಮಾವಪೀಡನಮ್ ॥**
**ನಿರ್ವಾಪಣಂ ಸಸಂಧಾನಂ ಸ್ವೇದಃ ಶಮನಮೇಷಣ ॥ ೩೯ ॥**

**ಶೋಧನರೋಪಣೌ ಚೈವ ಸಕಷಾಯೌ ಪ್ರಲೇಪನೌ ॥**
**ದ್ವೇ ತೈಲೇ ತದ್ ಘೃತೇ ಪತ್ರಚ್ಛಾದನಂ ದ್ವೇ ಚ ಬಂಧನೇ ॥ ೪೦ ॥**

**ಆಹ್ಯಮುತ್ಸಾದನಂ ದಾಹೋ ದ್ವಿವಿಧಃ ಸಾವಸಾದನಃ ॥**
**ಕಾಠಿನ್ಯಮಾರ್ದವಕರೇ ಧೂಪನೇ ಲೇಪನೇ ಶುಭೇ ॥ ೪೧ ॥**

**ವ್ರಣಾವಚೂರ್ಣನಂ ವರ್ಣ್ಯಂ ರೋಪಣಂ ಲೋಮರೋಹಣಂ ॥**
**ಇತಿ ಷಟ್‌ತ್ರಿಂಶತಂ ವಿದ್ಯಾದ್ ವ್ರಣಾನಾಂ ಸಮುಪಕ್ರಮಾನ್ ॥ ೪೩ ॥**

**ಅರ್ಥ:—** ಶೋಫನಾಶಕ ಉಪಚಾರಗಳು ಆರು ( ೧ ರಕ್ತಾವಸೇಚನ ೨ ಸಂಶೋಧನ ೩ ಲಂಘನ, ೪ ಕಷಾಯ ಘೃತಪಾನ

೫ ನಿರ್ವಾಪಣ ೬ ಪಾಚನ) ೭ ಶಸ್ತ್ರಕರ್ಮ ೮ ಅವಪೀಡನ ೯ ನಿರ್ವಾಪಣ ೧೦ ಸಂಧಾನ ೧೧ ಸ್ವೇದ ೧೨ ಶಮನ ೧೩ ಶೋಧನ ಕಷಾಯ ೧೪ ರೋಪಣ ಕಷಾಯ ೧೫ ಶೋಧನ ಲೇಪ ೧೬ ರೋಪಣ ಲೇಪ ೧೭ ಶೋಧನತೈಲ ೧೮ ರೋಪಣ ತೈಲ ೧೯ ಶೋಧನ ಘೃತ ೨೦ ರೋಪಣ ಘೃತ ೨೧ ಪತ್ರಾಚ್ಛಾದನ ೨೨ ಸವ್ಯಬಂಧನ ೨೩ ದಕ್ಷಿಣ ಬಂಧನ ೨೪ ವ್ರಣನಾಶಕ ಆಹಾರ ೨೫ ಉತ್ಸಾದನ (ವ್ರಣ ತುಂಬೋಣ) ೨೬— ೨೭ ಎರಡು ತರದ ದಾಹ ೨೮ ಅವಸಾದನ (ವ್ರಣದಲ್ಲಿಯ ಮಾಂಸ ತೆಗೆಯೋಣ) ೨೯ ಕಾಠಿಣ್ಯಕರ ಧೂಪ ೩೦ ಮಾರ್ದವಕರಧೂಪ ೩೧ ಕಾಠಿಣ್ಯಕರ ಲೇಪ ೩೨ ಮಾರ್ದವಕರ ಲೇಪ ೩೩ ವ್ರಣಾವಚೂರ್ಣನ ೩೪ ವರ್ಣ್ಯ ೩೫ ರೋಪಣ ೩೬ ಲೋಮರೋಪಣ ಈ ಪ್ರಕಾರ ೩೬ ವ್ರಣಗಳ ಉಪಚಾರಗಳಿರುವವೆಂದು ತಿಳಿಯಬೇಕು.

---

ಟೀಕು— 'ಷಡ್ವಿಧಂ' ಎಂಬ ವಿಶೇಷಣವನ್ನು 'ಶಸ್ತ್ರಕರ್ಮ' ಎಂಬುದಕ್ಕೆ ಹಚ್ಚಿ, ಕೆಲವರು ಮುಂದೆ ಹೇಳುವ ೬ ಶಸ್ತ್ರಕರ್ಮಗಳು ಮತ್ತು ಒಂದು ಶೋಥನಾಶಕ, ಹೀಗೆ ಕೂಡಿ ಏಳು ಅರ್ಥಮಾಡುವರು. ಇಲ್ಲಿ ನಾವು ಆ ವಿಶೇಷಣವನ್ನು 'ಶೋಥಘ್ನ' ಎಂಬುದಕ್ಕೆ ಹಚ್ಚಿ ಅರ್ಥ ಹೇಳಿರುವೆವು.

**ಅವಸ್ಥಾನುರೂಪವಾಗಿ ಮಾಡುವ ಉಪಚಾರಗಳನ್ನು ವಿವರಿಸುತ್ತಾರೆ. ಮೊದಲು ಶೋಥ ಚಿಕಿತ್ಸೆಯನ್ನು ಹೇಳುತ್ತಾರೆ—**

**ಪೂರ್ವರೂಪಂ ಭಿಷಗ್ದೃಷ್ಟ್ವಾ ವ್ರಣಾನಾಂ ಶೋಥಮಾದಿತಃ ॥**
**ರಕ್ತಾವಸೇಚನಂ ಕುರ್ಯಾದಜಾತವ್ರಣಶಾಂತಯೇ ॥ ೪೩ ॥**

**ಅರ್ಥ—** ವ್ರಣದ ಪೂರ್ವರೂಪವಾದ ಶೋಥವನ್ನು ಕಂಡಕೂಡಲೇ ವೈದ್ಯನು ಮುಂದೆ ವ್ರಣವಾಗಬಾರದೆಂದು ಮೊದಲು ರಕ್ತಸೇಚನವನ್ನು ಮಾಡಬೇಕು. ॥ ೪೩ ॥

**ಶೋಧಯೇದ್ ಬಹುದೋಷಾನ್ ವೈ ಹ್ಯಣುದೋಷಾನ್ ವಿಲಂಘಯೇತ್ ॥**
**ಪೂರ್ವಂ ಕಷಾಯಸರ್ಪಿರ್ಭಿರ್ಜಯೇದ್ ವಾ ಮಾರುತೋತ್ತರಮ್ ॥ ೪೪ ॥**

**ಅರ್ಥ—** ದೋಷಗಳು ಬಹಳಿದ್ದರೆ ಶೋಧನಕೊಡಬೇಕು. ಸ್ವಲ್ಪ ಇದ್ದರೆ ಲಂಘನಮಾಡಿಸಬೇಕು. ವಾತವು ಹೆಚ್ಚಿದ್ದರೆ ಮಾತ್ರ ರಕ್ತಸೇಚನ ಲಂಘನಗಳನ್ನು ಮಾಡಿಸದೆ ಕಷಾಯ ಘೃತವನ್ನು ಕುಡಿಯಲು ಕೊಡಬೇಕು. || ೪೪ ||

**ನ್ಯಗ್ರೋಧೋದುಂಬರಾಶ್ವತ್ಥಪ್ಲಕ್ಷವೇತಸವಲ್ಕಲೈಃ ||**
**ಸಸರ್ಪಿಷ್ಕೈಃ ಪ್ರದೇಹಃ ಸ್ಯಾಚ್ಛೋಥನಿರ್ವಾಪಣಃ ಪರಃ || ೪೫ ||**

**ಅರ್ಥ:—** ಆಲ, ಅತ್ತಿ, ಅರಳೆ, ಬಸರಿ, ಬೆತ್ತಗಳ ತೊಗಟೆಗಳಲ್ಲಿ ತುಪ್ಪ ಹಾಕಿ ಮಾಡಿದ ಲೇಪವು ಬಾವು ಕಳೆಯುವದರಲ್ಲಿ ಶ್ರೇಷ್ಠವಾಗಿದೆ.

**ವಿಜಯಾ ಮಧುಕಂ ವೀರಾ ಬಿಸಗ್ರಂಥಿಃ ಶತಾವರೀ ||**
**ನೀಲೋತ್ಪಲಂ ನಾಗಪುಷ್ಪಂ ಪ್ರದೇಹಃ ಸ್ಯಾತ್ ಸಶರ್ಕರಃ || ೪೬ ||**

**ಅರ್ಥ:—** ಅಣಲೆ, ಜೇಷ್ಠಮಧು, ನೆಲಗುಂಬಳ, ಕಮಲದೇಟಿನ ಗಂಟು, ಶತಾವರಿ, ನೀಲಕಮಲ, ನಾಗಕೇಸರ, ಚಂದನ ಇವುಗಳ ಕಲ್ಕದ ಲೇಪವೂ ಉತ್ತಮವಾಗಿದೆ.

**ಸಕ್ತವೋ ಮಧುಕಂ ಸರ್ಪಿಃ ಪ್ರದೇಹಃ ಸ್ಯಾತ್ ಸಶರ್ಕರಃ ||**
**ಅವಿದಾಹೀನಿ ಚಾನ್ನಾನಿ ಶೋಥಭೇಷಜಮುತ್ತಮಮ್ || ೪೭ ||**

**ಅರ್ಥ:—** ಸಕ್ತು ( ಜವೆಯ ಹಿಟ್ಟು ), ಜೇಷ್ಠಮಧು, ತುಪ್ಪ ಸಕ್ಕರೆ ಇವುಗಳ ಲೇಪವು ಹಿತಕರವಿದೆ. ವಿದಾಹವಾಗದ ಅನ್ನಗಳು ಬಾವಿಗೆ ಉತ್ತಮ ಔಷಧಗಳಾಗಿವೆ.

**ಸ ಚೇದೇವಮುಪಕ್ರಾಂತಃ ಶೋಥೋ ನ ಪ್ರಶಮಂ ವ್ರಜೇತ್ ||**
**ತಸ್ಯೋಪನಾಹೈಃ ಪಕ್ವಸ್ಯ ಪಾಟನಂ ಹಿತಮುಚ್ಯತೇ || ೪೮ ||**

**ಅರ್ಥ:—** ಹೀಗೆ ಉಪಚಾರಮಾಡಿದರೂ ಆ ಬಾವು ಇಳಿಯದಿದ್ದರೆ ಅದಕ್ಕೆ ಉಪನಾಹ ( ಪ್ಲೋಟೀಸು ) ಗಳನ್ನು ಕಟ್ಟಿ ಪಕ್ವಮಾಡಿ ಅದನ್ನು ಪಾಟನ ಮಾಡು (ಹರಿಯು) ವದು ಹಿತಕರವಾಗಿದೆ.

**ತೈಲೇನ ಸರ್ಪಿಷಾ ವಾಪಿ ತಾಭ್ಯಾಂ ವಾ ಸಕ್ತುಪಿಂಡಿಕಾ ||**
**ಸುಖೋಷ್ಣಾ ಶೋಥಪಾಕಾರ್ಥಮುಪನಾಹಃ ಪ್ರಶಸ್ಯತೇ || ೪೯ ||**

**ಅರ್ಥ—** ಬಾವನ್ನು ಪಕ್ವಮಾಡುವದಕ್ಕಾಗಿ ಸತುವಿನ ಮುದ್ದೆಯಲ್ಲಿ ಎಣ್ಣೆ ಅಥವಾ ತುಪ್ಪ ಹಾಕಿ ಕುದಿಸಿ ಬೆಚ್ಚಗೆಮಾಡಿ ಕಟ್ಟಬೇಕು. ಈ ಉಪನಾಹವು ಒಳ್ಳೇದಾಗಿದೆ. || ೪೯ ||

**ಸತಿಲಾ ಸಾತಸೀಬೀಜಾ ದಧ್ನಾಮ್ಲಾ ಸಕ್ತುಪಿಂಡಿಕಾ ||**
**ಸಕಿಣ್ವಕುಷ್ಠಲವಣಾ ಶಸ್ತಾ ಸಮುಪನಾಹನೇ || ೫೦ ||**

**ಅರ್ಥ—** ಇದರಂತೆ ಎಳ್ಳು, ಅಗಸಿ, ಕಿಣ್ವ, ಕೋಷ್ಠ, ಸೈಂಧವ, ಮೊಸರು ಹಾಕಿ ಕುದಿಸಿದ ಸಕ್ತುವಿನ ಮುದ್ದೆಯು ಉಪನಾಹಕ್ಕೆ ಯೋಗ್ಯವಾಗಿದೆ. || ೫೦ ||

**ರುಗ್ ದಾಹರಾಗತೋದೈಶ್ಚ ವಿದಗ್ಧಂ ಶೋಫಮಾದಿಶೇತ್ ||**
**ಜಲಬಸ್ತಿಸಮಸ್ಪರ್ಶಂ ಸುಪಕ್ವಂ ಪೀಡಿತೋನ್ನತಮ್ || ೫೧ ||**

**ಅರ್ಥ—** ಬಾವಿನಲ್ಲಿ ನೋವು, ದಾಹ, ಕೆಂಪುಬಣ್ಣ, ಚುಚ್ಚುವಿಕೆಗಳು ಇದ್ದರೆ ಅದು ಪಕ್ವವಾಗುತ್ತಿರುವ (ಪಚ್ಯಮಾನ) ಬಾವು ಎಂದು ತಿಳಿಯಬೇಕು. ನೀರು ತುಂಬಿದ ಚೀಲದಂತೆ ಸ್ಪರ್ಶಕ್ಕೆ ಹತ್ತುವ, ಒತ್ತಲು ಮತ್ತೊಂದುಕಡೆಗೆ ಉಬ್ಬುವ ಬಾವು ಚೆನ್ನಾಗಿ ಪಕ್ವವಾಗಿದೆಯೆಂದು ತಿಳಿಯಬೇಕು. || ೫೧ ||

**ಉಮಾಥ ಗುಗ್ಗುಲುಃ ಸೌಧಂ ಪಯೋ ದಕ್ಷಕಪೋತಯೋಃ ||**
**ವಿಟ್ ಪಲಾಶಭವಃ ಕ್ಷಾರೋ ಹೇಮಕ್ಷೀರೀ ಮುಕೂಲಕಃ ||೫೨||**

**ಇತ್ಯುಕ್ತೋ ಭೇಷಜಗಣಃ ಪಕ್ವಶೋಥಪ್ರಭೇದನಃ ||**
**ಸುಕುಮಾರಸ್ಯ ಕೃಷ್ಟಸ್ಯ ಶಸ್ತ್ರಂ ತು ಪರಮುಚ್ಯತೇ ||೫೩||**

**ಅರ್ಥ—** ಅಗಸಿ, ಗುಗ್ಗುಳ, ಕಳ್ಳಿಯಹಾಲು, ಕೋಳಿಪಾರಿವಾಳಗಳ ಮಲ, ಮುತ್ತಲದ ಕ್ಷಾರ, ಗೋಳಗೊಳಕಿಯ ಹಾಲು, ದಂತೀ, ಈ ಔಷಧಗಳು ಪಕ್ವ ಬಾವನ್ನು ಒಡೆಯುವವು ಸುಕುಮಾರ ಜನರಿಗೂ ಬೇನೆಯಿಂದ ಕೃಶರಾದವರಿಗೂ ಇದು ಉತ್ಕೃಷ್ಟ ಶಸ್ತ್ರವಾಗಿದೆ. ||೫೩||

**ಶಸ್ತ್ರಕರ್ಮಪ್ರಭೇದ ಮತ್ತು ಎಲ್ಲಿ ಮಾಡಬೇಕೆಂಬದನ್ನು ಹೇಳುತ್ತಾರೆ—**

**ಪಾಟನಂ ವ್ಯಧನಂ ಚೈವ ಛೇದನಂ ಲೇಖನಂ ತಥಾ ||**
**ಪ್ರಚ್ಛನ್ನಂ ಸೀವನಂ ಚೈವ ಷಡ್ವಿಧಂ ಶಸ್ತ್ರಕರ್ಮತತ್ ||೫೪||**

**ಅರ್ಥ—** ೧ ಪಾಟನ (ಹರಿಯೋಣ) ೨ ವ್ಯಧನ (ಚುಚ್ಚೋಣ) ೩ ಛೇದನ (ಕತ್ತರಿಸೋಣ) ೪ ಲೇಖನ (ಕೆರೆಯೋಣ) ೫ ಪ್ರಚ್ಛನ (ಕಚ್ಚುಹಾಕೋಣ) ಸೀವನ (ಹೊಲಿಯೋಣ) ಈ ಪ್ರಕಾರ ಶಸ್ತ್ರಕರ್ಮ ೬ ವಿಧವಾಗಿರುತ್ತವೆ. ||೫೪||

**ನಾಡೀವ್ರಣಾಃ ಪಕ್ವಶೋಥಾಸ್ತಥಾ ಕ್ಷತಗುದೋದರಂ ||**
**ಅಂತಃಶಲ್ಯಾಶ್ಚ ಯೇ ಶೋಥಾಃ ಪಾಟ್ಯಸ್ತೇ ತದ್ವಿಧಾಶ್ಚ ಯೇ ||೫೫||**

**ಅರ್ಥ—** ನಾಡೀವ್ರಣಗಳನ್ನು, ಪಕ್ವವಾದ ಬಾವುಗಳನ್ನು, ಕ್ಷತಗುದೋದರಗಳನ್ನು ಒಳಗೆ ಶಲ್ಯವಿದ್ದು ಮತ್ತು ಅದರಂತೆ ಇದ್ದ ಬೇರೆ ಬಾವುಗಳನ್ನು ಹರಿಯಬೇಕು. ||೫೫||

**ದಕೋದರಾಣಿ ಸಂಪಕ್ವಾ ಗುಲ್ಮಾ ಯೇ ಯೇ ಚ ರಕ್ತಜಾಃ ||**
**ವ್ಯಧ್ಯಾಃ ಶೋಣಿತರೋಗಾಶ್ಚ ವಿಸರ್ಪಪಿಡಕಾದಯಃ ||೫೬||**

**ಅರ್ಥ—** ಉದಕೋದರಗಳನ್ನು ಪಕ್ವವಾದ ಮತ್ತು ರಕ್ತದ ಗುಲ್ಮಗಳನ್ನು ರಕ್ತರೋಗಗಳಾದ ವಿಸರ್ಪ ಬಕ್ಕೆ ಮುಂತಾದವುಗಳನ್ನು ಚುಚ್ಚಬೇಕು. ||೫೬||

**ಅರ್ಶಃ ಪ್ರಬೃತ್ಯಧೀಮಾಂಸಂ ಛೇದನೇನೋಪಪಾದಯೇತ್ ||**
**ಉದ್ವೃತ್ತಾನ್ ಸ್ಥೂಲಪರ್ಯಂತಾನುತ್ಸನ್ನಾನ್ ಕಠಿಣವ್ರಣಾನ್ ||೫೭||**

**ಅರ್ಥ—** ಮಾಂಸವೇರಿರುವ ಮೂಲವ್ಯಾಧಿ ಮುಂತಾದವುಗಳನ್ನು ಕತ್ತರಿಸಬೇಕು. ಮೇಲಕ್ಕೆದ್ದು ಸುತ್ತಲೂ ದಪ್ಪಗಿರುವ ಬಿಗಿದಿರುವ ಬಿರುಸು ವ್ರಣಗಳನ್ನು ಕತ್ತರಿಸಬೇಕು. ||೫೭||

**ಕಿಲಾಸಾನಿ ಸಕುಷ್ಠಾನಿ ಲಿಖೇಲ್ಲೇಖ್ಯಾನಿ ಬುದ್ಧಿಮಾನ್ ।**
**ವಾತಾಸೃಗ್ಗ್ರಂಥಿಪಿಡಕಾಃ ಸಕೋಠಾ ರಕ್ತಮಂಡಲಾಃ || ೫೮ ||**

**ಕುಷ್ಠಾನ್ಯಭಿಹತಚಾಂಗಂ ಶೋಥಾಂಶ್ಚ ಪ್ರಚ್ಛಯೇದ್ಭಿಷಕ್ ।**
**ಕುಕ್ಷ್ಯುದರಾದಿಕಂ ಸೀವ್ಯಂ ಗಂಭೀರಂ ಯದ್ವಿಪಾಟಿತಮ್ || ೫೯ ||**
**ಇತಿ ಷಡ್ವಿಧಮುದ್ದಿಷ್ಟಂ ಶಸ್ತ್ರಕರ್ಮ ಮನೀಷಿಭಿಃ || ೫೯|| ||**

**ಅರ್ಥ:—** ಕಿಲಾಸ ಮತ್ತು ಕುಷ್ಠಗಳನ್ನು ಅವು ಲೇಖನಕ್ಕೆ ಅರ್ಹವಾಗಿದ್ದರೆ ಬುದ್ಧಿವಂತನು ಕೆರೆಯಬೇಕು. ವಾತರಕ್ತ, ಗ್ರಂಥಿ, ಬಕ್ಕೆ, ಕೋಠ,

ರಕ್ತಮಂಡಲ (ಕುಷ್ಠ ಭೇದ) ಕುಷ್ಠ, ಬಡಿಯಲ್ಪಟ್ಟ ಅವಯವ ಮತ್ತು ಬಾವುಗಳಿಗೆ ವೈದ್ಯನು ಕತ್ತರಿಸಬೇಕು. ಕುಕ್ಷಿ ಉದರ ಮುಂತಾದವುಗಳು ಬಹಳ ಗುಂಪಿನವರಿಗೆ ಹರಿಯಲ್ಪಟ್ಟಿದ್ದರೆ ಹೊಲಿಯಬೇಕು. ‖ ೫೯ ‖ ಈ ಪ್ರಕಾರ ಶಸ್ತ್ರಕರ್ಮವು ೬ ವಿಧನೆಂದು ಪಂಡಿತರು ಹೇಳುತ್ತಾರೆ. ‖ ೫೯ ‖ ‖

ಏಳನೆಯ ಉಪಕ್ರಮವಾದ ೬ ವಿಧ ಶಸ್ತ್ರಕರ್ಮಗಳನ್ನು ಹೇಳಿ ಅವಪೀಡನ ವೆಂಬ ಎಂಟನೆಯ ಉಪಕ್ರಮ-ವನ್ನು ಹೇಳುತ್ತಾರೆ—

**ಸೂಕ್ಷ್ಮಾನನಾಃ ಕೋಷವಂತೋ ಯೇ ವ್ರಣಾಸ್ತಾನ್ ಪ್ರಪೀಡಯೇತ್ ‖ ೬೦ ‖**

ಅರ್ಥ:— ಸಣ್ಣ ಬಾಯುಳ್ಳ, ಒಳಗೆ ಪೊಳ್ಳು ಇರುವ ವ್ರಣಗಳನ್ನು ಅವಪೀಡನ ( ಹಿಂಡಿ ತೆಗೆಯೋಣ ) ಮಾಡಬೇಕು.

**ಕಲಾಯಾಶ್ಚ ಮಸೂರಾಶ್ಚ ಗೋಧೂಮಾಃ ಸಹರೇಣವಃ ।**
**ಕಲ್ಕೀಕೃತಾಃ ಪ್ರಶಸ್ಯಂತೇ ನಿಃಸ್ನೇಹಾ ವ್ರಣಪೀಡನೇ ‖ ೬೧ ‖**

ಅರ್ಥ:— ವ್ರಣಗಳ ಅವಪೀಡನದಲ್ಲಿ ಬಟಗಡ್ಲೆ, ಚನ್ನಂಗಿ, ಗೋದಿ ರೇಣುಕ ಬೀಜ ಇವುಗಳ ಸ್ನೇಹಹಾಕದ ಕಲ್ಕವು ಶ್ರೇಷ್ಠವು.

೯ನೆಯ ಉಪಕ್ರಮವಾದ ನಿರ್ವಾಪಣವನ್ನು ಹೇಳುತ್ತಾರೆ—

**ಶಾಲ್ಮಲೀತ್ವಗ್ಬಲಾಮೂಲಂ ತಥಾ ನ್ಯಗ್ರೋಧಪಲ್ಲವಾಃ ‖**
**ನ್ಯಗ್ರೋಧಾದಿಕಮುದ್ದಿಷ್ಟಂ ಬಲಾದಿಕಮಥಾಪಿ ವಾ ‖ ೬೨ ‖**

**ಆಲೇಪನಂ ನಿರ್ವಾಪಣಂ ತದ್ವಿದ್ಯಾತ್ತೈಶ್ಚ ಸೇಚನಮ್ ‖**
**ಸರ್ಪಿಷಾ ಶತಧೌತೇನ ಪಯಸಾ ಮಧುಕಾಂಬುನಾ ‖೬೩‖**

**ನಿರ್ವಾಪಯೇತ್ ತು ಶೀತೇನ ರಕ್ತಪಿತ್ತೋತ್ತರಾನ್ ವ್ರಣಾನ್ ‖೬೩‖ ‖**

ಅರ್ಥ:— ಬೂರಲತೊಗಟೆ, ಬಲಾಮೂಲ ಆಲದ ಎಲೆ ಅಥವಾ ಹಿಂದೆ ಹೇಳಿದ ನ್ಯಗ್ರೋಧಾದಿ ( ನ್ಯಗ್ರೋಧ ಉಡುಂಬುರಾ, ಅಶ್ವತ್ಥ, ಪ್ಲಕ್ಷ, ವೇತಸ ) ಅಥವಾ ಬಲಾದಿ ( ಮುಂದೆ ೨೫ ನೇ ಶ್ಲೋಕದಲ್ಲಿ ಹೇಳುವ) ಲೇಪವು. ‖ ೬೨ ‖ ಅವುಗಳ ಕಷಾಯದಿಂದ ಸೇಚನವು ನಿರ್ವಾಪಣ ( ದಾಹನಾಶನ ) ವೆಂದು ಕರೆಯಲ್ಪಡುತ್ತದೆ. ರಕ್ತಪಿತ್ತಾಧಿಕ ವ್ರಣಗಳನ್ನು

ಶತಧೌತಘೃತದಿಂದ ಅಥವಾ ತಣ್ಣನ್ನ ಹಾಲಿನಿಂದ ಅಥವಾ ಜೇಷ್ಠಮಧುವಿನ ಕಷಾಯದಿಂದ ನಿರ್ವಾಪಣ ಮಾಡಬೇಕು. ॥ ೬೩॥ ॥

ಹತ್ತನೆಯ ಉಪಕ್ರಮವಾದ ಸಂಧಾನವನ್ನು ಹೇಳುತ್ತಾರೆ—

**ಲಂಬಾನಿ ವ್ರಣಮಾಂಸಾನಿ ಪ್ರಲಿಪ್ಯ ಮಧುಸರ್ಪಿಷಾ ॥೬೪॥**
**ಸಂದಧೀತ ಸಮಂ ವೈದ್ಯೋ ಬಂಧನೈಶ್ಚೋಪಪಾದಯೇತ್ ॥**

**ಅರ್ಥ—** ಜೋತಾಡುವ ವ್ರಣಮಾಂಸವನ್ನು ತುಪ್ಪ ಜೇನುಗಳನ್ನು ತೊಡೆದು ॥೬೪॥ ಸರಿಯಾಗಿ ಸಂಧಾನ (ಜೋಡಿಸೋಣ) ಮಾಡಬೇಕು. ಮತ್ತು ಕಟ್ಟಬೇಕು. ॥ ೬೪॥ ॥

**ತಾನ್ ಸಮಾನ್ಸುಸ್ಥಿತಾನ್ ಜ್ಞಾತ್ವಾ ಫಲಿನೀಲೋಧ್ರಕಟ್ಫಲೈಃ॥೬೫॥**
**ಸಮಂಗಾಧಾತಕೀಯುಕ್ತೈಶ್ಚೂರ್ಣೈರವಚೂರ್ಣಯೇತ್ ॥**

**ಅರ್ಥ—** ಅವು ಸರಿಯಾಗಿ ತಮ್ಮ ಸ್ಥಾನಗಳಲ್ಲಿ ಕುಳಿತದ್ದನ್ನು ತಿಳಿದು ಕೊಂಡು, ಫಲಿನೀ (ಪ್ರಿಯಂಗು) ಲೋಧ್ರ, ಕರಿಶಿವನ್ನು, ॥೬೫॥ ಸಮಂಗಾ (ಮಂಜಿಷ್ಟ) ಧಾತಕೀಪುಷ್ಪ, ಚೂರ್ಣವನ್ನು ಅದರಮೇಲೆ ಉದುರಿಸಬೇಕು. ॥ ೬೫॥ ॥

**ಪಂಚವಲ್ಕಲಚೂರ್ಣೈರ್ವಾ ಶುಕ್ತಿಚೂರ್ಣಸಮಾಯುತೈಃ ॥೬೬॥**
**ಧಾತಕೀಲೋಧ್ರಚೂರ್ಣೈರ್ವಾ ತಥಾ ರೋಹಂತಿ ತೇ ವ್ರಣಾಃ ॥**

**ಅರ್ಥ—** ಅಥವಾ ಪಂಚವಲ್ಕಲ (ಆಲ, ಅತ್ತಿ, ಅರಳಿ, ಬಸರಿ, ಹೆಬ್ಬೆಗಳ ತೊಗಟೆ) ಸಿಂಪೀ ಚೂರ್ಣಗಳನ್ನು ॥೬೬॥ ಅಥವಾ ಧಾತಕೀ ಲೋಧ್ರಗಳನ್ನು ಅವುಗಳ ಮೇಲೆ ಉದುರಿಸಬೇಕು. ಅಂದರೆ ವ್ರಣಗಳು ಮಾಯುವವು. ॥ ೬೬॥ ॥

**ಅಸ್ಥಿ ಭಗ್ನಂ ಚ್ಯುತಂ ಸಂಧಿಂ ಸಂದಧೀತ ಸಮಂ ಪುನಃ ॥ ೬೭ ॥**
**ಸಮೇನ ಸಮಮಂಗೇನ ಕೃತ್ವಾನ್ಯೇನ ಪರೀಕ್ಷಕಃ ॥ ೬೭॥ ॥**

**ಅರ್ಥ:—** ಮುರಿದ ಅಥವಾ ಸಂಧಿಯನ್ನು ಬಿಟ್ಟ ಅಸ್ಥಿಯನ್ನು ॥ ೬೭ ॥ ಮುರಿಯದೇ ಇದ್ದ ಅವಯವದೊಡನೆ ಹೋಲಿಸಿ ನೋಡಿ ಅದರಂತೆ ಕೂಡಿಸಬೇಕು. ॥ ೬೭॥ ॥

**ಸ್ಥಿರೈಃ ಕವಲಿಕಾಬಂಧೈಃ ಕುಶಿಕಾಭಿಶ್ಚ ಸಂಸ್ಥಿತಮ್ || ೧೮ ||**
**ಪಟ್ಟೈಃ ಪ್ರಭೂತಸರ್ಪಿಷ್ಕೈರ್ಬಧ್ನೀಯಾದಚಲಂ ಸುಖಮ್ ||**

**ಅರ್ಥ:—** ಅದು ಸರಿಯಾಗಿ ಕೂಡಲು ಅದರ ಮೇಲೆ ಗಟ್ಟಿಯಾದ ಅರಿವೆಯ ಗಳಿಗೆಗಳನ್ನು ಇಟ್ಟು ಕುಶಿಕೆ (splint) (ಕಂಬು) ಗಳಿಂದ ಗಟ್ಟಿ ಮಾಡಿ || ೧೮ || ಆ ಮೇಲೆ ಬಹಳ ತುಪ್ಪಹಚ್ಚಿದ ಅರಿವೆಯ ಪಟ್ಟಿಗಳಿಂದ ಅಗಲಾಡದಂತೆ ಅದರ ನೋವಾಗದಂತೆ ಬಿಗಿಯಬೇಕು. || ೧೮ ||

**ಅವಿದಾಹಿಭಿರನ್ನೈಶ್ಚ ಪೌಷ್ಟಿಕೈಃ ಸಮುಪಾಚರೇತ್ || ೧೯ ||**
**ಗ್ಲಾನಿರ್ಹಿ ನ ಹಿತಾ ಚಾಸ್ಯ ಸಂಧಿವಿಶ್ಲೇಷಕಾರಿಕಾ ||**

**ಅರ್ಥ:—** ಪೌಷ್ಟಿಕವಾದ, ವಿದಾಹವನ್ನುಂಟುಮಾಡದ ಅನ್ನಗಳನ್ನು ಕೊಡಬೇಕು. || ೧೯ || ಯಾಕೆಂದರೆ ಅವನಿಗೆ ಗ್ಲಾನಿಯು ಹಿತಕರವಲ್ಲ, ಅದು ಸಂಧಿಯನ್ನು ಬಿಡಿಸುವದು || ೧೯ ||

**ವಿಚ್ಯುತಾಭಿಹತಾಂಗಾನಾಂ ವಿಸರ್ಪಾದೀನುಪದ್ರವಾನ್ ||೨೦||**
**ಉಪಕ್ರಮೇದ್ ಯಥಾಕಾಲಂ ಕಾಲಜ್ಞಃ ಸ್ವಾಚ್ಚಿಕಿತ್ಸಿತಾತ್ ||**

**ಅರ್ಥ—** ಸ್ಥಾನದಿಂದ ಸರಿದ ಮತ್ತು ಪೆಟ್ಟು ಬಿದ್ದ ಅವಯವಗಳಿಗೆ ಉಂಟಾದ ವಿಸರ್ಪ ಮುಂತಾದ ಉಪದ್ರವಗಳನ್ನು ||೨೦|| ಕಾಲಜ್ಞನಾದ ವೈದ್ಯನು ಆಯಾ ಕಾಲಕ್ಕೆ ಅನುರೂಪವಾಗಿ ಸರಿಯಾಗಿ ಚಿಕಿತ್ಸಿಸಬೇಕು.||೨೦||

ಹನ್ನೊಂದನೆಯ ಉಪಕ್ರಮವಾದ ಸ್ವೇದವನ್ನು ಹೇಳುತ್ತಾರೆ—

**ಶುಷ್ಕಾ ಮಹಾರುಜಃ ಸ್ತಬ್ಧಾ ಯೇ ವ್ರಣಾ ಮಾರುತೋತ್ತರಾಃ||೨೧||**
**ಸ್ವೇದ್ಯಾಃ ಶಂಕರಕಲ್ಪೇನ ತ್ಯೇ ಸ್ಯುಃ ಕೃಶರಪಾಯಸೈಃ ||**
**ಗ್ರಾಮ್ಯಬೈಲಾಂಬುಜಾನೂಪೈರ್ವೇಶವಾರೈಃ ಸುಸಂಸ್ಕೃತೈಃ ||೨೨||**
**ಉತ್ಕಾರಿಕಾಭಿಶ್ಚೋಷ್ಣಾಭಿಃ ಸುಖೀ ಸ್ಯಾತ್ ವ್ರಣಿತಸ್ತಥಾ ||**

**ಅರ್ಥ—** ಶುಷ್ಕ, ಬಹಳ ನೋಯುವ ಮತ್ತು ಸ್ತಬ್ಧವಾಗಿರುವ ವಾತಾಧಿಕ ವ್ರಣಗಳಿಗೆ ||೨೧|| ಎಳ್ಳಿನ ಕಲ್ಕ ಪಾಯಸ ಅಥವಾ ಗ್ರಾಮ್ಯ, ಬಿಲೇಶಯ, ಜಲಜ ಮತ್ತು ಆನೂಪ ಪ್ರಾಣಿಗಳ ಸಂಸ್ಕಾರಕೊಟ್ಟ ಕುಟ್ಟಿದ ಮಾಂಸಗಳಿಂದ ||೨೨|| ಅಥವಾ ಜವೆ, ಮುಂತಾದವುಗಳ ಬಿಸಿ ಬಿಸಿ ರೊಟ್ಟಿ

**ಅರ್ಥ:—** ಹೇಳಿದ ನಾನಾ ರೀತಿ ಬಣ್ಣ ಬಂದ, ಬಹಳ ಸೋರುವ ಬಹಳ ನೋಯುವ || ೮೨ || ವ್ರಣಗಳು ಅಶುದ್ಧವೆಂದು ತಿಳಿದು ಶೋಧನ ವನ್ನೇ ಮಾಡಬೇಕು. || ೮೨ ||

**ತ್ರಿಫಲಾ ಖದಿರೋ ದಾರ್ವೀ ನ್ಯಗ್ರೋಧಾದಿರ್ಬಲಾ ಕುಶಾಃ || ೮೩ ||**
**ನಿಂಬಕೋಲಕಪತ್ರಾಣಿ ಕಷಾಯಾಃ ಶೋಧನೇ ಹಿತಾಃ ||**

**ಅರ್ಥ:—** ತ್ರಿಫಲೆ, ತರಿ, ಮರ ಅರಿಷಣ, ಆಲ ಮುಂತಾದವುಗಳ ತೊಗಟೆ, ಬಲಾಮೂಲ, ದರ್ಭೆ (ದರ್ಭೆ) || ೮೩ || ಬೇವು ಬೋರೆಗಳ ಎಲೆಗಳ ಕಷಾಯಗಳು ವ್ರಣಶೋಧನೆಯಲ್ಲಿ ಹಿತಕರಗಳಾಗಿವೆ. || ೮೩ ||

**ತಿಲಕಲ್ಕಃ ಸಲವಣೋ ದ್ವೇ ಹರಿದ್ರೇ ತ್ರಿವೃದ್ ಘೃತಮ್ ||೮೪||**
**ಮಧುಕಂ ನಿಂಬಪತ್ರಾಣಿ ಲೇಪಃ ಸ್ಯಾದ್ ವ್ರಣಶೋಧನಃ ||**

**ಅರ್ಥ—** ಎಳ್ಳಿನ ಕಲ್ಕ, ಸೈಂಧವ, ಅರಿಷಿಣ, ಮರದರಿಷಿಣ, ನಿಶೋತ್ತರ ತುಪ್ಪ || ೮೪ || ಜೇಷ್ಠಮಧು, ಬೇವಿನ ಎಲೆಗಳ [ ಚಿಗುರುಗಳ ] ಲೇಪವು ವ್ರಣವನ್ನು ಶುದ್ಧಮಾಡುತ್ತದೆ. || ೮೪ ||

೧೫-೧೬ನೆಂದು ಉಪಕ್ರಮಗಳಾದ ರೋಪಣ ಕಷಾಯ ಲೇಪಗಳನ್ನು ಹೇಳುತ್ತಾರೆ—

**ನಾತಿರಕ್ತೋ ನಾತಿಪಾಂಡುರ್ನಾತಿಶ್ಯಾವೋ ನ ಚಾತಿರುಕ್ ||೮೫||**
**ನ ಚೋತ್ಸನ್ನೋ ನ ಚೋತ್ಸಂಗೀ ಶುದ್ಧೋ ರೋಪ್ಯಃ ಪರಂ ವ್ರಣಃ ||**

**ಅರ್ಥ—** ಬಹಳ ಕೆಂಪು, ಅಥವಾ ಬಹಳ ಬಿಳಿದು, ಅಥವಾ ಬಹಳ ಕರಿದು, ಅಥವಾ ಬಹಳ ನೋವು ಇರದ || ೮೫ || ಬಹಳ ಮೇಲಕ್ಕೇಳದ, ಬಹಳ ಕ್ರೊಪ್ಪು ಇರದ ವ್ರಣವು ಶುದ್ಧವೆಂದು ತಿಳಿದು ಅದನ್ನು ಅವಶ್ಯವಾಗಿ ಮಾಯಿಸಬೇಕು. || ೮೫ ||

**ನ್ಯಗ್ರೋಧೋದುಂಬರಾಶ್ವತ್ಥಕದಂಬಪ್ಲಕ್ಷವೇತಸಾಃ ||೮೬||**
**ಕರವೀರಾರ್ಕಕುಟಜಾಃ ಕಷಾಯಾ ವ್ರಣರೋಪಣಾಃ ||**

**ಅರ್ಥ—** ಆಲ, ಅತ್ತಿ, ಅರಳೆ, ಕದಂಬ, ಬಸರಿ, ಬೆತ್ತ, ||೮೬|| ಕಣಗಿಲು, ಎಕ್ಕೆ, ಕಲಿಗತ್ತಿಗಳ ಕಷಾಯಗಳು ವ್ರಣರೋಪಕಗಳಾಗಿವೆ. || ೮೬ || ||

**ಚಂದನಂ ಪದ್ಮಕಿಂಜಲ್ಕಂ ದಾರ್ವೀತ್ವಕ್ ನೀಲಮುತ್ಪಲಮ್ ||೮೭||**
**ಮೇದೇ ಮೂರ್ವಾ ಸಮಂಗಾ ಚ ಯಷ್ಟ್ಯಾಹ್ವಂ ವ್ರಣರೋಪಣಂ ||**

**ಅರ್ಥ:—** ಚಂದನ, ಕಮಲದ ಕೇಸರ, ಮರಅರಿಶಿಣದ ತೊಗಟೆ, ನೀಲಕಮಲ ||೮೭|| ಮೇದೆ ಮಹಾಮೇದೆ, ಹೆಗ್ಗರಟಿಗೆ, ಸಮಂಗಾ, [ಮಂಜಿಷ್ಟೆ] ಜೇಷ್ಠಮಧು, ಇವುಗಳ ಲೇಪವು ವ್ರಣರೋಪಕವಾಗಿದೆ. ೮೭||

**ಪ್ರಪೌಂಡರೀಕಂ ಜೀವಂತೀಂ ಗೋಜಿಹ್ವಾ ಧಾತಕೀಂ ಬಲಾಂ ||೮೮||**
**ರೋಪಣಂ ಸತಿಲಂ ದದ್ಯಾತ್ ಪ್ರದೇಹಂ ಸಘೃತಂ ವ್ರಣೇ ||**

**ಅರ್ಥ—** ಪುಂಡರೀಕಕಾಷ್ಠ, ಜೀವಂತಿ, ಗೋಜಿಹ್ವೆ [ಪತ್ರರಸ] ಧಾತಕೀಪುಷ್ಪ, ಬಲಾಮೂಲ, ||೮೮|| ಎಳ್ಳು ಇವುಗಳಕಲ್ಕದಲ್ಲಿ ತುಪ್ಪಕೂಡಿಸಿ ವ್ರಣಕ್ಕೆ ಲೇಪನಮಾಡಿದರೆ ಅದು ಮಾಯುತ್ತದೆ. ||೮೮|| ||

೧೭-೧೮-೧೯-೨೦ನೆಯ ಉಪಕ್ರಮಗಳಾದ ಶೋಧನ ರೋಪಣ ತೈಲಘೃತಗಳನ್ನು ಹೇಳುತ್ತಾರೆ—

**ಕಂಪಿಲ್ಲಕಂ ವಿಡಂಗಾನಿ ವತ್ಸಕಂ ತ್ರಿಫಲಾಂ ಬಲಾಂ ||೮೯||**
**ಪಟೋಲಂ ಪಿಚುಮರ್ದಂ ಚ ಲೋಧ್ರಂ ಮುಸ್ತಂ ಪ್ರಿಯಂಗುಕಂ ||**
**ಧಾತಕೀಂ ಖದಿರಂ ಸರ್ಜಮೇಲಾಮಗುರುಚಂದನಂ || ೯೦ ||**
**ಪಿಷ್ಟ್ವಾ ಸಾಧ್ಯಂ ಭವೇತ್ ತೈಲಂ ತತ್ಪರಂ ವ್ರಣರೋಪಣಂ ||**

**ಅರ್ಥ–** ಕಪಿಲೆ, ವಾಯಿವಿಡಂಗ, ಹಲಗತ್ತಿ, ತ್ರಿಫಲೆ, ಬಲಾಮೂಲ||೮೯|| ಕಹಿಪಡುವಲ, ಬೇವು, ಲೋಧ್ರ, ಜೇಕು, ಪ್ರಿಯಂಗು (ಗಸ್ಗುಲ). ಧಾತಕೀ ಪುಷ್ಪ, ತರೆ, ರಾಳ, ಯಾಲಕ್ಕಿ, ಅಗುರು, ಚಂದನ. || ೯೦ || ಇವುಗಳ ಕಲ್ಕದಿಂದ ಸಿದ್ಧಮಾಡಿದ ತೈಲವು ಅತ್ಯಂತ ವ್ರಣರೋಪಕವಾಗಿದೆ. ||೯೦|| ||

**ಪ್ರಪೌಂಡರೀಕಂ ಮಧುಕಂ ಕಾಕೋಲ್ಯೌ ದ್ವೇ ಚ ಚಂದನೇ || ೯೧ ||**
**ಸಿದ್ಧಮೇತೈಃ ಸಮೈಸ್ತೈಲಂ ಪರಂ ಸ್ಯಾದ್ ವ್ರಣರೋಪಣಮ್ ||**

**ಅರ್ಥ:—** ಪುಂಡರೀಕ ಕಾಷ್ಠ, ಜೇಷ್ಠಮಧು, ಕಾಕೋಲಿ, ಕ್ಷೀರ ಕಾಕೋಲಿ, ಚಂದನ, ರಕ್ತಚಂದನ || ೯೦ || ಇವೆಲ್ಲವುಗಳನ್ನು ಸಮವಾಗಿ ತೆಗೆದುಕೊಂಡು ಸಿದ್ಧಮಾಡಿದ ತೈಲವು ಅತ್ಯಂತ ವ್ರಣರೋಪಕವಾಗಿದೆ.||೯೦||||

**ದೂರ್ವಾಸ್ವರಸಸಿದ್ಧಂ ವಾ ತೈಲ ಕಂಪಿಲ್ಲಕೇನ ವಾ** ॥ ೯೩ ॥
**ದಾರ್ವೀತ್ವಚಶ್ಚ ಕಲ್ಕೇನ ಪ್ರಧಾನಂ ವ್ರಣರೋಪಣಮ್॥**

**ಅರ್ಥ:—** ಗರಿಕೆಯ ರಸದಿಂದ ಮಾಡಿದ ಅಥವಾ ಕಬಿಲೆಯಿಂದ ಮಾಡಿದ ॥ ೯೩ ॥ ಅಥವಾ ಮರ ಅರಿಷಣದ ತೊಗಟೆಯ ಕಲ್ಕದಿಂದ ಮಾಡಿದ ತೈಲವು ವ್ರಣರೋಪಣಗಳಲ್ಲಿ ಮುಖ್ಯವಾಗಿದೆ ॥ ೯೩॥ ॥

**ಯೇನೈವ ವಿಧಿನಾ ತೈಲಂ ಘೃತಂ ತೇನೈವ ಸಾಧಯೇತ್** ॥ ೯೪ ॥
**ರಕ್ತಪಿತ್ತೋತ್ತರಂ ಜ್ಞಾತ್ವಾ ರೋಪಣೇ ಘೃತಮುತ್ತಮಮ್॥**

**ಅರ್ಥ:—** ತೈಲವನ್ನು ಸಿದ್ಧಮಾಡುವ ರೀತಿಯಿಂದಲೇ ಘೃತವನ್ನು ಸಿದ್ಧಮಾಡಬೇಕು. ॥ ೯೪ ॥ ರಕ್ತಪಿತ್ತಾಧಿಕ ವ್ರಣವೆಂದು ತಿಳಿದಮೇಲೆ ಅದನ್ನು ಮಾಯಿಸಲು ಈ ಘೃತವೇ ಉತ್ತಮವು. ॥ ೯೪॥ ॥

೩೧ನೆಯ ಉಪಕ್ರಮವಾದ ವ್ರಣಪ್ರಚ್ಛಾದನವನ್ನು ಹೇಳುತ್ತಾರೆ—

**ಕದಂಬಾರ್ಜುನಜಂಬೂನಾಂ ಪಾಟಲ್ಯಾಃ ಪಿಪ್ಪಲಸ್ಯ ಚ** ॥ ೯೫ ॥
**ವ್ರಣಂ ಪ್ರಚ್ಛಾದನೇ ವಿದ್ವಾನ್ ಪತ್ರಾಣ್ಯರ್ಕಸ್ಯ ಚಾದಿಶೇತ್ ॥**

**ಅರ್ಥಃ—** ಕದಂಬ, ಮತ್ತಿ, ನೇರಳೆ, ಪಾದರಿ, ಅರಳಿ ಇವುಗಳ ॥ ೯೫ ॥ ಮತ್ತು ಎಕ್ಕದ ಎಲೆಗಳನ್ನು ವ್ರಣಮುಚ್ಚಲೆಂದು ಜಾಣ ವೈದ್ಯನು ಹೇಳಬೇಕು. ॥ ೯೫॥ ॥

**ವಾಕ್ಷೋರ್ಮ ಧನಾಜಿನಃ ಕ್ಷೌಮಪಟ್ಟೋ ವ್ರಣಹಿತಃ ಪರಃ** ॥ ೯೬ ॥

**ಅರ್ಥ—** ಗಿಡದ ತೊಗಟೆ ಅಥವಾ ತೊಗಲು ಅಥವಾ ನಾರಿನಬಟ್ಟೆ ಇವುಗಳ ಪಟ್ಟಿಯು ವ್ರಣಕ್ಕೆ ಬಹಳ ಹಿತಕರವಿದೆ. ॥ ೯೬ ॥

೩೨-೩೪ ನೆಯ ಉಪಕ್ರಮಗಳಾದ ಬಂಧಗಳನ್ನು ಹೇಳುತ್ತಾರೆ—

**ಬಂಧಶ್ಚ ದ್ವಿವಿಧಃ ಶಸ್ತೋ ವ್ರಣಾನಾಂ ಸವ್ಯದಕ್ಷಿಣಃ ॥**

**ಅರ್ಥಃ—** ಸವ್ಯ [ಎಡದ] ಬಂಧ ಮತ್ತು ದಕ್ಷಿಣ [ಬಲದ] ಬಂಧ ಎಂದು ವ್ರಣಗಳ ಬಂಧವು ಎರಡು ವಿಧವಾಗಿದೆ. ॥ ೯೬॥ ॥

೩೫ನೆಯ ಉಪಕ್ರಮವಾದ ಆಹಾರವನ್ನು ಹೇಳುತ್ತಾರೆ—

**ಲವಣಾಮ್ಲಕಟೂಷ್ಣಾನಿ ವಿದಾಹೀನಿ ಗುರೂಣಿ ಚ** ॥ ೯೭ ॥
**ವರ್ಜಯೇದನ್ನಪಾನಾನಿ ವ್ರಣೇ ಮೈಥುನಮೇವ ಚ ॥**

**ಅರ್ಥ—** ಉಪ್ಪು, ಹುಳಿ, ಕಾರ, ಉಷ್ಣ, ವಿದಾಹಿ, ಜಡ, ||೯೬||
ಅನ್ನಪಾನಗಳನ್ನೂ ಮೈಥುನಗಳನ್ನೂ ವ್ರಣರೋಗಿಯು ಬಿಡಬೇಕು || ೯೬|| ||

**ನಾತಿಶೀತಗುರುಸ್ನಿಗ್ಧಮವಿದಾಹಿ ಯಥಾವ್ರಣಂ ||೯೭||**
**ಅನ್ನಪಾನಂ ವ್ರಣಹಿತಂ ಹಿತಂ ಚಾಸ್ವಪನಂ ದಿವಾ ||**

**ಅರ್ಥ—** ಬಹಳ ಶೀತ, ಜಡ, ಸ್ನಿಗ್ಧವಿರದ ಮತ್ತು ವಿದಾಹ ಮಾಡದವು ||೯೭|| ವ್ರಣಕ್ಕೆ ಹಿತಕರವಾದ ಅನ್ನಪಾನಗಳು ಹಗಲು ನಿದ್ರೆಮಾಡದಿರುವದೂ ಉತ್ತಮ. || ೯೭|| ||

೨೫ನೆಯ ಉಪಕ್ರಮವಾದ ಉತ್ಸಾದನವನ್ನು ಹೇಳುತ್ತಾರೆ—

**ಸ್ತನ್ಯಾನಿ ಜೀವನೀಯಾಂತಿ ಬೃಂಹಣೀಯಾನಿ ಯಾನಿ ಚ ||೯೮||**
**ಉತ್ಸಾದನಾರ್ಥಂ ನಿಮ್ನಾನಾಂ ವ್ರಣಾನಾಂ ತಾನಿ ಕಲ್ಪಯೇತ್ ||**

**ಅರ್ಥ—** ಗುಂಬವಾದ ವ್ರಣಗಳು ಮೇಲಕ್ಕೆ ಏಳುವದಕ್ಕಾಗಿ ಸ್ತನ್ಯ, ಜೀವನೀಯ, ಬೃಂಹಣೀಯ, ಔಷಧಗಳನ್ನು ಕೊಡಬೇಕು. || ೯೮|| ||

**ರುಧಿರೇತಿಪ್ರವೃತ್ತೇ ತು ಭಿನ್ನೇ ಛಿನ್ನೇಽಧಿಮಾಂಸಕೇ ||೯೯||**
**ಕಫಗ್ರಂಥಿಷು ಗಂಡೇಷು ವಾತಸ್ತಂಭೇಷು ರುಕ್ಷು ಚ ||**
**ಗೂಢಪ್ರಾಯಲಸೀಕೇಷು ಗಂಭೀರೇಷು ವ್ರಣೇಷು ಚ ||೧೦೦||**
**ಸುಪ್ತೇಷು ಚಾಂಗದೇಶೇಷು ಕರ್ಮಾಗ್ನೇಃ ಸಂಪ್ರಶಸ್ಯತೇ || ೧೦೦|| ||**

**ಅರ್ಥ—** ಹೆಚ್ಚು ಬೆಳೆದ ಮಾಂಸ (ಮೂಲವ್ಯಾಧಿ ಮುಂತಾದವು)ಗಳನ್ನು ಚುಚ್ಚಿದಾಗ್ಗೆ, ಅಥವಾ ಕತ್ತರಿಸುವಾಗ್ಗೆ ಬಹಳ ರಕ್ತಸ್ರಾವವಾಗುತ್ತಲು ||೯೯|| ಮತ್ತು ಕಫದ ಗ್ರಂಥಿ ಗಲಗಂಡ ಗಂಡಮಾಲೆ, ವಾತಸ್ತಂಭ ವಾತರೋಗಗಳಲ್ಲಿ, ನೋವು, ರಸಿಕೆ ಹುದುಗಿಕೊಂಡಿದ್ದ ಗುಂಭವ್ರಣಗಳಲ್ಲಿ ||೧೦೦|| ಸ್ಪರ್ಶಜ್ಞಾನವಿರದ ಶರೀರದಭಾಗಗಳಲ್ಲಿ ದಾಹವು ಒಳ್ಳೇದು ೧೧೦||

**ಮಧೂಚ್ಛಿಷ್ಟೇನ ತೈಲೇನ ಮಜ್ಜಕ್ಷೌದ್ರವಸಾಘೃತೈಃ ||೧೦೧||**
**ತಪ್ತೈರ್ವಾ ವಿವಿಧೈರ್ಲೋಹೈರ್ದಹೇದ್ ದಾಹವಿಶೇಷವಿತ್ ||**

**ಅರ್ಥ—** ದಾಹದ ವಿಶೇಷ ಜ್ಞಾನಿಯಾದ ವೈದ್ಯನು ಮೇಣ, ತೈಲ, ಮಜ್ಜೆ, ಜೇನು, ನೆಣ, ಘೃತ ಇವುಗಳನ್ನು ||೧೦೧|| ವಿವಿಧ ಲೋಹಗಳನ್ನು ಕಾಸಿ ದಾಹ ಕೊಡಬೇಕು. || ೧೦೧|| ||

**ರುಕ್ಷಾಣಾಂ ಸುಕುಮಾರಾಣಾಂ ಗಂಭೀರಾನ್ಮಾರುತೋತ್ತರಾನ್ ॥೧೦೨**
**ದಹೇತ್ ಸ್ನೇಹಮಧೂಚ್ಛಿಷ್ಟೈರ್ಲೋಹೈಃ ಕ್ಷೌದ್ರೈಸ್ತತೋಽನ್ಯಥಾ ॥**

**ಅರ್ಥ—** ರುಕ್ಷ ಮತ್ತು ಕೋಮಲ ಜನರ ಮತ್ತು ವಾತಾಧಿಕ ಗಂಭೀರ ವ್ರಣಗಳನ್ನು ॥೧೦೨॥ ಸ್ನೇಹ ಮೇಣಗಳಿಂದಲೂ ಉಳಿದ ವ್ರಣಗಳನ್ನು ಲೋಹ ಜೇನುಗಳಿಂದಲೂ ಸುಡಬೇಕು. ॥ ೧೦೨ ॥

ದಾಹಕ್ಕೆ ಅಯೋಗ್ಯ ಜನಸ್ಥಾನಗಳನ್ನು ಹೇಳುತ್ತಾರೆ—

**ಬಾಲದುರ್ಬಲವೃದ್ಧಾನಾಂ ಗರ್ಭಿಣ್ಯಾ ರಕ್ತಪಿತ್ತಿನಾಂ ॥ ೧೦೩ ॥**
**ತೃಷ್ಣಾಜ್ವರಪರೀತಾನಾಮಬಲಾನಾಂ ವಿಷಾದಿನಾಮ್ ।**
**ನಾಗ್ನಿಕರ್ಮೋಪದೇಷ್ಟವ್ಯಂ ಸ್ನಾಯುಮರ್ಮವ್ರಣೇಷು ಚ ॥ ೧೦೪ ॥**

**ಅರ್ಥ—** ಬಾಲಕ, ದುರ್ಬಲ, ವೃದ್ಧ, ಗರ್ಭಿಣಿ, ರಕ್ತಪಿತ್ತ ರೋಗಿಗಳಿಗೂ ॥ ೧೦೩ ॥ ನೀರಡಿಕೆ ಜ್ವರವ್ಯಾಪ್ತರಾದವರು, ದುರ್ಬಲ, ದುಃಖಿತ ಜನರಿಗೂ ಸ್ನಾಯು ಮರ್ಮಗಳಲ್ಲಿದ್ದ ವ್ರಣಗಳಿಗೂ ದಾಹಕೊಡಬಾರದು. ॥ ೧೦೪ ॥

**ಸವಿಷೇಷು ಸಶಲ್ಯೇಷು ನೇತ್ರಕೋಷ್ಠವ್ರಣೇಷು ಚ ॥**
**ರೋಗದೋಷಬಲಾಪೇಕ್ಷೀ ಮಾತ್ರಾಕಾಲಾಗ್ನಿಕೋವಿದಃ ॥ ೧೦೫ ॥**
**ಶಸ್ತ್ರಕರ್ಮಾಗ್ನಿಕೃತ್ಯೇಷು ಕ್ಷಾರಮಪ್ಯವಚಾರಯೇತ್ ॥**

**ಅರ್ಥ—** ವಿಷ ಅಥವಾ ಶಲ್ಯವುಳ್ಳ ಮತ್ತು ಕಣ್ಣು, ಕೋಷ್ಠಗಳಲ್ಲಿರುವ ವ್ರಣಗಳಿಗೂ ದಾಹ ಕೊಡಬಾರದು. ಅವರಿಗೆ ಶಸ್ತ್ರಕರ್ಮ, ದಾಹಮಾಡಬೇಕಾಗಿದ್ದರೆ, ರೋಗದೋಷಗಳ ಬಲವನ್ನು ಪ್ರಮಾಣ-ಕಾಲ-ಅಗ್ನಿಬಲಗಳನ್ನು ಚೆನ್ನಾಗಿ ವಿಚಾರಿಸಿ ॥೧೦೫॥ ಕ್ಷಾರವನ್ನು ಪ್ರಯೋಗಿಸಬೇಕು ೧೦೫॥

೨೫ ನೆಯ ಉಪಕ್ರಮವಾದ ಅವಸಾದನವನ್ನು ಹೇಳುತ್ತಾರೆ—

**ಭೂರ್ಜಗ್ರಂಥ್ಯಶ್ಮಕಾಶೀಶಂ ಸಮಭಾಗಾನಿ ಗುಗ್ಗುಲುಃ ॥ ೧೦೬ ॥**
**ವ್ರಣಾವಸಾದನಂ ತದ್ವತ್ ಕಲವಿಂಕಕಪೋತವಿಟ್ ॥**

**ಅರ್ಥ:—** ಭೂರ್ಜವೃಕ್ಷದ ಗಂಟು, ಕಲ್ಲು ಹಿರಾಕಸ, ಗುಗ್ಗುಳ ಇವುಗಳನ್ನು ಸಮಭಾಗ ತೆಗೆದುಕೊಂಡು ಮಾಡಿದ ಲೇಪವು ॥ ೧೦೬ ॥ ಅದರಂತೆ ಗುಬ್ಬಿಪಾರಿವಾಳಗಳ ಮಲವು ವ್ರಣಾವಸಾದಕವಾಗಿದೆ. ॥ ೧೦೬ ॥ ॥

೨೯–೩೦ ನೆಯ ಉಪಕ್ರಮಗಳಾದ ಕಾಠಿನ್ಯ ಮಾರ್ದವಕರ ಧೂಪಗಳನ್ನು ಹೇಳುತ್ತಾರೆ—

**ಕಠಿನತ್ವಂ ವ್ರಣಾ ಯಾಂತಿ ಗಂಧಸಾರ್ಜೈಶ್ಚ ಧೂಪಿತಾಃ || ೧೦೭ ||**
**ಸರ್ಪಿರ್ಮಜ್ಜವಸಾತೈಲೈಃ ಶೈಥಿಲ್ಯಂ ಯಾಂತಿ ಹಿ ವ್ರಣಾಃ ||**

**ಅರ್ಥ:—** ಬಿಳೀ ಚಂದನದ ಧೂಪದಿಂದ ವ್ರಣಗಳು ಕಠಿನವಾಗುತ್ತವೆ. || ೧೦೭ || ಮತ್ತು ತುಪ್ಪ, ಮಜ್ಜೆ, ನೆಣ, ಎಣ್ಣೆಗಳ ಧೂಪಗಳಿಂದ ಶೈಥಿಲ್ಯವನ್ನು ಹೊಂದುತ್ತವೆ. || ೧೦೭|| ||

**ರುಜಃ ಸ್ರಾವಾಶ್ಚ ಗಂಧಾಶ್ಚ ಕ್ರಿಮಯಶ್ಚ ವ್ರಣಾಶ್ರಿತಾಃ ||೧೦೮||**
**ಕಾಠಿನ್ಯಂ ಮಾರ್ದವಂ ಚಾಪಿ ಧೂಪನೇನೋಪಶಾಮ್ಯತಿ ||**

**ಅರ್ಥ:—** ಧೂಪದಿಂದ ವ್ರಣದಲ್ಲಿಯ ನೋವು, ಸ್ರಾವ, ದುರ್ಗಂಧ, ಕ್ರಿಮಿ. || ೧೦೮ || ಕಠಿನತೆ ಮೃದುತ್ವಗಳು ನಾಶಹೊಂದುವವು.

೩೧-೩೨ ನೆಯ ಉಪಕ್ರಮಗಳಾದ ಕಾಠಿನ್ಯ ಮಾರ್ದವಕರ ಲೇಪಗಳನ್ನು ಹೇಳುತ್ತಾರೆ.

**ಲೋಧ್ರನ್ಯಗ್ರೋಧಶುಂಗಾಶ್ಚ ಖದಿರಂ ತ್ರಿಫಲಾ ಘೃತಂ ||೧೦೯||**
**ಪ್ರಲೇಪೋ ವ್ರಣಶೈಥಿಲ್ಯಸೌಕುಮಾರ್ಯಪ್ರಸಾದತಃ ||**

**ಅರ್ಥ:—** ಲೋಧ್ರ, ಆಲದಚಿಪ್ಪೆ, ಕಲಿ, ತ್ರಿಫಲಾ ಮತ್ತು ತುಪ್ಪ ||೧೦೯|| ಇವುಗಳ ಲೇಪವು ವ್ರಣಕ್ಕೆ ಶೈಥಿಲ್ಯ ಸುಕುಮಾರತ್ವಗಳನ್ನುಂಟುಮಾಡುವವು. || ೧೦೯|| ||

**ಸರುಜಃ ಕಠಿನಾಃ ಸ್ತಬ್ಧಾ ನಿರಾಸ್ರಾವಾಶ್ಚ ಯೇ ವ್ರಣಾಃ ||೧೧೦||**
**ಯವಚೂರ್ಣೈಃ ಸಸರ್ಪಿಷ್ಕೈರ್ಬಹುಶಸ್ತಾನ್ ಪ್ರಲೇಪಯೇತ್ ||**

**ಅರ್ಥ:–** ನೋವುಳ್ಳ, ಬಿಗಿದ, ಸ್ತಬ್ಧ ಸ್ರಾವರಹಿತ ವ್ರಣಗಳಿಗೆ ||೧೧೦|| ತುಪ್ಪ ಕೂಡಿಸಿದ ಜವೆಯ ಚೂರ್ಣದಿಂದ ಅನೇಕ ಸಾರೆ ಲೇಪ ಮಾಡಬೇಕು. || ೧೧೦|| ||

**ಮುದ್ಗಷಷ್ಟಿಕಶಾಲೀನಾಂ ಪಾಯಸೈರ್ವಾ ಯಥಾಕ್ರಮಮ್ ||೧೧೧||**
**ಸಘೃತೈರ್ಜೀವನೀಯೈರ್ವಾ ತರ್ಪಯೇತ್ ತಾನಭೀಕ್ಷ್ಣಶಃ ||**

**ಅರ್ಥ:–** ಅಥವಾ ಹೆಸರು, ಷಷ್ಟಿಕ ಭತ್ತಗಳ ಪಾಯಸಗಳಿಂದ ||೧೧೧|| ಅಥವಾ ತುಪ್ಪಹಾಕಿದ ಜೀವನೀಯ ಔಷಧಗಳಿಂದ ಕ್ರಮವಾಗಿ ಅನೇಕ ಸಾರೆ ಲೇಪ ಮಾಡಬೇಕು.

೩೩ನೇ ವ್ರಣಾವ ಚೂರ್ಣವನ್ನು ಹೇಳುತ್ತಾರೆ—

**ಕಕುಭೋದುಂಬರಾಶ್ವತ್ಥಲೋಧ್ರಕಟ್‌ಫಲಜಾಂಬವೈಃ ||೧೧೨||**
**ತ್ವಚಮಾಶು ನಿಗೃಹ್ಣಾತಿ ತ್ವಕ್‌ಚೂರ್ಣೈಶ್ಚೂರ್ಣಿತಾವ್ರಣಾಃ ||**

**ಅರ್ಥ:—** ಮತ್ತಿ, ಅತ್ತಿ, ಅರಳಿ, ಲೋಧ್ರ, ಕಿರಿಬೇವು, ನೇರಳೆ ಇವುಗಳ ||೧೧೨|| ತೊಗಟೆಯ ಚೂರ್ಣವನ್ನು ಉದುರಿಸಲು ವ್ರಣಗಳಿಗೆ ತ್ವಚೆಯು ಬರುವುದು. ||೧೧೨||

೩೪ ನೆಯ ಉಪಕ್ರಮವಾದ ವರ್ಣಕರ ಲೇಪನಗಳನ್ನು ಹೇಳುತ್ತಾರೆ—

**ಮನಃಶಿಲಾಂ ಮಂಜಿಷ್ಠಾ ಶತಾಹ್ವಾ ರಜನೀದ್ವಯಮ್ ||೧೧೩||**
**ಪ್ರಲೇಪಃ ಸಘೃತಕ್ಷೌದ್ರಸ್ತ್ವಗ್ವಿಶುದ್ಧಿಕರಃ ಪರಃ ||**

**ಅರ್ಥ:—** ಮನಶ್ಶಿಲೆ, ಅರಿತಾಳ, ಮಂಜಿಷ್ಠೆ, ಬಾಳದೇಸಿ, ಅರಿಸಿನ, ಮರ ಅರಿಸಿನ, ||೧೧೩|| ಇವುಗಳ ಚೂರ್ಣವನ್ನು ತುಪ್ಪ ಮತ್ತು ಜೇನು ಗಳೊಡನೆ ಲೇಪಿಸುವುದು ತ್ವಚೆಗೆ ಸಮಾನ ಬಣ್ಣವನ್ನು ತರುತ್ತದೆ. ||೧೧೩||

**ಅಯೋರಜಃ ಸಕಾಸೀಸಂ ತ್ರಿಫಲಾ ಕುಸುಮಾನಿ ಚ ||೧೧೪||**
**ಪ್ರಲೇಪಃ ಕುರುತೇ ಕಾರ್ಷ್ಣ್ಯಂ ಸದ್ಯ ಏವ ನವತ್ವಚಿ ||**

**ಅರ್ಥ:—** ಕಬ್ಬಿಣದ ಚೂರ್ಣ, ಹಿರಾಕಸ, ತ್ರಿಫಲೆ, [illegible], [illegible] ಇವುಗಳ ಲೇಪವು ಹೊಸದಾಗಿ ಬಂದ ಚರ್ಮದ ತ್ವಚೆಗೆ ಕೂಡಲೇ ಕಪ್ಪು ಬಣ್ಣವನ್ನು ಉಂಟುಮಾಡುತ್ತದೆ. ||೧೧೪||

**ಕಾಲೀಯಕನತಾಪತ್ರಾಸ್ಥಿಹೇಮಕಾಲರಸೋತ್ತಮೈಃ ||೧೧೫||**
**ಲೇಪಃ ಸಗೋಮಯರಸಃ ಸವರ್ಣಕರಣಃ ಪರಃ |**

**ಅರ್ಥ—** ಕಾಲೀಯ ಕಾಷ್ಠ, ತಗರ, ನಾಗಕೇಸರ, [illegible], ಮಂಜಿಷ್ಠೆ, ಪಾದರಸ ||೧೧೫|| ಗೋಮಯದ ರಸಗಳ ಲೇಪವು ತ್ವಚೆಯ ಸಮಾನ ವರ್ಣವನ್ನುಂಟುಮಾಡುತ್ತದೆ. ||೧೧೫||

**ಧ್ಯಾಮಕಾಶ್ವತ್ಥನಿಚುಲಮೂಲಂ ಲಾಕ್ಷಾಥ ಗೈರಿಕಾಂ ||೧೧೬||**
**ಸಹೇಮ ಚಾಮೃತಾಸಂಜ್ಞಂ ಕಾಸೀಸಂ ಚೇತಿವರ್ಣಕೃತ್ ||**

**ಅರ್ಥ:—** ಗಂಧತೃಣ, ಅರಳಿ, ನಿಚುಲ, (ಹೆಬ್ಬೆಚಾತಿ) ಇವುಗಳ ಬೇರು, ಅರಗು, ಕಾವಿ, ||೧೧೬|| ನಾಗಕೇಶರ, ಅಮೃತಬಳ್ಳಿ, ಹಿರಾಕಸ ಇವುಗಳ ಲೇಪವು ತ್ವಚೆಗೆ ಮೂಲಬಣ್ಣವನ್ನು ತರುತ್ತದೆ. ||೧೧೬||

೩೫—೩೬ನೆಯ ಉಪಕ್ರಮವಾದ ರೋಪಣ, ಲೋಮರೋಹಣ ಔಷಧಗಳನ್ನು ಹೇಳುತ್ತಾರೆ—

**ಚತುಷ್ಪದಾನಾಂ ತ್ವಗ್ರೋಮ ಖುರಶೃಂಗಾಸ್ಥಿಭಸ್ಮನಾ ॥ ೧೧೭ ॥**
**ತೈಲಾಕ್ತಾ ಚೂರ್ಣಿತಾ ಭೂಮಿರ್ಭವೇದ್ರೋಮವತೀ ಪುನಃ ॥ ೧೧೭॥ ॥**

**ಅರ್ಥ:—** ನಾಲ್ಕು ಕಾಲುಳ್ಳ ಪ್ರಾಣಿಗಳ ತೊಗಲು, ಕೂದಲು, ಖುರ, ಕೊಂಬು, ಎಲುಬುಗಳ ಭಸ್ಮವನ್ನು ॥ ೧೧೭ ॥ ಎಣ್ಣೆಯಲ್ಲಿ ಹಚ್ಚಿದರೆ ಆ ಸ್ಥಳದಲ್ಲಿ ಮತ್ತೆ ಕೂದಲುಗಳು ಬರುತ್ತವೆ.

**ಷೋಡಶೋಪದ್ರವಾ ಯೇ ಚ ವ್ರಣಾನಾಂ ಪರಿಕೀರ್ತಿತಾಃ ॥ ೧೧೮ ॥**
**ತೇಷಾಂ ಚಿಕಿತ್ಸಾ ನಿರ್ದಿಷ್ಟಾ ಯಥಾಸ್ವಂ ಸ್ವೇ ಚಿಕಿತ್ಸಿತೇ ॥ ೧೧೮॥ ॥**

**ಅರ್ಥ:—** ವ್ರಣದಲ್ಲಿ ಆಗುವ ೧೬ ಉಪದ್ರವಗಳು ॥ ೧೧೮ ॥ ಅವುಗಳ ಚಿಕಿತ್ಸೆಯು ಆಯಾಯ ರೋಗಗಳ ಚಿಕಿತ್ಸೆಯಲ್ಲಿ ಹೇಳಲ್ಪಟ್ಟಿದೆ.

## ತತ್ರ ಶ್ಲೋಕೌ

**ದ್ವೌ ವ್ರಣೌ ವ್ರಣಭೇದಾಶ್ಚ ಪರೀಕ್ಷಾ ದುಷ್ಟಿರೇವ ಚ ॥ ೧೧೯ ॥**
**ಸ್ಥಾನಾನಿ ಗಂಧಾಃ ಸ್ರಾವಾಶ್ಚ ಸೋಪಸರ್ಗಾಃ ಕ್ರಿಯಾಶ್ಚ ಯಾಃ ॥**
**ವ್ರಣಾಧಿಕಾರೇ ಸಪ್ರಶ್ನಮೇತನ್ನವಕಮುಕ್ತವಾನ್ ॥ ೧೨೦ ॥**
**ಮುನಿರ್ವ್ಯಾಸಸಮಾಸಾಭ್ಯಾಮಗ್ನಿವೇಶಾಯ ಧೀಮತೇ ॥**

**ಅರ್ಥ—** ೨ ಪ್ರಕಾರದ ವ್ರಣ, ವ್ರಣದ ಭೇದ, ಅವುಗಳ ಪರೀಕ್ಷೆ, ಅವುಗಳ ದೋಷ ॥ ೧೧೯ ॥ ಅವುಗಳ ಸ್ಥಾನ ವಾಸನೆ, ಸ್ರಾವ, ಉಪದ್ರವ, ಚಿಕಿತ್ಸೆ ಇವುಗಳನ್ನೆಲ್ಲ ಆತ್ರೇಯ ಋಷಿಗಳು ಬುದ್ಧಿವಂತನಾದ ಅಗ್ನಿವೇಶನಿಗೆ ಈ ವ್ರಣಾಧಿಕಾರದಲ್ಲಿ ಅವನ ಪ್ರಶ್ನೆಗೆ ಉತ್ತರರೂಪವಾಗಿ ( ಮೊದಲು ) ಸಂಕ್ಷೇಪವಾಗಿಯೂ (ಆ ಮೇಲೆ) ವಿಸ್ತಾರವಾಗಿಯೂ ಹೇಳಿದರು ॥ ೧೨೦॥ ॥

**ಇತ್ಯಗ್ನಿವೇಶಕೃತೇ ತಂತ್ರೇ ದೃಢಬಲಪ್ರತಿಸಂಸ್ಕೃತೇ ಚಿಕಿತ್ಸಿತಸ್ಥಾನೇ ದ್ವಿವ್ರಣೀಯ ಚಿಕಿತ್ಸಿತಂ ನಾಮ ಪಂಚವಿಂಶೋಽಧ್ಯಾಯಃ ॥**

ಶ್ರೀ ಮಂದಾವ್ಯ ಬಾಬಾಚಾರ್ಯರ ಪೂಜ್ಯಪಾದ ಶಿಷ್ಯ ಅಪ್ಪ ಅನಂತಾಚಾರ್ಯರಿಂದ ರಚಿತವಾದ **ಚರಕ 'ಚಿಕಿತ್ಸಾ ಬೋಧಿನಿ'** ಎಂಬ ಚರಕ ಸಂಹಿತೆಯ ಟಿಪ್ಪಣಿಯಲ್ಲಿ **ದ್ವಿವ್ರಣೀಯ** ಚಿಕಿತ್ಸೆ ಎಂಬ ಇಪ್ಪತ್ತೈದನೆಯ ಅಧ್ಯಾಯವು ಮುಗಿ’’

# ನಮ್ಮ ಗ್ರಂಥಗಳು

೧. ಗೃಹವೈದ್ಯ

[ಪ್ರತಿ ತೀರಿವೆ] ಬೆಲೆ ೮ ಆಣೆ



೨. ಆ. ಔಷಧೀ ಗುಣಧರ್ಮಶಾಸ್ತ್ರ ಭಾಗ ೧

(ವೈದ್ಯ ಪಂಡಿತ ಗುಣೆಯವರ ಗ್ರಂಥದ ಅನುವಾದ) ಬೆಲೆ ೨ ರೂಪಾಯಿ



೩. ಆಯುರ್ವೇದದ ವೈಶಿಷ್ಟ್ಯ

[ಪ್ರತಿ ತೀರಿವೆ] ಬೆಲೆ ೪ ಆಣೆ



೪. ಅಷ್ಟಾಂಗ ಹೃದಯ (ವಾಗ್ಭಟ) ಸೂತ್ರಸ್ಥಾನ

[ಪ್ರತಿ ತೀರಿವೆ] ಬೆಲೆ ೬ ರೂಪಾಯಿ



೫. 'ಚರಕ' ಚಿಕಿತ್ಸಾ ಸ್ಥಾನ ಭಾಗ ೧

ಬೆಲೆ ೬ ರೂಪಾಯಿ



೬. 'ಚರಕ' ಚಿಕಿತ್ಸಾ ಸ್ಥಾನ ಭಾಗ ೨

ಬೆಲೆ ೬ ರೂಪಾಯಿ



೭. 'ಚರಕ' ಚಿಕಿತ್ಸಾ ಸ್ಥಾನ ಭಾಗ ೩ (ಅಚ್ಚಿನಲ್ಲಿ)



೮. ಧನ್ವಂತರಿ ಮಾಸಪತ್ರಿಕೆ

ವಾರ್ಷಿಕ ಚಂದಾ ೩| ರೂಪಾಯಿ